ಬತ್ತಲೇಶ್ವರ ವಿರಚಿತ

# ಕೌಶಿಕ ರಾಮಾಯಣ

ಹರ್ಷ ಪ್ರಕಟಣಾಲಯ, ಪುತ್ತೂರು, ದ. ಕ.

# ಕೌಶಿಕ ರಾಮಾಯಣ

ವರ ಕವಿ ಬತ್ತಲೇಶ್ವರ ವಿರಚಿತ

1966

(ಬೆಲೆ: ರೂ. ಹತ್ತು)

ಹರ್ಷ ಪ್ರಕಟಣಾಲಯ, ಪುತ್ತೂರು, ದ. ಕ.

# ಮೊದಲ ಮಾತು

ಕನ್ನಡಿಗರ ಮುಂದೆ ಹಳೆಯ ಕಾವ್ಯವೊಂದನ್ನು ಇರಿಸಲು ಸಂತೋಷಪಡುತ್ತಿರುವ ಈ ಸಂದರ್ಭದಲ್ಲಿ, ಪೂರ್ವಭಾವಿಯಾಗಿ ನಾಲ್ಕು ಮಾತುಗಳನ್ನು ಹೇಳಲೇಬೇಕಾಗಿದೆ. ನಮ್ಮ ಉತ್ತರ, ದಕ್ಷಿಣ ಕನ್ನಡ ಜಿಲ್ಲೆಗಳಲ್ಲೂ, ಅದಕ್ಕೆ ತಾಗಿದ ಶಿವಮೊಗ್ಗಾ ಜಿಲ್ಲೆಯಲ್ಲೂ ಬಹಳ ಕಾಲದಿಂದಲೂ ಪ್ರಚಾರದಲ್ಲಿದ್ದೊಂದು ಗ್ರಂಥವೆಂದರೆ ಕೌಶಿಕ ರಾಮಾಯಣ. ತೊರವೆ ರಾಮಾಯಣದಂತೆಯೇ ಅದು ಜನಪ್ರಿಯವಾಗಿತ್ತು. ನಮ್ಮ ಹಿರಿಯರು ಮಳೆಗಾಲದಲ್ಲಿ, ನಾಲ್ಕು ಮಂದಿಯನ್ನು ಸುತ್ತಲೂ ಕುಳ್ಳಿರಿಸಿಕೊಂಡು, ಭಾಗವತ, ಭಾರತಗಳಂತೆ ಅದನ್ನೂ ಓದಿ ಹೇಳುತ್ತಿದ್ದರು. ಅಚ್ಚಾದ ಗ್ರಂಥಗಳು ಸಿಗತೊಡಗಿದ ಬಳಿಕ, ಓದಲು ಕಠಿಣವಾದ ತಾಳೆಯೋಲೆಯ ಬರಹಗಳನ್ನು ಓದುವವರು ಇಲ್ಲವಾಯಿತು. ಹಾಗೆ ಈ ಶತಮಾನದ ಆದಿಯಲ್ಲಷ್ಟೆ ಮೂಲೆ ಪಾಲಾದ ಒಂದು ಬರಹವು ಈ ಕೌಶಿಕ ರಾಮಾಯಣ. ಅದನ್ನು ಪಾರಾಯಣ ಮಾಡಿದ, ವಾಚಕರ ಮುಂದೆ ಬಿತ್ತರಿಸಿದ ಮುದುಕರೊಬ್ಬರು ಇನ್ನೂ ಉಳಿದುಕೊಂಡಿದ್ದಾರೆ. ಅವರ ಬಾಯಿಯಿಂದ, ವೈರಾವಣನ ಕಾಳಗದ ಭಾಗ ಅದರಲ್ಲಿದೆ–ಎಂಬುದನ್ನು ಕೇಳಿಯೇ, ನಾನು ಅದನ್ನು ಸಂಗ್ರಹಿಸಲು ಪ್ರಯತ್ನಿಸಿದೆ.

ಯಕ್ಷಗಾನದ ಪೂರ್ವಕಾಲದ ತಾಳೆಯೋಲೆಗಳನ್ನು ಸಂಗ್ರಹಿಸುವುದಕ್ಕಾಗಿಯೇ ನಾನು ಮಲೆನಾಡಿನ ಅನೇಕ ಹಳ್ಳಿಗಳನ್ನು ಸುತ್ತಾಡಿದ್ದೆ. ಆ ಪ್ರಯತ್ನವನ್ನು ಮಾಡುತ್ತಿದ್ದಾಗ, ಸ್ವಾಭಾವಿಕವಾಗಿಯೇ ಅನ್ಯ ಹಲವು ಬರಹಗಳೂ ಇದ್ದುದು ತಿಳಿದು ಬಂತು. ಅಚ್ಚಾಗದ ಕನ್ನಡ ಕಾವ್ಯಗಳು ಕೆಲವು ದೊರೆತುವು. ಅಚ್ಚಾದುವೂ ದೊರೆತುವು. ಸ್ವಾಮಿ ವಿಮಲಾನಂದನ ಕರ್ಣಾರ್ಜುನ, ಪ್ರಹ್ಲಾದ ಭಾರತ, ಶರಜಾ ನಾಗಪ್ಪಯ್ಯನ ಶುಕಸಪ್ತತಿ ಕಥೆಗಳು, ಕೌಶಿಕ ರಾಮಾಯಣ–ಇವು ಅವುಗಳಲ್ಲಿ ಕೆಲವು ಎನ್ನಬಹುದು. ನಾನು ಹೀಗೆ ಹುಡುಕಿ ನೋಡಿದ ತಾಡವಾಲೆಗಳು 400–500 ಆಗಬಹುದು; ಈ ಕೆಲಸಕ್ಕಾಗಿ ಹೊಕ್ಕು, ಹೊರಟ ಮನೆಗಳೂ ಹಲವಾರು ಆಗಬಹುದು. ಆ ಕಾಲದಲ್ಲಿ ನನ್ನ ದೃಷ್ಟಿಯೆಲ್ಲವೂ ಯಕ್ಷಗಾನ ಪ್ರಬಂಧಗಳ ಕಡೆಗೆ ಹರಿದಿತ್ತಾದರೂ ಉಳಿದುವನ್ನು ಮರೆತಿರಲಿಲ್ಲ. ನಾನು ಅನ್ಯರಿಗೆ ಅಷ್ಟೆಲ್ಲ ಉಪದ್ರಕೊಟ್ಟು ಬರಿಯ ನನ್ನ ಕೆಲಸ ಮಾಡಿಕೊಂಡರೆ ಸಾಕೇ? ಈ ನನ್ನ ಶ್ರಮ ಸಾರ್ಥಕವಾಗಲು–ಒಬ್ಬನಾದರೂ ಪೂರ್ವದ ಕವಿಯನ್ನು ಆರಿಸಿ, ಒಂದಾದರೂ ಗ್ರಂಥವನ್ನು ಪ್ರಕಟಿಸಬೇಡವೇ–ಅನಿಸಿತು. ನಮ್ಮ ಇಂದಿನ ಬದುಕೆಂಬುದು ನಿನ್ನಿನದನ್ನು ಹೊಂದಿಕೊಂಡೇ ಬೆಳೆದಿದೆಯಷ್ಟೆ. ನಾನು ನನ್ನ ಹಿರಿಯರಿಗೆ ಋಣಿ. ಸಾಹಿತ್ಯವಾದರೂ ಅಷ್ಟೇ ಅಲ್ಲವೇ? ಈ ಕಾರಣದಿಂದ ಪೂರ್ವ ಕವಿಯೊಬ್ಬನಿಗಾದರೂ ನನ್ನ ಋಣ ಭಾರವನ್ನು ಸಲ್ಲಿಸುವುದು ಅನಿವಾರ್ಯವೆಂದು ತೋರಿತು.

ನನ್ನ ಹಲವು ಪ್ರವಾಸಗಳಲ್ಲಿ, ತರುಣ ಮಿತ್ರರಾದ ಪಡಾರು ಮಹಾಬಲ ಭಟ್ಟ

ರವರು ನನ್ನನ್ನು ಜತೆಗೂಡಿ ಬಂದುದುಂಟು; ಓಲೆಗಳ ಪರಿಶೀಲನೆ, ಪಟ್ಟಿ ಮಾಡುವಿಕೆ ಮೊದಲಾದ ಕೆಲಸಗಳಲ್ಲಿ ನನಗೆ ಸಹಾಯ ಮಾಡಿದ್ದರು. ಅವರನ್ನೇ ಕಾಡಿ, 'ಕೌಶಿಕ ರಾಮಾಯಣದ ಓಲೆಗಳನ್ನು ಪ್ರತಿಮಾಡಿಕೊಡಿ' ಎಂದು ಕೇಳಿದೆ. ಮೊದಲ ಹೆಜ್ಜೆಯಾಗಿ ವಿಮಲಾನಂದನ ಕರ್ಣಾರ್ಜುನದ ಪ್ರತಿ ಮಾಡಿಸಿದೆ; ಅನಂತರ ಅವರಿಂದ ಈ ಕೆಲಸವಾಯಿತು. ಅದು ಕಾಗದದ ಮೇಲೆ ಬಂದರೆ, ನನಗೆ ಓದಲು ಅನುಕೂಲವಾದಂತಲ್ಲವೇ? ಆ ಕೆಲಸ, ಮುಂದೆ ಪ್ರಕಟನೆಯ ಕೆಲಸಕ್ಕೂ ಅನಿವಾರ್ಯವಷ್ಟೆ. ನನ್ನ ಸಂಚಾರದ ಅವಧಿಯಲ್ಲಿ ಈ ಬರಹದ ಎಂಟು, ಹತ್ತು ಪ್ರತಿಗಳನ್ನು ನೋಡಿದ್ದೆ. ಅವುಗಳ ಕಾಲವನ್ನು ಬರೆದುಕೊಂಡಿದ್ದೆ; ಅನಂತರ ಆರರಷ್ಟು ತಾಡವಾಲೆಗಳನ್ನು ಸಂಗ್ರಹಿಸಿಯೂ ತಂದೆ. ಶ್ರೀ ಮಹಾಬಲ ಭಟ್ಟರವರು ಉಳಿದ ಕೆಲವು ಪ್ರತಿಗಳಲ್ಲಿ ಕಾಣಿಸುವಂಥ ವ್ಯತ್ಯಾಸಗಳನ್ನು ಗುರುತಿಸಿ ಕೊಟ್ಟರು. ಇದರಿಂದ ಶ್ರಮವಿಲ್ಲದೆಯೆ ಗ್ರಂಥ ಸಂಪಾದನೆಯ ಕೆಲಸ ನಡೆದೀತೆಂದು ತಿಳಿದುಕೊಂಡೆ.

ನನ್ನ 'ವಿಜ್ಞಾನ ಪ್ರಪಂಚ'ದ ಕೆಲಸವು ಮುಗಿದೊಡನೆಯೇ, ಇದನ್ನು ಎತ್ತಿಕೊಳ್ಳಲು ಯೋಚಿಸಿದೆ. ಆಗಷ್ಟೆ ಕೈಬರಹದ ಪ್ರತಿಯನ್ನು ಓದತೊಡಗಿದೆ. ಪ್ರತಿಕಾರರೊಬ್ಬೊಬ್ಬರೂ ಮರಿ ಕವಿಗಳು! ಮೂಲವನ್ನು ತಮ್ಮಿಷ್ಟ ಕಂಡಂತೆ ತಿದ್ದಿದವರು, ಬೇಕಾದಂತೆ ಹಿಗ್ಗಿಸಿದವರು, ಅಕ್ಷರ, ಅರ್ಥ ತಿಳಿಯದಲ್ಲೆಲ್ಲ ತಮ್ಮದೇ ಆದ ಚಮತ್ಕಾರ ತೋರಿಸಿದವರು– ಎಂದು ಅನಂತರ ತಿಳಿದಾಗ ಆಶ್ಚರ್ಯವಾಯಿತು. ಅನೇಕ ಕಡೆ ಅವರ ತಿದ್ದುಪಡೆಯಿಂದಾಗಿ ಮೂಲದ ಅರ್ಥವಷ್ಟೇ ಅಲ್ಲ, ಯಾವ ಅರ್ಥವೂ ಆಗದ ಪ್ರಸಂಗಗಳೂ ಇದ್ದುವು. ಆಗ, ನಾನು ತೊಡಗಿದ ಕೆಲಸ ಸುಲಭದ್ದಲ್ಲ; ತಲೆಬೇನೆಯದು ಎಂಬುದು ತಿಳಿಯಿತು.

ಸರಿಯೆ! ಹಾನಿಯೇನು? ಮಾಡುತ್ತ ಕಲಿಯುವ ನನ್ನ ಚಟಕ್ಕೆ ಇದೂ ಒಂದು ಅವಕಾಶವಾಯಿತು.

ಈ ಕವಿಯನ್ನು ಕುರಿತು ಹೇಳುವ ಮೊದಲು, ನನ್ನ ಪಾಲಿನ ಕಾರ್ಯಭಾಗವನ್ನು ಕುರಿತು ಹೇಳುತ್ತೇನೆ. ನಾನು ಹಳೆಯ ಕಾವ್ಯಗಳ ಅಭ್ಯಾಸಿಯೂ ಅಲ್ಲ, ಹೊಸತರವನೂ ಅಲ್ಲ. ಭಾಷೆಯಲ್ಲಿ ನನಗಿರುವ ಪಾಂಡಿತ್ಯ ಅಷ್ಟಕ್ಕಷ್ಟೆ. ಆದುದರಿಂದ ಗ್ರಂಥ ಸಂಪಾದನೆಯ ಈ ಕೆಲಸ ನನ್ನ ಪಾಲಿಗೊಂದು 'ದುಡುಕು' ಎಂದರೂ ತಪ್ಪಿಲ್ಲ. ಇದೊಂದು ಆಗಬೇಕಾದ ಕೆಲಸ; ಹಳೆಯ ಕವಿಯೊಬ್ಬನ ಕೃತಿ ಜನರ ಮುಂದಕ್ಕೆ ಬರಲಿ; ಹಿಂದಣ ಕಾವ್ಯದ ತಾಡವಾಲೆಗಳು ಜರ್ಜರಿತವಾಗಿ ಯಾರಿಗೂ ಸಿಗಲಾರದ ಸ್ಥಿತಿಯುಂಟಾದ ಬಳಿಕ ನಾವು ಎಚ್ಚರಗೊಂಡು ಫಲವಿಲ್ಲ–ಎನಿಸಿ, ನಾನು ಮುಂದಾದೆ ನನ್ನಲ್ಲಿನ ಕೊರತೆ ನನಗೆ ತಿಳಿದೇ ಇದೆ. ಶ್ರೀ ಪಡಾರು ಮಹಾಬಲ ಭಟ್ಟರವರು ಮೊದಲ ಪ್ರತಿಯನ್ನು ಮಾಡಿಕೊಟ್ಟರು; ಶ್ರೀ ಬಿ. ಎಲ್. ಭಟ್ಟರೆಂಬ ಮತ್ತೊಬ್ಬ ಮಿತ್ರರು ಇನ್ನೊಂದು ಕರಡು ಪ್ರತಿಯನ್ನು ಒದಗಿಸಿದರು. ಮೂಲ ಬರಹದ ಆರರಷ್ಟು ತಾಡವಾಲೆಗಳು ನನ್ನ ಮುಂದಿದ್ದುವು. ಅವುಗಳ ಸಹಾಯದಿಂದ ಮೂಲ ಬರಹವೇನೇನು ಅಪಚಾರಕ್ಕೆ ಒಳಗಾಗಿದ್ದೀತು ಎಂದು ನಿಷ್ಕರ್ಷಿಸಲು ತೊಡಗಿದೆ. ಇದು ಸುಮಾರು ಒಂದೂವರೆ ವರ್ಷಗಳ ದುಡಿಮೆ. ಈ ದುಡಿಮೆ ಸಾರ್ಥಕವಾಗಲು, ನಮ್ಮ ಪುತ್ತೂರಿನಲ್ಲಿಯೇ ನೆಲಸಿರುವ ಒಬ್ಬರು ಹಿರಿಯರು ನೆರ

ವಾದರು. ಅವರೆಂದರೆ—ಶ್ರೀ ಉಗ್ರಾಣ ಮಂಗೇಶರಾಯರೆಂಬವರು. ಅವರ ಹೆಸರನ್ನು ರತ್ನಾಕರವರ್ಣಿಯ 'ಭರತೇಶ ವೈಭವ'ದ ಸಂಪಾದಕತ್ವದಿಂದ ಕನ್ನಡಿಗರು ಚೆನ್ನಾಗಿ ಬಲ್ಲರು. ಅವರಿಗಾದರೆ ಹಳೆಗನ್ನಡ ಕಾವ್ಯಗಳೆಲ್ಲವೂ ಕಂಠಪಾಠ ಅವುಗಳಲ್ಲಿನ ಸೌಂದರ್ಯವನ್ನು ನಿತ್ಯವೂ ಸವಿಯುವುದು ಅವರ ಬದುಕಿನ ಬಗೆ; ಅಷ್ಟೇ ಪ್ರೀತಿಯಿಂದ ಆಂಗ್ಲ ಭಾಷಾ ಸಾಹಿತ್ಯವನ್ನೂ ನಿತ್ಯ ನಿತ್ಯ ಅಭ್ಯಸಿಸುತ್ತಿರುವವರು ಅವರು; ತೀರ ಜೀವಂತ ಪಂಡಿತರು.

ಅವರ ಮನೆಗೆ ಹೋಗಿ, ನಿತ್ಯವೂ ಒಂದೆರಡು ಘಂಟೆಗಳ ಕಾಲ ಕುಳಿತು, ಈ ರಾಮಾಯಣದ ಒಂದೊಂದೇ ಸಂಧಿಯ ಪದ್ಯಗಳನ್ನು ಕುರಿತು ಚರ್ಚಿಸಿದೆ. ಅವರ ಸಲಹೆ, ಚರ್ಚೆ, ಸಹಾಯಗಳಿಂದ ಮೊದಲ ಕರಡು ಪ್ರತಿಯನ್ನು ಅಚ್ಚಿಗೆ ಸಿದ್ಧಗೊಳಿಸಿದೆ. ಅಚ್ಚಿನ ಕರಡನ್ನು ತಿದ್ದುವಾಗಲೂ, ಅವರನ್ನು ಹೋಗಿ ನೋಡಿ, ಚರ್ಚಿಸಿ, ನನ್ನ ಸಂಶಯಗಳನ್ನು ಪರಿಹರಿಸಿಕೊಂಡೆ. ಅವರು ನನಗಾಗಿ ವ್ಯಯಿಸಿದಂಥ ಸಮಯ ತುಂಬ. ಅವರಿಗೆ ನಾನು ವಿಶೇಷ ಋಣಿಯಾಗಿದ್ದೇನೆ.

ಅಲ್ಲಿ, ಇಲ್ಲಿ, ನಮ್ಮುಭಯತರಿಗೂ ಹೊಳೆಯದಿರುವ ಶಬ್ದಗಳೋ, ಸಂದರ್ಭಗಳೋ ಕಾಣಿಸಿದ್ದುಂಟು. ಆಗ ಪತ್ರ ಮುಖೇನ ಶ್ರೀ ಡಿ. ವಿ. ಜಿಯವರನ್ನೊಮ್ಮೆ ಕೇಳಿದ್ದೆ; ಶ್ರೀ ಡಿ. ಎಲ್. ನರಸಿಂಹಾಚಾರ್ಯರವರನ್ನು ಕೇಳಿದ್ದೆ; ಹರಿತ ಬುದ್ಧಿಯವರಾದ ಶ್ರೀ ಬಿ. ಎಚ್. ಶ್ರೀಧರರವರನ್ನು ಆಗಾಗ—ಮೂಲ ರಾಮಾಯಣದಲ್ಲಿ ಇದಿತ್ತೇ, ಇಲ್ಲವಾದರೆ ಇನ್ನೆಲ್ಲಿದ್ದೀತು-ಎಂದು ಪತ್ರ ಮುಖೇನ ಕೇಳುತ್ತಿದ್ದೆ.

ಇಷ್ಟೊಂದು ಸಹಾಯ ದೊರೆತ ಮೇಲೆಯೂ, ಈ ಕೆಲಸ ನಿರ್ದುಷ್ಟವಾಗಿ ನಡೆದಿದೆ—ಎಂದೆನ್ನಲಾರೆ. ಪ್ರತಿಕಾರರಿಂದ ನಡೆದ ವಿಕೃತಿಗಳನ್ನು ಗುರುತಿಸಲಾರದೆ ಹೋಗಿರಲೂಬಹುದು; ಪ್ರಕ್ಷೇಪಗಳು ಇನ್ನೂ ಉಳಿದಿರಬಹುದು. ಛಂದಸ್ಸಿನ ಶಿಥಿಲ ಪ್ರಯೋಗಗಳು ಬತ್ತಲೇಶ್ವರನವೇ, ಪ್ರತಿಕಾರರವೇ—ಎಂಬ ತೊಡಕಿಗೆ ಸಿಲುಕಿ, ಉಪಾಯಗಾಣದೆ ಅವನ್ನು ಇದ್ದಕ್ಕಿದ್ದಂತೆ ಇರಿಸಿದ್ದೂ ಉಂಟು. ಏನೂ ಇರಲಿ, ಬರಿಯ ಆರೆಂಟು ತಾಡವಾಲೆಗಳ ಬದಲು, ಸಾವಿರ ಮುದ್ರಿತ ಪ್ರತಿಗಳನ್ನು ಜನರ ಮುಂದಿರಿಸಿದ್ದಾದರೆ, ಮುಂದೆ ಅದರ ಯೋಗ್ಯತೆಯಿಂದಾದರೂ ಅದು ಉಳಿಯಬಹುದು.

ನಾನು ಈ ಕವಿ ಬತ್ತಲೇಶ್ವರನ ಬರವಣಿಗೆಯನ್ನು ಮೆಚ್ಚಿದ್ದೇನೆ; ''ವನ ಸರಳ ದೇಸಿಗಳು, ಉಪಮೆಗಳು, ಕಣ್ಮುಂದೆ ಚಿತ್ರ ಕಟ್ಟಬಲ್ಲ ವರ್ಣನೆಗಳು ನನಗೆ ಸಂತೋಷವನ್ನು ಕೊಟ್ಟಿವೆ. ಆತ ನನಗೆ ರಾಮಾಯಣದ ಪಾಠವನ್ನು ವಿಲಾಸವನ್ನಾಗಿ ಮಾಡಿ ತೋರಿಸಿದ್ದಾನೆ.

ಇನ್ನು ಈ ಕವಿಯ ಕಾಲ, ದೇಶ ಮೊದಲಾದುವುಗಳನ್ನು ಕುರಿತು ಒಂದಿಷ್ಟು ಚರ್ಚೆ ನಡೆಯಿಸಬಹುದು. ಅದಕ್ಕಿಂತ ಮೊದಲು, ಅದರ ಹೆಸರಿನ ವಿಚಾರ 'ಕೌಶಿಕ' ರಾಮಾಯಣವೆಂದು ರೂಢಿಯಿಂದ ಬಂದಿರುವ ಹೆಸರು ನನ್ನ ಆಸುಪಾಸಿನಲ್ಲಿ ಪ್ರಚಾರದಲ್ಲಿದೆ. ಒಂದೆರಡು ತಾಡವಾಲೆಗಳಲ್ಲಿ 'ಕೌಶಿಕ ರಾಮಾಯಣ ಬರೆಯುವುದಕ್ಕೆ ಶುಭಮಸ್ತು' ಎಂದೂ ಸೂಚಿಸಿದ್ದಾರೆ. ಕವಿಯು ಎಲ್ಲೂ ಹಾಗೆ ಹೇಳಿಲ್ಲ. ಆತ ಮೂಲ ಕವಿಯಾದ ವಾಲ್ಮೀಕಿಯ ಹೆಸರನ್ನೇ ಸೂಚಿಸಿದ್ದಾನೆ. ಅವನು 'ಛೋಟಾ' ವಾಲ್ಮೀಕಿ ಎಂದು ಅನಿಸಿ

ಕೊಳ್ಳುವುದಕ್ಕೂ ಪ್ರಯತ್ನಿಸಿಲ್ಲ. ಹಲವಾರು ರಾಮಾಯಣಗಳಿರುವಾಗ, ಇದಕ್ಕೂ ಒಂದು ವಿಶೇಷಣ ಬೇಕೇ ಬೇಕು. ವಸಿಷ್ಠ ರಾಮಾಯಣವೂ ಇದೆ. ಇಲ್ಲಿನ ಪ್ರಸಂಗದಲ್ಲಿ ರಾಮ, ಲಕ್ಷ್ಮಣರು ತಮ್ಮ ವೈರಿಗಳಾದ ಇಂದ್ರಜಿತು, ರಾವಣರನ್ನು ನಾಶಪಡಿಸಲು ಬಿಲ್ಲು ಹಿಡಿದಾಗಲೆಲ್ಲವೂ, ತಮ್ಮ ಗುರುವಾದ ಕೌಶಿಕನನ್ನು ನೆನೆದುದನ್ನು ಈ ಕವಿ ಸೂಚಿಸಿದ್ದಾನೆ. ರಾಮಾಯಣದಲ್ಲಿ ಅವರಿಗೆ ನೆರವಾದ ಶಸ್ತ್ರ ಸಾಮರ್ಥ್ಯವು ಕೌಶಿಕನಿಂದ ದೊರಕಿದ್ದೆಂಬ ಅರ್ಥದಲ್ಲಿ 'ಕೌಶಿಕ' ಎಂಬ ವಿಶೇಷಣವನ್ನು ಬಳಸಿದ್ದರೆ, ಅದು ಸಾಧುವೇ.

ಒಂದೆರಡು ತಾಡವಾಲೆಗಳಲ್ಲಿ ಈ ರಾಮಾಯಣದ ಕಥೆಯನ್ನು ತೊಡಗುವ ಮೊದಲು, ಇನ್ನೊಂದು ಪೂರ್ವದ ಕತೆಯನ್ನು ಜತೆಗೆ ಸೇರಿಸಿದ್ದುಂಟು. ಅದೆಂದರೆ ಕೌಸಲ್ಯೆಯ ವಿವಾಹದ ಕತೆ. ಅದನ್ನು ಬರೆದವನು 'ವಾಲಗಳ್ಳಿಯ ವರದ ವಿಠಲ'ನನ್ನು ನುತಿಸಿದ ಇನ್ನೊಬ್ಬ ಕವಿ. ಆ ಕವಿ ಬೇರೆಯೇ ವ್ಯಕ್ತಿ. ಹೆಚ್ಚಿನ ಓಲೆಗಳಲ್ಲಿ ಈ ಬತ್ತಲೇಶ್ವರನ ರಾಮಾಯಣ ಕಥಾನಕವಷ್ಟೆ ಕಾಣಸಿಗುತ್ತದೆ. ನನಗೆ ದೊರೆತ, ನಾನು ಕಂಡ ರಾಮಾಯಣದ ಓಲೆಗಳಲ್ಲಿ ವಾಲಗಳ್ಳಿಯ ಕವಿಯ ಕೌಸಲ್ಯೆಯ ಕತೆ ಇಲ್ಲವೇ ಇಲ್ಲ.

ಈ ಕವಿಯ ವಿಚಾರದಲ್ಲಿ, ತಪ್ಪು ಕಲ್ಪನೆಯುಂಟಾಗುವ ಕೆಲವು ಸೂಚನೆಗಳು ಚರಿತ್ರೆಕಾರರು ಬರೆದ ವಿಷಯಗಳಿಂದ ಉಂಟಾಗುತ್ತದೆ; ಅದು ದೇಶವನ್ನು ಕುರಿತಾದ ತಪ್ಪು ಅಭಿಪ್ರಾಯಕ್ಕೂ ನೆರವಾಗಬಹುದು. ಬತ್ತಲೇಶ್ವರನನ್ನು ಕವಿಚರಿತೆಕಾರರು ವೀರಶೈವ ಕವಿ ಎಂದು ತಿಳಿಸಿದ್ದಾರೆ. ಈ ರಾಮಾಯಣವನ್ನು ಓದಿ, ಅಲ್ಲಿ ಬರುವ ವಿಷ್ಣು, ದುರ್ಗೆಯರ ವರ್ಣನೆಗಳನ್ನು ಓದಿದವರಿಗೆ, ಈತ ವಿಷ್ಣು, ಶಿವ ಮೊದಲಾದ ಭೇದಗಳಲ್ಲಿ ತೊಳಲಾಡಿದ ವ್ಯಕ್ತಿಯಲ್ಲ- ಎಂಬುದು ಗೋಚರವಾದೀತು.

ಅವನ ಊರು ಇಂಥದೆನ್ನಲಾರೆನಾದರೂ, ಅವನು ನುತಿಸಿದ ದೇವತೆಯಾದ ಶಿವನಿಗೆ ಒಂದು ಸ್ಥಳವನ್ನು ಅವನೇ ಸೂಚಿಸಿದ್ದಾನೆ:

"ಮಾರನೆಂಬ ನಿರಾಪರಾಧಿಯ
ಬೇರುಗೊಲೆಯನು ಗೈದ ಲಜ್ಜೆಗೆ
ನಾರಿ ಗಂಗೆಯ ಶಿರದಿ ತೊಡೆಯಲಿ ಗೌರಿಯನು ತಾಳ್ದ ॥
ಕಾರಣದಿ ಸಹ್ಯಾದ್ರಿ ಬೇಡಲು
ಸೇರಿ ತಾನಲ್ಲಿರ್ದು ಸಲಹುವ
ಭೈರವೇಶ್ವರನಾಗಿ ಕೃಪೆಯಿಂದೀ ಜಗತ್ರಯವ ॥

ಎಂದು ಎರಡನೆಯ ಸಂಧಿಯ ಆರಂಭದಲ್ಲಿ ತಿಳಿಸಿದ್ದಾನೆ. ಹಾಗೆ, ಸಹ್ಯಾದ್ರಿಯಲ್ಲಿ ನೆಲೆಸಿರುವ ಭೈರವ ದೇವಾಲಯ ಉತ್ತರ ಕನ್ನಡ ಜಿಲ್ಲೆಯ ಕುಮಟೆ, ಶಿರ್ಶಿ ತಾಲೂಕುಗಳ ಸರಹದ್ದಿನಲ್ಲಿರುವ 'ಯಾಣ' ಎಂಬಲ್ಲಿ ಮಾತ್ರ ಇದೆ. ಇದು ಒಂದು ಪುರಾತನ ಯಾತ್ರಾ ಸ್ಥಳ. ಕಾಲುನಡೆಯಿಂದ ಮೂರು ನಾಲ್ಕು ಹರದಾರಿಗಳ ದೂರ ನಡೆದು ಹೋಗಬಲ್ಲವರಿಗೆ, ಸಹ್ಯಾದ್ರಿಯ ಪರ್ವತ ಶ್ರೇಣಿಗಳ ಅಂಕುಡೊಂಕಿನ ಒಳಬೊಂದರಲ್ಲಿ ಅವನ ಗುಡಿ ಕಾಣಸಿಗುತ್ತದೆ. ಇದು ಮಾನವ ನಿರ್ಮಿತ ದೇವಾಲಯವೂ ಅಲ್ಲ. ನಿಸರ್ಗ ನಿರ್ಮಿತವಾದುದು.

ಸುಮಾರು ಮುನ್ನೂರು ಅಡಿ ಉನ್ನತವಾದ ಪದರು ಶಿಲೆಯೊಂದು ಅಲ್ಲಿ ನೆಟ್ಟಗೆ ನಿಂತಿದೆ. ಯುಗಮಾನದ ಮಳೆ, ಬಿಸಿಲುಗಳಿಂದ ಲಂಬದಲ್ಲಿ ನಿಂತ ಆ ಬಂಡೆಯ ಪದರುಗಳು ಕೊರೆದು, ಒಡೆದು, ಅದೊಂದು ದೇವಾಲಯದ ಅದ್ಭುತ ಗೋಪುರದಂತೆ ಕಾಣಿಸುತ್ತದೆ. ಅದರ ಭವ್ಯ ಆಕಾರವನ್ನು ನೀವು ಶಿವನ ಜಡೆಯೆನ್ನಿ, ಭೈರವನದೇ ಪ್ರತೀಕವೆನ್ನಿ! ಬಹು ಶಿಖರಗಳಿಂದ ಅಚ್ಚರಿಗೊಳಿಸುವ ಬಂಡೆಯದು. ಅದರ ಮುಂಗಡೆ ದುರ್ಗೆಗೂ ಅಂಥೊಂದು ನಿಸರ್ಗದತ್ತ ಗುಡಿಯಿದೆ. ಅವುಗಳ ಆಚೀಚೆ-ಉನ್ನತವಾದ ಆರಣ್ಯದ ಹಸುರು ಗೋಡೆಗಳಿವೆ; ಎದುರಿಗೆ ಹಸುರು ಕಂದಕ; ನದಿ. ಈ ಗುಡಿಯ, ಅಥವಾ ಬಂಡೆಯೊಳಗಡೆ ಕಾಲಾಂತರದಲ್ಲಿ ನೀರು ಕೊರೆದು ಉಂಟಾದ ಬಿರುಕುಗಳಿವೆ; ಹೊಳ್ಳುಗಳೂ ಇವೆ. ಅಂಥ ಒಂದು ಗುಹೆಯ ಮಗ್ಗುಲನ್ನು, ಬಲಗಡೆಯಲ್ಲಿ ಕೊರೆದು, ಗರ್ಭಗೃಹವನ್ನಾಗಿ ಮಾಡಿದ್ದಾರೆ. ಅದರ ಹಿಮ್ಮಗ್ಗುಲಿನಿಂದ ನೀರು ಒಸರುತ್ತದೆ ಹಾಗೆ ಒಸರುವ ಶಿಲೆಯ ಮೈಯನ್ನೇ ಭೈರವನೆಂದು ಇಂದಿಗೂ ಪೂಜಿಸುತ್ತ ಬಂದಿದ್ದಾರೆ. ಈ ನೈಸರ್ಗಿಕ ದೇವಾಲಯಗಳ ಚಿತ್ರವನ್ನು ಈ ಗ್ರಂಥದೊಡನೆ ಒದಗಿಸಿದ್ದೇನೆ.

ಶ್ರಮಪಟ್ಟು ಅಲ್ಲಿಗೆ ಹೋದಾಗ, ಈ ಭೈರವನನ್ನು ಇಲ್ಲಿ ಆರೋಪಿಸಿದ ನಮ್ಮ ಭಾವಿಕ ಪೂರ್ವಜರನ್ನು ಕುರಿತು ನಾನು ಹಿಗ್ಗುವಂತಾಯಿತು.

ಇದು ಕಟ್ಟಿದ ಗುಡಿಯಲ್ಲ; ಇಲ್ಲಿನದು ಕಡೆದು ಮಾಡಿದ ವಿಗ್ರಹವೂ ಅಲ್ಲ. ಶಿವರಾತ್ರಿಯ ದಿನ ಈ ಜನವಿರಹಿತ ಕಗ್ಗಾಡಿನಲ್ಲಿ ಭೈರವನ ಉತ್ಸವ ನಡೆಯುತ್ತದೆ ಆ ದಿನ ಇಲ್ಲಿನ ನೀರನ್ನು ತೆಗೆದುಕೊಂಡು, ಗೋಕರ್ಣಕ್ಕೆ ಹೋಗಿ (ಎಂಟು ಹರದಾರಿ ದೂರದ) ಮಹಾಬಲೇಶ್ವರನಿಗೆ ಅರ್ಪಿಸುವ ವಾಡಿಕೆಯೂ ಉಳಿದಿದೆ.

**ಯಾಣ**

ಸಹ್ಯಾದ್ರಿಯ ಈ ಸಂದಿಗೆ 'ಯಾಣ' ಎಂಬ ಹೆಸರು ಬಂದಿದೆ. ವಾಹನ ಸಂಚಾರದ ದಾರಿಯಿಂದ ಇದು ದೂರವಾಗಿದೆ; ಜನ ವಸತಿಗಳಿಂದಲೂ ದೂರದ್ದು. ಆದರೆ ಪುರಾತನ ಪ್ರಸಿದ್ಧಿ ಇದಕ್ಕಿತ್ತೆಂದು ಸುಲಭವಾಗಿ ತಿಳಿಯಬಹುದು. ಯಾಣವೆಂಬ ಹೆಸರು ಹೇಗೆ ಬಂದಿತೋ? ಅಲ್ಲಿನ ಬಂಡೆಯನ್ನು 'ಕಲ್ಲಿನ ಏಣು' 'ಕಲ್ಲೇಣು' ಎಂದು ಕರೆದಿರಬಹುದು. ಅದು, ಸಂಸ್ಕೃತ ರೂಪಕ್ಕೆ ತಿರುಗಿ 'ಕಲ್ಯಾಣ'ವಾಗಿರಲೂ ಬಹುದು. ತಿರುಗಿ 'ಕಲ್ಲು' ಎಂಬ ಪದ ಕಳಚಿ 'ಯಾಣ'ವಾಗಿದ್ದೀತು. ಇದು ಕೇವಲ ಊಹೆಯಾಗಿರಲೂಬಹುದು. ಈ ಯಾಣ, ಪ್ರಯಾಸದಿಂದ ಕೊನೆಗೊಳ್ಳುವ 'ಯಾನ'ವೂ ನಿಜ. ಆ ಪ್ರಯಾಸವೆಲ್ಲವೂ ಸಾರ್ಥಕವೆನಿಸುವ ಭವ್ಯ ಸ್ಥಳ ಅದೆಂಬುದು ನಿಜ.

ಇಲ್ಲಿನ ಭೈರವ ಕವಿ ಬತ್ತಲೇಶ್ವರ ಕವಿಯ ಭೈರವ. ಕವಿ ಈ ಪ್ರಾಂತದ ಜಟ್ಟಿಗ, ಮಾಣಿ, ಭದ್ರಾದಿ ಭೂತಗಳನ್ನು ಶಕ್ತಿ ದೇವತೆಯ ಗಣ ಸಮೂಹವನ್ನಾಗಿ ತನ್ನ ಗ್ರಂಥದಲ್ಲಿ ಚಿತ್ರಿಸಿದ್ದಾನೆ. ಆತ ಈ ಮಲೆನಾಡಿಗೆ ವಿಶಿಷ್ಟವಾದ ಕಜ್ಜಾಯ, ಪದಾರ್ಥಗಳನ್ನು ಬಣ್ಣಿಸಿದ್ದಾನೆ; ಈಲ್ಲಿನ ಹವ್ಯಕ ಜನವರ್ಗದ ಭಾಷಾ ಪ್ರಯೋಗಗಳನ್ನು ಸಾಕಷ್ಟು ಬಳಸಿದ್ದಾನೆ.

ವನ ವರ್ಣನೆಯಲ್ಲಿ 'ನಂದಿ' ಮೊದಲಾದ ಸ್ಥಳೀಯ ಮರಗಳನ್ನು ಹೆಸರಿಸಿದ್ದಾನೆ. ಭೋಜನ ವರ್ಣನೆಯಲ್ಲಿ ಪರಮಾನ್ನದೂಟದ ಕಲರವವನ್ನು 'ತಾಳೆಯ ತಳಿರವೊಟ್ಟಿಲ ಕಲರವಕ್ಕೆ' ಹೋಲಿಸಿದ್ದಾನೆ. ರಣರಂಗವನ್ನು 'ಕಾಗೆ ಹಣ್ಣಿನ ರಾಶಿಯನ್ನು ಆನೆ ತುಳಿದಂತೆ' ಎಂದು ಬಣ್ಣಿಸಿದ್ದಾನೆ. ಹವ್ಯಕರ ಆಡುಮಾತಿನ ರೀತಿಯಂತೆಯೇ ಹೆಣ್ಣು, ಕಪಿ, ರಕ್ಕಸ, ಹೆಂಗಸರು, ರಕ್ಕಸರು, ಕಪಿಗಳು ಎಂಬಲ್ಲೆಲ್ಲ-ಮಾಡಿತು, ಬಂದಿತು, ಹೋಯಿತು- ಎಂದು ನಪುಂಸಕ ಏಕವಚನವನ್ನು ತುದಿಯ ತನಕವೂ ಬಳಸಿದ್ದಾನೆ. ಈ ರಾಮಾಯಣದ ಪ್ರತಿಕಾರರೂ, ಅದರ ಪ್ರತಿಗಳೂ ನನಗೆ ಕಾಣಸಿಕ್ಕಿದ್ದು ಹೆಚ್ಚಾಗಿ ಈ ಸುತ್ತುಮುತ್ತಿನಲ್ಲೇ ಆದುದರಿಂದ ಈತ ಇದೇ ಪ್ರದೇಶದವನು; ಹವ್ಯಕ ಬ್ರಾಹ್ಮಣನು—ಎಂದು ಅನಿಸುತ್ತದೆ. ಈತ ಸಾಕಷ್ಟು ಪೂರ್ವಕವಿಗಳನ್ನು ಓದಿ ತಿಳಿದಂಥ ಕವಿ; ಸಂಸ್ಕೃತ ಭಾಷೆಯ ಪರಿಚಯ ಅವನಿಗೆ ಧಾರಾಳವಾಗಿತ್ತು ಎನಿಸುತ್ತದೆ.

ತನ್ನ ಹೆಸರನ್ನು ಆತ ಮೇಲಿಂದ ಮೇಲೆ ಹೇಳುತ್ತ ಹೋಗಿಲ್ಲ. ರಾಮಾಯಣದ ಕತೆ ವಾಲ್ಮೀಕಿಯಿಂದ ಬಂದುದೆಂಬುದರಿಂದ, ಅವನಿಗೆ ಪ್ರಥಮ ಮನ್ನಣೆಯನ್ನ ಸಲ್ಲಿಸಿ, ಮೂಲ ರಾಮಾಯಣದಲ್ಲಿ ಇಲ್ಲದಿರುವ ಮೈರಾವಣನ ಕಾಳಗವನ್ನು ಸೇರಿಸಿದಲ್ಲಿ ಮಾತ್ರ ಎರಡೋ, ಮೂರೋ ಕಡೆ ತನ್ನ ಹೆಸರನ್ನು ತಿಳಿಸಿದ್ದಾನೆ.

ರುಂಢ ಭೈರವನ ಕಾಳಗದಲ್ಲಿಯೂ ಅವನ ಹೆಸರು ಬಂದಿರುತ್ತದೆ. ಆದರೆ, ನಾನು ಕಂಡ ಆರು ತಾಡವಾಲೆಗಳಲ್ಲಿ ಒಂದರಲ್ಲಿ ಮಾತ್ರವೇ ಈ ಕತೆ ಸೇರಿಕೊಂಡಿದೆ. ಅದನ್ನು ಕುರಿತು ಪ್ರಬುದ್ಧ ಕರ್ಣಾಟಕದ ಶಾರ್ವರಿ ಆಷಾಢ ಮಾಸದ ಸಂಚಿಕೆಯಲ್ಲಿ ವಿಮರ್ಶೆಮಾಡಿದ ಶ್ರೀ ಎಸ್. ಎನ್. ಕೃಷ್ಣ ಜೋಯಿಸರವರು, ತಾವು ಕಂಡ ತಾಳೆಯ ಗರಿಯ ಪ್ರತಿಯಲ್ಲಿ ಅದು ಸೇರಿದ್ದನ್ನು ತಿಳಿಸಿರುತ್ತಾರೆ. ಅದರ ಪ್ರತಿಕಾರನು ಚಂದಾವರ ಸೀಮೆ ಹೊನ್ನಾವರ ಕಸಬೆಯ ಕರಿಕೊಡಿಗೊಳಿ ನಾಯಕನ ದತ್ತು ಮಗ ರಾಮಯ್ಯ. ಅದೇ ಹೊನ್ನಾವರದ ರಾಮಯ್ಯ ಎಂಬಾತ ಬರೆದೊಂದು ಪ್ರತಿ ನನ್ನ ಕೈಗೂ ಬಂದಿದೆ. ಅದರಲ್ಲಿ ಈ ಕಥಾನಕ ಸೇರಿಲ್ಲ. ಆದರಂತೆ ತೀರ ಕೊನೆಗೆ, ಮೂಲಿಕಾಸುರ ಕಾಳಗದ ಅಂಶ ಸೇರಿದ ಪ್ರತಿಗಳಿವೆ ಯೆಂದು ಕುಮಟೆಯ ಪ್ರೊ! ಕೆ. ಜಿ. ಶಾಸ್ತ್ರಿಯವರು ನನಗೆ ತಿಳಿಸಿರುತ್ತಾರೆ. ಹಾಗಿದ್ದರೆ, ಅದು ಅನಂತರ ಸೇರಿಸಿದ್ದೆಂದು ನಿರ್ಧರಿಸಬಹುದು.

**ಕವಿಯ ಕಾಲ**

ಕವಿಯ ಕಾಲದ ವಿಚಾರದಲ್ಲಿ ಗಮನಿಸಬಹುದಾದ ವಿಷಯಗಳೆಂದರೆ— ಕವಿ ಚರಿತೆಕಾರರ ನಿರ್ಣಯ ಮತ್ತು ಕೃಷ್ಣ ಜೋಯಿಸರವರು ಮಂಡಿಸಿರುವ ವಿಷಯಗಳು. ಶ್ರೀ ಜೋಯಿಸರವರವರು ಇಬ್ಬರು ಬತ್ತಲೇಶ್ವರರು ಇರಬಹುದೆಂದು ವಾದಿಸಿದ್ದಾರೆ. ಅದಕ್ಕಿಂತಲೂ ಮೊದಲು, ನಾನು ಕವಿಚರಿತೆಕಾರರ ವಾದ ಸರಣಿಯನ್ನು ಕುರಿತು ಸ್ವಲ್ಪ ತಿಳಿಸುತ್ತೇನೆ.

ಕವಿಚರಿತೆಯಲ್ಲಿ—ಕವಿಯ ಹೆಸರು ಬತ್ತಲೇಶ್ವರ—ಎಂದಿರುವಂತೆ, ಕೆಲವು ಕಡೆ **'ನಿರ್ವಾಣ ನಾಯಕ'**, 'ನಿರ್ವಾಣಲಿಂಗ' ಎಂಬ ಪರ್ಯಾಯ ಪದಗಳಿವೆ—ಎಂದಿದ್ದಾರೆ.

ನಾನು ಸಂಗ್ರಹಿಸಿರುವ, ಕಂಡಿರುವ, ಆರೆಂಟು ಪ್ರತಿಗಳಲ್ಲಿ ಅಂಥ ಪದಗಳು ಎಲ್ಲೂ ಬಂದಿಲ್ಲ. ಕವಿ ಈ ರಾಮಾಯಣದ ಮೈರಾವಣನ ಕಾಳಗದಲ್ಲಿ ಎರಡು ಮೂರು ಕಡೆ ಮಾತ್ರವೇ ತಾನು ಬತ್ತಲೇಶ್ವರ ಎಂದು ಹೇಳಿಕೊಂಡಿದ್ದಾನೆ. ರುಂಡ ಭೈರವನ ಕಥೆಯಲ್ಲಿಯೂ ಒಂದೆರಡು ಬಾರಿ ಬತ್ತಲೇಶ್ವರ ಎಂದು ಹೇಳಿದಂತಿದೆ. ಆದುದರಿಂದ, ಎಲ್ಲೂ ಕಾಣಸಿಗದ ಆ ಪರ್ಯಾಯ ಪದಗಳನ್ನು ಅನುಸರಿಸಿ, ಅವನನ್ನು ವೀರಶೈವ ವಿರಕ್ತನೆಂದು ಸಾಧಿಸಿದುದ ರಲ್ಲಿ ತಥ್ಯವಿಲ್ಲ.

ಅವರು ಕೊಟ್ಟಿರುವ ಮುಖ್ಯ ಆಧಾರ— ಗುರುರಾಜ ಚಾರಿತ್ರ್ಯದಲ್ಲಿ (ಸು 1650) ದೇವರಾಯನ (1419—1446) ಆಳಿಕೆಯಲ್ಲಿ ಕರಸ್ಥಳದ ನಾಗಲಿಂಗ, ವೀರೊಣ್ಣೆಡೆ ಯರು ಮುಂತಾದ 101 ವಿರಕ್ತರ ಹೆಸರಲ್ಲಿ ಅವನ ಹೆಸರಿದೆ—ಎಂಬ ವಾದ. ಅದರಲ್ಲಿ ಬತ್ತಲೇಶ್ವರ—ಎಂದಿದೆಯೇ? ಅಥವಾ ನಿರ್ವಾಣ ನಾಯಕ— ಎಂಬ ಪರ್ಯಾಯ ಪದವಿ ದೆಯೇ? ಈ 101 ವಿರಕ್ತರಲ್ಲಿ ನಿಜವಾಗಿ ಇದ್ದವರೆಷ್ಟು, 101ರ ಲೆಕ್ಕ ತುಂಬಿಸಲು ಸೇರಿಸಿ ದವರೆಷ್ಟು? ಗುರುರಾಜ ಚಾರಿತ್ರ್ಯಕ್ಕಿಂತ (ಸು 1650) ಮುಂಚಿತವಾಗಿಯೇ ಪ್ರತಿಗೊಂಡ ಕೌಶಿಕ ರಾಮಾಯಣದ ತಾಡವಾಲೆಗಳು ನಮಗೆ ದೊರೆಯುತ್ತಿರುವಾಗ, ಅದರ ಸಹಾಯ ನಮಗೆ ಬೇಕಾಗಿಲ್ಲ.

ವೀರಶೈವ ವಿರಕ್ತರ ಗೋಷ್ಠಿಯಲ್ಲಿ ಬತ್ತಲೇಶ್ವರನೆಂಬ ವಿರಕ್ತನಿದ್ದನೆಂಬ ಉಲ್ಲೇಖ ವಿರೂಪಾಕ್ಷನ ಚನ್ನಬಸವ ಪುರಾಣದ ಈಯೊಂದು ಪದ್ಯದಲ್ಲಿ ಬರುತ್ತದೆಯಂತೆ—

ಬತ್ತಲೇಶ್ವರನೆಂಬ ಶಿವಯೋಗಿ ಗುಹೆಯಲ್ಲಿ
ಬತ್ತಿದ ಶರೀರದಿಂದಿರೆ ನೃಪತಿ ನೋಡುತ್ತೆ

ವೃತ್ತಕುಚೆ ನೀನೀತನಂ ಒಲಿಸಲಾಪೆಯೂ ಎಂದೊಡಾ ಪದ್ಮಾವತಿ………… ಇತ್ಯಾದಿ ವರ್ಣನೆಯಿದೆ. ಪುರಾಣಗಳನ್ನು ಚರಿತ್ರೆಯೆಂದು ಆಯಾಯ ಮತದ ಭಕ್ತರುಗಳು ನಂಬಬಹುದು. ಚರಿತ್ರಕಾರರು ನಂಬುವುದಕ್ಕೆ ಮಾತ್ರ ವಾಸ್ತವಿಕಾಂಶಗಳು ಬೇಕು; ಪೌರಾಣಿಕ ಕಲ್ಪನೆಗಳಿಗೆ ತಕ್ಕ ಚಾರಿತ್ರಿಕ ಸಾಕ್ಷಿಗಳು ಬೇಕು.

## ಭೈರವ, ಬತ್ತಲೇಶ್ವರ

ಈ ಎರಡೂ ಒಂದೇಯೇ? ಈ ಕವಿಯು ತನ್ನ ಕಾವ್ಯದಲ್ಲಿ ರಾವಣ ಬತ್ತಲೆಯಾದ ಎಂಬ ಸಂದರ್ಭದಲ್ಲಿ–ಭೈರವನಾದ– ಎಂದು ವರ್ಣಿಸಿದ್ದಾನೆ; ಬತ್ತಲೆಯಾಗಿ ಓಡಿದ ರಕ್ಕಸ ರನ್ನು ಬತ್ತಲೇಶ್ವರರಾಯ್ತು–ಎಂದು ಬಣ್ಣಿಸಿದ್ದಾನೆ. ಅವನ ಕಾಲದಲ್ಲಿ ಭೈರವನು ಬತ್ತಲೆ ಎಂಬ ಒಂದು ಕಲ್ಪನೆಯಿದ್ದಂತೆ ಕಾಣಿಸುತ್ತದೆ. ಪುರಾಣಗಳು ಶಿವ ಬತ್ತಲೆ ಎನ್ನುವ ಆಧಾರಗಳನ್ನು ಒದಗಿಸುವುದಿಲ್ಲ. 'ಬತ್ತಲೇಶ್ವರ' ಎಂಬ ಶಬ್ದದ ನಿಷ್ಪತ್ತಿ ತುಸು ಕಷ್ಟ. ಬೃಹತ್+ತಲ+ಈಶ್ವರನೆಂದು ದೊಡ್ಡ ಸ್ಥಳ, ಅಥವಾ ಅರಣ್ಯವೆಂಬ ಅರ್ಥದಲ್ಲಿ, ಅಲ್ಲಿನ ಈಶ್ವರ–ನೆಂದು ಆರಂಭದಲ್ಲಿ ಕರೆದಿದ್ದರೇ? ಆಗ, ಬೃಹತ್ತಲೇಶ್ವರನೆಂಬುದು ವಿಕಾರಗೊಂಡು ಬತ್ತಲೇಶ್ವರ ಆಗಿರಬಹುದೋ ಏನೋ. 'ಯಾಣದ' ಭೈರವನ ಗುಹೆ ಕತ್ತಲಿನದು.

ಆದರಿಂದ 'ಕತ್ತಲೇಶ್ವರ' ಊಹೆಗೆ ಸಾಧ್ಯ. ಯಾಣದ ಗುಹೆಯಲ್ಲಿ ಲಿಂಗವಿಲ್ಲ; ಪ್ರತಿಮೆ ಯಿಲ್ಲ; ಬರಿಯ ಕಲ್ಲಿನ ಆಕಾರ ವಿರಹಿತ ಬಂಡೆಯು ಮೈ ಭೈರವನೆನಿಸಿದೆ. ಆ 'ಬರಿದಾ'ದ ಮೈ–ಬತ್ತಲೆಯೆನಿಸಿತೇ? ಅಲ್ಲದೆ ಕವಿಯು ಬಳಸಿರುವ ಅರ್ಥದಲ್ಲಿ 'ಬತ್ತಲೇಶ್ವರ'ನೆಂದು ಯಾಣದ ದೇವತೆಯನ್ನು ಇಂದು ಯಾರ್‍ಯಾರೂ ಕರೆಯುತ್ತಲಿಲ್ಲ. ಅವನು ಇಂದಿಗೂ 'ಭೈರವ'ನೇ. ಅವನನ್ನು ಹಿಂದಿನವರು ಬತ್ತಲೇಶ್ವರನೆಂದು ಕರೆಯುತ್ತಿದ್ದರಾದರೆ, ಈಗ ಮಾತ್ರ ಅಂಥ ನೆನಪು ಉಳಿದಿಲ್ಲ ಚೆನ್ನಬಸವ ಪುರಾಣದಲ್ಲಿ ಸೂಚಿಸಿದ ಭೈರವ ಕತ್ತಲೆಯ ಗುಹೆಯಲ್ಲಿರುವ ಈ ಬತ್ತಲೇಶ್ವರನೇ ಇದ್ದಿರಬೇಕು. ಎಂದರೆ, ಇಲ್ಲಿನ ದೇವರನ್ನು ಕುರಿತು ಹುಟ್ಟಿಕೊಂಡ ಒಂದು ಸ್ಥಳ ಪುರಾಣದಿಂದಾಗಿ ಕಾಣಿಸಿಕೊಂಡ, ಕಥಾ ಭಾಗವಿರಬೇಕು. ಆ ಗವಿಯಲ್ಲಿ ಕಾಣಸಿಕ್ಕಿದ ಕವಿ ಬತ್ತಲೇಶ್ವರನನ್ನು ಕುರಿತು, ಅಂಥೊಂದು ಪುರಾಣ ಹುಟ್ಟಿರಲಾರದು.

ಈ ಯಾಣದ ಭೈರವನನ್ನು ಕುರಿತು ಬೇರೆಯೇ ಸ್ಥಳ ಪುರಾಣವಿದೆ. ಅದನ್ನು ಹಿಂದೆ 'ನಂದಿನೀ' ಎಂಬ ಪತ್ರಿಕೆ ಪ್ರಕಟಿಸಿತ್ತು. ಚೆನ್ನಬಸವ ಪುರಾಣದ ಕತೆಗೂ ಅದಕ್ಕೂ ಅರ್ಥಾತ್ ಸಂಬಂಧ ಕಾಣಿಸದು. ಈ 'ಯಾಣ' ಹಿಂದೆ ವೀರಶೈವರು ಬಂದು ಹೋಗು ತ್ತಿದ್ದ ಸ್ಥಳವಾಗಿದ್ದೀತು; ಈಗಲೂ ಗೋಕರ್ಣಕ್ಕೆ ವೀರಶೈವರು ಯಾತ್ರೆ ಬೆಳೆಸುವುದಿಲ್ಲವೇ? ಚನ್ನಬಸವೇಶ್ವರರ 'ಉಳವಿ', ಭೈರವನ 'ಯಾಣ', ಮಹಾಬಲೇಶ್ವರನ "ಗೋಕರ್ಣ" ಸುಮಾರು 30 ಮೈಲುಗಳ ಮಗ್ಗುಲುಳ್ಳ ಒಂದು ತ್ರಿಕೋಣ ಪ್ರದೇಶದ ಮೂರು ಮೂಲೆ ಗಳಂತಿವೆ. ಅವುಗಳಲ್ಲಿನ ಪೌರಾಣಿಕ ಕಲ್ಪನೆಯ ವಾಸ್ತವಿಕ ಅಂಶವನ್ನು ಹುಡುಕುವುದು ಕಷ್ಟ ಸಾಧ್ಯ.

**ತಾಡವಾಲೆಗಳ ಕಾಲ**

ತಾಡವಾಲೆ ಪ್ರತಿಗಳ ಕಾಲವನ್ನು ಎಣಿಸುವಲ್ಲಿ ಈ ಪ್ರತಿಗಳಲ್ಲಿ, ಕಾಲದ ಸೂಚನೆ ಯುಳ್ಳುವು ಕೆಲವಿವೆ. ಶ್ರೀ ಜೋಯಿಸರವರು ದೊರಕಿಸಿಕೊಂಡ ಚಂದಾವರ, ಹೊನ್ನಾವರ ರಾಮಯ್ಯನ ಪ್ರತಿ—ಬಹುಧಾನ್ಯ ವೈಶಾಖ ಬಹುಳ ೧—ಗುರುವಾರದ್ದು. ಅವರು ಅದನ್ನು 10-4-1818 ಎಂದು ತರ್ಕಿಸಿದ್ದಾರೆ. ಅದು ತಪ್ಪು. ಏಕೆಂದರೆ (ಸ್ವಾಮಿ ಕಣ್ಣು ಪಿಳ್ಳೆಯವರ ಎಫಿಮೆರಿಯಂತೆ) ವೈಶಾಖ 1818ರಲ್ಲಿ ಮಂಗಳವಾರ ಮೇ 5 ರ ದಿನ ತೊಡಗುತ್ತದೆ. ಅದರ ಬಹುಳವು ಏಪ್ರಿಲಿನಲ್ಲಿ ಬರಲಾರದಷ್ಟೆ. ಅವರು ಅಲ್ಲಿ ಕೊಟ್ಟ ಕಾಲ ವನ್ನು ಮಾಸದ ಅಂತ್ಯವೆಂಬುದಾಗಿ ಎಣಿಸಿದ್ದಿರಬೇಕು. ಇದಕ್ಕೆ ಸರಿಹೊಂದುವ ವರ್ತಮಾನ ಸಂವತ್ಸರದ ದಿನವೇ ಸಿಗುವುದಿಲ್ಲ. ಅದನ್ನು ಗತ ಬಹುಧಾನ್ಯವೆಂದು ಎಣಿಸಿದಲ್ಲಿ, ಅದರ ಕಾಲ 1699 ಇಸವಿ 4 ಮೇ ಗುರುವಾರವಾದೀತು.

ನನ್ನಲ್ಲಿರುವ ಒಂದು ಪ್ರತಿ ಕ್ರೋಧನ ಫಾಲ್ಗುಣ ಬಹುಳ ೧೨ ಬುಧವಾರ ಬರೆ ಯಲು ತೊಡಗಿದ್ದು. ಅದು 1745ನೇ ಇಸವಿ ಮಾರ್ಚಿ ತಾ. 5 ಬುಧವಾರವಾಗುತ್ತದೆ.

**3ನೇ ಪ್ರತಿ—**ಕೀಲಕ ಸಂವತ್ಸರ ಶ್ರಾವಣ ಬಹುಳ ೫ ಶುಕ್ರವಾರ. ಇದು 1608ನೇ ಇಸವಿ 22 ಜುಲಾಯಿ. ಪಂಚಮಿ ತಿಥಿಯು ಬೆಳಗಿನ ಸ್ವಲ್ಪ ಅವಧಿಯದು.

4ನೇ ಪ್ರತಿ ಹಳಕೋಡು ಮಂಜಯ್ಯ, ಹನ್ನಾರು ಮಾಗಣೆ ಇವರಲ್ಲಿದೆ. ಇದು ಶಾಲಿವಾಹನ ಶಕ 1685ರದ್ದು ಅಂದರೆ ಕ್ರಿ. ಶ. 1763ರದ್ದು.

5ನೇ ಪ್ರತಿ ಸುಳುಗೋಡು (ಹನ್ನಾರು) ಮನೆಯಲ್ಲಿರುವ ಒಂದು ಪ್ರತಿ. ವಿಕ್ರಮ ಸಂ. ಮಾಘ ಬಹುಳ ೫ ಗುರುವಾರ—1641ನೇ ಇಸವಿ ತಾ. 21 ಗುರುವಾರವಾಗುತ್ತದೆ.

6ನೇ ಪ್ರತಿ–ಹನ್ನಾರು ಮಾಗಣೆಮಾನಿ ಲಕ್ಷ್ಮೀನಾರಾಯಣಪ್ಪನವರ ಮನೆಯಲ್ಲಿ ಕಂಡದ್ದು-ವಿಜಯ ಸಂ ಶ್ರಾವಣ ಬಹುಳ ೩ ಸೋಮವಾರ 1653ನೇ ಇಸವಿ ಜುಲಾಯಿ 31 ಸೋಮವಾರದ್ದು.

7ನೇ ಪ್ರತಿ—ಹೊನ್ನಾವರ ರಾಮಯ್ಯ ಬರೆದದ್ದು (ನನ್ನಲ್ಲಿದೆ). ಶ್ರೀಮುಖ ಫಾಲ್ಗುಣ ಶುದ್ಧ ೩ ಸೌಮ್ಯವಾರ 1634 ಇಸವಿ ತಾ. 19 ಫೆಬ್ರವರಿ ಸೌಮ್ಯವಾರ.

8ನೇ ಪ್ರತಿ-ಹನೆಹಳ್ಳಿ ಕಾಳಿಂಗ ನಾವುಡ ಪ್ರತಿಕಾರ– ವ್ಯಯ ಆಷಾಢ ಬಹುಳ ೧೦ ಸೋಮವಾರ. ಇದು 1766ನೇ ಇಸವಿ ಜುಲಾಯಿ 31 ರ ಸೋಮವಾರ

9ನೇ ಪ್ರತಿ–ಕೊಜಳ್ಳಿ ಪುಟ್ಟ ಹೆಗ್ಗಡೆ ಮಗ ಸುಬ್ರಾಯ ಬರೆದದ್ದು. ಬಹುಧಾನ್ಯ ಸಂ. ಕಾರ್ತಿಕ ಬಹುಳ ೧೦ ಮಂಗಳವಾರ–1638ನೇ ಇಸವಿ 20 ನವಂಬರ ಮಂಗಳವಾರ.

ಹೀಗೆ ಕ್ರಿ. ಶ. 1640–ರ ಒಳಗಣ ಎರಡು ತಾಡವಾಲೆಯ ಪ್ರತಿಗಳು ದೊರೆಯುತ್ತವೆ. ಈ ಪ್ರತಿಗಳಲ್ಲಿಯೇ ಪ್ರತಿಕಾರರು ತಿದ್ದಿದ, ಸೇರಿಸಿದ ಅಂಶಗಳನ್ನು ಕಾಣುವಾಗ, ಇವು ಮೂಲ ಪ್ರತಿಯ ಪ್ರತಿಗಳಿಗಿಂತಲೂ ದೂರವಿರುವುದನ್ನು ತರ್ಕಿಸಬಹುದು. ಈ ಕವಿಯ ಕಾಲವನ್ನು ನಾವು ಕ್ರಿ. ಶಕ 1500ರ ಪೂರ್ವಕ್ಕೆ ಸರಿಯಿಸಬಹುದು. ಅವನ ಈ ಬರವಣಿಗೆಯ ಒಂದು ಚರಣ–ವಿಷ್ಣುವಿನ ಬೆಡಗನ್ನು ವರ್ಣಿಸುವಲ್ಲಿ ಬರುತ್ತದೆ; ಆ ಮಾತೆಂದರೆ "ಈ ಪರಿಯ ಸಂಭ್ರಮವು ಇನ್ನಾವ ದೇವರಿಗುಂಟು" ಎಂಬುದು. ಪುರಂದರ ದಾಸರ 'ಈ ಪರಿಯ ಸೊಬಗು ಇನ್ನಾವ ದೇವರಿಗುಂಟು' ಎಂಬುದು ಇದರ ಮರುಧ್ವನಿಯಾಗಿದ್ದರೆ ನಾವು ಆಶ್ಚರ್ಯ ಪಡಬೇಕಾಗಿಲ್ಲ. ಅವರ ಕಾಲ ಕ್ರಿ. ಶ. 1564ವಷ್ಟೆ.

ಇದಕ್ಕಿಂತ ಹೆಚ್ಚಿನ ಊಹೆಯನ್ನು ಕಾಲಗಣನೆಯ ಕುರಿತು ನನಗೆ ದೊರಕಿರುವ ಸಾಕ್ಷಿಗಳಿಂದ ಮಾಡಲಾರೆ. ಆತ ರಾಘವಾಂಕನನ್ನೋ, ರನ್ನನನ್ನೋ ಅನುಕರಿಸಿದ ರೀತಿಗಳನ್ನು ಕಾಣಬಹುದು. ಶ್ರೀ ಜೋಯಿಸರವರು ಕುಮಾರವ್ಯಾಸನ ಪ್ರಭಾವವನ್ನು ಅವನಲ್ಲಿ ತೋರಿಸಲು ಪ್ರಯತ್ನಿಸಿದ್ದಾರೆ. ನಾನು ಹಳೆಗನ್ನಡ ಸಾಹಿತ್ಯದ ವಿಚಾರದಲ್ಲಿ ತಿಳಿದವನಲ್ಲ. ಹೀಗಾಗಿ ಬತ್ತಲೇಶ್ವರ ಕ್ರಿ. ಶ. ೧೫೦೦ರ ತುಸು ಹಿಂದು ಮುಂದಿದ್ದವನು ಎಂದು ತರ್ಕಿಸುತ್ತೇನೆ.

ಹೆಚ್ಚಿಗೆ ಈ ಕಾವ್ಯವನ್ನು ಕುರಿತು ಹೇಳಬೇಕಾದ ಕಾರಣವಿಲ್ಲ. ಅದನ್ನೇ ತಮ್ಮ ಮುಂದಕ್ಕೆ ಇರಿಸಿದ್ದೇನೆ. ಕವಿಯ ಹೆಸರಿನ ಕೆಳಗೋ, ಮೇಲೋ, ಸಂಪಾದಕ ಎಂಬ ಅಭಿದಾನದಲ್ಲಿ, ನನ್ನ ಮತ್ತು ನನಗೆ ವಿಶೇಷ ನೆರವನ್ನು ನೀಡಿದ, ನನಗೆ ಗುರುಗಳ ಸ್ಥಾನದಲ್ಲಿರುವಂಥ ಉಗ್ರಾಣ ಮಂಗೇಶರಾಯರ ಹೆಸರನ್ನು ಸೇರಿಸಬಹುದಿತ್ತು. ಅದನ್ನು ನೆನೆದರೆ ನಾಚಿಕೆಯಾಗುತ್ತದೆ. ನಾನು ಮಾಡಿರುವ ಕೆಲಸ–ಹಳೆಯ ದೇವಾಲಯವನ್ನೋ, ಸೌಧವನ್ನೋ

ಜಾಡಮಾಲಿಯಂತೆ ಬರಿದೆ ಗುಡಿಸಿದ್ದು. ಎಷ್ಟು ಧೂಳು, ಕಸ ಜಾಡಿಸಿದೆನೋ, ಚೊಕ್ಕ ಮಾಡಿದೆನೋ, ಅದನ್ನು ಕೂಡ ಹೇಳಲಾರೆ. ಕಸಗುಡಿಸುವುದರ ಜತೆಗೆ ಒಳಗೆ ಬಿದ್ದಿರಬಹುದಾದ ಒಂದೆರಡು ಅಮೂಲ್ಯ ಒಡವೆಗಳನ್ನೂ ಗುಡಿಸಿರಬಹುದು. ಇಂಥ ಅಚಾತುರ್ಯಕ್ಕೆ ನಾನು ಕ್ಷಮೆ ಕೇಳಬೇಕೇ ಹೊರತು, ಹೆಮ್ಮೆ ತಾಳಬೇಕಾದ ಪ್ರಸಂಗವಿದೆಯೆಂದು ನನಗೆ ಕಾಣಿಸುವುದಿಲ್ಲ. ನಮ್ಮ ಸಂತೋಷ—ಈ ಕಾವ್ಯ ಮುದ್ರಣಕ್ಕೆ ಬಂದು, ಕೆಲವು ಶತಮಾನಗಳ ಹಿಂದಿನ ಕವಿಯೊಬ್ಬನ ಮರೆತು ಹೋದ ನೆನಪು ತಿರುಗಿ ಸ್ಮರಣೆಗೆ ಬರುವಂತೆ ಮಾಡಿದ ಪ್ರಯತ್ನ.

ಗ್ರಂಥವನ್ನು ಓದ ಓದುತ್ತ, ಕವಿಯು ಸಂಧಿಗಳನ್ನು ಪ್ರಾರಂಭಿಸುವ ರೀತಿ ಮತ್ತು ಕೊನೆಗೊಳಿಸುವ ರೀತಿಯು ಪರಿಚಯವಾಯಿತು. ಸಂಧಿಯ ಮೊದಲು ತುಂಬಿಸಿದ ಸ್ತುತಿ ಪದ್ಯಗಳನೇಕ ಮರುಕಳಿಸುವುದನ್ನೂ ಕಂಡೆ; ಬರಿಯ ಶಬ್ದಾಡಂಬರವನ್ನೂ ಪ್ರದರ್ಶಿಸುವುದನ್ನೂ ಗುರುತಿಸಿದೆ. ಅವು ಪ್ರತಿಕಾರರ ಕೈಗಾಣಿಕೆಗಳೆಂದು ಅನಿಸಿದುದರಿಂದ ಅವನ್ನು ಬಿಡಬೇಕಾಯಿತು. ಅದರಂತೆ--ಉಪದೇಶ, ಯುದ್ಧಗಳ ಸಂದರ್ಭಗಳಲ್ಲಿ ಪ್ರತಿಕಾರರ ಹಸ್ತಕ್ಷೇಪ ನಾಕಷ್ಟು ನಡೆದಂತಿದೆ. ನಮಗೆ ಸಂಶಯಾಸ್ಪದವಾಗಿ ಕಾಣಿಸಿದ ಹಲವಾರು ಪದ್ಯಗಳನ್ನು ವಿವಿಧ ಪ್ರತಿಗಳಿಂದ ಗುರುತಿಸಿ, ತೆಗೆಯಬೇಕಾಯಿತು. ಕವಿಯೇ ಕೆಲವು ಕಡೆ ಸಂಧಿಗಳ ಕೊನೆಯಲ್ಲಿ–ಇಂತಿಷ್ಟೇ ಪದ್ಯಗಳಿವೆ–ಎಂದಿದ್ದರೂ, ಅಲ್ಲಿಯೂ ತಮ್ಮ ಕಾಣಿಕೆಯನ್ನು ಸೇರಿಸಿ, ಹೊಸ ಲೆಕ್ಕಾಚಾರ ಮಾಡಿದ ಚತುರ ಪ್ರತಿಕಾರರೂ ಇದ್ದಾರೆ. ಈ ಪ್ರಕಟಣೆಯಲ್ಲಿ ಇನ್ನೂ ಅಂಥ ಕೆಲವು ಪದ್ಯಗಳು ಉಳಿದಿರಬಹುದು.

ಈ ಕಾವ್ಯದ ಮುದ್ರಣದ ಕೆಲಸ ಮುಗಿದು ಬಂದಾಗ, ಸುದೈವದಿಂದ ಅದನ್ನು ಮಿತ್ರರಾದ ಶ್ರೀ ಜಿ. ಪಿ. ರಾಜರತ್ನಂ– ಇವರಿಗೆ ತೋರಿಸುವ ಅವಕಾಶ ದೊರೆಯಿತು. ಅವರು ವಿಶೇಷ ಪರಿಶ್ರಮ ವಹಿಸಿ, ನನ್ನ ಉದಾಸೀನ ಕಣ್ಣುಗಳಿಗೆ ಕಾಣಿಸದ ಹಲವಾರು ಮುದ್ರಣ ದೋಷಗಳನ್ನು ತೋರಿಸಿಕೊಟ್ಟರು. ಗ್ರಂಥ ಪ್ರಕಟಿಸುವವನು, ಜತೆಗೆ ತಪ್ಪೋಲೆ ಅಂಟಿಸುವ ಕೆಲಸ ಅವನ ಹೊಣೆಯನ್ನೂ, ಅಯೋಗ್ಯತೆಯನ್ನೂ ತೋರಿಸುವ ಕೆಲಸವೇ. ಮೊಳೆ ಜೋಡಿಸುವವರ ಕಡೆಗೆ ಕೈಮಾಡಬಹುದಾದ ಪ್ರಸಂಗಗಳಿದ್ದರೂ, ಪ್ರಕಟಣಕಾರ ತನ್ನ ಹೊಣೆಯನ್ನು ಮರೆಯುವಂತಿಲ್ಲ. ಆದರೆ ಮೂಲ ಕೃತಿಕಾರನಿಗೆ ನನ್ನಿಂದಾದ ಅಪಚಾರವನ್ನು ಒಪ್ಪಿಕೊಳ್ಳುವ ಒಂದು ಓಲೆಯೂ ಇರಬೇಕಲ್ಲ. ಈ ಸಂದರ್ಭದಲ್ಲಿ ಮಿತ್ರ ಶ್ರೀ ರಾಜರತ್ನಂ ಇವರ ಶ್ರಮ ಮತ್ತು ಸಹಾನುಭೂತಿಯನ್ನು ನಾನು ಸ್ಮರಿಸಲೇ ಬೇಕು.

25—12—1965 ಇತಿ,<br>
ಪುತ್ತೂರು, ದ. ಕ. ಶಿವರಾಮ ಕಾರಂತ

# ಅನುಕ್ರಮಣಿಕೆ

ಪುಟ

ಪರೀಕ್ಷೆಯ ಸಲಹೆ- ಪರಿಶುದ್ಧೆಯಾದ ಸೀತೆ-ದೇವ ದೇವತೆಗಳೂ, ದಶರಥ ಮೊದಲಾದವರೂ ಸೀತೆಯನ್ನು ಪರಿಗ್ರಹಿಸೆಂದು ರಾಮನನ್ನು ಬಲವಂತಮಾಡಿದ್ದು-ರಾಮ ಅವಳನ್ನು ಸ್ವೀಕರಿಸಿದ್ದು-ರಣದಲ್ಲಿ ಮಡಿದವರು ಏಳುವಂತಾದುದು. ೪೯೮-೫೦೯

**೪೪ನೇ ಸಂಧಿ** —ವಿಭೀಷಣನ ಸತ್ಕಾರ- ರಾಮನೊಡನೆ ಸುಗ್ರೀವಾದಿಗಳು ಹೊರಡುವ ಸಲಹೆ- ಪುಷ್ಪಕದಲ್ಲಿ ಪಯಣ- ಸಮುದ್ರದ ಈಚೆ ತಡಿಯಲ್ಲಿ ರಾವಣ ಹತ್ಯೆಯ ದೋಷ ಪರಿಹಾರಕ್ಕಾಗಿ ಲಿಂಗಾರ್ಚನೆ-ಹನುಮ ಲಿಂಗ ತಂದುದು- ಮಳಲ ಲಿಂಗ ಕಂಡು ಕುಪಿತನಾದುದು-ರಾಮನ ಸಮಾಧಾನ- ಮರಳಿ ಪಯಣ-ರಾಮನು ಹಿಂದಿನ ನೆನಪುಗಳನ್ನು ತರುವುದು- ನಂದಿಗ್ರಾಮಕ್ಕೆ ಹನುಮನನ್ನು ಅಟ್ಟುವುದು-ಭರತನ ಅಗ್ನಿಪ್ರವೇಶವನ್ನು ತಡೆಯುವುದು- ರಾಮನ ಸ್ವಾಗತ-ಅಯೋಧ್ಯೆಯಲ್ಲಿ ರಾಮನ ಪಟ್ಟಾಭಿಷೇಕ. ೫೦೯-೫೨೧

---



ಸಹ್ಯಾದ್ರಿಯ ಯಾಣ ಎಂಬಲ್ಲಿನ ನಿಸರ್ಗನಿರ್ಮಿತ ಭೈರವ ದೇವಾಲಯ

# ಕೌಶಿಕ ರಾಮಾಯಣ

## ೧ನೇ ಸಂಧಿ

ಪಲ್ಲ ॥ ಭೂಮಿಪತಿ ದಶರಥನ ಬಸುರಲಿ
ರಾಮ ಲಕ್ಷ್ಮಣ ಭರತ ಶತ್ರುಹ
ನಾಮದಲಿ ಜನಿಸಿದರು ನರಹರಿಯಮರತತಿ ನಲಿಯೆ ॥

ಪದ್ಯ ॥ ಬಾಲಹಿಮಕರ ಕಿರಣಮಂಡಿತ
ಭಾಳಲೋಚನ ರತುನಮುಕುಟ ವಿ
ಶಾಲನಾ ಗಜವದನ ವರದಾಭಯಕರಾಂಬುಜಗೆ ॥
ಶೈಲಜಾವರಪುತ್ರ ಸಕಲ ಸು
ರಾಳಿ ವಂದಿತ ಚರಣಕಮಲನೆ
ಪಾಲಿಸೆನ್ನಯ ಮತಿಗೆ ಮಂಗಲವಿತ್ತು ಗಣನಾಥ ॥ ೧ ॥

ವಾಣಿ ಬೊಮ್ಮನ ರಾಣಿ ಸುಜನ
ಶ್ರೇಣಿ ಸೊಬಗಿನ ಕೇಣಿ ಸತಿ ಸು
ಪ್ರಾಣಿ ವರ್ಗಶ್ರೇಣಿ ಪುಸ್ತಕಪಾಣಿ ಸುಶ್ರೋಣಿ ॥
ರಾಣಿ ಕರುಣದಿ ಕೊಡುವರೊಳು ಕಡೆ
ಯಾಣಿ ತನ್ನನು ನೆನೆವ ಭಕ್ತ
ತ್ರಾಣಿ ಸುಬ್ರಹ್ಮಾಣಿ ಕಾಮಿತದಾನಿ ವರವೀಯೆ ॥ ೨ ॥

ಲಾಳಿತೆಯ ರಮಣೀಯ ರಸಗಳ
ಸೂಳುನುಡಿಗಳ ಸಡಗರಂಗಳ
ಸಾಲಭಣಿತೆಯ ಬಂಧದೋಜೆಯ ಕಥೆಯ ಪ್ರಥುಲತೆಯ ॥
ಪೀಳಿಗೆಯ ನವಕುಸುಮ ದಾಮವ
ಹೋಲುವಾದರ ಮಧುರ ಸೂಕ್ತಿಯ
ಕೇಳಿ ರಾಮಾಯಣದ ಕಥೆಗಳನೊಲಿದು ಬಣ್ಣಿಸುವೆ ॥ ೩ ॥

ಗುಣಕೆ ಪರಿಣಮಿಸುವರು ಕವಿಯುವ
ಗುಣವನೀಕ್ಷಿಸದವರು ಸಾರವ
ನೆಣಿಸುವರು ಪರಮಾತ್ಮವಂಚಕರಲ್ಲದಿದ್ದವಗು ॥
ಗಣಪವಾಗ್ದೇವಿಯರ ಚರಣಕೆ
ಪ್ರಣತನಾಗಿಯೆ ಬಣ್ಣಿಸುವೆ ದಿನ
ಮಣಿಕುಲೇಂದ್ರನ ಕಥೆಯನಾದರದಿಂದ ಕೇಳುವುದು ॥ ೪ ॥

ಸುಲಿದ ರಂಭಾಫಲವನೊಲ್ಲದೆ
ಜಳರು ಮೆಲುವರೆ ಲೋಹಗಡಲೆಯ
ಸುಲಭವಹ ಸತ್ಕಥೆಯ ಕೇಳದ ಮಹಿಯ ಮೂಢ ಜನ ॥
ತಿಳಿವರೇ ಗೂಡಾರ್ಥಬಂಧವ
ನೆಲವೊ ಸಾಕಂತಿರಲಿ ಮುನಿಯಿದ
ತಿಳಿದು ಲೋಕವು ಬದುಕಲೆಂದೀ ಕಥೆಯ ರಚಿಸಿದನು ॥ ೫ ॥

ಜೂದದಲಿ ಬಹು ದುಷ್ಟ ಸಂಗದಿ
ವಾದವಿದ್ಯೆ ಕುತರ್ಕ ಪರರಪ
ವಾದ ಕಥನ ಮಹೇಂದ್ರಜಾಲದಿ ಭಂಡರಾಟದಲಿ ॥
ಗಾದೆಯಲಿ ನಾಳ್ಗಥೆಯನೆಂದರೆ
ಬೀದಿವರಿದರ್ತಿಯಲಿ ಕೇಳ್ವುದು
ಮೇದಿನೀ ಜನ ಕಲಿಯು ವರ್ತಿಸುತಿಪ್ಪ ಕಾಲದಲಿ ॥ ೬ ॥

ಮೊದಲಲ್ಪಾಯುಷರು ಕಲಿಯಲು
ತದಪಿ ಶ್ರದ್ಧಾಭಕ್ತಿಹೀನರು
ವಿದಿತ ನಿದ್ರಾಲಸ್ಯ ಪರರಾಮ್ನಾಯವರ್ಜಿತರು ॥
ಕದನರುಚಿಗಳು ಕಾಮಭರಿತರು
ಮದಸಮೇತರು ಯುಕ್ತಿಶೂನ್ಯರು
ಬದುಕಬೇಕೆಂದಿಂತು ಸುಲಲಿತವಾಗಿ ರಚಿಸಿದನು ॥ ೭ ॥

ಕೆಲಸ ಗತಿಗಳ ಕೊರತೆಯಿಲ್ಲದೆ
ಹಳಿವು ಹೊರೆವುದೆ ಮಿಸುನಿಯಿದಿರಲಿ
ಬೆಳಗಲರಿಯದ ಮುಗುಧ ಮುಕರವ ಹಳಿದಡೂಣಯವೆ ॥
ಹಲವು ರಸದಲಿ ಕಾವ್ಯಸುಧೆಯನು
ಬಳಸಲರಿಯುವನಿಂದ ಲಘುತೆಯ
ತಳೆಯದೇ ಶ್ರೀರಾಮಚಂದ್ರ ಚರಿತ್ರ ಜಗದೊಳಗೆ ॥ ೮ ॥

ಹೇಳುವಾತಂಗಮಳ ಸಂಪದ ।
ಕೇಳುವವರಘಮೂಲ ಕೃಂತನ ।
ಸೋಲೆ ಕರ್ಣಾಮೃತವು ಸುಜನರ ಸಭೆಗೆ ಭೂಷಣವು ॥
ಮೇಲೆ ಸತ್ಕಥೆ ಬಲ್ಲವರ ಹೀ ।
ಹಾಳಿ ಸುರಸಂತುಷ್ಟಿ ಲಕ್ಷ್ಮೀ
ಲೋಲನುರು ಚಾರಿತ್ರ್ಯ ಸುಧೆಯನು ಕೇಳಿ ಸಜ್ಜನರು ॥ ೯ ॥

ಶರಣುಜನ ಸುರಧೇನು ಧೇನುಕ
ಸುರವಿದಾರಣ ರಣಭಯಂಕರ
ಕರಚತುಷ್ಟಯ ಯಮನಿಯಮಾದಿದೃಶ್ಯಕರಾ ॥
ಕರಣನಿರ್ಮಲ ನಿರ್ಮಲಾವರ
ವರದಶೇಖರ ಖರಶಿರೋಹರ
ಹರ ಮನೋಹರ ಭರಿತ ಭಕ್ತಿಂದೇಹಿತೇಂಘ್ರಿಯುಗೇ ॥ ೧೦ ॥

ಅರಿದು ಕೇಳಲಿ ಮರೆದು ಕೇಳಲಿ
ಹರಿವುದೈ ಭವಬಂಧ ಕೆಂಡವ
ಮರೆದು ಮುಟ್ಟಲು ಬೆರಳು ಬೇಯುವೆ ತತ್ಕ್ಷಣಾರ್ಧದಲಿ ॥
ಮರೆದು ಕುಡಿದರೆ ಕಾಯದುಳಿವುದೆ
ನೆರೆ ಸುಧಾರಸವೆಂದಜಾಮಿಳ
ನರಿದು ಕರೆದನೊ ಕೊಡದೆ ಕೈವಲ್ಯವನು ಹರಿನಾಮ ॥ ೧೧ ॥

ಓದಿದರೆ ವಾಕ್ಪದವು ಸಾರವ
ನಾದರಿಸೆ ಮತಿಸಿದ್ಧಿ ಕೇಳಲು
ತೀದುದಾತನ ಕರ್ಮಬಂಧನ ತಾಪ ಭವಭಯವು ॥
ವೇದಸನ್ಮತವೆನಿಪ ಹರಿಕಥೆ
ಹಾದಿ ಮುಕುತಿಗೆ ಶ್ರೀಪದಕ್ಕದು
ಮೇದಿನಿಗೆ ವಾಲ್ಮೀಕಿ ಮುನಿಪತಿರಚಿತ ರಮಣೀಯ ॥ ೧೨ ॥

ಆದಿನಾರಾಯಣನು ರಾಘವ
ನಾಗ ಧರಣಿಯ ಭಾರವಿಳುಹಲು
ವೇದಸನ್ಮತವಪ್ಪ ರಾಮಕಥಾ ಪ್ರಸಂಗವನು ॥
ಆದರದೊಳಭಿವರ್ಣಿಸಿದ ನಾ
ಸಾಧುಸಜ್ಜನರುಂಡು ದಣಿಯೆ ಮ
ಹಾದಯಾನಿಧಿ ಕರುಣಿಸಿದ ವಾಲ್ಮೀಕಿಯೊಲವಿನಲಿ ॥ ೧೩ ॥

ಹರಿಕಥಾ ಪರಮಾನ್ನ ಸತ್ತ್ರ
ಸ್ವರ ಸುಪಾಚಿತ ಗಾನ ನವಘೃತ
ವೆರಸಿ ದುವೆ ಗೀತಾಳಿ ಶಾಖಿವ್ಯಂಜನಾದಿಗಳು ॥
ಪರಿಮಳಿಸುವಿತಿಹಾಸ ಭಕ್ಷ್ಯವ
ಸರಸ ಕವಿ ಬಡಿಸುವನು ಮುದದಲಿ
ಕರೆಯಲಿಂದೆಡೆಯಾಯ್ತು ಉಂಬರೆ ಬನ್ನಿ ಹಸಿದವರು ॥ ೧೪ ॥

ಇದು ಮನೋಭಿಪ್ರಾಯ ಸಾಧಕ
ವಿದು ಪರೇಹಸುಖಪ್ರದಾಯಕ
ವಿದು ಸುಖಾಬ್ಧಿಗೆ ಮೂಲಸಾಧನವಿದು ಸುಖಪ್ರದವು ॥
ಇದು ಸಕಲ ಪೌರಾಣವೇದದ
ಹೃದಯ ಮುನಿ ವಾಲ್ಮೀಕಿವರ್ಣಿತ
ಯಿದರ ಮಹಿಮೆಯ ಬಲ್ಲನೀಶ್ವರನುಳಿದ ಮಾತೇನು ॥ ೧೫ ॥

ಸುರರು ದಾನವಬಾಧೆಗಾರದೆ
ಹರಿಗೆ ಹುಯ್ಯಲನಿಟ್ಟೊಡವರಿಗೆ
ಕರುಣದಲಿ ಮೈದೋರಿ ನರಹರಿಯಭಯವನು ನೆಗಪಿ ॥
ಧರಣಿಪತಿ ದಶರಥಗೆ ನಾನವ
ತರಿಸುವೆನು ಸುತನಾಗಿ ಧರೆಯಲಿ
ತರುಚರರು ನೀವಾಗಿ ಜನಿಸುವುದೆಂದು ನೇಮಿಸಿದ ॥ ೧೬ ॥

ಅನಿಮಿಷಾಧಿಪ ವಾಲಿ ಜಾಂಬವ
ವನಜಭವನಾಗಿರಲು ರವಿಸುತ
ನೆನಿಸಿದನು ಸುಗ್ರೀವನೀಶನು ಹನುಮನೆಂದೆನುತ ॥
ಜನಿಸೆ ಚಂದ್ರಮ ದಧಿಮುಖಾಖ್ಯದಿ
ಅನಲ ನೀಲನು ನಿಋತಿ ಕೇಸರಿ
ಪನಸ ವರುಣನು ವಿಶ್ವಕರ್ಮನು ನಳನ ಹೆಸರಿನಲಿ ॥ ೧೭ ॥

ಮರುತ ಧೇನುಕ ಯಕ್ಷನಂಗದ
ನರಕದೊಡೆಯನು ಗವಯ ಮೈಂದಾ
ದ್ಯರು ಮಹೀತಳದಲ್ಲಿ ಮರ್ಕಟರಾಗಿ ಬೆಳೆವುತಿರೆ ॥
ಸಿರಿಯರಸ ನಾರದನ ಶಾಪವ
ಧರಿಸಿ ನರವೇಷದಲಿ ನಟಿಸುವ
ವರ ಕಥಾಮೃತಗಳನು ಸುಜನರು ಕೇಳಿ ಬಣ್ಣಿಸುವೆ ॥ ೧೮ ॥

ನಾರದನು ವಾಲ್ಮೀಕಿಗೆಂದನು
ವಾರಣಾಸಿಗೆ ಮಿಗಿಲು ಭುವನಕೆ
ಸಾರ ತಮಸೆಗೆ ಬಡಗಲೊಳೇಳು ಯೋಜನಾಂತರವು ॥
ಭೂರಿ ಚೆಲುವ ಪಯೋಧಿ ಸರಯೂ
ವಾರಿ ನಗರದ ಮೂಡಲಂಬುಧಿ
ಮೇರೆಯೊಳಗಣ ಧರೆಗೆ ಚಾವಡಿಯೆನಿಸಲೊಪ್ಪಿದುದು ॥ ೧೯ ॥

ಹೊಳೆವ ಕನಕದ ಕೋಟೆ ಮಾಣಿಕ
ಕಳಸ ರತುನದ ತೋರಣಂಗಳು
ವೊಳಗೆ ತೊಂಬತ್ತಾರು ಸಾವಿರ ಸೋಮ ವೀಥಿಗಳು ॥
ಅಳವಿಗಗಲದ ಆರು ಯೋಜನ
ವಳಯ ನಿಲಯವು ಹತ್ತು ಯೋಜನ
ಸಲೆ ತ್ರಿಯಂಬಕ ಭವನ ಸಾವಿರದೇಳುನೂರೆಸೆಯೆ ॥ ೨೦ ॥

ನೆಗಳ ಕೊರಳೋ ಹಸಿದ ಹುಲಿಗಳ
ಮೊಗವೊ ಫಣಿಗಳ ಹಗೆವೊ ಮಾರಿಯ
ಜಗವೊ ಮುನಿಪವರಿಂಗಯೋಧಿಯೊ ಬಣ್ಣಿಸುವೊಡಳವೇ ॥
ನಗುವುದಮರಾಪತಿಯ ಚೆಲುವನು
ಮಿಗುವುದಳಕಾಪುರಿಯ ಸಿರಿಯನು
ಬಗೆಯದಾನೂರ್ರೇಳು ಕೇರಿಯ ನಾರಿ ಸೇರಿಪುದು ॥ ೨೧ ॥

ಕಲ್ಲು ಪರಶುಗಳೆಲ್ಲ ಪುಟ್ಟಿದ
ಹುಲ್ಲುಗಳು ರಾಜ್ಯಾನ್ನಕೂಪವು
ಯೆಲ್ಲ ಸಿದ್ಧರಸಂಗಳಾವುಗಳೆಲ್ಲ ಸುರಧೇನು ॥
ಕ್ಷುಲ್ಲತನ ಕುಂದೆಡರು ಬಡತನ
ವಿಲ್ಲ ಜಯಸಿರಿಬೀಡು ಹೂವಿನ
ಬಿಲ್ಲವನು ಸತಿಯೊಡನೆ ತಿರುಗುವ ಭುವನತಿಲಕವದು ॥ ೨೨ ॥

ಅರರೆ ನೆಲನಲ ಭರಿತವಮೃತದ
ಶರಧಿ ಸಾವಿರವಪ್ಪುವಂಗಡಿ
ಮೆರೆವ ಗಣಿಕಾ ಭವನ ಕೋಟಿಯ ಸುತ್ತಲುದ್ಯಾನ ॥
ಪುರವು ಕರ ಕರ ಚೆಲುವನಂಗನು
ಅರಸು ದಶರಥ ಭೂಪನಾತನ
ಬಿರಿದು ರಿಪುಕುಲತಿಮಿರ ರವಿ ಆಜನಣುಗ ಮಾ ವಿಜಯ ॥ ೨೩ ॥

ಸ್ಥಿರತೆಯಲಿ ಕನಕಾದ್ರಿ ಧೈರ್ಯಾದಿ
ಧರೆಗೆ ಸರಿ ಗಂಭೀರತನದಲಿ
ಶರಧಿಗೆಣೆ ಕೊಡುವಲ್ಲಿ ಸುರತರು ತೇಜದಲಿ ತರಣಿ ॥
ಸಿರಿಯೊಳಾ ಬಲಿ ಭೋಗದೆಡೆಯಲಿ
ಸುರಪ ರೂಪದಿ ಮದನ ಹಗೆಗಳ
ಹರಣದಲಿ ಕಾಲಾಗ್ನಿ ರುದ್ರನು ಭೂಪ ದಶರಥನು ॥ ೨೪ ॥

ಸುಮತಿ ಕೌಸಲೆದೇವಿ ಪಟ್ಟದ
ರಮಣಿ ಕೈಕಾದೇವಿ ಬೇಟದ
ರಮಣಿ ವಿಶಾಲನೇತ್ರೆ ಸುಮಿತ್ರೆ ಕಿರಿಯವಳು ॥
ಕ್ರಮದಲಿಂತಿವರಂಗ ಚೆಲುವನು
ಅಮರ ಸತಿಯರು ಹೋಲಲರಿಯರು
ಭ್ರಮರ ಕುಂತಳೆಯವದಿರೆವ್ವನ ಪ್ರಾಯದಬಲೆಯರು ॥ ೨೫ ॥

ಇರಲು ಪೂರ್ವಾಮರರೊಳಾದುದು
ಧುರ ಮಹಾದ್ಭುತವಾಗಿ ಭೂಪತಿ
ತೆರಳಿ ಹೋದನು ಸಾಹಸಾಖ್ಯನ ಕೈಕೆಯನುಸರಿಸೆ ॥
ಭರದ ಬವರದಲಚ್ಚು ನೆಗ್ಗಲು
ಕರವ ಸಲಿಸಿಯೆ ತೇರ ನಡೆಸಿದ
ಅರಸಿ ಪರಬಲ ಸೇನೆ ಮುರಿದುದು ನೃಪತಿ ಮರಳಿದನು ॥ ೨೬ ॥

ಬರುತ ನೋಡಿದನವಳ ಕೈಯನು
ಧರಣಿಪಾಲಕ ಕಂಡು ಮೆಚ್ಚುತ
ವರವನೀವೆನು ಭಳಿರೆ ಮೆಚ್ಚಿದೆನರಸಿ ಬೇಡೆನಲು ॥
ಅರಸ ಬೇಕೆಂಬಾಗ ಬೇಡುವೆ
ನಿರಲಿ ನಿಮ್ಮಲಿ ಮೆಚ್ಚು ತತ್ತ್ವವ
ಸರದಿಲೀಯೆನೆ ಕೊಡುವೆನೆನುತೈದಿದನಯೋಧಿಯನು ॥ ೨೭ ॥

ಹಂಸನಿಲ್ಲದ ಸರಸಿ ಬಲು ವಿ
ದ್ವಾಂಸರಿಲ್ಲದ ಸಭೆ ಷಡಂಘ್ರಿಗೆ
ಮಿಸಲೆನಿಸದ ಕಮಲ ಪರಭೃತವಿಲ್ಲದುದ್ಯಾನ ॥
ಲಾಸವಿಲ್ಲದ ಗಾನ ಪೀತ ಸು
ವಾಸವಿಲ್ಲದ ತೊಡುಗೆಯಂತಾ
ವಾಸ ನೆರೆಯದು ಮಕ್ಕಳಿಲ್ಲದೆ ಭೂಪದಶರಥಗೆ ॥ ೨೮ ॥

ತನಯರಿಲ್ಲಾಯೆಂಬ ಚಿಂತೆಯು
ನೆನಹಿನಿಂದಿರುತೊಂದು ದಿನದಲಿ
ವನಕೆ ದಶರಥನೈದಿ ಯಾಮಿನಿಯಲಿ ಸರೋವರವ ॥
ಜನಪ ಕಾಯ್ದಿರಲೊಬ್ಬ ವಿಪ್ರನ
ತನಯ ಚೌಡಲನೆಂಬವನು ತ
ಜ್ಜನಕಗುದಕಾಪೇಕ್ಷೆಯಾಗಲು ಬಂದನಾ ಕೊಳಕೆ ॥ ೧೯ ॥

ಮೊಗೆವ ದನಿಯನು ಕೇಳಿ ಗಜವೆಂ
ದುಗಿದು ಬಿಟ್ಟನು ಸರಳನಕಟಾ
ಮೊಗವನೂರಿಯೆ ಬಿದ್ದ ಹರಹರಯೆನುತ ಮುನಿತನಯ ॥
ಬಗೆದು ಮಾನಿಸರೆನುತ ಭೂಪತಿ
ಬೆಗಡುಗೊಳುತೈಯ್ತಂದು ಕೇಳಲು
ತೆಗೆಬಗೆಯಲುಸುರುತ್ತ ತಂದೆಯ ನೆಲೆಯ ತಿಳುಹಿದನು ॥ ೨೦ ॥

ಮತ್ತೆ ಮುನಿದಂಪತಿಗಳಿದಿರಲಿ
ಸತ್ತ ತನಯನನೊಯ್ದು ಬಿಸುಸುಯಿ
ದತ್ತು ಪದದಲಿ ಬಿದ್ದು ಕೈತಪ್ಪಾಯ್ತು ಕರುಣಿಪುದು ॥
ಪೆತ್ತ ಮಗ ನಿಮಗಾನು ಸಲಹುವೆ
ಚಿತ್ತಶೋಕವನಿಳುಹಬೇಕೆನೆ
ಪುತ್ರಶೋಕದಲಳಿವು ನಿನಗೆನುತಸುವ ನೀಗಿದನು ॥ ೨೧ ॥

ದಹಿಸಿದನು ಕುಣಪ ತ್ರಯಂಗಳ
ಳಹಿಮಕರಕುಲ ತನ್ನ ಮೌಢ್ಯದಿ
ಬಹಳ ಶೋಕದಲಿರಲು ಮನದೊಳಗರ್ಥವಂಕುರಿಸೆ ॥
ಅಹುದು ಶಾಪವಿದೆನಗೆ ವರವಾ
ಯ್ತಹುದಲಾ ಸುತಮುಖವ ಕಾಣ
ಲ್ಕಹೆನಲಾ ಬಳಿಕಾದುದಾಗಲಿ ಧನ್ಯ ತಾನೆಂದ ॥ ೨೨ ॥

ಹರಡೆ ಹಂಗನು ಕೃಷ್ಣ ವಿಹಗನು
ನಿರುತವೆರಡಿಹ ಶುಭ್ರಗೌಳಿಯು
ನಿರದಿರದೆ ನೋಡುವನು ಮಕ್ಕಳ ಬಯಸಿ ಶಕುನಗಳ ॥
ಹರಿಗೆ ಪಟ್ಟದ ಹರಕೆ ತೊಟ್ಟಿಲ
ಹರಕೆ ಬಿಂದಿಯ ಹರಕೆವಿಡಿದಿಹ
ರರಸಿ ಕೌಸಲೆದೇವಿ ಕೈಕೆ ಸುಮಿತ್ರೆಯರು ನಲಿದು ॥ ೨೩ ॥

ಧರಣಿಪತಿ ಸಭೆಗೊಂದು ದಿನದಲಿ
ಪರಮ ಋಷಿವರ ಬಂದು ನೆರೆದಿರೆ
ಭರದಲಿದಿರೆದ್ದರ್ಘ್ಯಪಾದ್ಯವನಿತ್ತು ಸತ್ಕರಿಸಿ ॥
ಕರವ ಮುಗಿದರುವತ್ತು ಸಾವಿರ
ವರುಷವಾಯಿತು ತನಗೆ ರಾಜ್ಯದ
ಸಿರಿಯನನುಭವಿಸಿದೆನು ಸಂತಸವಿಲ್ಲದಾಯ್ತೆಂದ ॥ ೩೪ ॥

ಪರಭೃತಾಹ್ವಯವಿಲ್ಲದುಪವನ
ತರಣಿಯಿಲ್ಲದ ನಭ ಮರಾಳವು
ಚರಿಸದಾ ಕೊಳನಂತೆ ತನುಭವರಿಲ್ಲದೀ ತನ್ನ ॥
ಅರಸುತನವದು ಮೆರೆಯದೀ ಪುರ
ಸಿರಿಯಿದನು ನಾನುಂಡು ಫಲವೇಂ
ಗುರುಕೃಪಾನಿಧಿ ಪುತ್ರಪ್ರಾಪ್ತಿಯದೆಂದು ಬೆಸಸೆಂದ ॥ ೩೫ ॥

ಇಂದು ಬೆಳಗಿನ ಸಮಯದೊಳಗಹ
ದೊಂದು ಸ್ವಪ್ನವ ಕಂಡೆನೆಂತೆನ
ಲೊಂದು ಕೋಡಿನ ಗೊರವನಿತ್ತನು ನಾಲ್ಕು ಕಳಭಗಳ ॥
ಬಂಧಿಸಿದೆನರಮನೆಯೊಳನ್ನಕ
ದಂದಶೂಕನು ಪಂಚಮುಖದಲಿ
ತಿಂದುದಾಕ್ಷಣ ಭುಜದಿ ನೆತ್ತರು ಸುರಿಯೆ ಕಣ್ದೆರೆದೆ ॥ ೩೬ ॥

ಅವನಿಪಾಲಕ ನಿನ್ನ ಭಾಗ್ಯದ
ಹವಣವೆಂಬುದದೇನು ಲಕ್ಷ್ಮೀ
ಧವನು ನಾಲ್ವರು ತನಯರಾಗವತರಿಪನಿನ್ನಲ್ಲಿ ॥
ದಿವಿಜಮುನಿ ಋಷಿಶೃಂಗ ಬರಲೆನ
ಲವರದೆಲ್ಲಿಹರೆನಲು ಪೇಳ್ದರು
ನಿವಗೆ ಕೆಳೆಯನು ರೋಮಪಾದನು ಬಲ್ಲನವನಿರವ ॥ ೩೭ ॥

ತರಿಸು ಕಟ್ಟಿಗೆಗಳನು ನೃಪ ಶೃಂ
ಗರಿಸು ಬಾಣವ ಬಿಗಿಸು ಗುಳಗುಳ
ಕರಿಗಳಿಗೆ ಹಲ್ಲಣಿಸು ಹಯಗಳ ಹೇಮ ರಥಗಳಿಗೆ ॥
ಪೆರೆಯ ಪಿಡಿ ಡಂಗುರವ ಸಾರಿಸು
ಪುರದಿ ಹೊರಬೀಡುಗಳ ಬಿಡಿಸಲಿ
ತೆರಳು ಲಿಂಗಾರ್ಚನೆಯನಾರೋಗಣೆಯ ಮಾಡೆನಲು ॥ ೩೮ ॥

ಪುರಕವಮಾತ್ಯರ ಕಾಹ ಹೇಳಿದ
ತೆರಳಿದನು ನೃಪನಾಥ ಮೇದಿನಿ
ಜರಿಯೆ ಚಂಪಾಪುರಕೆ ಪೆರ್ಬಲನಡೆವುದಂದಿನಲಿ ॥
ಧರಣಿಯರಸುಗಳೆಲ್ಲ ಕಂಗೆಡೆ
ಪುರವ ಸಿಂಗರಗೆಯ್ದು ಕರಿ ರಥ
ತುರಗ ಪಂಕ್ತಿಯಲಿದಿರುಗೊಳೆ ಹೊರವಂಟನವನಿಪನು ॥ ೩೯ ॥

ಸೊಗಸು ಮಿಗೆ ದಶರಥ ನೃಪಾಲಕ
ನಗಣಿತದ ಪಡೆಸಹಿತ ಕೇಕಯ
ನಗರಿಗೈದಿದ ಭೇರಿ ತಮ್ಮಟೆ ಜಗವನಳ್ಳಿರಿಯೆ ॥
ದಿಗಿಲಿನೆದ್ದವನಪ್ಪಿ ಮನ್ನಿಸಿ
ಬಗೆಯ ಬೆಸಗೊಳಲೆಂದನಾಗಳು
ಮೃಗಮುಖದ ಮುನಿಯಿಹನು ಗಡ ನೋಡುವೆನು ಕರೆಸೆಂದ ॥ ೪೦ ॥

ಕರೆಯಲಂಗೈ ತಳಕೆ ಬಹನೇ
ತರಣಿ ವನಕೇಸರಿಯ ಚಿಟುಕಿಸಿ
ಕರೆಯೆ ಹೊರೆಯನು ಹೊದ್ದುವುದೆ ಕೈಗಣ್ಣಿಯಲಿ ಕರಿಯ ॥
ತುರಿಸಿ ಕಟ್ಟಲುಬಹುದೆ ಮುನಿಪನ
ಬರಿಸಲೆನ್ನಳವಹುದೆ ಕೆರಳಿದ
ಡುರುಹಿ ಕಳೆಯನೆ ದೈವ ಪುರುಷರು ಸುಲಭರೇಯೆಂದ ॥ ೪೧ ॥

ರೋಮಚರಣನೆ ಕೇಳು ತನುಜರ
ಕಾಮಿಸಿದೆನೀ ಋಷ್ಯಶೃಂಗನು
ಹೋಮಮುಖದಲಿ ಬಗೆಯ ಸಲಿಸುವನೆಂದು ಕೇಳಿದೆನು ॥
ಪ್ರೇಮಿಯಪ್ಪೊಡೆ ಕರೆಸು ಬೇಗನ
ಲಾ ಮಹಾತ್ಮನು ತನಗೆ ಸುಲಭನೆ
ಕಾಮಿನಿಯರನು ಕಳುಹಿ ನೋಡುವೆ ಋಷಿಯ ಬನಕೆಂದ ॥ ೪೨ ॥

ಕರೆಸಿದನು ಗಣಿಕೆಯರ ವಸ್ತ್ರಾ
ಭರಣ ವೀಳೆಯವಿತ್ತು ಮುನಿಯನು
ಬರಿಸಿಕೊಟ್ಟರೆ ಮೆಚ್ಚಿದುಡುಗೊರೆಯೊವೆ ಸಿಮಗೆನಲು ॥
ತೆರಳಿದರು ಶೃಂಗಾರನಿಧಿಗಳು
ಭರದ ಯೌವ್ವನೆಯರು ಕಳಾಪಿಪೆ
ಯರುಗಳಾ ಮುನಿಯಿಪ್ಪ ಬನವಿಗೆ ಪಯಣಪಯಣದಲಿ ॥ ೪೩ ॥

ಶುಕ ಮಯೂರ ಮಧುವ್ರತಂಗಳ
ಸುಕರ ನಾದದವಿಮಳ ಮುನಿಗಳ
ನಿಕರದೋದಿನ ದನಿಯು ಕಿನ್ನರಗಾನದೆಸೆವುಗಳ ॥
ಮಕರ ಕಚ್ಛಪ ಮೀನು ಹಂಸ
ಪ್ರಕರದೊಪ್ಪುವ ತಿಳಿಗೊಳಂಗಳ
ಸುಖವ ಬಣ್ಣಿಪೆನೇನು ಮಂಗಲಮಯ ತಪೋವನವ ॥ ೪೪ ॥

ಸಾರ ಸುಕೃತದ ಫಲವನುಂಬಾ
ಘೋರ ಋಷಿಗಳ ಕಂಡು ರಂಭಾ
ನಾರಿ ಕುಂಡಿಕೆ ದಂಡ ವರ್ಣಚ್ಛತ್ರಗಳ ಧರಿಸಿ ॥
ನಾರಸೀರೆಯನುಟ್ಟು ಸಲಿಲಾ
ಹಾರವನು ಕೈಕೊಂಡು ತಪದಲಿ
ಮೂರು ಕಾಲದ ಗುಣಕೆ ಸೆಡೆಯದೆ ವನದೊಳೊಪ್ಪಿದಳು ॥ ೪೫ ॥

ರಾಗಿಯಹ ಕಿನ್ನರರ ಮಿಥುನವ
ನಾಗಸದಿ ನೆರೆ ಕಂಡು ಹೂತಿಹ
ಪೂಗವನು ಬಿಗಿದಪ್ಪಿ ಕೃತಸಿಂಗಾರೆಯೆಂದೆನಿಸಿ ॥
ಭೋಗಿಸುತ್ತಿರೆ ವರ್ಣ ಮೂರರ
ಯೋಗವೆಂದೆನೆ ತೋರುತಿರ್ದುದು
ನಾಗಧೀಲತೆ ಕುಸುಮಕೇಸರದಿಂದ ಜನಮನವ ॥ ೪೬ ॥

ಅರಸಿನೋಲಗದಂತೆ ಕೇದಗೆ
ವಿರಹದರ್ತಿಯವೋಲು ಕುರವಕ
ಪರಮ ವೈದ್ಯನವೋಲು ಹರಿತಕಿ ನೀಚನೆಂದೆನಿಸಿ ॥
ಸುರಪತಾಕೆಯ ವೋಲಶೋಕಾ
ತರು ನೃಪಾಶ್ರಯದಂತೆ ಮಲಯಜ
ಸುರಭಿತಾಖಿಳ ಕುಸುಮದಲಿ ವನಲಕ್ಷ್ಮಿಯೊಪ್ಪಿದುದು ॥ ೪೭ ॥

ಫಲಕೆ ಕಂಟಕವಾದ ಗಜ್ಜುಗ
ಕುಲಕೆ ಕಂಟಕವಲ್ಲದೆಸೆದಿರೆ
ತಿಲಕವಾಗಿಯು ತಿಲಕವಾಗದು ವಿಗತ ಜೀವರಿಗೆ ॥
ವಿಲಸದೈರಾವತವದಾಗಿಯು
ಕುಳಿರಲೈರಾವತವದಲ್ಲೆನೆ
ದಳಿತ ಬಾಣವು ಬಾಣವಲ್ಲೆನೆ ವನದಲೊಪ್ಪಿದುದು ॥ ೪೮ ॥

ರೂಢಿಯೊಳಗುತ್ತಮರು ಮರೆವರೆ
ಮಾಡಿದುಪಕಾರವನು ಬಾಲ್ಯದ
ಲೂಡಿದುದಕಕೆ ಶತಗುಣೋತ್ತರಗುಣದಮೃತ ಜಲವ ||
ನೀಡುತಿದ್ದುವು ಸಲಹಿದಾತಗೆ
ನೋಡು ನೋಡಿಹಪರದ ಸುಖವನು
ಮಾಡುತಿರ್ದವೆನಲ್ಕೆ ಮೆರೆದುವು ಫಲಿತ ತೆಂಗುಗಳು || ೪೯ ||

ಕಳಭ ಕಂಠೀರವ ಶುನೌತುಗ
ಇಲಿ ಬಿಡಾಲ ತರಕ್ಷು ಪಶುಮೃಗ
ಬಿಲಶಯನ ವರ್ಷಾಭು ನಕುಲ ಭುಜಂಗಜಾತಿಗಳು ||
ಕುಲದ ವೈರವ ಮರೆದು ಬೆರೆಸಿಹ
ವಲಘುಮಹಿಮನು ಋಷ್ಯಶೃಂಗನ
ಬಲದಲೆಡದಲಿ ತಿರುಗುತಿಪ್ಪವು ಲೀಲೆ ಮಿಗೆ ನಲಿದು || ೫೦ ||

ಇಂತು ಮೆರೆವ ತಪೋವನಾಂತದಿ
ಕಂತು ದೇವತೆಯರುಗಳೈದಿದ
ರೆಂತು ಪಡೆವೆವು ಮುನಿಯ ಚಿತ್ತವನೆನುತ ಸ್ವಾಂತದಲಿ ||
ಚಿಂತಿಸುತ ದೈವಜ್ಞರೊಲವೆಮ
ಗೆಂತುಟೋ ಪರಿಸಂತವೋ ಜೀ
ವಾಂತವೋ ಹರಿ ಬಲ್ಲನೆನುತಲಿ ಪೊದ್ದಿದರು ಪೊರೆಯ || ೫೧ ||

ತಾಳಕಹಳೆಯುಪಾಂಗ ವಾಸದ
ಮೇಳ ಕೂಡಲು ಗ್ರಾಮ ಮೂರ್ಛನೆ
ಯೋಳಿ ತಪ್ಪದೆ ತಾರ ಮಂದರ ಮಧುರಲಯದಿಂಬ ||
ಪಾಳಿಗಳು ಸಾಳಂಗ ಶುದ್ಧದ
ಮೇಲೆ ಸಂಕೀರ್ತನೆಯ ಪಾಡಲು
ಕೇಳಿದನು ಮುನಿನಾಥ ಜಪವನು ಬಿಸುಟು ತಿರುಗಿದನು || ೫೨ ||

ಮುನಿಪನಾಶ್ರಮವಳಯದೊಳಗಾ
ವನಿತೆಯರು ನಿಂದಿರ್ದು ಪಾಡಲು
ಮುನಿ ಸಮಾಧಿಯ ಬಿಟ್ಟು ಕಾತರನಾಗಿ ಮುರಿದೆದ್ದು ||
ಮನದೊಳಗೆ ಸಲೆ ಬೀದಿವರಿವುತ
ನೆನೆದ ಗಾನದ ಬಳಿಯಲೈದಿದ
ಜನಪತಿಯ ಪಟ್ಟಣಕೆ ಸರಿಯುತ್ತಿರ್ದರಬಲೆಯರು || ೫೩ ||

ಆರು ಮೋಹಿಸರಕಟ ಶಿವ ಶಿವ
ನಾರಿಯರ ಮುನಿ ನಡೆದುಬಂದನು
ದೂರವೆನಿತಂದರಿಯು ಮುನಿಸಭೆಗಂಡು ಬೆದರುತಿರೆ ॥
ವಾರಕಾಮಿನಿಯರನು ಮನ್ನಿಸಿ
ತೋರಣಂಗಳ ರಚಿಸೆ ನಿಸ್ಸಳ
ಭೇರಿ ಮೊಳಗಲು ಯಿದಿರುಗೊಳೆ ಹೊರಪಂಟರಪನಿಪರು ॥ ೫೪ ॥

ಭೂಮಿಪತಿಯೊಡಗೊಂಡು ಬಂದನು
ಪ್ರೇಮದಿಂದರ್ಘ್ಯೋಪಚಾರಕೆ
ಕಾಮಿನೀರತ್ನವನು ಶಾಂತಾದೇವಿಯೆಂಬವಳ ॥
ರೋಮಚರಣನು ತನ್ನ ಮಗಳನು
ಸೋಮಮುಖಿಯನು ಮುನಿಗೆ ಮದುವೆಯ
ನಾ ಮಹೋತ್ಸವದಿಂದ ಮಾಡಿದ ಪಡೆದ ಮುನಿಯೊಲವ ॥ ೫೫ ॥

ಸಲೆ ಕೃಶಾಂಗವಿದೇನು ಜನವೆನೆ
ಎಲೆ ಮುನೀಶ್ವರ ಬರಗಳಾದುವು
ಮಳೆಗಳಿಲ್ಲದೆ ವರುಷ ಹನ್ನೆರಡಾಯ್ತುಯೆಂದೆನಲು ॥
ಹಲವು ಕಾಲದಲಕಟ ಶಿವ ಶಿವ
ಬಳಲಿದಿರಲಾಯೆನುತ ಮುನಿವರ
ಜಲವ ಮಂತ್ರಿಸಿ ಮಳೆಯ ಸುರಿಸಿದ ಜಗವ ಸಲಹಿದನು ॥ ೫೬ ॥

ಯತಿಪ ನಾಪುತ್ರಸ್ಯ ಲೋಕಕೆ
ಗತಿಯೆನಿಪ್ಪುದು ಲೋಕಸನ್ಮತ
ಸುತ ಮುಖಾಬ್ಜವ ಕಾಂಬೆ ನಿಮ್ಮಯ ಕರುಣದಲಿ ನಾನು ॥
ಕ್ರತುವ ಮಾಡಿಸಬೇಕು ಬಂದೆನ
ಗಿತರ ದೈವವನರಿಯೆ ನೀವೇ
ಗತಿಯೆನುತ ಮೈಯಿಕ್ಕೆ ಮಕುಟವನೆಗಹಿ ಬಹೆನೆಂದ ॥ ೫೭ ॥

ಬಳಿಕ ಕೋಡಿನ ಮುನಿಯನೊಡಗೊಂ
ಡಲಘುಮತಿ ನಿಜಪುರವ ಪೊಕ್ಕನು
ಕಲಶಕನ್ನಡಿ ಮುತ್ತಿನಾರತಿಯಿಂದಿದಿರ್ಗೊಳಲು ॥
ನೆಲವ ಶೋಧಿಸಿ ಯಜ್ಞವೇದಿಯ
ನೊಲಿದಲಂಕರಿಸಿದರು ಮುನಿಪರ
ಚಳಯದಲಿ ತರಿಸಿದನು ಸಂಭಾರವನು ತವಕದಲಿ ॥ ೫೮ ॥

ದಶಚಮದಿ ಹದಿನಾಲ್ಕು ಗೃಹಗಳು
ಮುಸುಲ ಶಮ್ಯವುಲೂಖಲಂಗಳು
ದೃಷಜ ಕೃಷ್ಣಾಜಿನ ಜುಹುಸ್ರುವೆ ದರ್ವಿಯುತ ಕುಂಭ ॥
ಯೆಸೆಯಲುದ್ಗಾತೃವನು ಹೋತ್ರವ
ನೊಸೆದು ಋತ್ವಿಜ ಬ್ರಹ್ಮರಧ್ವರಿ
ವಿಸರದೊಳಗಗ್ನೀಧ್ರರಾ ದ್ವಾದಶಕರೊಪ್ಪಿದರು ॥ ೫೯ ॥

ಮುಡಿಯನಿಳುಹಿದ ಯಜ್ಞದೀಕ್ಷೆಯ
ಪೊಡವಿಪತಿ ಯಜನವನುಹೊಂದಿದ
ಮಡದಿಯರು ಸಮ್ಯಕ್ಕೆ ಸಾರ್ದರು ಪುಷ್ಪಹಸ್ತದಲಿ ॥
ಒಡನೆ ವೆಂಟಣಿಸಿದರು ವಿಪ್ರರು
ತೊಡಗಿದರು ಮಾಂಗಲ್ಯ ಸೂಕ್ತವ
ಅಡಕಿದರು ಪಡಿಚರರು ಕುಶಸಮಿಧೆಗಳ ಹೊರೆಗಳನು ॥ ೬೦ ॥

ಒಡನೆ ವಾಸಿಷ್ಠಾದಿ ಮುನಿಗಳ
ಗಡಣದಲಿ ಕೊಂಬಿನ ಮುನೀಶ್ವರ
ತೊಡಗಿಸಿದನಾ ಪುತ್ರಕಾಮಾಧ್ವರವನರಸಂಗೆ ॥
ಮಡಿಮಡಿದು ಬೆರಳುಗಳನಾಹುತಿ
ಗೊಡಲು ಸುರತತಿಯುಂಡು ದಣಿಯಿತು
ಕೊಡುವೆವಿನ್ನವನಿಪನಭೀಷ್ಟವ ನೆಂದುದಮರಗಣ ॥ ೬೧ ॥

ಮುಖದಲಾಹುತಿಗಳನು ಸುರ ಪಿತೃ
ಮುಖದಲಿತ್ತರು ಮಾಂತ್ರಿಕರು ಶತ
ಮುಖಮುಖಾಖಿಳರುಂಡು ದಣಿದರು ಗೋನಿವಾಸಿಗಳು ॥
ಸುಖಿಯುಹನು ನೃಪನೆನುತ ಮೆಲ್ಲನೆ
ಸಖಿಯು ಕೈಲಾಗಿನಲಿ ಎದ್ದನು
ಶಿಖಿಮರೀಚಿಗಳೆಸೆಯೆ ಕೊಂಡದಲಮಿತ ತೇಜದಲಿ ॥ ೬೨ ॥

ಪಂಡಿತರು ಪರಿತುಷ್ಟರಾದರು
ಕೊಂಡು ದಾನವ ದ್ವಿಜರು ದಣಿದರು
ಕಂಡುದಣಿದುದು ಜನಮಹೋತ್ಸವಗಳನು ಕ್ರತುವಿನಲಿ ॥
ಕೊಂಡದಲಿ ನಿಜರೂಪವನು ಕೈ
ಕೊಂಡು ಹುತವಹ ಚರುವ ನೀಡಲು
ಕೊಂಡು ಮುನಿ ನೃಪಗಿತ್ತ ಹರಿಯಣಾವನು ಸರಾಗದಲಿ ॥ ೬೩ ॥

ಕ್ಷಿತಿಪ ಕೌಸಲೆ ಕೈಕೆಯರಿಗಾ
ಹುತವಿಶೇಷವ ನೀಯಲವರಾ
ಸತಿ ಸುಮಿತ್ರೆಗೆ ತಮ್ಮಿಳೊರ್ಧವ ನಿತ್ತರಬಳಿಯರು ॥
ಸುತರ ಸೂಚಿಪುತಿರ್ದುದವರು
ನ್ನತಿಕೆ ಗರ್ಭವು ಬೆಳೆವುತಿರ್ದುದು
ವ್ರತ ಮುಗಿಯೆ ವ್ರತಿಗಳನು ಕಳುಹಿದ ದಾನದಲಿ ತಣಿಸಿ ॥ ೬೪ ॥

ಹರಿಹರ ಬ್ರಹ್ಮಾದಿ ಕೋಟಿಗ
ಳಿರಲು ಗಡಣದ ರೋಮಕೂಪದಿ
ಪರಮ ಪುರುಷನನಾಪರೇಶನನುದರ ಕುಹರದಲಿ ॥
ಧರಿಸಿ ಮೆರೆವರವಿಂದು ವದನೆಯ
ಸಿರಿಯ ಬಣ್ಣಿಪೆನೇನು ಸಚರಾ
ಚರರ ಮಾತೆಯೆನುತ್ತ ಸನಕಾದಿಗಳು ನಮಿಸಿದರು ॥ ೬೫ ॥

ಗುರು ರವಿಗಳುತ್ತುಂಗ ಭಾಗೆಯ
ಲಿರಲು ಕಾವ್ಯನು ಕೇಂದ್ರ ತುಂಗದಿ
ಧರಣಿಸುತ ಮೃಗವೇರಿ ನಿಂದಿರೆ ಶಶಿಜ ವಿನಯದಲಿ ॥
ತರಣಿಸುತ ಜೂತದಲಿ ಮೆರೆದಿರೆ
ಪರರ ಮನೆಗಳನುಳಿದು ಚಂದ್ರನು
ಯಿರಲು ಪುತ್ರೋದಯಗಳಾದುವು ಭೂಪ ದಶರಥಗೆ ॥ ೬೬ ॥

ಆದನೊಬ್ಬನು ಮಗನು ಕೌಸಲೆ
ಗಾದನೊಬ್ಬನು ಕೈಕೆಗಿಬ್ಬರು
ಮೇದಿನೀಶನ ಕಿರಿಯ ರಾಣಿ ಸುಮಿತ್ರೆಯೆಂಬಳಿಗೆ ॥
ಆದರಂದಿನ ಜಾತಕರ್ಮಾದಿ
ಮೇದಿನೀಸುರವರ್ಗ ದಣಿದುದು
ಗೋಧನಾಂಬರ ಧರಣಿ ರತುನ ಹಿರಣ್ಯ ದಾನದಲಿ ॥ ೬೭ ॥

ಪುರವು ಗುಡಿತೋರಣದೊಳೆಸೆದುದು
ಸುರರು ಹೂಮಳೆಗಳನು ಸುರಿದರು
ಭರದಿ ದುಂದುಭಿ ಮೊಳಗೆ ದೇವಿಯರಾಡೆ ಒಲವಿನಲಿ ॥
ಕರೆಸಿ ದೈವಜ್ಞರಿಗೆ ಕರ್ಪೂರ
ಭರಿತ ವೀಳೆಯವಿತ್ತು ಮನ್ನಿಸಿ
ಧರಣಿಪತಿ ಬೆಸಗೊಂಡನರ್ಭಕರುದಯ ಲಗ್ನವನು ॥ ೬೮ ॥

ಅರಸುಮಕ್ಕಳು ಭಾಗ್ಯವಂತರು
ಸುರರ ಸಲಹುವರುಳಿದ ಮಾತೇಂ
ಧರಣಿಯಲಿ ಹನ್ನೊಂದು ಸಾವಿರ ವರುಷ ರಾಜ್ಯವನು ॥
ಭರದಿ ಮಾಡುತ ಖಳರ ನೆರೆ ಸಂ
ಹರಿಸಿ ಕೀರ್ತಿಯ ಹರಹಿ ಲೋಕವ
ಹೊರೆಯೆ ದಕ್ಷರು ಭುವನಭೂಷಣರೆಂದರಾ ದ್ವಿಜರು ॥ ೬೯ ॥

ನಾಮಕರಣವ ಮಾಡಿದನು ನೃಪ
ರಾಮನೆಂದಾ ಕೌಸಲೆಯ ಮಗ
ವಾಮಲೋಚನೆ ಕೈಕೆಯಾತ್ಮಜ ಭರತನೆಂದೆನುತ ॥
ಸೋಮವದನೆ ಸುಮಿತ್ರೆಯಣುಗರ
ನೇಮದಲಿ ಲಕ್ಷ್ಮಣನು ಶತ್ರುಹ
ನಾಮವಿಟ್ಟಾದರದಿ ಸಲಹಿದ ನಿಜಕುಮಾರಕರ ॥ ೭೦ ॥

ರಾಮ ಬಾ ರಮಣೀಯ ಬಾ ಗುಣ
ಧಾಮ ಬಾ ಕುಲಸೋಮ ಬಾ ನುತ
ಕಾಮ ಬಾ ಕಮನೀಯ ಬಾಯೆನ್ನರಸ ಬಾಯೆನುತಾ ॥
ಭೂಮಿಪತಿ ಮುದ್ದಾಡಿ ಮಕ್ಕಳ
ಪ್ರೇಮದಿಂದಲಿ ಸಲಹುತಿರ್ದನು
ಆ ಮಹಾತ್ಮಗೆ ಸಾಟಿಯುಂಟೇ ಸನಕಕಪಿಲರಿಗೆ ॥ ೭೧ ॥

ನೋಡಿ ದಣಿಯನು ಮಕ್ಕಳುಗಳೊಡ
ನಾಡಿ ದಣಿಯನು ಗುಣಗಳನು ಕೊಂ
ಡಾಡಿ ದಣಿಯನು ತೆಕ್ಕೆದಣಿವಂತಪ್ಪಿ ಮನದಣಿಯ ॥
ನಾಡುಬೀಡಿನ ಪಾರುಪತ್ಯವ
ಮಾಡೆ ಮರೆದನು ಸುತರ ಬೆಸನದಿ
ಮಾಡನಾರೋಗಣೆಯ ಮುಳುಗಿದ ಸುಖದ ಸುಗ್ಗಿಯಲಿ ॥ ೭೨ ॥

ಅಪ್ಪ ಬಾ ಫಣಿತಲ್ಪ ಬಾ ಕಂ
ದರ್ಪ ಬಾ ಕಮನೀಯ ಬಾ ಶ್ರುತಿ
ತಲ್ಪ ಬಾ ಮರಿಯಾನೆ ಬಾ ಮಾಣಿಕ್ಯ ಬಾಯೆನುತಾ ॥
ಅಪ್ಪಿ ತೊಡಿಗೆಯ ತೊಟ್ಟು ಸುತರೊಳ
ಗೊಪ್ಪುವನು ನೋಡುತ್ತ ಕಾಯದ
ಮುಪ್ಪು ಮರೆದಮರತೆಯ ಪಡೆದವನಂತೆ ಹಿಗ್ಗಿದನು ॥ ೭೩ ॥

ಒಂದು ದಿನ ಹೊರ ಬೀದಿಯಲಿ ರಘು
ನಂದನನು ಹುಡಿಯಾಟದಲಿ ಮನ
ಸಂದು ಮಕ್ಕಳ ಗಡಣದೊಳಗಿರೆ ದಿವಸ ಮಧ್ಯದಲಿ ॥
ಬಂದು ಹೊಡೆದುದು ಭೂತ ನೃಪಸುತ
ಕುಂದಿ ಮೂರ್ಛಾಪನ್ನನಾದನು
ಮಂದಿ ಗೋಳಿಡೆ ಕರೆದು ಗುರುವನು ಕೇಳಿದನು ಭೂಪ ॥ ೭೪ ॥

ಏನಿದದ್ಭುತ ಗುರುವೆ ರಾಮಗೆ
ಹಾನಿಯಾರಿಂದಾಯ್ತು ಬೆಸಸೆನೆ
ಮಾನನಿಧಿ ಮಂತ್ರೋದಕಂಗಳ ತಳಿಯೆ ಕಣ್ದೆರೆದು ॥
ನಾನು ಪಿಡಿದವ ಬ್ರಹ್ಮರಾಕ್ಷಸ
ದಾನಗೊಡದಿರೆ ಬಿಡೆನು ತದ್ವಿ
ಪ್ರಾನುಶಾಪದಿ ಬಂಧುದೀವಿಧಿ ಹಿಂದೆ ತನಗೆಂದ ॥ ೭೫ ॥

ಏತರಿಂದುಪಶಾಂತಿ ನಿನಗೆನೆ
ಭೂತಪತಿಗೆ ಶನಿಪ್ರದೋಷದಿ
ವೋತು ಸಾವಿರ ಬಿಲ್ವಪತ್ರಾರಾಧನದ ಫಲವ ॥
ಈ ತತುಕ್ಷಣ ಕೊಟ್ಟಡಹುದೆನೆ
ಮಾತು ಹಿಂಚಿತು ಮುನ್ನಲಿತ್ತಲು
ಭ್ರಾಂತಿ ರಾಮಗೆ ತಿಳಿಯೆ ಸದ್ಗತಿಗೈದಿದನು ವಿಪ್ರ ॥ ೭೬ ॥

ಆಡ ಕಲಿತರು ಗರಡಿಯಲಿ ಶ್ರಮ
ಮಾಡ ಕಲಿತರು ಗಣಿತ ಲೆಕ್ಕವ
ನೋಡ ಕಲಿತರು ಬಾಣ ಗದೆ ಚರ್ಮಾಸಿ ವಿದ್ಯೆಗಳ ॥
ಕೂಡುತರ್ಭಕರೊಡನೆ ಬೇಟೆಯ
ನಾಡಕಲಿತರು ಸುರರಿಗಭಯವ
ನೀಡ ಕಲಿತರು ಬೆಳೆವುತಿರ್ದರು ರಾಮಲಕ್ಷ್ಮಣರು ॥ ೭೭ ॥

ಧರಣಿಪತಿ ಪುರುಷಾರ್ಥ ನಾಲ್ಕನು
ಹೊರೆವವೋಲರ್ಭಕರ ಸಲಹು
ತ್ತಿರಲು ಸಿರಿಯರಸಂಗೆ ಸಂದುದು ವರುಷವಾರೇಳು ॥
ಹರಿಯ ಬಿಜಯಂಗೈಸಿ ತಂದಸು
ರರನು ಭಂಗಿಸಿ ಯಜ್ಞಕರ್ಮವ
ಧರಿಸಿ ಸುಖಿಯಹೆನೆನುತ ವಿಶ್ವಾಮಿತ್ರ ಮುನಿ ಬಂದ ॥ ೭೮ ॥

ಬರಲು ನೃಪನಿದಿರೆದ್ದ ನತ್ಯಾ
ದರದಿ ಪೂಜಿಸಿ ಕೃತ್ಯವೇನೆಸೆ
ಧರಣಿಪತಿ ನಿನಗೆನ್ನದಿದ್ದುದದೇನು ದಾನವರು ॥
ಪರಿಭವಿಸಿದರು ಮುಖವನು
ದ್ಧರಿಸಿ ರಕ್ಷಿಸಿಕೊಡಲು ನಿನ್ನಯ
ತರುಣರಿಬ್ಬರ ಬೇಡಬಂದೆನು ಕಳುಹಬೇಕೆಂದ ॥ ೭೯ ॥

ಐಸಲೇ ನಾ ಬಂದು ಸತ್ರವ
ಮೀಸಲಳಿಯದ ವೋಲು ನಡೆಸುವೆ
ನಾಸುರಾರಿಗಳಾರು ಬಾಲಕರಾರು ನಡೆಯೆನಲು ॥
ಮೀಸೆಯಲಿ ನಗೆ ಮಿನುಗೆ ಮಕ್ಕಳು
ಸಾಸಿಗರು ನೀನರಿಯೆ ಕಳುಹಿಸು
ಬೇಸರವು ಭಯ ಬೇಡ ಯೋಗಕ್ಷೇಮಕಾವೆಂದ ॥ ೮೦ ॥

ಕಳುಹದಿರೆ ಮುನಿ ಮುನಿವ ಕಳುಹಲು
ಖಳರ ಸೆಣಸಿವರುಳಿಯರೀ ತೆರ
ದುಳಿವ ಕಾಣೆನು ಮುನಿಪ ಕೆಡಿಸಲು ಕೆಡುವೆ ನಾನೆನುತ– ॥
ಎಲೆ ಮಗನೆ ಗುರುಮತವನೈದುವು
ದುಳಿದ ಮಾತೇನವರು ಬೆಸಸಿದ
ತಲೆಯಲಾಂತಿಹುದೆಂದು ಕಳುಹುವೆನೆಂದುತನಕೆಂದ ॥ ೮೧ ॥

ಅರಸ ಚಿಂತಿಸಬೇಡ ರಾಮನು
ಹರಿ ಕಣಾ ಭೂಭಾರಕರ ಸಂ
ಹರಿ ಕಣಾ ಬಹುಮಾತೆ ನಿನ್ನಂತಾರು ಸುಕೃತಿಗಳು ॥
ಮರುಳುತನಗಳ ಮಾಣು ಸುಖದಿಂ
ದಿರು ಕೃತಾರ್ಥನು ನೀನೆನುತ್ತಾ
ದರದಿ ಹರಸಿದ ರಾಮಲಕ್ಷ್ಮಣ ಸಹಿತ ಬೀಳ್ಕೊಂಡ ॥ ೮೨ ॥

ಗುರುವೆ ಬಳಲಿದೆ ಕುಳ್ಳಿರೆಂಬರು
ಮರದ ತಳದಲಿ ತಳಿರನಿಡುವರು
ಚರಣಯುಗಳವನೊತ್ತುವರು ಫಲ ಕಂದಮೂಲವನು ॥
ವರಿಸಿಯೆಂಬರು ಕಾಲುದೊಳೆವರು
ಪಿರಿದು ಪಲ್ಲವದಿಂದ ಬೀಸುವ
ಹರಿಯ ನಾಟಕ ಕಂಡು ಮುನಿಪರ ಹಿಗ್ಗಿ ನಗುತಿಹನು ॥ ೮೩ ॥

ಮುನಿಗಳಾಶ್ರಮಗಳನು ಸೇರುತ
ವನದಿ ಗಿರಿಗುಹೆಗಳನು ತೋರುತ
ಮುನಿಪ ಹೋಗುತ್ತಿರಲು ಘೋರಾರಣ್ಯ ಮಧ್ಯದಲಿ ॥
ದನುಜೆ ತಾಟಕಿ ಬಂದಳೆತ್ತಣ
ಮನುಜ ಗಂಧವಿದೇನು ಬಾಯ್ದೆರ
ಒನಿತು ತುತ್ತೆನುತಡ್ಡಗಟ್ಟಿದಳವಳು ಕೌಶಿಕನ ॥ ೮೪ ॥

ತೊಡು ಮಗನೆ ಬಿಡು ಸರಳ ರಕ್ಕಸಿ
ಕೆಡಹು ಕೆಡಹೆನೆ ಹೆಣ್ಣು ಕಾಳಗ
ಸುಡಲಿ ಹೆಂಗುಸ ಕೊಲ್ಲೆ ತೋರೆನೆಗುರುವ ಭಟರೆನಲು ॥
ಕೆಡಿಸದಿರು ಕಾರ್ಯವನು ಕ್ಷಣದಲಿ
ಹಿಡಿದು ನುಂಗುವಳೀಗ ನಮ್ಮನು
ಕೆಡಹು ಕೆಡಹಿದ ಬಳಿಕ ಮಾತುಂಟೆಂದ ನಾಮುನಿಪ ॥ ೮೫ ॥

ಆದಡೆಮಗಿನ್ನಿಲ್ಲ ಹೊಲ್ಲಹ
ಆದುದಾಗಲಿ ಎನುತ ಕೆನ್ನೆಗೆ
ಸೇದಿಬಿಟ್ಟನು ಸರಳ ದನುಜೆಯ ಬೆನ್ನತಟ್ಟಾಗಿಯೆ ॥
ತೀದುದಾಕೆಯ ದೆಸೆ ಮುನೀಂದ್ರರ
ಬಾಧೆಬಿಟ್ಟುದು ಬೀಳೆ ರಕ್ಕಸಿ
ಮೇದಿನಿಗೆ ಫಣಿ ತಲೆಯು ಕೊಡಹಿದೊಡವನಿ ಕಂಪಿಸಿತು ॥ ೮೬ ॥

ಬಿಸಿಯು ನೆತ್ತರ ಬೊಟ್ಟನಿಟ್ಟನು
ಬಿಸಜಲೋಚನ ತೆರಳು ರಕ್ಕಸಿ
ದೆಸೆಗೆ ಯೋಜನ ಹತ್ತರಳತೆಯ ಹಾಳುಮಾಡಿದಳು ॥
ಉಸುರಲೇಕಿದನಿಂದು ಋಷಿಗಳ
ವಿಸರವೆಂದುದು ಹೆಂಗುಸೆಂಬರೆ
ಮಸಿಯು ಗಿರಿ ಕೈಕಾಲು ತಳೆದುದು ನೋಡು ನೋಡೆಂದು ॥ ೮೭ ॥

ಬಂದ ಸಿದ್ಧಾಶ್ರಮಕೆ ಮುನಿಪತಿ
ಗೆಂದರಿನ್ನಾವಿರಲು ಯಜ್ಞವ
ತಿಂದು ಸೂರೆಯ ಕೊಳ್ಳರಸುರರು ನಡೆಸಿ ನೀವೆನಲು ॥
ಸಂದ ಮುನಿಜನದೊಡನೆ ಕೌಶಿಕ
ನಂದು ತೊಡಗಿದ ಯಜ್ಞಕರ್ಮವ
ಮುಂದೆ ಬಾಗಿಲ ಕಾಯ್ದು ನಿಂದರು ರಾಮಲಕ್ಷ್ಮಣರು ॥ ೮೮ ॥

ಚರು ಸಮಿಧೆ ಕುಶಗಳನು ಬೇಳು
ತ್ತಿರಲು ಪಲ್ಲವದಿಂದ ಶಿಖಿಯನು
ಚರಿಸುತಿರ್ದನು ಭೀತಿಯಿಲ್ಲದೆ ಕೊಂಡ ಮಧ್ಯದಲಿ ॥
ಮರುತನಾ ಪರಿಮಳವ ದೆಸೆದೆಸೆ
ಗಿರದೆ ಚೆಲ್ಲಲು ಬಾಯ ಹಬ್ಬವು
ಬರಲಿ ಬರಲೆನುತಸುರರಾಳಿಯು ಗುಡುಗಿ ಮುತ್ತಿದುವು ॥ ೮೯ ॥

ಘೋರನಂಬರದಲ್ಲಿ ಬಂದುದು
ವೀರ ಖಳರರುವತ್ತು ಸಾವಿರ
ಮಾರಿ ಬೆಸನಾದಂತೆ ನಾಲುಕು ದೆಸೆಯನಾವರಿಸಿ ॥
ಘೋರ ದನುಜರ ಕಂಡು ಮುನಿಗಳು
ಸಾರಿ ಥಗಥಗನಂಜಿ ನಡುಗಲು
ವೀರ ರಾಘವನಂಜಬೇಡೆನುತಭಯವನು ಕೊಟ್ಟ ॥ ೯೦ ॥

ಬೆದರದಿರಿ ಬೇಳುವುದ ಬಿಡದಿರಿ
ಕುದಿದು ಮಂತ್ರವ ಮರೆಯದಿಪ್ಪುದು
ಸದೆವೆನಸುರರನೀಗ ಲಕ್ಷ್ಮಣ ಕೆಡಹು ಕೆಡಹೆಂದ ॥
ಇದಿರೊಳಾನಿಹೆ ಹಿಂದೆ ನೀನಿರು
ತ್ರಿದಶರಂಜದೆ ಹುತವನುಣ್ಣಲಿ
ಕದನಕಾವಿಹೆವೇಕೆ ಕಳವಳ ಮಾಣಿ ಹೋಯೆಂದಾ ॥ ೯೧ ॥

ತಳವನೀವುತ ಧನುವ ಜೇವಡೆ
ದಳವಿಯಲಿ ಕವಿಕವಿದು ದನುಜರ
ತಲೆಯ ಹರಿಯಿಸುತಿರ್ದನುರುಳುತ್ತಿದ್ದ ದಸುರೌಘ ॥
ಕಲಿ ಸುಬಾಹು ಶರಾಸನವ ಪಿಡಿ
ದಲಘುಮಹಿಮನನೆಸುತ ತರುಬಲು
ಘಳಿಗೆ ಕಾದುತ ತರಿದುಬಿಸುಟನು ಖಳನ ಹಿಂದಲೆಯ ॥ ೯೨ ॥

ಇವನ ಕರುಳನು ತಿನ್ನು ತಿನ್ನೆನು
ತವಿರಳಾಸ್ತ್ರದಿ ಹರಿಯ ಮುಸುಕುತ
ಕವಿದುದಸುರರು ಹೋಯಿತ್ತೈ ಮುಖ ಹೋಯಿತ್ತೆಯೆನುತ ॥
ಶಿವ ಶಿವಾ ರಘುನಾಥ ಕವಿ ಕವಿ
ದವರ ಸವರುತ್ತಿರ್ದನಸುರರು
ಸವಿದ ತುತ್ತಿದೆಗಿಳಿಯದೆಂದಾ ಸೇನೆ ಬಯಲಾಯ್ತು ॥ ೯೩ ॥

ಅಳಲು ಮಿಗೆ ಮಾರೀಚ ತಾಪಸ
ರೊಳಗೆ ಹಾರುವನಾಗಿ ಬೆರೆಯಲು
ಎಲಲೆ ರಾಘವ ಕೆಡಹು ಕಪಟಿಯನೆನಲು ಮಿಟ್ಟೆಯಲಿ ॥
ಖಳನನೆಚ್ಚೊಡೆ ನೂರು ಯೋಜನ
ದಳವಿಯಲಿ ಮಿಗೆ ಹಾರಿಬಿದ್ದನು
ಉಳಿದ ಪಡೆಯನು ಸವರಿ ನಿರ್ವಿಘ್ನದಲಿ ನಡೆಸಿದನು ॥ ೯೪ ॥

ಏಳು ದಿನದಲಿ ಮುಗಿದುದಾ ಮಖ
ಶಾಲೆ ದಕ್ಷಿಣೆಗೊಟ್ಟು ವಿಪ್ರರ
ಬೀಳುಗೊಟ್ಟನು ಹರುಷ ಮಿಗೆ ಹರಸುತ್ತ ಬಾಲಕರ ॥
ಪರೌಳಿಗಳಿಗಖಿಲಾಸ್ತ್ರ ವಿದ್ಯೆಯ
ಸಾಲಿನರುಹಿದನೊಂದು ದಿವಸ ವಿ
ಶಾಲಮತಿಗಳ ಕೊಂಡಹಲ್ಯಾಶ್ರಮಕೆ ನಡೆತಂದ ॥ ೯೫ ॥

ಶಿಲೆಯ ಮೇಲಾ ರಾಮಚರಣದ
ತಳವನೂರಲು ನಡುಗಿ ಬೆವತುದು
ಯೆಲೆಲೆ ಕಠಿಣವನುಳಿದು ನಾರೀರೂಪ ಕೈಕೊಳಲು ॥
ಎಲೆ ಮುನೀಶ್ವರ ಪೇಳು ಪೇಳೆನೆ
ತಿಳುಹಿ ಪೂರ್ವಾಪರವ ರಾಮಗೆ
ಬಳಿಕಹಲ್ಯಾದೇವಿಯರ್ತಿಯ ಸಲಿಸಿ ಬೀಳ್ಕೊಂಡ ॥ ೯೬ ॥

ಸಂದುದೀ ಪರಿ ಹಲವು ದಿನ ರಘು
ನಂದನರಿಗಾಮುನಿಯ ಮಠದಲಿ
ಇಂದುಕುಲಜನ ಮಗಳ ಮದುವೆಯ ಕೇಳಿ ಮುನಿನಾಥ ॥
ಯೆಂದನಾಶ್ಚರ್ಯವನು ತೋರುವೆ
ಬಂದಿರಾದರೆಯೆನಲು ಬಿಜಮಾ
ಡೆಂದು ಮುನಿಪನ ಕೂಡೆ ಹೊರವಂಟರು ಕುಮಾರಕರು ॥ ೯೭ ॥

ಇಂತು ರಾಮಾಯಣದ ಕಥೆಯೊಳು
ಕಂತುಪಿತನಜಭೂಮಿಪಾಲನ
ಸಂತತಿಯಲವತರಿಸಿ ಮಾಡಿದ ಬಾಲಕಾಂಡವನು ॥
ಸಂತತವೆ ಕೇಳ್ವವರ ಸಂತತಿ
ಗಂತಕನ ಭಯವಿಲ್ಲದಂತಿರೆ
ಮಂತ್ರಮೂರುತಿ ರಾಮ ಸಲಹುವ ನಿಹಪರಂಗಳನು ॥ ೯೮ ॥

ಕಿವಿಗೆ ಸೊಗಸಾಲಸ್ಯಭಂಜನ ।
ಸವಿದರಿಹಪರ ಸೌಖ್ಯಸಾಧನ
ನವರಸಂಗಳ ಬೀಡು ಮುಕ್ತಿಯ ಮೂಲಭೂತವಿದು ॥
ಭವನಿವಾರಣ ಭಾವಮೋಹನ
ಭುವನಭೂಷಣ ರಾಮ ಕಥೆಯಿಂದ
ಕವಿಕುಲೋತ್ತಮ ಹೊಗಳಿದನು ವಾಲ್ಮೀಕಿ ಮುನಿರಾಯ ॥ ೯೯ ॥

---

## ೨ನೇ ಸಂಧಿ

ಪಲ್ಲ ॥ ಸೀತೆಯನು ಪೃಥು ಶೀಲಗುಣವಿ
ಖ್ಯಾತೆಯನು ಸಚರಾಚರಂಗಳ
ಮಾತೆಯನು ಸಲೆ ವರಿಸಿ ಮಂಗಳ ಮಹಿಮನೊಪ್ಪಿದನು ॥

ಪದ್ಯ ॥ ಮಾರನೆಂಬ ನಿರಾಪರಾಧಿಯ
ಬೇರುಗೊಲೆಯನೆಸೆಗೈದ ಲಜ್ಜೆಗೆ
ನಾರಿ ಗಂಗೆಯ ಶಿರದಿ ತೊಡೆಯಲಿ ಗೌರಿಯನು ತಾಳ್ದ ॥
ಕಾರಣದಿ ಸಹ್ಯಾದ್ರಿ ಬೇಡಲು
ಸೇರಿ ತಾನಲ್ಲಿರ್ದು ಸಲಹುವ
ಭೈರವೇಶ್ವರನಾಗಿ ಕೃಪೆಯಿಂದೀ ಜಗತ್ರಯವ ॥ ೧ ॥

ಚೆನ್ನ ಭೂಮಿಯನುಳಿಸೆ ಕಂಡುದು
ಹೊನ್ನ ಮಂದಸವಾ ಹಲಾಗ್ರದಿ
ಕನ್ನೆಯುದರೊಳಗಿರಲು ಭೂಷಿತೆಯಾಗಿ ಸಿರಿಯಂತೆ ॥
ಚೆನ್ನೆಸೆವ ಘನ ಶೀಲೆ ಗುಣಸಂ
ಪನ್ನೆಯಾಗಿರೆ ಜನಕ ಕಂಡು
ಪ್ರಸನ್ನಪುಳಕಿತನಾಗಿ ಸೀತೆಯ ತಂದನರಮನೆಗೆ ॥ ॥ ೨ ॥

ಕುರುಳ ಕೊಂಕಿನ ಹಣೆಯ ತಿಲಕದ
ತರಳ ನೋಟದ ವರ ಸುನಾಸದ
ಮೆರೆವ ರತುನಾವಳಿಯ ಬಿಂಬಾಧರ ಮುಂಗಾಖವಲಿ ||
ಸ್ಫುರಿತ ಮೂಗುತಿ ಕರ್ಣ ಕಂಠಾ
ಭರಣ ಕಂಕಣ ಕಡಗ ಮುದ್ರಿಕೆ
ಕರದರಾಂಬುಜ ವಜ್ರ ಚಿಹ್ನೆಯುಲೊಪ್ಪಿದಳು ದೇವಿ || ೩ ||

ಗುರುಪಯೋಧರ ಗೂಢನಾಭಿಯ
ಮೆರೆವ ನಳಿದೋಳುಗಳ ಬಾಸೆಯ
ಹರಿಯ ಮಧ್ಯದ ಪೃಥುನಿತಂಬದ ಕಳಭದೂರುಗಳ ||
ಶರಧಿಜಂಘೆಯ ಕಮಠಚರಣದ
ಸರಸಿಜಾಕ್ಷಿಯ ಕಂಡು ಸಿರಿಯೆಂ
ದರಿತರಾರ್ಯರು ಹರಿಯ ಹೊದ್ದುವಳೆಂದರವನಿಪಗೆ || ೪ ||

ಹರಿಯದೆಂತನಗಳಿಯನಹ ನಾ
ಹರಿಯನಾನೆಂತರಿವೆ ನೆನುತಿರೆ
ಕರೆಸುವುದು ಭೂನಾಥರೆಲ್ಲರ ನವರೊಳವತರಿಸಿ ||
ವರಿಸುವನು ಜಾನಕಿಯ ತಾನೆಂ
ದರುಹಿಕೊಡಲಾ ಮುನಿಗಳಾ ಕ್ಷಣ
ಬರೆಸಿ ರಾಯಸ ಚರರ ಕಳುಹಿದನೆಂಟು ದೆಸೆಗಳಿಗೆ || ೫ ||

ಭರದಲಟ್ಟಿದ ರಾಯಸಂಗಳ
ಧರಣಿಪಾಲರು ಕಂಡು ಬರುತಿರೆ
ಭರದಿ ವಾರ್ತೆಯ ಕೇಳಿ ಮದುವೆಯ ನೋಡುವಕ್ಕರದಿ ||
ಹರ ವಿರಿಂಚಿ ಮಹೇಂದ್ರ ಪಾವಕ
ವರುಣ ವಾಯು ಕುಬೇರ ಶಶಿರವಿ
ಗುರು ಸಿತಾಸಿತರಿಳಿದರೈಯಯ್ಯ ಅವನಿಮಂಡಲಕೆ || ೬ ||

ಕಳಸ ಕನ್ನಡಿ ಮುತ್ತಿನಾರತಿ
ತಳಿರ ತೋರಣ ಮಕರ ತೋರಣ
ಹೊಳೆವ ಮಣಿಮಾಣಿಕ್ಯ ತೋರಣ ಮಕುಟ ತೋರಣವು ||
ನಳಿನಮುಖಿಯರ ಗಾನ ಗಮಕದ
ವೊಳಗುತಿಹ ವಾದ್ಯಂಗಳ ಧ್ವನಿ
ಗಳಲಿದಿಗೊರ್ಳುತವನಿಪತಿಗಳನರಸ ಮನ್ನಿಸಿದ || ೭ ||

ಹತ್ತು ದಿಗುತಟ ತುಂಬೆ ರಾಯರ
ವೊತ್ತಗಟ್ಟಿದ ಸೇನೆ ಸಹಿತವೆ
ಯೆತ್ತಿಬಂದುದು ಜನಕ ಭೂಪನ ರಾಜಮಂದಿರಕೆ ॥
ಅತ್ತಲದ ಕೇಳಿದನು ರಾವಣ
ಹತ್ತುಮುಖಗಳ ಕಾಲದಂಡನು
ಮೃತ್ಯುಪಾಶವದೆಳೆಯೆ ನೋಡುವೆನೆನುತ ಹರಿತಂದ ॥ ೮ ॥

ಮಾ ವನಿತೆಯರ ಮದುವೆಯೊಪ್ಪುವ
ನಾವ ಕವಿ ಬಣ್ಣಿಸುವ ನೆರೆದುದು
ದೇವಸಂಕುಲ ರಾಜಸಂಕುಲ ಭೂಸುರ ವ್ರಾತ ॥
ಆವ ಕೆಲಸವದಾವ ಚಿತ್ರವ
ದಾವ ವಿಸ್ತರವಾವ ಸಡಗರ
ವೋವೊ ರಚಿಸಿದರೇನನೆಂಬೆ ವಿವಾಹ ಮಂಟಪವ ॥ ೯ ॥

ಭವನ ಕೋದಂಡವನು ಸಭೆಯೊಳ
ಗವನಿಪತಿ ಪೂಜಿಸಿದ ಕುಸುಮ
ಪ್ರವರದರುಣಾಕ್ಷತೆ ನವಾರತಿ ಧೂಪ ಬಲಿಗಳಲಿ ॥
ಶಿವನನಾವಾಹಿಸಿ ಮುಕುಂದನ
ನವನಿಜೆಗೆ ವಲ್ಲಭನ ಮಾಡೆನ
ಲವನೊಡನೆ ಧನು ನುಡಿವವೊಲ್ ಹೂಂಕಾರ ಹುಟ್ಟಿದುದು ॥ ೧೦ ॥

ಪೊಡವಿಸಂಭವೆ ಅಂಗವಟ್ಟದಿ
ತೊಡಿಗೆಯುಂದವ ಪಡೆದವಲ್ಲದೆ
ತೊಡಿಗೆಯಿಂದಲಿ ದೇವಿಯೊಪ್ಪಂಬಡುವಳೇಯೆಂದು ॥
ಮಡದಿ ಭೂಷಿತೆಯಾಗಿ ಕರದಲಿ
ಪಿಡಿದಳೈ ಲಾವಚವ ಪಕ್ಷ್ವವ
ಗಡಣದಬಲೆಯರೊಡನೆ ಬಂದಳು ರಾಜಸಭೆಗಾಗಿ ॥ ೧೧ ॥

ಹಿಡಿದ ಮುತ್ತಿನ ದಂಡೆಯೊಪ್ಪುವ
ಕಡಗ ಕಂಕಣ ನೂಪುರಂಗಳ
ಸಡಗರದ ಮಾಣಿಕ್ಯ ರತುನದ ಕೊರಳ ಹಾರಗಳ ॥
ಮುಡಿಗೆ ಮಲ್ಲಿಗೆಯರಳು ಸಂಪಗೆ
ಜಡೆಯುಸಿಳಿದಾಭರಣ ಚಯದಲಿ
ಬೆಡಗಿನಲಿ ಬಾಲಕಿಯರೊಪ್ಪಿತು ಜಾನಕಿಯ ಬಳಿಯ ॥ ೧೨ ॥

ತೊಲತೊಲಗು ನೆಲಮುಗಳ ರೂಪಿನ
ಕಲಿ ಮನೋಭವನ ಬಂದ ಬಂದನು
ಚೆಲುವಿಕೆಯು ಕರಡಗೆಯು ಮೊತ್ತಗಳಿಲಲೆ ಸಾರೆಂಬ ॥
ಬಲುಮೊಲೆಗಳೊಳಹುಗಳ ಕಾಮಿನಿ
ನಿಲುಕುನೋಟದ ಮುದ್ದುಮೊಗದಲಿ
ಹೊಳೆವ ರತುನಾವಳಿಯು ರಮಣಿಯರಂಗನೆಯು ಕೂಡೆ ॥ ೧೩ ॥

ರನ್ನದಂದಣದಿಂದ ಸಭೆಯನು
ಕನ್ನೆಯರ ಕುಲದೈವವೈದಲು
ತನ್ನ ನೋಡಿದಳೆನ್ನನೋಡಿದಳೆನುತ ಧರಣಿಪರು ॥
ಮನ್ನಿಸುತ ಮನದಲ್ಲಿ ನಿಜ ಸಂ
ಪನ್ನತೆಗಳನು ಪಸರಿಸುತ್ತಿರೆ
ಕನ್ನೆಗಳು ಕರಪುಟದ ಚನ್ನೆಯರೆಂದರವನಿಜೆಗೆ ॥ ೧೪ ॥

ಸ್ಫುರಿತ ತಾರಾವಳಿಯ ಮಧ್ಯದಿ
ಮೆರೆವ ರಾಕಾರಮಣನಂತಿರೆ
ಸರಸಿಜಾಸನ ಸುರಮುನೀಂದ್ರರ ಸಭೆಯೊಳರೆ ಕಂಡು ॥
ಧರಣಿಸುತೆ ನೋಡಕ್ಕ ನಿನ್ನಯ
ಸಿರಿಗೆ ಮುದಿಹಾರುವನು ಬಂದನು
ಪರಿಣಯದ ಮನವಾಯ್ತು ಲಾ ನರೆಗಡ್ಡದವಗೆನುತ ॥ ೧೫ ॥

ತಿರುಗಿ ನೋಡಿದರಮರಪತಿಯನು
ಸಿರಿಯ ಸಿತಗನ ಸುರರ ಮಧ್ಯದಿ
ಅರಳಿದಬ್ಜಾಕರದವೊಲು ಮೆರೆವಕ್ಷಿ ಅಕ್ಷಯನ ॥
ಸರಿಯೆ ನಿನಗಿವ ಜಾರ ತೆಗೆ ನಿಂ
ನಿರವ ನೋಡಲು ಸಾಸಿರಾಲಿಯ
ಧರಿಸಿದನೊ ಬಣ್ಣಿಸುವೊಡಳವೇ ನಿನ್ನ ಸೌಭಾಗ್ಯ ॥ ೧೬ ॥

ಇತ್ತ ನೋಡೌ ಸೀತೆ ಶಂಕರ
ನುತ್ತಮಾಂಗವ ನೇರಿದಬ್ಜನ
ಮತ್ತೆ ಬಿಡನಿವ ನೀಚ ಗಮನವ ಸಿರಿಯ ಸೋದರನ ॥
ಹೊತ್ತವನ ಬಡತನವು ಹೋಗದು
ನಿತ್ಯವೀತಗೆ ಪಾಂಡು ವಿರಹದ
ಬಿತ್ತು ಹಲಬರು ಹೆಂಡಿರಾಯಿತು ಏಳು ನಡೆಯೆನಲು ॥ ೧೭ ॥

ಕಾರಣಾಂತರ ಕೋಪತಾಪವು
ಸೇರಲವನತ್ಯುಗ್ರನೆಂಬರು
ಕಾರ್ಯಕಾರಣವಿಲ್ಲದಿವನುರಿವುತ್ತಲಿಹನೆನಲು ॥
ಕ್ರೂರತತಿಗುಣ ನಯದಿ ಬೋಧಿಸೆ
ನೈರಣೆಯು ಕೈಕೊಂಬ ನೀತನು
ಸಾರಿದರನುಳುಹುವನು ಗುಣನಯದಿಂದ ಬೋಧಿಸಲು ॥ ೧೮ ॥

ಮರಳಿ ಕಂಡರು ದಿವಸಮಣಿಯನು
ತಿರುಗಿ ತಟತಟ ತಾಗುತಿಪ್ಪನು
ಕಿರಣ ಖರಕರ ತೀವ್ರ ತಾಳುವೊಡರಿದು ಜಾನಕಿಯೆ ॥
ನರಕದೊಡೆಯನ ಕಂಡರೀತನ
ಸಿರಿಯದೇನದು ಹಲವು ರೋಗದ
ನೆರವಿ ಮನೆಯೊಳಗಿರಲು ಬದುಕುವರಾರು ಸಾಕೆನಲು ॥ ೧೯ ॥

ಗುರುವ ಬಿಡುವನು ಲಘುವ ಹಿಡಿವನು
ಖರೆಯ ವೊಳಹೊರಗಿಲ್ಲ ವೀತಗೆ
ಹರುಷಸುಖವವಗೆಂತು ವಾತವ ಹೊದ್ದಿದವರಿಂಗೆ ॥
ಸರಸಿಯನು ವಿರಸಿಯನು ಮಾಡುವ
ಸಿರಿಯನುಳ್ಳವ ಮುಟ್ಟ ಹಾರುವ
ಮರುತನೈ ತೆಗೆ ಭ್ರಮಣ ಹಿಡಿದಿಹುದಿವಗಸಾರತವು ॥ ೨೦ ॥

ಪರರ ಮನೆಯುಲಿ ಯಕ್ಷ ಕೃಪಣನು
ಭರದ ನವನಿಧಿಯಿದ್ದು ಫಲವೇಂ
ವರುಣ ಹಾವಸೆವ್ಯೆಯ್ಯ ಹೆಡಸುಗು ಮತ್ತೆ ಜಲವಾಸಿ ॥
ನಿರುತಿ ರಾಕ್ಷಸ ಮತ್ತೆ ಹೆಳವನು
ನರನುವಾಹನವಂಗ ವಿಕಲನು
ತರುಣಿ ಸೀತೆಗೆ ಸದೃಶರಿವರಲ್ಲೆಂದರಬಲೆಯರು ॥ ೨೧ ॥

ಹರನ ನೋಡುತ ತವ್ಮೊಳೆಂದರು
ನರ ಕಪಾಲವ ಹಿಡಿದು ತಿರಿವನು
ವರ ವಿಭೂಷಣವಸ್ಥಿ ಭಸಿತದರಾಶಿ ಭಂಡಾರ ॥
ಕರಿಯ ಚರ್ಮವು ಹೊದೆವ ಹಚ್ಚಡ
ಮರುಳು ತಂಡಗಳಾಪ್ತ ಸೈನ್ಯವು
ನಿರುತ ಚಾವಡಿ ರುದ್ರಭೂಮಿಯು ಚೆಲುವು ಖರಹಸನ ॥ ೨೨ ॥

ಗಿರಿಶ ಸುಕ್ಷೇಮದಲಿನಡೆವವ
ಗರಳವುಂಡನು ಮಾನವುಳ್ಳವ
ಗಿರಿಸುತೆಯು ಬೇಡಿದುದ ಕೊಟ್ಟನು ಸಲೆ ಸಿರಾಮಯನು ॥
ಧರೆಯೊಳೆಲ್ಲರು ಶೂಲಿಯೆಂಬರು
ಹಿರಿಯತನ ಘನಕಾಯ ಭಕ್ತರ
ಹೊರೆವವನು ದಿಟತಪ್ಪದುರುಹಿದ ಮೂರು ಪುರಗಳನು ॥ ೨೩ ॥

ಕುಲವ ಕೇಳುವೊಡಭವನೆಂಬರು
ಚೆಲುವತನ ಘನವೈದು ತಲೆಗಳು
ಪುಲಿಯ ತೊಗಲುಟ್ಟವ ದಿಗಂಬರನೆನಿಸಿಕೊಂಡವನು ॥
ಹಳೆಯ ವೃಷಭನು ಪಾತ್ರವೀತಗೆ
ತಲೆಯಕಂಗಳ ಕಿಚ್ಚಿನುಬ್ಬೆಗೆ
ನಿಲುವರಾರಿದಿರಲ್ಲಿ ಕೂಡದು ವಾಮಲೋಚನೆಯೆ ॥ ೨೪ ॥

ಮಣಿ ಕಡಗ ಕುಂಡಲದ ಹಾರದ
ಫಣಿವಿಷೋದ್ಭವ ಕಾಳಕೂಟವು
ಉಣಲುಡಲು ತನಗಿಲ್ಲ ಸತಿಯರ ತೋಟಿ ಖರ ಬಿರುಸು ॥
ಗಣಪನೇ ಮೊರಗಿವಿಯ ಸುಂಡಿಲ
ಫಣಿಯ ಬಿಗುಹಿನ ಹರಿವ ಬಸುರಿನ
ಗಣನೆಗೊಂಬವರಾರದಾವುದು ಎಲ್ಲಿ ಮಂಗಳವು ॥ ೨೫ ॥

ಹಲವು ಮುಖದವನಾ ಶಿಖಿಧ್ವಜ
ಕುಲಯುತರ ನಾವಿಲ್ಲಿ ಕಾಣೆವು
ಬಲಯುತರನೊಡ್ಡಿಸಲು ಕೋದಂಡದ ಪರೀಕ್ಷೆಯಲಿ ॥
ಚೆಲುವರಹರಹರವರು ನೋಳ್ಪರೆ
ನೆಲಮಗಳಿಗಿವರೆಷ್ಟರವದಿರು
ಹುಲು ನೃಪಾಲರನೆಣಿಸಿಕೊಂಬೆ ಳೆ ಜಾನಕೀದೇವಿ ॥ ೨೬ ॥

ಇತ್ತಲೊಬ್ಬನ ನೋಡು ಜಾನಕಿ
ಹತ್ತು ತಲೆಗಳನೊಬ್ಬ ಹೊತ್ತಿಹ
ಹತ್ತೆರಡು ನಿಡುದೋಳ ಧರಿಸಿಹ ಜೋಹದಂದದಲಿ ॥
ಚಿತ್ತವಿಸು ಬಹು ಜನಸಮೂಹಕೆ
ಹತ್ತು ತಲೆಗಳ ಮಾರಬಂದವನು
ಮೃತ್ಯುದೇವತೆಯಂತೆ ರಾವಣನಿರವ ತೋರಿದರು ॥ ೨೭ ॥

ಡಂಗುರವ ಸಾರಿದರು ಸಭೆಯೊಳ
ನಂಗವೈರಿಯ ಧನುವನೇರಿಸೆ
ಮಂಗಳಾತ್ಮಕಿ ಸೀತೆಯನು ತಾನೀವೆನಾತಂಗೆ ॥
ಅಂಗವಿದು ನೃಪರೇ ಸ್ವಯಂವರ
ಭಂಗವಿರಹಿತರೇಳಿಯೆನೆ ಖಳ
ಪುಂಗವನು ತಾನೆದ್ದನೆಡಬಲದವರ ಲೆಕ್ಕಿಸದೆ ॥ ೨೮ ॥

ಹಿಂದು ಮುಂದಾರವರ ನೋಡದೆ
ಗೊಂದಣದ ತಲೆ ತೋಳ ಬಲದಲಿ
ಇಂದುಮೌಳಿಯ ಧನುವತಾ ಮುನ್ನೆದ್ದು ನೆಗಹುವೆನು ॥
ಇಂದುಮುಖಿಯನು ಮದುವೆಯಾಹೆ ನಾ
ನಂದಗೆಡಿಸುವೆ ಭಂಡರಾಗಲಿ
ಬಂದ ನೃಪತಿಗಳೆನುತ ಧನುವಿದ್ದೆಡೆಗೆ ಖಳ ಬಂದ ॥ ೨೯ ॥

ಕಿತ್ತು ರಜತಾಚಲವ ಹೊತ್ತವ
ಗೆತ್ತಲರಿದೇ ಧನುವನೆನುತವೆ
ಸತ್ವದಳತೆಯ ನೋಡದೆಡಗೈಗಳಲಿ ತುಡುಕಿದನು ॥
ಒತ್ತಿ ತೆಕ್ಕೆಯೊಳಮರಿವುಗ್ಗಡಿ
ಸುತ್ತ ಹೊರಳಿದ ಬೆವರಿ ಚರಣವ
ನೊತ್ತಿ ಮೆಟ್ಟದ ಸರ್ವಶಕ್ತಿಯನಿಕ್ಕಿ ನೆಗಹಿದನು ॥ ೩೦ ॥

ಏರಿಸುವರೆಡಗೈಯ್ಯಲಾಂತರೆ
ಜಾರಿದುದು ತಳದಲ್ಲಿ ಕೈಗಳ
ನೂರಿಬಿದ್ದನು ನೆರೆದ ಸಭೆ ಗಹಗಹಿಸಿ ನಗುತಿರಲು ॥
ಡೋರಿವೋದುವು ತೋಳು ನೆತ್ತರ
ಕಾರಿ ರಾವಣ ಗಂಡುಗೆಟ್ಟನು
ದೂರಲೇತಕೆ ವೀರ ಹೊರಳಿದ ಕಣ್ಣು ಹೊರಹಾಯೆ ॥ ೩೧ ॥

ಎಲೆಲೆ ಶಕ್ವರಿ ಇಂದ್ರಜಿತು ಕೇ
ಳಿಲಿಲಿ ದೇವಾಂತಕ ನರಾಂತಕ
ಛಲಲೆ ಹಾಹಾ ಹಾಸಿಯರೇಳಿಸೆ ಎದ್ದು ಮಗುಚಿಸುತ ॥
ಕುಲ ವಿದೂಷಕನೇತಕೆದ್ದನೊ
ಎಲೆಲೆ ಬಾಬಾ ಕೆಟ್ಟೆವೆನುತವೆ
ಕುಲುಲುಗುಟ್ಟುತ ಮೊಟೆ ಕೆಡಹಿದರಧಟರಾ ಧನುವಾ ॥ ೩೨ ॥

ನೆತ್ತರೆಲ್ಲವ ತೊಳೆದು ಕಂಗಳ
ನೊತ್ತುತಿರ್ದರು ದನುಜರುದಕವಿ
ಸುತ್ತ ಸೂಸುವ ಕರುಳ ಹಿಡಿದೊಳಗೊತ್ತಿ ಸಂತವಿಸ ॥
ಅತ್ತಲಿತ್ತಲು ನೋಡಿ ನಾಚುತ
ಹತ್ತಿ ಪೀಠವ ಸಾರಿ ಕುಳಿತನು
ಮೃತ್ಯು ಪರಿಹರಿಸಿತ್ತು ಬದುಕಿದೆನೊಮ್ಮೆ ಖಳನೆನಲು ॥ ೩೩ ॥

ಕುತ್ತಿ ಕೊಂಡಳಲುತ್ತಲಿರ್ದನು
ಚಿತ್ತದೊಳಗಣ ದುಗುಡದಲ್ಲೀ
ಮರ್ತ್ಯರಾಯರದೆಲ್ಲಿ ರಾವಣ ನೊಂಪ ಧನುವೆಲ್ಲಿ ॥
ಎತ್ತ ನಮಗೀ ಘಸಣಿ ಸಾಕಾ
ಮತ್ತ ಕಾಶಿನಿ ಹರಿಗೆವೋಗಲಿ
ತುತ್ತು ಸವಿ ಗಡ ಬಾಯ್ಗೆ ಹೋಗದು ನಮಗೆ ಸಾಕೆನುತ ॥ ೩೪ ॥

ಚಂದ್ರ ಸೂರಿಯರಂತೆ ಬೆಳಗುವ
ನಂದಿವಾಹನ ಧನಪರಂದದಿ
ಮುಂದೆ ವಿಶ್ವಾಮಿತ್ರನಾತನ ಬಳಿಯಲೈತರಲು ॥
ಗೊಂದಣದಿ ಕುಳ್ಳಿರ್ದ ರಾಯರ
ಮಂದಿ ಬೆರಗಾಗುತ್ತ ಚೆಲುವಿಕೆ
ಗಂದಗೆಟ್ಟರು ರಾಮಚಂದ್ರನ ಕಾಂತಿ ಪಸರಿಸಿತು ॥ ೩೫ ॥

ಬಂದು ಕೌಶಿಕ ಮುನಿಯ ಚರಣ
ದ್ವಂದಲಿ ಪೊಡವಟ್ಟು ಜನಕನು
ಸಂದು ಪರಮಾನಂದ ಪುಳಕಿತನಾಗೆ ನೃಪನೊಡನೆ ॥
ಮುಂದೆ ರಾವಣನೆರಗದಿದ್ದನು
ವೃಂದತಲೆಗಳ ಬಲುಹಿನಿಂ ಮುನಿ
ವಂದ್ಯ ಕಂಡನು ಮುಳಿದು ಚರಣದಲೊತ್ತಿದನು ಧರೆಯು ॥ ೩೬ ॥

ಎರಗಿದುದು ಮಣಿಪೀಠ ರಕ್ಕಸ
ನೊರಗಿ ಕೆಡೆವಂದದಲಿ ಬಿದ್ದನು
ಮರೆವಿಡಿದು ದಿವಿಜಾಳಿ ನಗುತಿರೆ ಮನದ ಹರುಷದಲಿ ॥
ಕರಿ ಮನದ ರಾವಣನು ಚಂದವ
ಮೆರೆದು ಕೈಗಳ ಮುಗಿದು ಮುನಿಪತಿ
ಗೆರಗಿದನು ಶರಣೆನುತ ಹಳುಗಾದಂತೆ ಕುಳ್ಳಿರ್ದ ॥ ೩೭ ॥

ಅವಿರಳದ ಕಾಂತಿಯಲಿ ಬೆಳಗುವ
ರವಿಶಶಾಂಕರೊ ಹೇಳು ಮುನಿವರ
ಭುವನಮೋಹನರೂಪ ಲಕ್ಷ್ಮೀವಂತರಾರೆನಲು ॥
ಭುವನಪತಿ ದಶರಥನ ಸುತರೆನೆ
ತವಕದಲಿ ಸಂತೋಷದುಬ್ಬಿಂ
ದಿವರು ಧನುವೆತ್ತಿದರೆ ನಾ ಕೃತಕೃತ್ಯನಹೆನೆಂದ ॥ ೩೮ ॥

ಚೆಲುವಿರಲು ಸಿರಿಯಿಲ್ಲ ವಿದ್ಯದ
ಬಲುಮೆಯುಳ್ಳರೆ ರೂಪ ಭಾಗ್ಯವು
ನೆಲಸಿತಾದರೆ ಕುಲವು ಕೂಡದು ಕುಲಿಗೆ ಬಲವಿಲ್ಲ ॥
ಚೆಲುವು ಕುಲ ಸಿರಿ ವಿದ್ಯವಿದರಲಿ
ಸುಲಭರಾದರೆ ಬಿಲ್ಲನೆತ್ತಿಸು
ಬಲುಹ ತೋರಲಿ ಮುನಿಪ ಸೀತೆಯನಿತ್ತೆ ನಾನೆಂದ ॥ ೩೯ ॥

ಎನಲು ಲಕ್ಷ್ಮಣನೆದ್ದ ಬೇಗದಿ
ಮುನಿಯ ಚರಣಕ್ಕೆರಗಿ ನೇಮವ
ನೆನಗೆ ಕೊಡಿ ನಾ ಬಿಲ್ಲನೆತ್ತುವೆ ನೇರಿಸುವೆನಿರದೆ ॥
ಜನಪ ರಾಘವ ಮದುವೆಯಾಗಲಿ
ಯೆನಲು ಹೋ ಮಾಣ್ಪಂಥವಲ್ಲಿದು
ಅನುಜ ಸೈರಿಸು ರಾಮನೇಳಲಿಯೆಂದ ಮುನಿವಂದ್ಯ ॥ ೪೦ ॥

ನುಡಿಯೆ ತಡ ವಾರಾಮನೆದ್ದನು
ಜಡೆಯ ಜೀಯ್ಯನ ಚರಣಕೆರಗುತ
ಕಡಗ ಕಂಕಣಗಳನು ಸೇರಿಸಿ ಸೆರಗನಳವಡಿಸಿ ॥
ಸಡಗರದಲೈತರಲು ನೋಡುವ
ಪೊಡವಿಪತಿಗಳಳ ಬೆರಗುಮೂಗಿನ
ಕುಡಿತೆಕಂಗಳ ಕುಡಿಗಳ್ಳೈದಿತು ಕಳಭಗಮನೆಯರ ॥ ೪೧ ॥

ಧರಣಿ ಬೆನ್ನನು ಬಲಿದು ಧರಿಸೌ
ಉರಗ ನಡುನೆತ್ತಿಯಲಿ ಹೊತ್ತಿರು
ಲರರೆ ಕೂರುಮ ಕುಪ್ಪಳಿಸದಿರು ಬೆನ್ನಬಲಿದಿಹುದು ॥
ಕರಿಗಳಿರ ನೀವೆಂಟು ದಿಕ್ಕಿನ
ಧರೆಯ ಭಾರವ ಬಗೆದು ತಾಳ್ವುದು
ತರಣಿಕುಲಪತಿ ಧನುವನೆತ್ತುವನೆಂದ ಸೌಮಿತ್ರಿ ॥ ೪೨ ॥

ಹರೆಯ ನೋಡಿರೇಳು ವರುಷವು
ಹಿರಿದು ಮನದಂಗವಣೆಯುಚ್ಚರಿ
ಹೊರಳಿ ರಾವಣಗಂಡುಗೆಟ್ಟನು ಇವನ ಪಾಡೇನು ॥
ಅರಿದರಿದು ತೆಗೆವವನ ಧೀರವು
ಹಿರಿದು ನೋಡೆನಲಖಿಳ ದೇವರ
ನೆರವಿ ಭಾಷೆನೆ ಮುನಿವರೇಣ್ಯನು ಹಾರಯಿಸುತಿರಲು ॥ ೪೩ ॥

ಮತ್ತಗಜ ದಶಕೋಟಿಯೊಳಿದಾ
ಕೃತ್ತಿವಾಸನ ಧನುವನಿವ ತಾ
ನೆತ್ತುವನು ಗಡ ನೋಡುನೋಡೆನುತಖಿಳ ಜನನಿವಹ ॥
ಅರ್ತಿಯಲಿ ನೆರೆನೋಡುತಿರ್ದುದು
ಸುತ್ತ ಕಂಚುಕಿ ನಿಕರ ತೊಲಗಿಸೆ
ಚಿತ್ತಜಾತನ ತಾತ ಕಾತರವಿಲ್ಲದೈತಂದ ॥ ೪೪ ॥

ಭವನ ಧನುವೆತ್ತಿದರೆ ಧರಣಿಜೆ
ಗಿವನು ಪಾಸಟಿಯಪ್ಪನಪ್ಪನು
ಶಿವನೆ ಬಲ್ಲನು ಬಲುಹ ಭದ್ರಾಕಾರನಿವನೆನುತ ॥
ತವತವಗೆ ಜನವಾಲಿಸುತ್ತಾ
ರವಿಕುಲೇಶನನೀಕ್ಷಿಸುತ್ತಿರ
ಲವನಿಜೆಯ ಮನದಲ್ಲಿ ಹೊಸತಹ ಸ್ನೇಹವಂಕುರಿಸೆ ॥ ೪೫ ॥

ತುಡುಕು ನಗೆಗಳ ನಡೆದ ಲಾಲಿಸಿ
ಬೆಡಗಿನಿಂದೆಡಗೈಯ ನೀಡುತ
ಮೃಡನ ಮನದಲಿ ನೆನೆದು ನೇವರಿಸಿದನು ಚೌರಿಗಳ ॥
ಕೊಡಲಿ ಹಿಡಿದನ ಕೈಯ ಕಡುಹಿಂ
ದಡಿಯುಲದ್ದಿದ ಭೂಪವಂಶವ
ಹಿಡಿದು ನೆಗಹುವವೋಲು ರಾಘವ ಬಿಲ್ಲ ನೆಗಹಿದನು ॥ ೪೬ ॥

ಹಾಯೆನುತ ಭುಜಹೊಯ್ದು ಹೋ ಮಝು
ಮಾಯೆನುತಮರಾಳಿಯಾಲಿಸೆ
ರಾಯಕುಲ ಮಾರ್ತಾಂಡ ಕೊಡಹಿದ ನಿಜದ ಗವಸಣಿಯ ॥
ನೋಯದೇರಿಸಿ ತಿರುವ ಮಿಗೆ ಪೂ
ರಾಯದಲಿ ಹದವರಿತು ತೆಗೆವುತ
ತಾಯ ಹೊಯ್ದನ ಹಮ್ಮ ಮುರಿದಂತುಡಿದು ಘಣ್ಣೆನಲು ॥ ೪೭ ॥

ಚೀರಲಹಿಪತಿ ಜಡಿದು ತಲೆಗಳ
ಕಾರೆ ನೇತ್ರರ ದಿಗ್ಗಜಂಗಳು
ಹಾರಿ ಬೀಳಲು ಸಿಡಿಲು ಹೊಡೆದಂತಾಗಿ ಸಭೆ ಬೆದರೆ ॥
ಮೂರುಜಗ ರಾಮೆನಲು ಸುರತತಿ
ಕೂರಿಡಲು ಬಿಲ್ಲುಡಿದ ರಭಸಕೆ
ಭೇರಿ ದುಂದುಭಿ ಶಂಖ ಕಹಳೆಗಳೆಸೆದುವಾ ಕ್ಷಣಕೆ ॥ ೪೮ ॥

ಸುರಿದರರಳಿನ ಮಳೆಯ ದೇವರು
ಹುರುಷದಿಂ ಗುಡಿಗಟ್ಟಿ ಕುಣಿದರು
ಪರಮ ಸಂತಸ ಹಬ್ಬಿತೆಲ್ಲರ ಮನಮುಖೋಕ್ತಿಯಲಿ ॥
ತರುಣಿಯರ ಮೇಳದಲಿ ಬಂದಳು
ಧರಣಿಸುತೆ ನವಪುಷ್ಪದಾಮವ
ಹರಿಯ ಕಂಠದಲಿಕ್ಕೆ ಮಂಗಳಮಹಿಮನೊಪ್ಪಿದನು ॥ ೪೯ ॥

ನಾಕಿಗಳು ನಲಿದಾಡುತಿರಲಾ
ಲೋಕಪಾಲರು ತುಷ್ಟಿವಡೆದರು
ನಾಕರಿಪು ದಶಕಂಠ ತೆರಳಿದ ತನ್ನ ಪಡೆಸಹಿತ ॥
ಲೋಕವರಿಯಲು ಜನಕನೆಲ್ಲರ
ಸಾಕುಸಾಕೆಂದೆನಿಸಿಬಿಟ್ಟನು
ಮೂಕರಂತಿರೆ ಮುಸುಕಿ ಕಡುಮಾನಿಗಳು ತೆರಳಿದರು ॥ ೫೦ ॥

ಹೊಡೆದವಗಣಿತ ಭೇರಿ ನಿಸಳ್ಸ
ಗುಡಿಗಳೆಸೆದುವು ಪುರದಲಾಕ್ಷಣ
ನುಡಿಯ ಬಲ್ಲರಯೋಧಿಗೈದಿದರರಸನಾಜ್ಞೆಯಲಿ ॥
ಪಿಡಿದ ಕುಂಚದ ಕೈಯ ಕಟ್ಟಿಗೆ
ಯುಡೆಯ ಹೊಂಗೆಜ್ಜೆಗಳ ಚಾರರು
ನಡೆದರಾ ಹರಿಕಾರರಮವಾ ಬಿಟ್ಟ ಸೂಠಿಯಲಿ ॥ ೫೧ ॥

ಕಲಿಗಳಗ್ಗದ ಕೇರಿಕೇರಿಯ
ಬಲುಹಿನಲಿ ಕೈಸೂರೆಗೊಳುತವೆ
ಸುಲಿದು ಬೀಯ್ಯಗರಮ್ಮನಾಣೆಯೆನುತ್ತ ಹರಿತರಲು ॥
ತಿಳಿದು ಕಲಕಲವಾಲಿಸುತ್ತಿರೆ
ವೊಲಿದು ಹಣೆಯಲಿ ಪಲ್ಲಿ ಕರೆದುದು
ಕೊಳಲಿ ಸೂರೆಯನವರು ದಣಿವಂತೆಂದನಾ ಭೂಪ ॥ ೫೨ ॥

ಹೇಳಿ ಕಾರ್ಯವನೆನಲು ದಶರಥ
ಹೇಳಲೇನದ ಗುಡಿಯ ಕಟ್ಟಿಸು
ಕೇಳು ಬೀಯ್ಯಗನಾದ ಜನಕನು ನಿಮಗೆ ಮತ್ತೇನು ॥
ಪಾಳೆಯವ ನೀನಿದಿರುಗೊಳ್ಳೆನೆ
ಹೇಳಿದನು ಮಂತ್ರಿಗಳ ಸೇನೆಯ
ಸಾಲಪಲ್ಲಕಿ ಕೋಟಿ ಸಹಿತವೆ ಬಂದಗರಮನೆಗೆ ॥ ೫೩ ॥

ಹಿರಿದು ಶಿಷ್ಟರ ಮನ್ನಿಸುತ್ತಾ
ಪರಮ ಮಂಗಳ ಮುದ್ರೆಯೋಲೆಯ
ಕರಣಿಕರು ತೆಗೆನೋದೆ ಆಲಿಸುತಿರ್ದನೊಸಗೆಗಳ ॥
ಹರನ ಚಾಪವ ಗೆಲಿದ ನಿಮ್ಮಯ
ಹಿರಿಯ ಮಗ ಗುರುವಾರ ಲಗ್ನವು
ಪರಿಜನಂಗಳ ಸಹಿತ ಉಂಗುರವಿರಿಸಲೈತಹುದು ॥ ೫೪ ॥

ಉಡುಗೆ ಕೊಟ್ಟೆಲ್ಲರಿಗೆ ಭೂಪತಿ
ನಡೆದುದೇ ಮುನಿಯಾಗವೆಂದೊಡೆ
ಕೆಡಹಿದನು ತಾಟಕಿಯ ಗೆಲಿದ ಸುಬಾಹುಯೆಂಬವನ ॥
ಕೆಡದಹಲ್ಯೆಯನೆತ್ತಿ ಕಡಲಲಿ
ಕೆಡಹಿದನು ಮಾರೀಚನೆಂಬನ
ಮೃಡನ ಚಾಪವ ಮುರಿದ ಬಳಿಕವಧಾರು ಚಿತ್ತೈಸು ॥ ೫೫ ॥

ಪುರದೊಳಗೆ ಡಂಗುರವ ಸಾರಿಸಿ
ತುರಗ ಕರಿರಥ ಪಾಯದಳವನು
ನೆರಹಿ ಸೀತೆಯ ದಿಬ್ಬಣಕೆ ಹೊರವಂಟನವನಿಪನು ॥
ನೆರೆದ ಜಲ್ಲರಿ ಚಮರಿ ಸೀಗುರಿ
ಯರಸುಗಳ ತಿಂಥಿಣಿಯಲಂದಣ
ವೆರಸಿ ಕೋಟಿಗಳಿಂದ ಮಿಥಿಲಾಪುರವನೈದಿದನು ॥ ೫೬ ॥

ಶರಧಿಯೆರಡೊಂದಾದ ತೆರದಲಿ
ತರಣಿ ಶಶಿಕುಲರಪ್ಪಿ ಕುಶಲವ
ಹಿರಿದು ಕೇಳುತ ಕೊಡಿಸಿದನು ಬೀಡಾರವೆಲ್ಲರಿಗೆ ॥
ಕರಿಘಟಾಳಿಗೆ ತುರಗ ಪಂಕ್ತಿಗೆ
ಅರಸು ಮನ್ನೆಯ ಮಂತ್ರಿ ವರ್ಗಕೆ
ಧರಣಿಯಮರರಿಗೊಂದು ದೆಸೆ ಬಳಿಕಾಯ್ತು ಮುಹೂರ್ತ ॥ ೫೭ ॥

ತರತರದ ಶೃಂಗಾರತೋರಣ
ಸುರುಚಿ ಪಟ್ಟೆಯ ಮೇಲುಗಟ್ಟಿನ
ವಿರಚಿತಾಮಳ ಚಿತ್ರಭಿತ್ತಿಯ ಮದುವೆ ಮಂಟಪದ ॥
ಕರೆಯದೆಲೆ ಜನ ತವತವಗಲಂ
ಕರಿಸಿ ಮದುವೆಯ ನೋಡಲೆನುತವೆ
ನೆರೆದರವರಿವರೆನ್ನದೆಲ್ಲರು ಮನದ ಮುದ ಸಹಿತ ॥ ೫೮ ॥

ಹರಿಗೆ ಧರಣಿಜೆ ಲಕ್ಷ್ಮಣಂಗಾ
ತರುಣಿಯೂರ್ಮಿಳೆ ಕೀರ್ತಿಯೆಂಬಳ
ಭರತದೇವಗೆ ಶತ್ರುಹದನನಿಗಿತ್ತು ಮಾಲಿನಿಯ ॥
ಅರಸ ಧಾರೆಯನೆರೆಯೆ ಭೂ
ಸುರ ನೆರವಿ ದಾನಂಗಳಲಿ ದಣಿದುದು
ಪರಿಣಯಂಗಳ ಹೋಮ ಮುಗಿದುದು ಹಸೆಗೆ ಹರಿ ಬಂದ ॥ ೫೯ ॥

ಗೌಳ ರಾಯನು ಹರಿಗೆ ಕೈಕೊಡೆ
ಚೋಳ ನೃಪ ನೆಲನುಗ್ಗಡಿಸುತಿರೆ
ಸಾಲ ಸತ್ತಿಗೆಗಳನು ಹಮ್ಮೀರಾಧಿಪತಿ ಹಿಡಿಯೆ ॥
ಹೇಳಲರಿಯೆನು ಭೇರಿ ನಿಸ್ಸಳ
ಸೂಳವಿಸಿದವನಂತ ರಾಯರ
ಮೌಳಿ ಮಣಿಗಣಖಚಿತ ಪಾದಪಯೋಜವೊಪ್ಪಿದುದು ॥ ೬೦ ॥

ಎಡೆಯರಿತು ಭೋಜನದ ಶಾಲೆಗೆ
ನಡೆದು ಬಂದನು ಭೂಪ ಬೀಯಗ
ರೊಡನೆ ಹಂತಿಯವೆಂಟಣಿಸಿದರು ರತುನಗದ್ದುಗೆಯ ॥
ಗಡಣದಡ್ಡಣಿಗೆಗಳ ಮೇಲಕೆ
ಮಡಗಿ ಚಿನ್ನದ ಹರಿಯಣಂಗಳ
ಕಡೆಯ ಬೆಳಗುವ ರತುನ ದೀವಿಗೆ ಗಿಂಡಿಗಳು ಎಸೆಯೆ ॥ ೬೧ ॥

ಉಡುಗಣೇಶ್ವರ ಜಿಗುಳಿ ಮುತ್ತಿಂ
ಗಡಲ ಸೇರಲು ಕಂಡು ಪುನರಪಿ
ಹಿಡಿದು ನೆಗಹುವವೋಲು ಸಟ್ಟುಗದಲ್ಲಿ ನೊಗೆನೊಗೆದು ॥
ನಡೆನುಡಿಯಲತಿ ಜಾಣೆಯಹ ಕ
ನ್ನಡದ ಕಾಂತೆಯರು ಪಾಯಸವ
ಬಡಿಸಿದರು ನೋಟಕರ ಕಣುಮನದಣಿಯೆ ಭೂಪರಿಗೆ ॥ ೬೨ ॥

ಮೆಲುವ ಭೂಪರ ಮನಕೆ ಹೊಸ ಜ
ಕ್ಕುಲಿತೆ ಹುಟ್ಟಲು ಬಾಯ ಹಬ್ಬವು
ಹೊಳಕಲಮೃತವಿದೆಂಬ ಹಾಲುಂಡೆಗಳನೋರಣದಿ ॥
ತೆಲುಗ ನಾರಿಯರೈದೆ ಬಡಿಸಿತು
ಕೆಲಕೆ ತಾಳೆಯ ತಳಿರವೊಟ್ಟಲು
ಕಲರವಂಗ್ಯವಂತೆ ಪರಮಾನ್ನವನು ಭುಜಿಸಿದರು ॥ ೬೩ ॥

ಎಣಿಸಲತಿಸವಿಯೆಂಬ ವರ ಗವ
ಸಣಿಗೆ ತೆಗೆದಂತಪ್ಪ ಸುಖಿ ಹೂ
ರಣದ ಸೌಗಂಧಂಗಳಿಂದೆಣ್ಣೆಸೆಯು ಪರಿಮಳಿಸೆ ॥
ಉಣಲು ಸ್ವರ್ಗದ ಸುಖವದೊಂದೇ
ಚಣದೊಳಗೆ ಕೊಡುತಿರ್ದುದೆನೆ ಹೊ
ಯ್ಸಳದ ನಾರೀವೃಂದ ಹೋರಿಗೆಗಳನು ಬಡಿಸಿದುದು ॥ ೬೪ ॥

ಸರಗಳಿಗೆ ಹರಿಯಾಣ ಮಧ್ಯದಿ
ಸುರಿದ ಮುತ್ತನು ನುಗಿಸೆ ಬೆಳ್ಳಿಯ
ಸರಿಗೆ ತೆಗೆದಂತಿಪ್ಪ ಸೇವಿಗೆಯ ಪಾಯಸವ ॥
ಪರಡಿಗಳ ಲಾಳಿಯರು ಬಡಿಸಿತು
ಭರಿತವೆನೆ ಮಾಳವಿಯರೊಡೆಯನು
ಅರರೆ ಬಡಿಸಿತು ಹೊಯ್ಗಡುಂಬವ ತಿಗುಳ ಕನ್ಯೆಯರು ॥ ೬೫ ॥

ಅರಸುಗಳ ಹಂತಿಯಲಿ ಬಡಿಸಿತು ।
ಬೆರಳತುದಿಯಲಿ ಸವಿದು ದಣಿಯಲು ।
ಅರುಚಿ ಪರಿಹರವಪ್ಪ ಸೀಕರಣೆ ಬಲುರಸಾಯನವ ॥
ಕರದಣಿಯೆ ಮನದಣಿಯೆ ಬಟ್ಟಲ
ಬರಿದುಬಿಡೆ ಮೊಗೆಮೊಗೆದು ಸತಿಯರು
ಹೆರೆಯ ತುಪ್ಪವನವನಿಪತಿಗಳಿಗೆರೆದರಕ್ಕರದಿ ॥ ೬೬ ॥

ಅಧರದೊಳಗಿಹುದಮೃತವಿನ್ನೇ
ನೊದವಿತಗಳದೂಟ ರುಚಿಕರ
ವಿದಿತ ಮೆಣಸಿನ ಚೂರ್ಣವದ್ದಿದ ರಸದ ಕೈವೆರಳ ॥
ತುದಿಯಲೆರಕವು ಸ್ವರ್ಗಸುಖಗಳ
ಸದನ ಕೈಸಾರ್ದಂತಿರೆ ಶ್ರೀ
ವದನೆಯರು ಕೋಮಲೆಯರಾಗಲಿ ಸೊಗಸೆ ಬಡಿಸಿದರು ॥ ೬೭ ॥

ಶಾರದೇಂದುವಿನಂತೆ ಧವಳದ
ನೀರುಸೋಂಕದ ಕೆನೆಯ ಮೊಸರನು
ವಾರಿಜಾಕ್ಷಿಯರೈದೆ ಬಡಿಸಿತು ಕಣ್ಣುಕೋರೈಸೆ ॥
ಚಾರು ಮೆಣಸಿನ ಕರೆಯನತಿಸಹ
ಕಾರಫಲಗಳ ಮೊದಲಂಗಳ
ಮಾರವಲ್ಲಿಯ ನೆಲ್ಲಿ ಹೇರೀಳೆಗಳ ಬಡಿಸಿದರು ॥ ೬೮ ॥

ನೊರೆಯುವಾಲ್ಸಕ್ಕರೆಯು ದಿಬ್ಬಣಿ
ಗರಿಗೆ ಮೊಗೆಮೊಗೆದೀಂಟಲೆರೆದರು
ಹಿರಿದು ತುಷ್ಟಿಯನೈದೆ ಕೈದೊಳೆದೆಲ್ಲ ಸಭೆಗೈದೆ ॥
ಸರಸ ಕೈಘಟ್ಟಿಯಲಿ ಕರ್ಪುರ
ಭರಿತ ಚಿಕ್ಕಣಿ ನಾಗವಳ್ಳಿಯ
ಭರದ ಹೊಂಬಟ್ಟಲಲಿ ಹೊಯ್ಸಣದವರು ಕೊಡುತಿರಲು ॥ ೬೯ ॥

ಉಂಡುಹೊರವಡುತಿಪ್ಪ ಪಂಡಿತ
ತಂಡದೊಳಗತಿ ಜರಠನೊಬ್ಬನ
ಬಂಡಿ ಬಸುರವನು ಉಸುರುತೈತರೆ ಪೂರ್ಣ ಜಠರದಲಿ ॥
ಕಂಡು ನಗುತವೆ ತೊತ್ತು ಮಂಥರೆ
ಭಂಡೆಯುಡಿದಾರವನು ಕಿತ್ತಳು
ಮಂಡೆ ನಾಚಿದ ವಿಪ್ರ ಜನ ನಗೆ ಮಾನಗೆಡಿಸಿದಳು ॥ ೭೦ ॥

ಆದನು ಕೇಳಿದ ರಾಘವೇಂದ್ರನು
ಸುದತಿಯನು ಹಿಡಿತರಿಸಿ ಹೊಯ್ದರೆ
ಮೊದರಿದಳು ಹಮ್ಮೈಸಿ ಬಿದ್ದಳು ತೊಯ್ದರಕ್ತದಲಿ ॥
ಕುದಿದು ಸುಯ್ದಳು ಹರಿಯಮೇಲವ
ಳುದಿತ ರೋಷದಿ ಹಗೆಯಹೊತ್ತಳು
ಮುದದಿ ವಿಪ್ರನ ಕರೆದು ಮನ್ನಿಸಿ ಕೊಟ್ಟನುಡುಗೊರೆಯ ॥ ೭೧ ॥

ಐದು ದಿನವಾ ನಾಡು ಬೀಡುಗ
ಳೈದೆ ದಣಿದುದು ಮೋಕುಳಿಯಲತಿ
ಮೈದುನರು ಬಾವಂದಿರಾಡಿತು ಸುಖದ ಸುಗ್ಗಿಯಲಿ ॥
ವೈದೆಹಿಯೂರ್ಮಿಳೆಯು ಮಾಲಿನಿ
ಯೈದೆ ಕೀರ್ತಿಯರೆಲ್ಲರಿಗೆ ಮು
ತ್ತೈದೆತನವನು ಹರಸೆ ಭಾರತಿ ಗೌರಿದೇವಿಯರು ॥ ೭೨ ॥

ಮಂಗಳಾತ್ಮಕಿ ಸೀತೆಯನು ರಘು
ಪುಂಗವನು ತಾ ಮದುವೆಯಾಗಲು
ಗಂಗೆ ಭಾರತಿ ಶಚಿಯರುಂಧತಿದೇವಿಯರು ಹರಸೆ ॥
ಮಂಗಳವ ನೆರೆ ಪಾಡುತಿರ್ದರು
ಮಂಗಳವ ನೆರೆ ನೋಡುತಿರ್ದರು
ಮಂಗಳಾತ್ಮಕಿ ಸೀತೆ ರಾಮರು ಜಗಕೆ ಮಂಗಳವ ॥ ೭೩ ॥

ಇದನು ಕೇಳುವ ಸಜ್ಜನಂಗಳ
ಸದನದಲಿ ರಮೆ ನೆಲೆಸುವಳು
ಸುದತಿಯರ ಸೌಭಾಗ್ಯ ಹೆಚ್ಚುವುದವನಿಸಂಭವೆಯು ॥
ಮದುವೆ ಹೇಳುವರಿಂಗೆ ವಿಜಯಾ
ಭ್ಯುದಯವೆನೆ ರಚಿಸಿದನು ಮುದದಲಿ
ತ್ರಿದಶ ಮುನಿವಾಲ್ಮೀಕಿರಚಿತವು ಜಗಹಿತಾರ್ಥದಲಿ ॥ ೭೪ ॥

---

## ೩ನೇ ಸಂಧಿ

ಪಲ್ಲ ॥ ಪರಶುರಾಮನ ಗೆಲಿದು ನರಹರಿ
ಪುರವ ಹೊಕ್ಕನು ತಂದೆಯಿತ್ತಾ
ವರವ ಪಾಲಿಸಿ ಭರತದೇವಂಗಿತ್ತು ಸಂಪದವ ॥

ಪದ್ಯ ॥ ಹರಿ ರಮೆಯರಿಬ್ಬರ ನಿಜಾಂಕದಿ
ಹರಸಿ ಕಳುಹಿಸಿಕೊಡಲು ಜನಕನು
ನೆರೆದ ಸಭೆಯಲಿ ನೃಪತಿ ಋಷಿಗಳು ಕೇಳುತಿರಲಂದು ॥
ಹಿರಿದು ಮಮತೆಗಳಿಂದ ಬುದ್ಧಿಯ
ನೊರೆವೆ ಕೇಳೌ ಸೀತೆ ರಮಣನ
ಚರಣಸೇವೆಯ ಮಾಡಿ ನಡೆವುದು ಬೆಸಸಿದಂತೆಂದ ॥ ೧ ॥

ಸತಿಗೆ ಪತಿಯೇ ಮಂತ್ರ ದೇವತೆ
ಸತಿಗೆ ಪತಿ ಪುರುಷಾರ್ಥ ವಿವರಿಸೆ
ಸತಿಗೆ ಪತಿಯೇ ಸತ್ಯ ಶೌಚವು ಪುಣ್ಯದಾಯಕವು ॥
ಸತಿಗೆ ಪತಿಯಿಹಪರಕೆ ಸೌಖ್ಯ
ಸ್ಥಿತಿಗೆ ಕಾರಣ ಸತಿಗೆ ಪತಿ ದು
ರ್ಗತಿನಿವಾರಣವರಿತು ನಡೆವುದು ಮಗಳೆ ಕೇಳೆಂದ ॥ ೨ ॥

ಪತಿಯನಗಲಿದ್ದ ಹೊತ್ತು ಭೂಷಣ
ವತಿಯೆನಿಸಿದರೆ ಪಾಪ ಪತಿಯಿರೆ
ಗತವಿಭೂಷಣೆಯೆನಿಸೆ ಮತ್ತದು ಘೋರತರ ನರಕ ॥
ಪತಿಯಿದಿರಲಾಸನದಿ ಕುಳ್ಳಿರೆ
ಸತಿಗೆ ಸದ್ಗತಿ ಕೆಡುವುದನುದಿನ
ಪತಿಯ ದೆಸೆಯಲಿ ಹಿರಿದು ಭಯ ಭಕ್ತಿಗಳು ಬೇಕೆಂದ ॥ ೩ ॥

ಇನಿಯನಿಂದವೆ ಮುನ್ನ ಪವಡಿಪ
ಇನಿಯನಿಂದವೆ ಬಳಿಕಯೇಳುವ
ಇನಿಯನಿಂದವೆ ಮುನ್ನ ಭುಂಜಿಪ ನಡೆಯನಾದರಣೆ ॥
ಇನಿಯನಗ್ರಜನಾಪ್ತ ಪಿತೃತ
ಜ್ಜನನಿಯರಿಗನುಕೂಲೆಯಲ್ಲದ
ವನಿತೆಯರಿಗಿಹಪರವು ದೊರೆಯದು ಮಗಳೆ ಕೇಳೆಂದ ॥ ೪ ॥

ಪತಿಯ ಮನದಿಚ್ಛೆಯಲಿ ನಡೆವುದು
ಸತಿಯ ಪರತರಧರ್ಮ ನಿಜಸತಿ
ಪತಿಗೆ ತನಗೆ ವಿಭಿನ್ನಭಾವವ ಬಿಟ್ಟು ಬಳಸುವುದು ॥
ಕೃತಕ ವಂಚನೆ ಕೋಪ ತಾಪವು
ಮತಿವಿಕಾರವು ಮನದ ಮತ್ಸರ
ವಿತತಭೂಷಣ ಮಗಳೆ ನಾರಿಗೆ ನರಕತರವೆಂದ ॥ ೫ ॥

ಪತಿಯ ದುಃಖವೆ ದುಃಖವಾಗಿಹ
ಪತಿಯ ಸೌಖ್ಯವೆ ಸುಖವದಾಗಿಹ
ಪತಿಗೃಹಾಲಂಕಾರ ನಿಜ ತನುಭೂಷಣವ ಮಾಳ್ಪ ॥
ಪತಿ ಮಹೇಶ್ವರನೆಂದು ನಡೆವಾ
ಮತಿಯನುಳ್ಳರೆ ಸಾಕು ಬಗೆಯೊಳ
ಗಿತರದಾಚರಣೆಗಳನುಳಿದಿರೆ ಧನ್ಯೆ ನೀನೆಂದ ॥ ೬ ॥

ಸಲೆ ಪತಿವ್ರತೆಯುಪ್ಪ ಹೆಂಗುಸ
ನಳಲಿಬಳಲಿಸಿ ಕೋಪ ತಾಪವ
ಬಳಸುತಾಸರು ಮಾಡಿ ಬೇಸರು ನುಡಿದು ಕಾಡುವನು ॥
ಇಳೆಗೆ ಬಾಹಿರ ಪಾಪಿ ತಾನವ
ಸಲೆ ಕೃತಘ್ನನು ಕಡೆಯುಲಾ ಪತಿ
ಯಿಳಿವನೆಂದರಿ ಘೋರ ನರಕ ಮಹಾಂಧಕೂಪದಲಿ ॥ ೭ ॥

ವರ ಪತಿವ್ರತೆ ನೊಂದು ಸುಯ್ದರೆ
ಹರಿವುದಾಪತಿಯಾಯು ಸಿರಿಗಳು
ಹಿರಿದು ಸಂಚಿತ ಪುಣ್ಯ ಕೆಡುವುದು ಕೃತ ತಪೋಹಾನಿ ॥
ಕೆರಳಿ ಕೋಪಿಸನೆಂಬವನ ವಧು
ತರಣಿಯುದಿಸದವೋಲು ನಿಲಿಸಳೆ
ಹರಿಹರಾದಿಗಳೈದೆ ಬೇಡಿದೋಡೀಯ್ಯಳೀ ವರವ ॥ ೮ ॥

ಸತಿಯುನುಳಿದಾ ಪುರುಷ ಮಾಡಿದ
ಕೃತುಗಳಫಲವು ಸುಕೃತ ಸೇರ್ವೊಡೆ
ಸತಿಯೆ ಕಾರಣ ಮನದೊಳಬಲೆಯನರಿತು ಸಲಹುವುದು ॥
ಕ್ಷಿತಿಯೊಳಿಹಪರ ಸೌಖ್ಯ ವರದಂ
ಪತಿಗಳನುಮತದಿಂದ ಫಲಿಸುಗು
ಹಿತವನರಿದಾಚರಿಸುತಿಪ್ಪುದು ಮಗಳೆ ಕೇಳೆಂದ ॥ ೯ ॥

ಎನುತ ಕಂಬನಿದುಂಬಿ ಜನಕನು
ತನುಜೆಯಳ ಕೈಪಿಡಿದು ರಾಘವ
ಮನದೊಳೆರಡಿಲ್ಲದವೊಲಬಲೆಯನರಿತು ಸಲಹುವುದು ॥
ಮುನಿಯದಪರಾಧವನು ನೋಡದೆ
ಘನ ಕೃಪೇಕ್ಷಣದಿಂದ ನಡೆವುದು
ವನಿತೆಯವಗುಣದೋಷವೆರಡನು ಕ್ಷಮಿಸಬೇಕೆಂದ ॥ ೧೦ ॥

ಕನಕ ರಥ ನಾಲ್ಕೆರಡುಸಾವಿರ
ಘನ ಮದಂಗಜವೆಂಟುಸಾವಿರ
ವಿನುತ ಹಯತತಿ ಲಕ್ಷ ಕೆಳದಿಯರೆರಡು ಸಾವಿರವು ॥
ಜನಕನಿತ್ತನು ರತ್ನದೊಡಿಗೆಯ
ನನಿಬರಿಗೆ ದಿವ್ಯಾಂಗವಸ್ತ್ರವ
ಮನವು ದಣಿವಂತಪ್ಪಿ ಮನ್ನಿಸಿ ಬಳಿಕ ಬೀಳ್ಕೊಟ್ಟ ॥ ೧೧ ॥

ಜನಪ ದಿಬ್ಬಣಿಗರನು ಮನ್ನಿಸಿ
ವಿನಯದಲಿ ಕಳುಹುತ್ತ ಬರುತಿರೆ
ಕನಕ ನಿಸ್ಸಳ ಭೇರಿ ತಮ್ಮಟೆ ಲಗ್ಗೆಗಳ ಕೇಳ್ದು ॥
ಕನಲಿ ಕೊಡಲಿಯ ರಾಮನೆಲ್ಲಿಯ
ಘನ ನಿನಾದವೆನುತ್ತ ಘೋತ್ರದ
ಕೊನೆಯ ಮೇಲಕೆ ತೆಗೆದು ದೆಸೆಗಳನಾಲಿಸುತ ಬಂದ ॥ ೧೨ ॥

ಜಡೆಯ ಹೊತ್ತುದೊ ಸಿಡಿಲು ಶಿವ ಶಿವ
ವಡಬ ತಮ್ಮಡಿಯಾದನೋ ದಿಟ
ಕಡೆಯ ಕಾಲಕೆ ಮೃಡನು ಭಾಳದಿ ಮುನಿದು ಲೋಕವನು ॥
ಸುಡುವವೋಲೆನೆ ಹೆಗಲಲಿಳುಹಿದ
ಕೊಡಲಿಯನು ತಿರುವುತ್ತ ತೋರಾ
ಮೃಡನ ಬಿಲ್ಲನು ಮುರಿದ ವೀರನ ಕೊಲುವೆನೀಗೆನುತ ॥ ೧೩ ॥

ಮುನಿದು ಕುರಿಗಳ ಹಿಂಡ ಹೊಕ್ಕಾ
ವನಮದೋದ್ಗಜದಂತೆ ನಡೆವುತ
ಜನಕ ದಶರಥರಳುಕಿ ಕಂಗೆಡೆ ಕಂಡು ಬೆದರುತ್ತ ॥
ಕನಲಿ ಪಡೆಯೊಳು ಬೀದಿವರಿವುತ
ಮನುಮಥಾರಿಯು ಬಂದಡೊಮ್ಮೆಗೆ
ಮುನಿಯಲೀಸೆನು ಭೀತಿ ಬೇಡೆಲೆ ಮಾವ ನಿಮಗೆಂದ ॥ ೧೪ ॥

ಪೊಡವಿಪತಿ ಗಡ ತನಗೆ ಬಿರಿದಿನ
ತೊಡರು ಗಡ ಫಡ ವೀರಶಾ ಗಡ
ಕೊಡಲಿ ಕಡಿತದಿ ಕಡಿದೆ ಹಂತವ ತೋರುತೋರೆನಲು ॥
ಘುಡುಘುಡಿಸಿ ಹರಿತರಲು ರಾಘವ
ಪೊಡವಿಗಿಳಿದನು ಮುನಿಯಿದೇತಕೆ
ಕಡು ಬೆವರಿ ನಡೆತಂದೆ ಕೃತ್ಯವಿದೇನು ಹೇಳೆಂದ ॥ ೧೫ ॥

ಪುಲಿಯ ತೊಗಲುಡಿಗೆಗಳು ಲಾಕುಳ
ಹೊಳೆವ ಜಪಮಣಿಮಾಲೆ ಮುದ್ರಿಕೆ
ಹಲವು ಜಡೆಗಳ ಕೆದರಿ ಭಸಿತದಲ್ಮೈದ ಮುನಿನಾಥ ॥
ಎಲವೊ ಪಿಡಿ ಪಿಡಿ ಧನುವ ತಿರುವಿಗೆ
ಹಿಳುಕ ತೊಡು ತೊಡು ಕಾದಲಾಪರೆ
ಛಲವ ಬಿಡು ತಲೆಗಾವೆ ಪದದಲಿ ಬೀಳು ಬೀಳೆಂದ ॥ ೧೬ ॥

ವಂದ್ಯರೆಂಬುದ ಬಲ್ಲಿವದ ನೀ
ವೆಂದುದದು ದಿಟ ಎರಗಲೊಲುವೆವು
ಕುಂದವೆನ್ನಂಗಗಳು ಗುರುವಲ್ಲ ದ್ವಿಜಾತಿಗಳು ॥
ಕೊಂದು ಕಳೆವೆನು ಕಾದು ಬಾಯಿಂ
ಬೊಂದು ನುಡಿ ಮುನಿಗಳಿಗೆ ಸಲ್ಲದು
ಸಂದ ಸುಕೃತವನೀಗಿ ಕಳೆಯದೆ ಕೋಪ ಬೇಡೆಂದ ॥ ೧೭ ॥

ಹಸುಗಳಿಗೆ ಹಾರುವರಿಗರಿಯಾ
ಹಸುಳೆಗಳು ಮುಂತಾಗಿ ಮುನಿಯರು
ಎಸೆವ ರವಿಕುಲದೊಳೊಗೆ ದನಾನರಿಯೆನೇ ನಿಮ ॥
ಅಸಮ ಧನುವಿರೆ ನಿಮ್ಮ ಕೈಯ್ಯಲಿ
ಎಸೆವ ಧಾರೆಯು ಕೊಡಲಿ ತಾನಿರೆ
ಹುಸಿಯೆ ಹೊಯ್ ಹೊಯ್ ಖತಿಯ ಬಳಿಯಲಿ ಭೀತಿ ಬೇಡೆಂದ ॥ ೧೮ ॥

ಎಲವೊ ಹಾರುವತನವನೀಗಳೆ
ಕಳೆದೆವಿದೆಲಾ ನೋಡುಯೆನುತವೆ
ಕಳೆದು ಮುನಿಪತಿ ಜನ್ನಿವಾರವ ಧರೆಗೆ ಬಿಸುಡುತಲಿ ॥
ಪ್ರಳಯ ರುದ್ರನವೋಲು ನಾವಿಂ
ದೆಲವೊ ಕಲಿ ಕಾಳಗವನಿತ್ತೈವು
ಹೊಳೆದುಹೋದರೆ ಕೊರಳ ಕೊರೆಯದೆ ಮಾಣೆ ನಾನೆಂದ ॥ ೧೯ ॥

ಹಲವು ಕಾಲಕೆ ತಪದಿ ಕೋಪವ
ನುಳಿದ ಮುನಿಯುಬ್ಬಿನಲಿ ಕೋಪವ
ತಳೆಯಲಾಗದು ನಿಮಗೆ ಮುನಿದವರಾರು ಕೊಲುವೆನೆನೆ ॥
ಗಳಹತನವಂತಿರಲಿ ಕಾದೆನೆ
ಕೊಲುವೆನೇ ಯತಿಯಾದಿರಲ್ಲಾ
ಕಲಿಗಳಾಗೆವು ಸಾಕು ಯತಿಗಳ ಕೊಂದು ನಾವೆಂದ ॥ ೨೦ ॥

ಹುಳುಕಡಿದ ಹಳೆಬಿಲ್ಲ ಮುರಿದ
ಗ್ಗಳಿಕೆಯಂತಿರಲೆನ್ನ ಬಿಲ್ಲನು
ಹೊಳೆಯದೇರಿಸು ವೀರನಪ್ಪೊಡೆ ನಿನ್ನ ಭುಜಬಲವ ॥
ತಿಳಿವೆನೆನೆ ಕೈ ನೀಡಿ ಚಾಪವ
ಕಳೆದುಕೊಳಲಾ ವೈಷ್ಣವೀರ್ಯದ
ಬಳಿಯಲಾತನ ಶಕ್ತಿ ಬಂದುದು ಮುನಿಪ ಧನುವಿಳುಹೇ ॥ ೨೧ ॥

ಕೊನೆಗೆ ತಿರುವನು ತೊಡಿಸಿ ತೆಗೆದಾ
ಧನುವ ಜೇವಡೆಯಲ್ಕೆ ಕಂಡನು
ಮನದಿ ತಾನೆಂದರಿದು ತಕ್ಕಿಸಿಕೊಂಡ ಹರುಷದಲಿ ॥
ಧನುವನಿತ್ತನು ಜಗವ ಪಾಲಿಸು
ತನಗೆ ತೊಡಕಿಲ್ಲೆನುತ ತೆರಳಿದ
ವನಕೆ ಮುನಿಜನ ಹೊಗಳೆ ಹೂಮಳೆಗರೆಯಲಮರಚಯ ॥ ೨೨ ॥

ತೋಳು ದಣಿವಂತಪ್ಪಿ ಜನಕನು
ಬೀಳುಗೊಂಡನು ಮುಂದೆ ಲಕ್ಷ್ಮೀ
ಲೋಲ ಹೊಕ್ಕನು ಪುರವ ಮಂಗಳದಿಂದ ಸತಿಸಹಿತ ॥
ಸಾಲಮಣಿಮಯಖಚಿತ ರಥ ವಿಳಿ
ದಾಲಯಂಗಳ ಹೊಕ್ಕು ಮಕ್ಕಳ
ಲೀಲೆಗಳ ನೋಡುತ್ತ ದಶರಥನಿದ್ದ ಸುಖದಿಂದ ॥ ೨೩ ॥

ಭರತ ಸೋದರಮಾವ ಕೈಕಯ
ವರ ಯುಧಾಜಿತನೆಡೆಗೆ ತೆರಳಿದ
ಪರಮ ಬಿಲುವಿದ್ಯೆಯನು ಕಲಿಯಲು ತನ್ನನುಜ ಸಹಿತ ॥
ಪುರದೊಳಿತ್ತಲು ರಾಜಕಾರ್ಯವು
ಹೊರೆದುದವಧರಿಸುವುದು ದಶರಥ
ಧರಣಿಪತಿಯೋಲಗವನಿತ್ತನು ಸಕಲ ವಿಭವದಲಿ ॥ ೨೪ ॥

ಅರಸುಗಳ ಹಂತಿಗಳ ಮಾವುತ
ನೆರವಿಗಳ ರಾವುತರ ಸಂದಣಿ
ಪರಮ ಕವಿ ವಿದ್ವಾಂಸ ಗಾಯಕ ವಾತಕರ ಕುಲವ ॥
ಹಿರಿಯಮಾತ್ಯರ ಬಹು ನಿಯೋಗದ
ಕರಣಿಕರ ಕಂಚುಕಿಯ ಸಖಿಯರ
ಕರದ ಸೀಗುರಿ ಮೆರೆಯಲೊಪ್ಪಿತು ರಾಯನೋಲಗವು ॥ ೨೫ ॥

ಹರಿಯಲಂಕೃತನಾಗಿ ತಂದೆಯ
ಹೊರೆಗೆ ಬರಲಾ ನೃಪತಿ ಮೋಹದ
ಸಿರಿಯೆ ಬಾ ಮದಕರಿಯೆ ಬಾ ಎನ್ನರಸ ಬಾಯೆಂದು ॥
ಬರಸೆಳೆದು ಬಿಗಿಯಪ್ಪಿ ಕುಳಿರಿಸಿ
ಗರುವದೇವನನಂಕ ಪೀಠದಿ
ಹರುಷ ಮಿಗೆ ಮುದ್ದಾಡಿ ಬೋಳಯಿಸಿದ ನಿಜಾರ್ಭಕನ ॥ ೨೬ ॥

ನೆರೆದ ಸಭೆಯಲಿ ಧರಣಿಪಾಲಕ
ತರಿಸಿ ಮುಕುರವ ನೋಡಿ ಕೆನ್ನೆಯ
ನರೆಯ ಕಂಡನು ನಾಚಿ ಸಾಕಿನ್ನರಸುತನವೆನಗೆ ॥
ಧರಣಿಪತಿ ಶ್ರೀರಾಮನಾಗಲಿ
ಪುರಕೆ ಪರಿಜನ ನಾಡುಬೀಡಿಗೆ
ಪಿರಿದು ಸಂತಸವೆನಲು ಮಂತ್ರಿಗಳಹುದು ನೀತಿಯೆನೆ ॥ ೨೭ ॥

ಸಿರಿಯೆ ಬಾ ಸಿರಿ ರಾಮ ಬಾ ಮದ
ಕರಿಯೆ ಬಾ ಕಮನೀಯ ಬಾ ಸೀ
ಧರೆಯ ವಲ್ಲಭನಾಗು ಹಳೆಯರ ಕೆಳೆಯರಖಿಳರನು ॥
ಹೊರೆವುತಾನರುವತ್ತು ಸಾವಿರ
ವರುಷ ಸುಖವನು ಸವಿದು ದಣಿದೆನು
ಧರಿಸು ಪಟ್ಟವನೆನುತ ಕೊರಳಪ್ಪಿದನು ಬೋಳಯಿಸಿ ॥ ೨೮ ॥

ತನಗೆ ನಿರ್ಮ್ಮೂಲವೆಂಬ ಭಾಗ್ಯದ
ಘನತೆಯುಳ್ಳಡೆ ಸಾಕು ಹೊರತನು
ನೆನೆಯಲಾಗದು ಘೋರ ನರಕವು ಕೇಳಲೆನಗಹುದು ॥
ಜನಕ ಮಾಣೆನಲಾ ಸುಮಂತನು
ವಿನುತ ಗುರು ಮುನಿ ವಾಮದೇವನು
ಮನವನೊಡಬಡಿಸಿದರು ಸಿದ್ಧಾರ್ಥಾದಿ ಮಂತ್ರಿಗಳು ॥ ೨೯ ॥

ಪರಮ ಶುಭ ಗುರು ಪುಷ್ಯ ನಾಳಿನೆ
ಪುರವು ಗುಡಿತೋರಣದೊಳೊಪ್ಪಿತು
ಅರಸುಮನೆ ಕೈಗೈದುದಾಕ್ಷಣ ದೂರ್ವೆ ದಧಿಗಳನು ॥
ತರಿಸಿದನು ಸಿದ್ಧಾರ್ಥ ನಾನಾ
ವರನದೀಜಲಗಳನು ಡಂಗುರ
ವಿರದೆ ಸಾರಿತು ಕಲಶಕನ್ನಡಿಯೊಪ್ಪೆ ಮನೆಮನೆಗೆ ॥ ೩೦ ॥

ಅರಸುಭವನದ ತೊತ್ತು ಮಂಥರೆ
ಉರದೊಳಿಂಟಲಗುಡಿದ ಪರಿಯಲಿ
ಕೆರಳಿ ಕೈಕೆಯ ಮನೆಗೆ ಹರಿದಳು ಪೂರ್ವವೈರದಲಿ ॥
ಮರುಳೆ ಸುದ್ದಿಯನರಿಯೆ ರಾಮಂ
ಗರಸು ಪಟ್ಟವು ನಾಳೆಯೆಂದರೆ
ಹರುಷ ಮಿಗೆ ಹರಸುತ್ತ ಪದಕವನಿತ್ತಳುತ್ಸವದಿ ॥ ೩೧ ॥

ಅವಳು ಭಾಗ್ಯವ ಬಿಸುಡುವಂದದಿ
ಅವನಿಯಲಿ ಬೀಸಾಟಿ ಪದಕವ
ಬೆವರಿ ಬಳಲುತ ಬಸುರಹೊಯ್ದಳು ಬಯ್ದು ಬಿಸುಸುಯ್ದು ॥
ಯುವತಿ ಸೀನವಿವೇಕಿ ಕಡು ಪಾಳಿ
ದವರನರಿಯಲಾ ಭರತನನು ಕೊಲಿ
ಸುವನು ರಾಮಗೆ ಪಟ್ಟವಾದರೆ ಪಾಪಿ ತಿಳಿಯೆನಲು ॥ ೩೨ ॥

ಮಾರಿಯಲ್ಲಾ ಪಟ್ಟ ರಾಮಗೆ
ಸೇರಿತಾದರೆ ಭರತಗಿರತನ
ನಾರುಬಲ್ಲರು ಸೀರಲದ್ದಿದ ಗೊಂಬೆ ನೀಯೆಂದೆ ॥
ಕ್ರೂರತನ ನೀನರಿಯೆಯೆನೆ ಸುರ
ಭೂರುಹಾಂಕುರ ವಿಷದ ಸಸಿಯೆನೆ
ಬೇರುವರಿದುದು ಮನದೊಳಗೆ ದಾಯಾದ್ಯ ಭಯಬೀಜ ॥ ೩೩ ॥

ಖಳ ತಿಮಿಧ್ವಜನೊಡನೆ ಸಮರವ
ಗೆಲಿದ ಸಮಯದಲಿತ್ತ ವರವನು
ತಿಳಿದು ಬೇಡುವುದಡವಿಗಟ್ಟುವುದವನ ನಿನ್ನವಗೆ ॥
ಇಳೆಯ ಪಟ್ಟವ ಬೇಡುಯೆಂದಾ
ಲಲನೆ ಬೋಧಿಸೆ ಕಪಟದಿಂದವೆ
ತಲೆಯ ನೋವನು ಹೊತ್ತು ಮಂಚದಿ ಮಲಗಿದಳು ರಾಣಿ ॥ ೩೪ ॥

ಹಾಲಕಡಲೊಳಗಕಟ ಹುಟ್ಟದೆ
ಹಾಲಹಲ ಬಾವನ್ನ ಮಥನದ
ಲೇಳದೇ ಶಿಖಿ ಬಡಬನುರಿಯನೆ ಸಲಿಲ ಮಧ್ಯದಲಿ ॥
ಹೇಳಲೇನದನಕಟ ಕೈಕೆ ಸು
ಶೀಲೆ ಮಂಥರೆ ಪಾಪಿಯಿಕ್ಕಿದ
ಕಾಲುತೊಡಕಿನಲಕಟವಳ ಮತಿ ಮರುಳಾಯ್ತು ಮಲಗಿದಳು ॥ ೩೫ ॥

ಹರಿಯ ಕೈಗೈಯೊಲವೊ ನಾಳಿನ
ಲರಸು ರಾಮನ ಬೇಗ ಮಾಡೆನ
ಲಿರುಳಿನೋಲಗ ಹರಿದು ಕೈಕೆಯ ಮನೆಗೆ ನೃಪ ಬಂದ ॥
ಅರಸಿ ದುಗುಡವಿದೇನು ಹೇಳೆನೆ
ನರಳುತಂದೆನಗಿತ್ತ ವರವನು
ಹಿರಿದು ದಿನ ಸೈರಿಸಿದೆನಿಂದೆನಗೀಯಬೇಕೆನಲು ॥ ೩೬ ॥

ವನಿತೆ ಬೇಡಾ ನೀವೆನೆಂದೊಡೆ
ತನಯ ರಾಮನ ಮೇಲೆ ಸೂರುಳು
ಮನದಲಳುಪದವೋಲು ಬೇಡಿದ ವರವ ಕೊಡುವಂತೆ ॥
ಎನಲು ಸತ್ಯವ ಮೀರಲಾರದೆ
ವನಿತೆ ಬೇಡಾನಳುಕದೀವೆನು
ನಿನಗೆ ಬೇಡಿದ ಜನಪ ರಾಮನ ತೇಜದಾಣೆಂದ ॥ ೩೭ ॥

ಬಳಿಕ ಹೇಳುವೆನೇನ ನುಡಿದಳು
ಕಳುಹು ರಾಮನನಡವಿ ಮಧ್ಯಕೆ
ತಲೆಯಲುಸುರುಳ್ಳನ್ನ ಹಣ್ಣನು ಮೆದ್ದು ಸುಖಿಸಿರಲಿ ॥
ಇಳೆಯ ಸಾಮ್ರಾಜ್ಯವನು ಪಟ್ಟವ
ಸಲಿಸು ಭರತಗೆ ಕುಲದ ಸತ್ಯವ
ನುಳುಹಿಕೊಂಬರೆ ಮಾತ ಮನ್ನಿಸುಯೆಂದಳಾ ಕೈಕೆ ॥ ೩೮ ॥

ಎಲೆಗೆ ಶತ್ರುಹ ಭರತ ಲಕ್ಷ್ಮಣ
ರೊಲುವರಲ್ಲೀ ಮತವ ಬಲ್ಲೆನು
ಕುಲಕೆ ಕಲಿಯನು ಬೆರಸದಿರು ಮತ್ತೊಂದ ಬೇಡೆನಲು ॥
ಸಲಿಸಲಾಪರೆಯಿತ್ತ ವರವನು
ಸಲಿಸು ಬೇಡುವಳಲ್ಲ ಮತ್ತೆನೆ
ನೆಲಕೆ ಹರಹಿದ ಮಣ್ಣಬೊಂಬೆಯ ನೀರೊಳಿಟ್ಟಂತೆ ॥ ೩೯ ॥

ಹಸುಳೆಗಕಟಾ ಕೇಡ ತಂದೈ
ವಿಷವ ಕಲಸಿದೆ ಕುಲಕೆ ಸುರತರು
ಸಸಿಗೆ ಕತ್ತಿಯಕೊಂಡೆ ಪಾತಕಿಯೆನುತ ಕಿಬ್ಬಸುರ ॥
ಹೊಸೆದನೆದೆಯೊಳಗಲಗು ಮುರಿದವೊ
ಲೊಸರೆ ಕಂಬನಿ ಬಾಯಬಿಟ್ಟನು
ಶಿಶುವನಗಲಿದ ಬಳಿಕ ನಿನಗಾನುಳಿವನಲ್ಲೆಂದ ॥ ೪೦ ॥

ತನಯ ಶೋಕದಲಸುವಿಯೋಗವು
ತನಗೆ ಮುನಿಗಳ ಶಾಪವುಂಟದು
ನೆನೆವುದೇನಕಟಕಟ ಪಾತಕಿ ಕೈಕೆಯೆನಲವಳು ॥
ಬನಕೆ ರಾಮನ ಕಳುಹಿದಲ್ಲದೆ
ಜನಪ ಮಾತನು ಮಾಣೆಯೆನುತವೆ
ಕನಲಿ ಮೌನವ ಹಿಡಿದನವನಿಪ ಮರುಗಿ ಬಸವಳಿದ ॥ ೪೧ ॥

ಹರಹರಾ ಕಡು ಪಾಪಿ ಕೈಕೆಗೆ
ಕರುಣವಿಲ್ಲಾ ಮಗನ ಕಾಡಿಂ
ಗಿರದೆ ನೂಕೆಂದೆಂಬ ಮಾತಿಗೆ ನೊಂದು ಭೂಪಾಲ ॥
ಕರಗಿ ಕಂಬನಿದುಂಬಿ ಹೊರಳು
ತ್ತುರಿಯುಲಿಟ್ಟೆರಗುಗಳ ಬೊಂಬೆಯು
ಪರಿಯೊಳಿದ್ದನು ಬಂದನುದಯಾಚಲಕೆ ದಿನನಾಥ ॥ ೪೨ ॥

ಇತ್ತ ಪಟ್ಟದ ಸಮಯವೆನುತವೆ
ಬಿತ್ತರಿಸೆ ಪಟ್ಟೋಪಕರಣವ
ಮತ್ತದಂತಿಯ ಸಿಂಗರಿಸಿ ಕೈಗೈದು ಮಂಟಪವ ॥
ಹೊತ್ತ ತಿಳುಹಿದನರಸ ಬಾರನೆ
ನುತ್ತ ಹರಿದ ಸುಮಂತ ನಿದ್ರೆಯು
ಹೊತ್ತು ಲೇಸಾಯ್ತರಸ ಲಗ್ನದ ಸಮಯವೆನುತಿರ್ದ ॥ ೪೩ ॥

ಹಲುವೊರೆದು ಬರಹೇಳು ರಾಮನ
ನೆಲವೊ ಯೆನಲವನವಳ ಮಾತಿಗೆ
ಲಲನೆ ಮೋಹಿತೆಯೆನುತ ಹರಿದನು ರಾಮನಾಲಯಕೆ ॥
ಜಲಜಲೋಚನ ರಾಮಚಂದ್ರನು
ಬಳಸಿನೊಡ್ಡೋಲಗದೊಳಿರುತಿರೆ
ತಲೆಯನೆರಗಿದನೇಳಿ ಪಟ್ಟದ ಸಮಯವಾಯ್ತೆನುತ ॥ ೪೪ ॥

ಸಾಲ ಜಲ್ಲರಿ ಸತ್ತಿಗೆಯ ನಿ
ಸ್ಸಾಳದಬ್ಬರವೊಪ್ಪೆ ದಂತಿಯ
ಮೇಲೆ ಬಂದೋಲಗವನಿತ್ತನು ಭದ್ರಪೀಠದಲಿ ॥
ಕೇಳರಸ ಮಾತುಂಟು ಕೈಕೆಯ
ರಾಲಯಕೆ ಬರಹೇಳ್ದರೆಂದೆನೆ
ಕೇಳಿದಾ ಕ್ಷಣ ಕೈಕೆಯರಮನೆಗೆಂದು ನಡೆತಂದ ॥ ೪೫ ॥

ತಿಳಿಯನಾಕೆಯ ಕಪಟವನು ತ
ನ್ನಿಲಯಕೈದಿದ ಕಂಡನಕಟಾ
ನೆಲಕೆ ಹರಹಿದ ತಂದೆಯಿರವನು ಬೆದರಿ ಕಂಗೆಡುತ ॥
ಎಲೆಯಿದೇನೇನಪ್ಪ ಮೂರ್ಛೆಯ
ತಳೆದನೆನುತವೆ ಹಿಡಿದು ನೆಗಹಿದ
ತಳೆಯ ಕಂಬನಿದೊಡೆದು ಕಂದಿದ ಮೊಗವ ನೋಡಿದನು ॥ ೪೬ ॥

ಕೊರಳು ಮುರಿದುಸುರಡಗಿ ಗಂಟಲ
ಸೆರೆಗಳುಬ್ಬಿರೆ ತನುವ ಮರೆದರೆ
ದೆರದ ಕಣ್ಣಲಿ ಮಗನ ಮುಖವನು ಭೂಸ ನಸುನೋಡೇ ॥
ಅರಗಿಗುರಿ ಮೊಗೆದಂತೆ ಮರುಗುತ
ತಿರುಗಿ ಮಾತೆಯ ನೋಡಲೆಂಪಳು
ಅರಸ ವರವನು ಕೊಟ್ಟು ಹುಸಿದನು ದೈನ್ಯವನು ಪಿಡಿವ ॥ ೪೭ ॥

ನುಡಿದು ಬೊಪ್ಪನು ತಪ್ಪುವನೆ ದಿಟ
ಕೊಡುವೆ ನಾನದನೇನು ಹೇಳೆನೆ
ಕೊಡಿಸು ಭರತಗೆ ಪಟ್ಟವನು ನಾರುಟ್ಟು ಸೀಸೀಗ ॥
ನಡೆವುದಡವಿಗೆ ಕಟ್ಟು ಜಡೆಯನು
ಬಿಡದೆ ಮೆಲುವುದು ಕಂದಮೂಲವ
ಪೊಡವಿಪತಿ ತನಗಿತ್ತ ವರವನು ಪಾಲಿಸುವೊಡೆನಲು ॥ ೪೮ ॥

ಐಸಲೇ ಪಿತನಿತ್ತ ಸತ್ಯದ
ಭಾಷೆ ಸಂದರೆ ಸಾಕು ರಾಜ್ಯದ
ಲಾಸೆತಾನೆನಗಿಲ್ಲ ಸಲಿಸಿದೆ ಭರತಗವನಿಯನು ॥
ಈಸು ಬೇಡಿದ ಬಯಕೆ ನಿಮ್ಮಭಿ
ಲಾಷೆ ಸಹಜದೊಳೀವೆ ಬೊಪ್ಪನ
ವೋಸರಿಸಿ ಬಳಿಕಾವು ನಡೆವೆವು ತಾಯೆ ಕೇಳೆಂದ ॥ ೪೯ ॥

ಕೆಡೆದ ತಂದೆಯ ನೆಗಹಿ ತನ್ನಯ
ತೊಡೆಯಮಲಗಿಸಿಕೊಂಡು ಮುಖವನು
ತಡವಿ ಬಾಯುರಳುತ್ತ ಮನದಲಿ ಬಿಕ್ಕಿ ಬಿರಿ ಬಿರಿದು ॥
ಕೆಡೆದು ಲಕ್ಷ್ಮಣ ಬಾಷ್ಪ ಹಾಯೆಂ
ದೊಡನೆ ಗೋಳಿಡೆ ಹಾವು ಹೇಡಿಯ
ಹಿಡಿದ ಪರಿ ನಾಣ್ನುಡಿಯ ಸಾರಿದ ರಾಮ ತಂದೆಯಲಿ ॥ ೫೦ ॥

ಕೇಳಿ ಸೌಮಿತ್ರಾದ್ಯರಕ್ಕೆಯ
ನಾಲಿಸುತ ಒಳಹೊಕ್ಕು ಕಂಡರು
ಗೋಳುಗುಟ್ಟುತ ಬಿದ್ದರವನಿಗೆ ನೃಪತಿ ಹಾಯೆನುತ ॥
ಸೋಲೆ ಸಂತೈಸುವರ ಕಾಣೆನು
ಹೇಳಲರಿಯೆನು ಶೋಕಗಳ ನೃ
ಪಾಲ ರಾಮನ ಕೈಕೆ ಜರೆದಳು ಮನದ ಕಗೆಯಂತೆ ॥ ೫೧ ॥

ಎಲವೊ ನಾನೀ ತಂದೆಯಿತ್ತುದ
ಸಲಿಸಿ ಕೊಡುವೆನು ಎಂದು ಹಿರಿದನು
ಗಳಹಿದ್ಸೆ ಏನಾಯ್ತು ಜಾರುವರುಂಟೆ ನುಡಿನುಡಿದು ॥
ನೆಲನು ಹೇಸದೆ ಕರುಣದೋರುತ
ಹೊಳೆದುಹೋಹುದನರಿಯೆಯೆಲೆ ಸಾ
ರ್ತೊಲಗು ಮನೆಯೊಳಗಳ್ಕಿ ಬೇಡೆನೆ ನುಡಿದ ಸೌಮಿತ್ರಿ ॥ ೫೨ ॥

ಹಡೆದವಳು ನೀನೆಂದು ಬಗೆದೆವು
ತೊಡಚಿದುದು ಹಸನಾಯಿತಯ್ಯನ
ನುಡಿಸಿ ಮನವನು ತಿಳಿದು ಸಂತಸವೀಯೆ ನಿವಗೆನಲು ॥
ಪೊಡವಿಪಾಲನ ಸತ್ಯದಳವನು
ತುಡುಕಿ ನೋಡಿದೆನ್ಸೈಸೆ ನಿಮ್ಮನು
ಕೆಡಹಿ ಬೂದಿಯ ಹೊಯ್ದಳಲ್ಲಾ ಹೋಗು ಸಾಕೆನಲು ॥ ೫೩ ॥

ಭರತ ನಿನ್ನಯ ಬಸುರಬಂದವ
ಪರರೆ ನಾವೆಲೆ ತಾಯೆಯೆಂದರೆ
ಬೆರಗು ಬೇಡಂಣಂಗೆ ಹಿತನಹೆ ತೊಲಗು ಮುಂದಿರದೆ ॥
ಅರರೆ ಭಾಪುರೆ ಸತ್ಯನಿಧಿಗಳು
ವರ ದಧೀಚಿ ಬಲೀಂದ್ರ ಶಿಬಿಗಳು
ದೊರೆ ಹರಿಶ್ಚಂದ್ರಾದಿ ಭೂಪರು ಸಾರಿ ನೀವೆನಲು ॥ ೫೪ ॥

ಜನನಿ ಜೀಯ್ಯ ಹಸಾದ ನಿಮ್ಮಯ
ಮನಕೆ ಸಂತಸವೀಯೆ ಪೂರ್ವದ
ಲಿನಿಯನಿತ್ತುದ ನಾನು ಪೂರೈಸುವೆನು ಭರತಂಗೆ ॥
ಮನವೊಲಿದು ಸಲಿಸಿದೆನು ಪಟ್ಟವ
ಜನಪ ಪರವಶನಾದ ಮುಪ್ಪಿನ
ತನುವನಾರೈಯೆನುತ ರಾಘವ ಮನೆಯ ಹೊರವಂಟ ॥ ೫೫ ॥

ಎರಗಿ ಕೌಸಲೆಗೆಂದ ಕೈಕೆಗೆ
ವರವನಿತ್ತನು ತಂದೆ ನಾನದ
ನಿರದೆ ಸಲಿಸಿದೆ ಧರೆಯ ಪಟ್ಟವ ತಮ್ಮ ಭರತಂಗೆ ॥
ಸರಿವೆನಡವಿಗೆ ಮರುಗಬೇಡೆನೆ
ತರುಣಿ ಧೊಪ್ಪನೆ ಬಿದ್ದು ಬಾಯ್ಬಿ
ಟ್ಟೊರಲಿ ಗೋಳಿಡಲೆತ್ತಿ ಮಾತೆಯ ಸಂತವಿಸುತಿರ್ದ ॥ ೫೬ ॥

ಅಳಲ ಬೇಡೆಲೆ ತಾಯೆ ವನದಲಿ
ಹಲವು ದಿನವಿರೆ ಬೊಪ್ಪನೆಂದುದ
ಸಲಿಸಬೇಹುದು ಲೋಕ ನಗುವುದು ಸತ್ಯಕೆಡಲಿಹುದು ॥
ಬಳಲಲಾಗದು ಮನದೊಳತ್ತ್ಯ
ಮ್ಮಳಿಸಲಾಗದು ಎಂದು ಕಂಬನಿ
ಕಳೆದು ಚಿಂತಿಸಬೇಡ ಕೇಳೆಲೆ ತಾಯೆ ನೀನೆಂದ ॥ ೫೭ ॥

ಅಡವಿಗೆಂದಾನಿನ್ನ ಕಂದಾ
ಹಡೆದೆನೇ ಮಲದಾಯಿ ಮನೆ ಹೊರ
ವಡಿಸಲೆಂದಾ ನಿನ್ನ ಹೆತ್ತೆನೆ ಚಿತ್ತವಲ್ಲಭನ ॥
ಬಿಡುವಡಾನುರೆ ಪಾಪಿಯಾದೆನು
ಸುಡಲಿ ನಿನ್ನನ್ನಗಲಿ ಜೀವಿಸಿ
ದೊಡಲು ಹಾಯೆನುತಳಲಿ ಬೈದಳು ವಿಧಿಯ ನಿಂದಿಸುತ ॥ ೫೮ ॥

ಕೈಕೆಗವಸಿಪ ಕೂರ್ತು ಮಗನನು
ನೂಕಿಬಿಟ್ಟನೆ ಶಿವ ಶಿವಾ ನೆರೆ
ಸಾಕಿದಾ ಮಗನೆಂದು ಕಡು ಮುನಿಸಿಂದ ಕಾನನಕೆ ॥
ಲೋಕವರಿಯಲು ಹೊರವಡಿಸಿದಳೆ
ಹಾ ಕುಮಾರಕ ನಿನ್ನನಗಲಿ
ನ್ನೇಕೆ ಜೀವನದಾಸೆಯೆನುತವೆ ಹಲುಬಿದಳು ರಾಣಿ ॥ ೫೯ ॥

ಅಳಲಲಾಗದುಯೆಂದು ಹರಿ ಮನ
ದೊಳಗೆ ಖರಖರ ನೊಂದು ಮರುಗುತ
ಹಲವು ಪರಿಯಲಿ ಸಂತವಿಟ್ಟನು ಸತಿಯ ಕೈವಿಡಿದು ॥
ಸಲಹೆ ಕೈಯೆಡೆಗೊಟ್ಟೆನೀಕೆಯ
ಬಳಲಲಳಲದಲೆಮ್ಮ ಪರಿಯಲಿ
ಹಲುಬುವವ್ವೆಯ ಚರಣಸೇವೆಯ ಮಾಡುತಿಹುದೆಂದ ॥ ೬೦ ॥

ಕೊಡಗು ಸಾಗಿರಲೊಬ್ಬ ವಿಪ್ರನು
ಮೃಡನರೂಪನು ಬಂದು ನೋಡಿದ
ನೆಡದ ಕೈಯನು ಫಲವನೆಂದನು ಜನಕನಿದಿರಿನಲಿ ॥
ಅಡವಿಯೊಳಗಿಹಳೆಂದಡಿಂದದು
ಬಿಡದೆ ಗತಿಸಿತ್ತೆನಗೆ ನಿಮ್ಮಡಿ
ಯೊಡನೆ ಬಹೆನಗಲಿರೆನು ದಿಟತಾನೆಂದಳವನಿಸುತೆ ॥ ೬೧ ॥

ಅಲಸದವ್ವೆಯ ಚರಣಸೇವೆಯ
ಬಳಿಯಲಿಹುದೆಲೆ ತಮ್ಮ್ರಯೆಂದರೆ
ನಿಲುವೆನೇ ನಾನಿನ್ನನಗಲಿರೆ ಬೆಸಸಬೇಡೆನಗೆ ॥
ನೆಲನು ಹೋಗಲಿ ತಂದೆಯಳಿಯಲಿ
ಕುಲವು ಕೆಡಲಾ ನಿನ್ನಪಾದದ
ಬಳಿಯಲಿಪ್ಪೆನು ಭೇದ ಬಳಕೆಯ ಮಾತ ಮಾಣೆಂದ ॥ ೬೨ ॥

ಜನನಿ ಸೌಮಿತ್ರಿಯರ ನೇಮವ
ನನುಜ ಪಡೆಯೆನೆ ಹರಿದು ಕೆಡಹಿದ
ತನುವ ಪದದಲಿ ಕೈಕೆಯರ್ತಿಗೆ ರಾಮ ವಧು ಸಹಿತ ॥
ವನವ ಹೊಗುವನು ಕೃತ್ಯವಾವುದು
ತನಗೆ ಬೆಸಸೆನೆ ಬೈದು ಕೈಕೆಯ
ವನಿತೆ ಕಂಬನಿದುಂಬಿ ಕಂದನನಪ್ಪಿ ಹೇಳಿದಳು ॥ ೬೩ ॥

ಸೀತೆಯನು ನನ್ನಂತೆ ರಾಮನ
ಭೂತಳೇಶನವೋಲು ಕಾಂಬುದು
ಮಾತು ಹಲವೇನಣ್ಣ ಒಡಬಡಿಸುವುದು ಹೊಂದುವುದು ॥
ತಾತ ಕೇಳೆನಗೊಲುವನಾದರೆ
ಕಾತರಿಸದೊಡನೈದು ನೀವೆನೆ
ಮಾತೆಯನು ಬೀಳ್ಕೊಂಡು ಬಂದನು ರಾಘವನ ಹೊರೆಗೆ ॥ ೬೪ ॥

ವನಿತೆಯನುಜರ ಸಹಿತ ಕೈಕೆಯ
ಮನೆಗೆ ಬಂದನು ತಂದೆಗೆರಗಿದ
ವನಕೆ ನೇಮವೆಯೆನಲು ಭೂಪತಿಯಳಲಿ ಬಾಯ್ಬಿಡಲು ॥
ಜನಕ ಶೋಕವ ಮಾಣಿ ರವಿಕುಲ
ಕಿನಿತುದಿನ ಹಳಿವಿಲ್ಲ ಕೊಟ್ಟುದ
ಜನಪ ನಿನ್ನಯ ನಾಸು ಪಾಲಿಪೆ ವನಕೆ ಕಳುಹೆಂದ ॥ ೬೫ ॥

ಮಗನ ಮೋಹಕ್ಕಾಗಿ ಸತ್ಯವ
ನುಗುವರೇ ಗತಿಗೆಡದೆ ಪರದಲಿ
ಜಗಕೆ ನಗೆಗೆಡೆಯಹರೆ ಕುಲದಲಿ ಕುಂದ ಬಯಸುವರೆ ॥
ಮಗನನಗಲಿದೆನೆಂದು ಮನದಲಿ
ಬಗೆದು ನೀವುಮ್ಮಳಿಸಲಾಗದು
ಜಗದಪತಿ ಕಾರುಣ್ಯಚಿತ್ತದಿ ಕಳುಹಬೇಕೆಂದ ॥ ೬೬ ॥

ಹಾಗೆ ಹೇಳುವೆನೆಂತು ತನಯನ
ನೇಗುವೆನು ನಾಲಿಗೆಗೆ ಬಾರದು
ತಾಗಿತೆನಗಾ ಚೌಡಲನ ವಧೆಯೆಂದು ಮರುಗುತ್ತ ॥
ಬೇಗೆಯಲಿ ಬೆಂಡಾಗಿ ಹರಣ ವಿ
ಯೋಗ ತನಗಹುದೆನುತ ದಶರಥ
ಮೂಗ ನಂಜನು ಕುಡಿದ ಪರಿ ಮೌನದಲಿ ಮೊರೆಯಿಟ್ಟ ॥ ೬೭ ॥

ಉಸುರದಿಪ್ಪರಸಂಗೆ ಘೂರ್ಮಿಸಿ
ಮಸಿಯ ಮುಸುಡಿನ ಕೈಕೆಯೆಂದಳು
ಬಿಸುಡು ನೀ ಸಿಂಗಾರವೆಲ್ಲವ ನಡವಿಗೈದುವರೆ ॥
ಸಸಿನೆ ನಾರುಡೆಯುಡಿಸು ಅವಳಿಗೆ
ಒಸೆದು ಬಿಜಯಂಗೈವುದೆಂದರೆ
ವಸುಮತೀಶ್ವರನಾಗಲಹುದೆನುತುಡಿಸಿದನು ಸತಿಗೆ ॥ ೬೮ ॥

ನೆನೆದರತಿ ತಾವಾಗತಂಗಳ
ಮುನಿವಸಿಷ್ಠಾದ್ಯಖಿಳಮಾತ್ಯರು
ವನದಲವಧಿಯ ಕಟ್ಟಿಕೊಟ್ಟರು ವರುಷ ಹದಿನಾಲ್ಕು ॥
ಜನಪನನು ಬೀಳ್ಕೊಟ್ಟು ತನ್ನಯ
ಮನೆಗೆ ಬಂದನು ದ್ವಿಜ ಜನಂಗಳ
ಕನಕ ಮಣಿಗೋವಸ್ತ್ರಾದಿ ದಾನದಿ ದಣಿಸಿ ಕೈಮುಗಿವ ॥ ೬೯ ॥

ಕುಂದನೆಣಿಸದೆ ಹರಸುತಿಹುದಾ
ನೆಂದ ಬಿರುನುಡಿಗಳನು ಮರೆವುದು
ತಂದೆಗಳಿರೆನುತಖಿಳಜನ ಪರಿವಾರಕಭಿನಮಿಸಿ ॥
ಸ್ಯಂದನವ ಸೌಮಿತ್ರನಿದಿರಿಗೆ
ತಂದು ಚಾಚಲು ಸತಿಯ ಕೈವಿಡಿ
ದಂದು ರಾಘವನೇರಿ ಲಕ್ಷ್ಮಣಸಹಿತ ಹೊರವಂಟ ॥ ೭೦ ॥

ಪೌರಜನ ಹಾ ರಾಮ ನಮಗಿ
ನ್ನಾರು ಗತಿ ಕಾರುಣ್ಯವಿಲ್ಲಾ
ಘೋರ ದುಃಖದಳೆಮ್ಮನಿರಿಸಿದೆಯೆಂದು ಬಳಿ ಸಲಲು ॥
ಘೋರ ಪಾತಕಿ ಕೈಕೆ ಲೋಕದ
ಮಾರಿಯೆನುತರುವತ್ತು ಸಾವಿರ
ಧಾರುಣೀಸುರವರ್ಗ ಸಕುಟುಂಬದಲಿ ಹೊರವಡಲು ॥ ೭೧ ॥

ತರಣಿ ತಮಸೆಯುಲಸ್ತಮಾನಕೆ
ಸರಿಯೆ ಬೀಡನುಬಿಟ್ಟ ರಾಘವ
ನಿರುಳು ಜನವನು ಕಳೆದು ಗಂಗಾ ನದಿಯತೀರದಲಿ
ಇರಲು ಭಾಸ್ಕರನುದಯವಾದನು
ತರಿಸಿ ನಾವೆಯವರ ನದಿಯನು
ತ್ತರಿಸಿ ಮಂತ್ರಿಯ ಬೀಳುಗೊಟ್ಟನು ಪುರಕೆ ರಾಘವನು ॥ ೭೨ ॥

ಮತಿವಿದನೆ ಕಡುದೂರ ಬಂದೈ
ಪಿತನ ಕಟ್ಟುಮ್ಮಳಿಸಲೀಸದೆ
ಹಿತವನಾಚರಿಸುವುದು ಭರತಗೆ ಸಕಲ ನಾಡಿಂಗೆ ॥
ಸುತರಿಗಳಿವಿಲ್ಲೆನುತ ಜನನಿಯು
ಮತಿಯನಡಿಗಡಿಗೂಡುತಿಪ್ಪುದು
ಹಿತವ ನೀನಹಡಾಣೆ ಬಾರದಿರಿನ್ನು ಮರಳಿಂದ ॥ ೭೩ ॥

ಅಳಲಿ ಬಸವಳಿದಳುತ ಕಂಬನಿ
ಯಿಳಿಯೆ ಸ್ವಾಮಿಯ ತಿರುಗಿ ನೋಡುತ
ಹಲುಬುತವೆ ಹಾ ರಾಮ ಹಾ ಕರುಣಾಳು ಹಾಯೆನುತ ॥
ತಿಳಿದು ಮೆಲ್ಲನೆ ಸರಿದನತ್ತಲು
ಕಲಿ ಕಿರಾತಾಧಿಪನ ಕಳುಹಿದ
ನೆಲವೊ ಭರತನನೋಲಗಿಸುವುದುಯೆಂದ ಸಿರಿರಾಯ ॥ ೭೪ ॥

ಎಲೆ ಸುಲೋಚನೆ ಗಂಗೆ ವನಭಯ
ಗಳೆದು ತನ್ನಯ ರಮಣನೀ ಭೂ
ವಳಯದಲಿ ಹದಿನಾಲ್ಕು ವರುಷವ ಚರಿಸಿ ಸುಖದಿಂದ ॥
ಉಳಿದು ಬಂದರೆ ಲಕ್ಷ ಭೋಜನ
ಗಳನು ಮಾಡಿಸುವೆನು ಮದರ್ಥಿಯ
ಸಲಿಸಬೇಕೆನುತೆರಗಿ ಹರಕೆಯ ಹಿಡಿದಳವನಿಸುತೆ ॥ ೭೫ ॥

ಪೊಡವಿಪತಿ ಹರಿ ಮುಂದೆ ಲಕ್ಷ್ಮಣ
ನಡುವೆ ಮೊಲೆ ಮುಡಿ ಭರಕೆ ಬಳುಕುವ
ಮಡದಿ ಹಿಂಚಕೆ ಬಹಳ ಗಹನದ ವನದಬೈತರಲು ॥
ನಡೆದು ಹಣ್ಣನು ಮೆಲುತ ಸತಿ ನೀ
ರಡಿಸಿ ಬಸಹಳಿಯಲ್ಕೆ ಹರಿ ಮರ
ದಡಿಯ ನೋಡುತ ನಿಂದು ಮರುಗುತ ಹೋಹನಲ್ಲಲ್ಲಿ ॥ ೭೬ ॥

ಒಂದು ದಿನ ಲಕ್ಷ್ಮಣನು ಹಣ್ಣನು
ತಂದು ಕೊಡಲಾ ರಾಮನೆಂದನು
ಕಂದ ಬಾವೊಡನೂಟಕೆಂದರೆ ವನದಿ ಮೆದ್ದೆನೆನೆ ॥
ಅಂದು ಮೊದಲಾಗರಸನೆಂದರೆ
ತಂದೆ ನೇಮವನಿತ್ತೊಡಲ್ಲದೆ
ಮುಂದೆ ಮೆಲುವವನಲ್ಲ ಮನದೊಳಗೆಂದು ನಿಶ್ಚೈಸಿ ॥ ೭೭ ॥

ನಡೆದು ಭಾರದ್ವಾಜನಾಶ್ರಮ
ದೆಡೆಗೆ ಬಂದನದೊಂದು ರಾತ್ರಿಯ
ತಡೆದು ಮುನಿಪತಿ ಬೀಳುಗೊಟ್ಟನು ಪಥವ ಮುಂದರುಹಿ ॥
ಪೊಡವಿ ಪಾಲಕ ಚಿತ್ರಕೂಟದಿ
ಗುಡಿಯ ನಿರ್ಮಿಸಿ ತಮ್ಮ ಗೃಹಿಣಿಯ
ರೊಡನೆ ಪಣ್ಣಾಲದಿಂದ ದಿನಗಳ ಕಳೆವುತಿರುತಿರ್ದ ॥ ೭೮ ॥

---

## ೪ನೆಯ ಸಂಧಿ

ಪಲ್ಲ ॥ ಭರತ ಸಕಲ ಜನೌಘದಿಂದವೆ
ಹರಿಯುನರಸುತ ವನವನೈದಿದ
ವರಪಿತನ ನಿಧನಾವಸರದೊಳು ಮುನಿಪ ಕೇಳೆಂದ ॥

ಪದ ॥ ಹರಿ ಪರಾಯಣರಮಲ ವೈಷ್ಣವ
ಶರಣರಚ್ಯುತನಾಮರುಚಿಗಳು
ಕರುಣಿಗಳು ಕಾಮಾದಿದೂರರು ವಿಗತ ಮತ್ಸರರು ॥
ಹುರುಡು ಮರೆತಾಲಸ್ಯ ನಿದ್ರಾ
ದ್ಯುರುಜರ್ಮ್ಮಾತಕರಲ್ಲದಿಪ್ಪರು
ಘರಿಕಿಸುವುದಾರಣ್ಯ ಕಾಂಡದ ಕಥೆಯ ಬಣ್ಣಿಸುವೆ ॥ ೧ ॥

ಕುಂದುಗಳನಾರೈದು ಸಾಧಿಪ
ಮಂದಮತಿಗಳು ಗುಣವನೀಕ್ಷಿಸ
ದಂಧಕರು ನಾಳ್ಗತೆಯ ನಡೆಸುವ ಪುಣ್ಯಬಾಹಿರರು ॥
ಬೆಂದ ಸಂಸಾರದಲಿ ತೊಳಲುವ
ದಂದುಗರು ಹರಿಭಕ್ತಿಶೂನ್ಯರು
ನಿಂದಕರು ಹೊರವಡಲಿ ಬಣ್ಣಿಪೆ ಹರಿಕಥಾಮೃತವ ॥ ೨ ॥

ಇತ್ತ ಸಾರಥಿ ಪುರವ ಹೊಕ್ಕನು
ಚಿತ್ತದಲಿ ಹಲುಬುತ್ತ ದಶರಥ
ನತ್ತು ಹೇಳು ಸುಮಂತ ಮಕ್ಕಳ ಮೌಳಿ ರಾಘವನ ॥
ಎತ್ತ ನೂಕಿದೆಯೆನಲು ಗಂಗೆಯ
ನುತ್ತರಿಸಿದೆನು ದೇವಯೆಂದರೆ
ಸತ್ತೆ ಹಾಯೆನುತರಸ ಕೆಡೆದನು ಕಂಗಳುರೆ ತಿರುಗಿ ॥ ೩ ॥

ಮಾನಿ ಕೌಸಲೆಯಳುತ ಮುಂದಿರೆ
ದೀನಮುಖಿ ನೀ ಕೇಳು ವಿಪ್ರನ
ಸೂನುವನು ನೆರೆ ಕೊಂದ ಪಾತಕ ಫಲಿಸಿತಿಂದಿನಲಿ ॥
ಹಾನಿಯೆನ್ನಸುವಿಂಗೆ ಬಂದುದು
ನೀನು ಚಿಂತಿಸ ಬೇಡ ದೈವಾ
ಧೀನವೆಲ್ಲವು ಮರುಗಿ ಫಲವೇನೆಂದು ಬಿಸುಸುಯ್ದ ॥ ೪ ॥

ಅಲ್ಲದಿರಲು ವಿವೇಕವಿಲ್ಲದೆ
ಕೊಲ್ಲಲೇಕಿರುಳಲ್ಲಿ ವಿಪ್ರನ
ದೆಲ್ಲಿಗೆಲ್ಲಿಗೆ ಕೂಡಿಬಂದುದು ಕೆಡುವ ಕಾಲದಲಿ ॥
ಒಲ್ಲೆನೆಂದರೆ ಬಿಡದು ತರಹರ
ವಿಲ್ಲದೆಂದನುತರಸ ಥರ ಥರ
ತಲ್ಲಣಿಸುತಡಿಗಡಿಗೆ ನಾರಿಯ ನೋಡಿ ಬಾಯ್ಬಿಟ್ಟ ॥ ೫ ॥

ಆಲಯುವ ಮಧ್ಯದಲಿ ಭೂಮೀ
ಪಾಲ ಧೊಪ್ಪನೆ ಕೆಡೆದನಕಟಾ
ಕಾಲು ಕೈಗಳು ಮುದುರಿ ಕೂಜಿಪೆ ಕಂಠ ಕಳವಳದಿ ॥
ಬೋಳವಿಸುತಿರೆ ಮಂತ್ರಿಗಳು ಗೋ
ನಾಳಿ ಗುರುಗುರಿಸಿತ್ತು ಮೇಗ
ಣ್ಣಾಲಿ ಸೇದಿತು ಬೆದರೆ ಪರಿಜನವರಸ ಮೈಮರೆದ ॥ ೬ ॥

ಪತಿಯು ಮುಸುಕಿದನಾ ಸುಮಂತನು
ಧೃತಿಯುತರ ನೆರೆಗಾಪಲಿರಿಸಿದ
ಸುತರ ಬಳಿಗಟ್ಟಿದನು ದೂತರ ಬೇಗ ಬರಿಸೆನುತ ॥
ಶ್ರುತವೆನಿಸೆ ನೃಪಮರಣ ಮೆಲ್ಲನೆ
ಕೃತಕರಿಗೆ ಪುರ ಸೂರೆವೋಪುದು
ಸತಿಯರುಟ್ಟುದು ಹೋಯ್ತು ಹಣವುಳ್ಳವರು ಹೋಗಿದರು ॥ ೭ ॥

ಹೊಳಲು ಗೋಳಿಡಲಿತ್ತುಗಳ್ಳರು
ಒಳಗೆ ಪಡೆಗಳು ಕನ್ನಗಳ್ಳರ
ಅಳಲು ಮಿಗೆ ಪುರ ಸೂರೆವೋದುದು ಸಕಲ ಜನ ಬೆದರೆ ॥
ಖಳರ ತಿಂಥಿಣಿ ಬೀದಿವರಿದರೆ
ಬಲರು ರಾಜಾಲಯವ ಹೊಕ್ಕರು
ಬಲಿದುದೊಳಗೊಳಗಿರುಳು ಪಾಲಕರಿಲ್ಲದಕಟಕಟಾ ॥ ೮ ॥

ಕೆರಳಿದನು ಸೌಮಂತನಾಪ್ತರ
ಹರಿಯಬಿಟ್ಟನು ಖಳರ ತತ್ತರ
ತರಿದು ಹೆಣಗಳ ಸಾಲುಗೆಡೆವಂದದಲಿ ಕೊಲಿಸಿದನು ॥
ಇರಿಯೊ ಕೊಲುಕೊಲು ಸ್ವಾಮಿದ್ರೋಹರ
ಶಿರವ ಮುರಿ ಮುರಿಯೆನುತ ತಿರುಗಲು
ಸರಿದು ಸೂರೆಗಳಡಗೆ ತಲೆದೋರಿದನು ದಿನನಾಥ ॥ ೯ ॥

ಓಲೆಗಾಣುತ ಭರತ ಮಾವನ
ಬೀಳುಗೊಂಡನು ಬೇಗದಲಿ ಬರ
ಹೇಳು ತಮ್ಮನನೆನುತ ನಾಲ್ಕೈದಾರು ದಿನದೊಳಗೆ ॥
ಹಾಳು ಮೆರೆವಾ ಪುರವ ಹೊಗುತಪೆ
ಕೇಳಿ ಪಿತೃನಿಧನವನು ಪಲುಬುತ
ಗೋಳುಗುಟ್ಟುತ ಬಂದು ಕೈಕೆಯು ಕೇಳಿದನು ಹದನ ॥ ೧೦ ॥

ಹಳಿಯು ವರವನು ಬೇಡಿ ಪಟ್ಟವ
ನುಳುಹಿ ಮಲದಾಯ್ಮಗನನಡವಿಗೆ
ಕಳುಹೆ ರಾಮನ ಹಲುಬಿ ಪ್ರಾಣವನುಳಿದ ನಿಮ್ಮಯ್ಯ ॥
ಇಳೆಯು ರಾಜ್ಯವು ನಿನ್ನದೆಂದೆನೆ
ಯಿಳೆಗೆ ದೊಪ್ಪನೆ ಕೆಡೆದು ಗೋಳಿ
ಟ್ಟಳುತ ಪಾತಕಿ ತನ್ನನಿರಿದೆಯಲಾ ಶಿವಾಯೆಂದ ॥ ೧೧ ॥

ಮರಹನಿಕ್ಕಿಯೆ ಕೊರಳ ಮೇಳೆಯು
ಮುರಿದ ಪರಿ ಶಿಶುವಿಂಗೆ ವಿಷವನು
ಯೆರೆದವೋಲರಗಿಣಿಯು ಮರಿಗುರಿಹೊಯ್ದು ಪರಿಯಂತೆ ||
ಅರಗುಲಿಯು ಬಯ್ಯುತ್ತ ಭರತನು
ಮರುಗಿ ನಡುಮನೆಯಲ್ಲಿ ಗೋಳಿ
ಟ್ಟೊರಗಿರಲು ಶತ್ರುಘ್ನ ಬಂದೊರಲುತ್ತ ನೈಗೆಡೆದ || ೧೨ ||

ಎಲವೊ ಬಸುರನು ಬಡಿವೆಯೇತ
ಕ್ಕಳಲಿ ಬಳಲುವುದೇಕೆ ಧಿಟ ಸೀ
ನುಳಿಯಬೇಕೆಂದಾನು ಮಾಡಿದಡಾಯ್ತು ಹೊಲ್ಲೆಹವು ||
ಮಲ ಮಗನ ನಾನಡವಿಗಟ್ಟಿದೆ
ತಲೆಯು ಬಡಿದಂತಾಯ್ತು ನಿನಗೆನ
ಲಲಗ ಕಿತ್ತನು ಕೊಲುವೆ ಪಾಪಿಯನೆನುತ ಹರಿತಂದ || ೧೩ ||

ಇದುವೆ ಮಾಣೆನುತೋಡಿ ಮನೆಯನು
ಕದವನಿಕ್ಕಲು ಕಂಡು ಬೆದರು
ತ್ತಿದಿರಲೊಬ್ಬರು ಸುಳಿಯಲಮ್ಮದೆ ಕೈಮುಗಿವುತಿರಲು ||
ಇದಕೆ ಸನ್ಮತವಿತ್ತರಾರೆಸೆ
ಸುದತಿ ಮಂಥರೆಯೆನಲು ಹರಿದನು
ವೊದರಿಕುಟ್ಟಿದನಟ್ಟಿ ನೆತ್ತರು ಕಾರಿ ತಲೆ ಕುಸಿಯೆ || ೧೪ ||

ಪಟ ಜನನಿ ಕೌಸಲೆಯ ಮನೆಗಾ
ಭರತ ಡೆಂಡಣಿಸುತ್ತ ಬಂದನು
ಚರಣದಲಿ ಮೈಯಿಕ್ಕಿ ಕೆಡೆದನು ಕರುಣಿಸೆಂದೆನುತ ||
ನರಕಿಗಳು ನಾವವ್ವ ಜಗದೊಳು
ಧರೆಗೆ ಭಾರಕರೆನುತ ಕಂಬನಿ
ಸುರಿಯೆ ಪದದಲಿ ಬಿದ್ದು ಹೊರಳಿದನಳಲು ನೂರ್ಮಡಿನ || ೧೫ ||

ತುಡುಕುವೆನು ಘಟ ಫಣಿಯ ಸೋತರೆ
ಕಡಿಸಿಕೊಂಬೆನು ಅಷ್ಟದಿಗ್ಬಲಿ
ಕೊಡಿಸು ನಾನಪರಾಧಿ ಕೈಕೆಗೆ ಮನಸಸಿತ್ತ ಹರೆ ||
ಒಡೆಯ ರಾಮನ ಪದದ ಬಳಿಯಲಿ
ಪಡಿಗ ಪಾದುಕೆಗಳನು ಹೊತ್ತಿರ
ದಡಕಿ ಚಿತ್ತವಪಡೆವ ತನಗೇಕರಸುತನವೆಂದ || ೧೬ ||

ಘನವೆ ಹೇಳಲೆ ರಾಮ ತಮ್ಮನ
ಮನದ ಮೋಹದೊಳಪ್ಪಿ ಭರತನ
ಮನವ ಹದುಳಿಸೆ ಮಂತ್ರಿಯೊ ಸೌಮಂತ ಮುದುಗುರಿಯೊ ॥
ಜನಪತಿಗೆ ಹೆಸರ ಪ್ರಧಾನನು
ಜನಪನರಿವುಗಳರಿತುಪೇಕ್ಷಿಸಿ
ಯನಗಕೀರ್ತಿಯ ಹರಹಿಕೊಟ್ಟ ಸುಮಂತ ತಾನೆಂದ ॥ ೧೭ ॥

ಸತಿಗೆ ಬೇಡಿದ ಕೊಟ್ಟು ಪೂರ್ವದಿ
ಕ್ಷಿತಿಪನಿತ್ತಪನಾವ ತಡೆವನು
ವಿತತ ಬಯಕೆಗೆ ಠಾವೆ ದಿಗ್ಗಜ ಮುಗ್ಗಲೆನ್ನಳವೆ ॥
ಅತಿಮಥನದೆಡೆಯಲ್ಲಿ ತಡೆದರೆ
ಹಿತವೊ ಮೇಣದಹಿತವೊ ಕಾಡಿಗೆ
ಸುತರನಟ್ಟಿದ ಪಾಪಿ ತಾಯೇ ಕೆಡಿಸಿದ್ಯೆಯೆಂದ ॥ ೧೮ ॥

ಹಿರಿಯರಿರೆ ಕಿರಿಯಂಗೆ ಪಟ್ಟವೆ
ಕೊರೆದಳಕಟಾ ಹಿಚುಕಿ ಕೊರಳನು
ವರುಷವರುವತ್ತಾದವನ ಮುದುಮಾತ ಕೇಳುವರೆ ॥
ವರುಷವರುವತ್ತಾಗೆ ಲಕ್ಷ್ಮದ
ಹೊರಗೆ ಮಂತ್ರಿಯ ಮಾಡಿ ಕಡೆಯಲಿ
ಮರುಗಿ ಫಲವೇನೆಂದು ಭರತನು ಹಿರಿದು ಹಲುಬಿದನು ॥ ೧೯ ॥

ಪತಿಯ ಸತ್ಯಕೆ ತಪ್ಪುವುದು ಸ
ದ್ಗತಿಯೆ ಸೇವಕರಿಂಗೆಯೆಂದಿರ
ಲಿತರದಾಗತಿಯಾಯ್ತು ದೈವದಲೆನೆ ಸುಮಂತ್ರಂಗೆ ॥
ಪತಿಯ ಕಗ್ಗೊಲೆಗೊಲಿದೆ ಕೌಸಲಿ
ಸುತರ ನೀ ಹುಲಿಕರಡಿಗಿಕ್ಕಿದೆ
ಹಿತವೆ ಕೈಕೆಗೆ ಕುಲವ ಕೂಗಿದೆಯೆಂದನಾ ಭರತ ॥ ೨೦ ॥

ಹಿರಿಯನಬ್ಬೆಯ ನೆಚ್ಚಿ ಕೊಗಳನು
ಕೊರೆಸಿಕೊಂಡಂತಾಯ್ತು ಪಾತಕಿ
ಯಿರಿದಳೋ ಆಳಿಯಾಸೆಗೊಕ್ಕಳೊ ವರವನಕಟಕಟ ॥
ತರಣಿಕುಲ ಬರಿದಾಯ್ತು ಮಿಟುಕಲು
ನೆರೆಯದೆನುತವೆ ಬಾಯ ಹೊಯಿಹೊಯಿ
ದೊರಲಿ ಹುಡಿಯಲಿ ಹೊರಳಿ ಸಾಯಲು ಬಗೆದನಾ ಭರತ ॥ ೨೧ ॥

ಮುನಿ ವಸಿಷ್ಠಾದಿಗಳು ಬೋಧಿಸಿ
ಮನವ ಹದುಳಿಸೆ ಭರತದೇವನು
ಜನಕ ಶವವನು ತಪ್ತತೈಲದಿ ಲೇಪಿಸಿರೆ ತೆಗೆದು ॥
ಮುನಿಮತದಿ ಸಂಸ್ಕರಿಸಿ ಮೂವರು
ಜನನಿಯರ ನಿಲಿಸಿದನು ಮಿಕ್ಕಿನ
ವನಿತೆಯರು ನಾನೂರ್ವರನಲನ ಹೊಗಲು ನೃಪನೊಡನೆ ॥ ೨೨ ॥

ನೆನೆದನೂರ್ಧ್ವಕ್ರಿಯೆಯ ದಾನದಿ
ಜನರನುರೆದಣಿಸಿದನು ಹರಿಪದ
ವನಜವನು ಕಂಡಲ್ಲದುಣ್ಣೆನು ಅರಸುತನದಲ್ಲಿ ॥
ತನಗೆ ಮನವಿನಿತಿಲ್ಲ ರಾಮನ
ನೆನೆವ ಕಿಂಕರರಾಳು ತಾನೆಂ
ದೆನುತ ಮಂತ್ರಿಗೆ ನುಡಿದು ಭರತನು ಪುರವ ಹೊರವಂಟ ॥ ೨೩ ॥

ಮರೆದರಿದು ಪುರದೊಳಗೆ ನಿಂತರ
ನರಿಸುವೆನು ದ್ವಿಜರೆಂದು ನೋಡೆನು
ಬರಲಿ ಕೌಸಲೆಯವ್ವೆಯರು ಮೊದಲಾಗಿ ಕಾನನಕೆ ॥
ಹೊರವಡಲಿ ಸುದತಿಯರು ಸುಮ್ಮನೆ
ಮುರುಕಿಸಲು ಹಿಡಿತರಿಸಿ ಬಾಯನು
ಹರಿಯೆ ಹೊಯ್ಯುವೆ ಭಜಿಸಲ್ಕೆತಹುದೆಂದನಾ ಭರತ ॥ ೨೪ ॥

ಜನಪನಾಜ್ಞೆಗೆ ಬೆದರಿ ಪುರಜನ
ಮನೆಗಳನು ಹೊರವಂಟು ಬಂದರು
ತನತನಗೆ ಪರಿವಾರ ಮಾವುತ ರಥಿಕ ರಾವುತರು ॥
ವನಿತೆಯರು ಬಾಲಕರು ವೃದ್ಧರು
ಮುನಿಗಳಾರ್ಯರು ವೃತ್ತಿಗಡಣವು
ಬನಕೆ ಹೊರವಡಲಗುಸೆ ಬಿರಿದುದಯೋಧ್ಯೆ ಮರುಗಿದುದು ॥ ೨೫ ॥

ಹಿರಿಯರಸಿ ಕೌಸಲೆಗೆ ದಂಡಿಗೆ
ಭರತನವ್ವೆ ಸುಮಿತ್ರೆಯರು ವ
ಜ್ರರದ ಬಂಡಿಯನೇರೆ ಬರಿಗಾಲಿಂದ ನಡೆವುತ್ತ ॥
ಭರತ ಶತ್ರುಹರಕಟ ತಮಸೆಯ
ಲಿರದೆ ಗಂಗೆಯನುತ್ತರಿಸಿದಗು
ಹರಿಯ ಕೇಳುತ ಬಂದ ಭಾರದ್ವಾಜನಾಶ್ರಮಕೆ . ॥ ೨೬ ॥

ಎರಗಲಪ್ಪಿದ ಕುಶಲ ಕೇಳುತ
ತೆರಹು ನಿಮ್ಮೊಳಗಾಯ್ತಲಾ ಹಾ
ನೆರವನುಳಿದ್ಯೆತಂದೆಯೆನೆ ಗುರು ಮತಕೆ ಪಡೆಸುತ ॥
ಬರಲು ತಪ್ಪಹುಹೆಂದು ದೂರದ
ಲಿರಿಸಿ ದರುಶನವಾಗ ಬಂದೆನು
ಚರಣ ಕಮಲವನೆನಲು ಲೇಸಾಯ್ತೆಂದನಾ ಮುನಿಪ ॥ ೨೭ ॥

ಜನಪ ನಿನ್ನನು ಕಾಣಲರಿದ್ಯೆ
ಸನಕಕಪಿಲಾದಿಗಳ ಹೋಲೆನು
ಮನಕೆ ಬಹಡೆನಗೊಲುವೆಯಾದರೆ ಬೇಡ ಬಿಡಿಸೆನಲು ॥
ಮುನಿಯ ಮನೆಯನು ಕೋಟಿಸುತ್ತೆನೆ
ಜನಪ ಬಿಡಿಸಿದನಾಗ ಸುರಭಿಯು
ನೆನೆದು ನೃಪಸೇನೆಯನು ದಣಿಸಿದ ನಿರುಪಮಾನ್ನದಲಿ ॥ ೨೮ ॥

ಮುನಿ ಭರತ ಶತ್ರುಹರನಿಬ್ಬರ
ನನುವರಿತು ಪರಿಣಮಿಸಿ ಕಾಡದೆ
ಮನದಿ ಹರಸುತ ಬೀಳುಗೊಡೆ ಮಂದಾಕಿನೀ ನದಿಯ ॥
ನೆನೆದು ದಾಂಟಿತು ಸೇನೆ ಸಹಿತವೆ
ಬನದೊಳಣ್ಣನನರಸುತ್ತೈದಲು
ಜನದ ಕಳಕಳ ಕೇಳಿ ಲಕ್ಷ್ಮಣನೆಂದನರಸಂಗೆ ॥ ೨೯ ॥

ಅನುಜನೊಳ್ಳಿದನೆಂಬೆ ಕೈಕಾ
ಜನನಿ ಬೆನ್ನಲಿ ಕೊಲಲು ಕಳುಹಿದ
ಳೆನಲು ತಮ್ಮನ ಜರೆದು ಕೊಲಲೆಂದೆನುತ ತಾ ಪಿಡಿದ ॥
ಧನುವನವನಿಗೆ ಬಿಸುಟು ನಿಂತಿರೆ
ಅನುಜ ರಾಮನ ಕಂಡು ಖಗಮ್ಮಾಗ
ವನದ ತರು ಲತೆ ಮರುಗೆ ಬಾಯ್ಬಿಟ್ಟೊರಲುತ್ತೈತಂದ ॥ ೩೦ ॥

ಗಿರಿ ಜರಿದು ಬೀಳ್ವಂತೆ ದಿಗ್ಗಜ
ವೊರಲುವಂದದಿ ಬಿದ್ದು ಚರಣದಿ
ಹೊರಳಿ ಗೋಳಿಟ್ಟೆಳುವ ತಮ್ಮನ ತೆಗೆದು ಬಿಗಿಯಪ್ಪಿ ॥
ಹರಿ ಮೊಗವ ನೋಡುತ್ತ ಬೊಪ್ಪನ
ವರಿಗೆ ಸುಖವೇ ಧರೆಸುಭಿಕ್ಷವೆ
ನೆರೆದನಾಡಳವಟ್ಟುದೇ ಖಳರಿಲ್ಲಲಾಯೆಂದ ॥ ೩೧ ॥

ಕೊಡೆಯುವಗೆ ಪಡಿ ಕೊಡೆಯೆ ಹರಿ ನಿ
ಮ್ಮಡಿಯನೋಲಗಿಸುವಗೆ ರಾಜ್ಯವ
ಕೊಡುವರೇ ಜನನಾಥ ಮಡಿದನೆನಲ್ಕೆ ರಾಘವನ ॥
ಒಡಲನುಚ್ಚಳಿಸಿತ್ತು ಶೋಕವು
ಕೆಡೆದ ಭರತನ ಮೇಲೆ ಧೊಪ್ಪನೆ
ಪಡಿಮೊಗದಲೊದರಿದನು ಹಾಯೆನುತರಸ ಬಸವಳಿದ ॥ ೩೧ ॥

ಬಂದುದಾ ತಳತಂತ್ರ ಶತ್ರುಹ
ಬಂದು ಗೋಳಿಟ್ಟಳುತ ಬಿದ್ದನು
ಕಂದನನು ತೆಗೆದಪ್ಪಿ ಕೌಸಲೆ ಕಂಬನಿಯ ತೊಡೆದು ॥
ನೊಂದು ಸುಯ್ದಳಲುತಿರೆ ಪರಿಜನ
ವೃಂದವಾ ಪರಿವಾರವಮಾತ್ಯರು
ಬೆಂದವೆನುತವೆ ನೃಪನ ಬಣ್ಣಿಸಿ ಹಳವಿಸುತ್ತಿರಲು ॥ ೩೨ ॥

ಆರು ನಿಲಿಸುವರಕಟ ಧೈರ್ಯವ
ದಾರಿಗುಂಟೆನಲಾ ವಸಿಷ್ಠನು
ಸಾರ ಸಂಗತಿಗಳನು ತಿಳುಹಿದನುಚಿತ ವಚನದಲಿ ॥
ಧೀರ ಮಂದಾಕಿನಿಯ ಜಲದಲಿ
ನೀರಿಳಿದು ಫಲಕಂದಮೂಲದಿ
ಧಾರಿಣೀಶಗೆ ಪಿಂಡವಿಟ್ಟನಶೌಚವನು ಕಳೆದ ॥ ೩೪ ॥

ವನನಿವಾಸವು ಸಾಕು ರಾಜ್ಯವು
ನಿನಗೆ ಸಂತೈಸೆನಲು ಭರತನು
ಜನನಿಗಿತ್ತುದ ಮೀರಲಾಗದು ಬಾರೆ ನಾನೆನಲು ॥
ಜನನಿಯುತ್ತರ್ಯ ನಾನು ಸಲಿಸುವೆ
ವನದಿ ನಿಮ್ಮಂತೆನಲು ಕೇಳೆಲೆ
ಅನುಜ ನಾವಿರೆ ನಿನಗದೆಂತಧಿಕಾರ ಹೇಳೆಂದ ॥ ೩೫ ॥

ಎನಗೆ ಗತಿಯಂತಾದಡೇನೆನೆ
ದಿನದವಧಿ ಪರಿಯಂತ ರಾಜ್ಯವ
ನಿನಗೆ ಸಲಿಸಿದೆನೆಂಬ ಮಾತನು ಕೇಳಿ ಭರತಾಂಕ ॥
ಇನಕುಲೇಶ್ವರ ಕೇಳು ರಾಜ್ಯವಿ
ದೆನಗೆ ಜನಕಜೆಯರ ಸಮಾನವು
ಅನುಭವಿಸಿದರೆ ದೇವರಂಘ್ರಿಗಳಾಣೆ ತನಗೆಂದ ॥ ೩೬ ॥

ನೆರೆದ ಜನ ಹಾಯೆಂದುದರಸನು
ಹಿರಿದು ಮೋಹದಲಪ್ಪಿ ತಮ್ಮನ
ಹರಸಿ ಮಾತೆಗೆ ಕೊಟ್ಟ ಭಾಷೆಯ ಸಲಿಸಬೇಕೆನಲು ॥
ಅರಸ ಬಿನ್ನಪ ವರುಷ ಹದಿನಾ
ಲ್ಕರಲಿ ಮುಂದರೆಘಳಿಗೆ ತಡೆದರೆ
ಉರಿಯೊಳಹೆನೆನಲಸ್ತು ಸಲಿಸಿದೆನೆಂದ ಸಿರಿರಾಮ ॥ ೩೭ ॥

ಉಡುಗೆಯನು ನಾರಿಂದ ರಚಿಸಿದ
ಜಡೆಯ ಕಟ್ಟಿದನಣ್ಣನಂದದಿ
ತೊಡೆದು ಭಸಿತಾಭರಣನಾದನು ಭರತ ನಿಜ ಪುರದ ॥
ಬಡಗ ನಂದೀಗ್ರಾಮದಲ್ಲಿಹೆ
ನೊಡೆಯನೀ ಬಪ್ಪನ್ನವರಯೆನೆ
ಪೊಡವಿಪತಿ ಪಾದುಕೆಯನಿತ್ತನು ಹರಸಿ ಬೀಳ್ಕೊಂಡ ॥ ೩೮ ॥

ಭರತ ತೆರಳಲು ಜನನಿ ಕೌಸಲೆ
ಯರನು ಕಿರಿದೆಡೆ ಕಳುಹಿ ಮರಳಿದ
ನರಸ ರಾಘವ ಸೀತೆಲಕ್ಷ್ಮಣರೊಡನೆ ದೈನ್ಯದಲಿ ॥
ಸರಿದು ಪರಿಜನ ದೂರಹೋಗಲು
ಮರದ ನೆರಳನು ಸಾರ್ದು ಕುಳ್ಳಿ
ರ್ದರಸ ದೈವಾಧೀನವೀ ಸಂಸಾರ ಸುಖವೆಂದ ॥ ೩೯ ॥

ಹಲವು ದಿನಗಳನಲ್ಲಿ ರಾಘವ
ಕಳೆದು ಮಂದಾಕಿನಿಯ ತೀರದಿ
ಮೆಲಲು ತನಿವಣ್ಣುಂಟು ಸಲಿಲವು ಸೇವ್ಯವಲಸಿದರೆ ॥
ಹಲವು ಮುನಿಗಳ ಗೋಷ್ಠಿಯುಂಟಾ
ನೆಳಲು ತಪ್ಪಲು ಪುಷ್ಪ ಗಂಧವು
ನಿಳಯವನು ಮರೆಸಿತ್ತಯೋಧಿಯನಾ ವನಾಂತರವು ॥ ೪೦ ॥

ಅವನಿಜೆಯ ಮೃದು ತೊಡೆಯಲೊರಗಿ
ದ್ದವನಿಪತಿ ನಿದ್ದೆಯನು ತಾಳಿರೆ
ಯುವತಿ ಮೇಲುದು ತೆರೆದ ಸಮಯದಿ ವಾಯಸಾಸುರನು ॥
ಅವಿರಳ ಸ್ತನಗಳನು ಸೋಂಕುವ
ತವಕದಲಿ ಬಂದೆದೆಯನೊದೆಯಲು
ಶಿವ ಶಿವೆನುತವೆ ಸೀತೆ ಬೆದರಲು ರಾಮ ಕಣ್ದೆರೆದ ॥ ೪೧ ॥

ಉರದ ಮುಸೆಯನು ಕಂಡು ರಾಘವ
ಕೆರಳಿ ಕಡ್ಡಿಯನಿಟ್ಟೊಡಸುರನ
ನುರಿ ಭಡಾಳಿಸಿ ಹಬ್ಬಿ ಬೆಂಬಳಿಯಟ್ಟಿ ಸೂಠಿಯಲಿ ॥
ಸರಳುರಿಗೆ ತಲೆಬೆಂದು ಗರಿಸೀ
ದರರೆ ಕರಿಕೋದದ್ರಿಯಂದದಿ
ತಿರುಗಿದನು ಹಿಂದಿಕ್ಕಿಕೊಂಬನನರಸಿ ಮೂಜಗವ ॥ ೪೨ ॥

ಹರನು ಹರಸಿದ ಸರಸಿಜಾಸನ
ಕರವ ಮುಗಿದನು ಸುರಪನೆರಗಿದ
ವರುಣ ಶರಣೆನೆ ವಾಯು ತೆರವಾದನು ಧನೇಶ್ವರನು ॥
ಮರುಳುಗೊಳಿಸಿದ ನಿರುತಿವೋಡಿದ
ಮರಳಿ ಕಾಮುಕ ಮರುಗಿ ಕಾಯೋ
ಹರಿಯೆ ಕರುಣಿಪುದೆನಗೆನುತ್ತವೆ ವೊರೆದು ಖಳ ನುಡಿದ ॥ ೪೩ ॥

ಕರುಣಿಸಾನಪರಾಧಿ ಕರುಣಾ
ಶರಧಿ ನೀನೆಂದೆನುತ ಪದದಲಿ
ಹೊರಳಿ ಹಗೆಗಳ ಕೊಲರು ಮರೆಹೊಗೆ ಮರಳಿ ರಕ್ಷಿಪರು ॥
ಅರಸು ನೀನು ಸಮರ್ಥ ನಿನ್ನನು
ಶರಣುವೊಕ್ಕೆನು ಕೊಲ್ಲು ಕಾಯೆನೆ
ಸಿರಿಮನೋಹರ ನಗುತ ಸರಳಿಗೆ ಗುರಿಯ ನೀಡೆಂದಾ ॥ ೪೪ ॥

ಗುರಿಯನಿತ್ತೆನು ನಯನವೊಂದನು
ಹರಣ ದಾನವನೀಯ ಬೇಕೆನೆ
ಉರಿದುಕೊಳ್ಳುತ ಹೊಟ್ಟೆಹಾರಿತು ದೇವ ಕರುಣಿಸಿದ ॥
ಎರಡು ಕಡೆಗೊಂದಕ್ಷಿ ಕಾಣುತ
ಬರಲಿಯೆಂದಭಯವನು ಕರುಣಿಸಿ
ಕರವ ಬೀಸಲು ಬಾಳು ಬದುಕಿದೆನೆಂದು ಖಳ ಹೋದ ॥ ೪೫ ॥

ಆಸುರ ಖಗ ಚಂಡಾಲ ಸೋಂಕಿದ
ಬಿಸುರುಹಾಕ್ಷಿಯನೆನಲು ಮುನಿಗಳು
ಬೆಸಸಿದರು ಬಹುತೀರ್ಥಸೇಚನದಿಂದ ಶಾಂತಿಯನು ॥
ವಸುಮತೀಶ್ವರ ಕೇಳಿ ವಿಂಧ್ಯವ
ನುಸುಳಿ ತದ್ವಿಧನಾಗಿ ಚರಿಸುತ
ಹೆಸರ ತೀರ್ಥವ ಮೀವುತ್ತೈತರಲಡವಿ ಮಧ್ಯದಲಿ ॥ ೪೬ ॥

ಅಸುರನೊಬ್ಬ ವಿರಾಧನೆಂಬವ
ಬಿಸಜವದನೆಯ ಕಂಡು ಕಾಮಿಸಿ
ಕುಸುಮಶರದಲಿ ನೊಂದು ಹಿಂದಿಹ ರಮೆಯ ಕೈದುಡುಕಿ ॥
ಹುಸಿಕನಂಬರಕುಗಿದು ನೆಗೆದನು
ದೆಸೆಗೆ ಬಾಯ್ಬಿಟ್ಟೊರಲೆ ಭೂಸುತೆ
ಯೊಸರುಗಂಬನಿಯಿಂದ ಗೋಳಿಡುತಿರಲು ಹರಿಕಂಡ ॥ ೪೭ ॥

ಕರೆವವಳನಂಬರದಿ ಕಾಣುತ
ತರುಣಿ ಹಾಯೆನಲಾಗ ಧನುವಿಗೆ
ತಿರುವನೇರಿಸಿ ಭೈರವಾಸ್ತ್ರವ ತೆಗೆದು ಹರಿಯಿಸಲು ॥
ಉರವನುಚ್ಚಳಿಸಿತ್ತು ದಾನವ
ಧರೆಗೆ ಗಿರಿ ಕೆಡೆದಂತೆ ಬಿದ್ದನು
ಸಿರಿಯ ಹಿಡಿದನು ದೇವಿ ಬೆದರದಿರೆನುತ ಹರಿತಂದು ॥ ೪೮ ॥

ಹರಿಯ ಕರಸೋಂಕಿಂದ ಶಾಪವು
ಸರಿಯೆ ತುಂಬುರು ದಿವ್ಯ ರೂಪವ
ಧರಿಸಿ ಹರಿ ಶರಣೆನುತ ಪದದಲಿ ಬಿದ್ದು ಕೈಮುಗಿದ ॥
ವರುಷವಾಯ್ತಿರುವತ್ತು ಸಾವಿರ
ವರಧನಪ ಶಾಪದಲಿ ಬೆಂದೆನು
ಕರುಣಿಸೆನಗಾಂ ಧನ್ಯನಾದೆನು ನೇಮವೇಯೆಂದ ॥ ೪೯ ॥

ಕಳುಹಿದನು ಸುರಮುನಿಯು ಸಖನನು
ನೆಲಮಗಳ ಸಹಿತತ್ರಿಯಾಶ್ರಮ
ದೊಳಗೆ ದಿನಗಳ ಕಳೆದು ಕಳುಹಿಸಿಕೊಂಡು ಶರಭಂಗ ॥
ನಿಳಯಕೈದಿದನವನ ಬಳಿಯಲಿ
ತಿಳಿವುತಿರ್ದನು ಧರ್ಮಸಾರವ
ಹಲವು ಋತುಗಳ ಕಳೆದುದಾಯಿತು ಮುನಿಯ ಸೇವೆಯಲಿ ॥ ೫೦ ॥

ಇರಲು ತದ್ವಾಸಕ್ಕೆ ಕಳುಹಿದ
ಸುರಪನಿಷುಧಿಯ ಮರ್ಮ ಚಾಪವ
ಧರಣಿಪಾಲಗೆ ಮುನಿಸಮಕ್ಷದಿ ಕಾಣಿಕೆಯನಿತ್ತು ॥
ಸುರಪ ಮಂತ್ರಿ ವಟು ಸ್ವರೂಪದಿ
ಹರಸಲನುಕರಿಸಿದನು ಮುನಿಪನ
ಚರಣಯುಗಳಕೆ ನಮಿಸಿ ನಡೆದನಗಸ್ತ್ಯನಾಶ್ರಮಕೆ ॥ ೫೧ ॥

ಕಳೆದು ಮಳೆಗಾಲವನು ಮುನಿಪತಿ
ಯಿಳಿಯೆ ಗೋದಾವರಿಯ ತೀರಕೆ
ಜಲಜಲೋಚನ ಬರುತ ಬಟ್ಟೆಯಲರುಣತನಯನಲಿ ॥
ಬಲಿದು ಸಖ್ಯವ ದಂಡಕಾಟವಿ
ಯೊಳಗೆ ಪಂಚವಟಿಗೆ ಹರಿತರಲು
ಉಳಿದುವಿಪ್ಪತ್ತೇಳು ಋತುಗಳು ಕಟ್ಟೆದನವಧಿಯಲಿ ॥ ೫೨ ॥

ಕಮಲಭವ ಲಕ್ಷ್ಮೀಶ ಸೀತಾ
ರಮಣನಾ ವನದಲ್ಲಿ ಸುಖದಲಿ
ಯಮಸಮಾಧಿಗಳಿಂದ ಮುನಿಗಳ ಶಾಸ್ತ್ರಗೋಷ್ಠಿಯಲಿ ॥
ಹಿಮಮಯೂಖಸುವರೌಳಿಯಂಘ್ರಿಗೆ
ನಮಿತಕಂಧರನಾಗುತಖಿಲಾ
ನಿಮಿಷ ವಂದ್ಯನು ಕಂದಮೂಲಾಹಾರಪರನಿರ್ದ ॥ ೫೩ ॥

---

## ೫ನೇ ಸಂಧಿ

ಪಲ್ಲ ॥ ಮುಳಿದ ಮಲ್ಲರ ಮಾರಿ ರಾಘವ
ನಳಿನನಯನ ಮುಕುಂದ ನರಹರಿ
ಖಳರ ನೆರೆ ಸಂಹರಿಸತೊಡಗಿದನಸುರರಾಯೆನಲು ॥

ಪದ ॥ ನರರ ಧಾವತಿಯಲಾ ನರ
ಹರಿ ನೃಜನ್ಮದಲೊಗೆದನೋ ಮುನಿ
ವರರ ಬಳಲಿಕೆ ಕಳೆಯೆ ಕರುಣಾನಿಧಿ ವನಾಂತರಕೆ ॥
ಸರಿದು ಜಡೆ ರುದ್ರಾಕ್ಷೆದೊಟ್ಟನೊ
ಸಿರಿ ವಿಭೂತಿಯ ಸೀತೆ ಗಿರಿಜೆಯೊ
ಧರಣಿಶಂಕರನಾದನೋ ಹರಿ ಪರ್ಣಶಾಲೆಯಲಿ ॥ ೧ ॥

ಒಂದುದಿನ ಯಕ್ಷೇಶ ಕಾನನ
ದಂದವನು ನೋಡಲು ಶರಾಸನ
ದಿಂದಮುಂದತ್ತಿತ್ತ ತಿರುಗಿದ ಗಹನ ಮಧ್ಯದಲಿ ॥
ಹಂದಿ ಹರಿಣಾದಿಗಳ ಕೆಡಹುತ
ಗೊಂದಣದ ಮೃಗದಿಕ್ಕೆಯಿರಿಯುತ
ಬಂದ ಖಳ ಶಂಭುಕನು ತಪಸಿಯ ಕಾನನಾಂತರಕೆ ॥ ೨ ॥

ದನುಜ ಯಕ್ಷನ ಮೇಲೆ ಧಾಳಿಡ
ಲನಿಮಿಷಾರಿಯು ಬಲವನೆಲ್ಲವ
ಮುನಿದು ಸದೆದೆಡಹಾಯ್ದು ಹಿಡಿದನು ಶಂಭುಕನ ಮುಡಿಯ ॥
ಮೊನೆಯ ಕೂರಲಗಿನಲಿ ಬಾಚಿದ
ಬಿನುಗುವುರದಲಿ ಮೆರೆಸಿ ಬಳಿಕಾ
ತನನು ಬಿಟ್ಟನು ಪ್ರಾಣದಾನವ ಬೇಡಿದರೆ ಧನಪ ॥ ೩ ॥

ಶೂರನುಕ್ಕಿನ ದಬ್ಬಣದಿ ತಲೆ
ಯೂರಿನಿಂದನು ಮೇಲೆ ಚರಣದಿ
ಹೇರಿದನು ಬಲು ಗಿರಿಯ ಕಾಯದ ಕಡುನಿರೋಧದಲಿ ॥
ತೂರಿದನು ತುಡುಕಿದನು ತುರ್ಯವ
ಮೀರಿದಭವನ ಸಂಧಿವಿಡಿದನು
ಧೀರಹೃದಯದಿ ಘೋರತಪದಲನಂತ ಕಾಲವಿರೆ ॥ ೪ ॥

ಮರೆದನಾತನು ಮನೆಯಮಕ್ಕಳ
ತೊರೆದನಾಹಾರವನು ಕೋಪದಿ
ಕರೆಗೊರಳ ಶಂಕರನ ಭಜಿಸಿದ ಧನಪವೈರದಲಿ ॥
ಒರಲೆಗುಡಿಗುಟ್ಟಿದವು ಮೈಯಲಿ
ಮರೆದನಾಸುರನುಗ್ರತಪದಲಿ
ತೊರೆದನಾತನು ಜೀವದಾಸೆಯ ಧನಪನದನರಿತ ॥ ೫ ॥

ಇರಿಸಿ ನಿಜಕೈದುವನು ಹುತ್ತಿನ
ಹೊರೆಯಲೊದರುತ ಹೊದರುಗಣ್ಣಲಿ
ತಿರುಗಿನೋಡುತ ಸೊಪ್ಪುನಿಡಿದಡಿಗಡಿಗೆ ಲಕ್ಷ್ಮಣನ ॥
ಹರಿಣಕೇಳಿಯ ಕಂಡು ಸುಡುಸುಡು
ಮರುಳೆ ರಕ್ಕಸ ತಿಂಬ ನೋಡೆನೆ
ಮರುಳು ಥಾರುವ ತೋರು ರಕ್ಕಸನೆಲ್ಲಿ ತೋರೆನಲು ॥ ೬ ॥

ಮುಳ್ಳಮುಳ್ಳಲಿ ತೆಗೆಯಬೇಕೆಂದು
ಪೊಳ್ಳತಾಯಿತು ನೀತಿಯೆನುತಾ
ಕಳ್ಳ ಹಾರುವ ಕಪಟದಲಿ ಸೌಮಿತ್ರಿಗಿಂತೆಂದ ॥
ಇಲ್ಲಿ ಅಡಗಿಹ ದನುಜ ನೋಡೀ
ಮುಳ್ಳಹುತ್ತನು ಬಗಿದುಹೊಕ್ಕನು
ಖುಲ್ಲನಿರಿಸಿದ ಕೈದುವಿದುಯೆನೆ ಕೋಪಪರನಾದ ॥ ೭ ॥

ಕೇಳಿ ಖಡ್ಗವ ಸೆಳೆದು ಹುತ್ತವ
ಬೀಳುಗುಟ್ಟಲು ದನುಜನಿಕ್ಕಡಿ
ಬೀಳೆ ಜಡೆರುದ್ರಾಕ್ಷಿಗಳ ತಾ ಕಂಡು ಶಂಕಿಸುತ ॥
ಕಾಳ ಮೂಳನ ನುಡಿಗೆ ಮುನಿಯನು
ಬೀಳುಗುಟ್ಟಿದೆನೆನುತ ಚಿಂತಿಸಿ
ಹಾಳುದೈವವೆಯೆನಲು ಭುಜಹೊಯ್ದಡಗಿದನು ಧಸಪ ॥ ೮ ॥

ಹರ ಸದಾಶಿವಯೆನುತ ಗೊರವನ
ಶಿರವನರಸಂಗೊಯ್ದು ತೋರಲು
ಹರಿಯ ಕರಸೋಂಕಿಂದ ಹರಿದುದು ಮಾಯ ದಾಡೆಗಳು ॥
ಇರದೆ ತೋರಲು ರಘುಜ ನಗುತಿವ
ಗೊರವ ಕಾಮ್ಯಕ ತಪಸಿ ಬಿಸುಡೆನೆ
ಹರಿದು ಹೇಳಿದರವನ ತಾಯಿಗೆ ಮಗನ ಮರಣವನು ॥ ೯ ॥

ಬಿಡದೆ ಹಲುಬುತ ಬಂದು ತನುಜನ
ಒಡಲ ಮೇಲಡಗೆಡೆದು ಬಿಕ್ಕುತ
ಒಡಲನುರೆಬಡಿವುತ್ತ ಬಾಯಲಿ ಮಣ್ಣು ಹೊಯಿಹೊಯ್ದು ॥
ಕಡುಗಿ ಹಳವಿಸಿ ಮತ್ತೆ ಧೈರ್ಯದಿ
ಕಡೆಗೆ ಕೊಂದನ ಕೊಲುವೆನಲ್ಲದೆ
ಬಿಡೆನೆನುತ್ತಡಿಯಿಡಲು ರಕ್ಕಸಿ ಶೂರ್ಪನಖಿ ತಾನು ॥ ೧೦ ॥

ಕಂಡು ಕಾಮಿನಿ ಹರಿಯ ತೇಜವ
ದಂಡದಲಿ ಗೆಲಬಾರದಿವನನು
ಹೆಂಡಿರಾಗಿಯೆ ಕೊಲುವೆ ಮೋಸದಲೆನುತ ಭಾವದಲಿ ॥
ಭಂಡೆ ರಾಮನ ಮುಂದೆ ಸುಳಿದಳ
ಖಂಡ ತೇಜದಿ ರಂಭೆಯೂರ್ವಶಿ
ಹೆಂಡಿರವಳಿಗೆ ಸರಿಯೆ ತೆಗೆಯೆಂಬಂತೆ ಸೊಗಯಿಸುತೆ ॥ ೧೧ ॥

ಹೂವ ಕೊಯ್ಯುತ ನಟಿಸಿ ತನ್ನಯ
ಭಾವವನು ಮರೆವುತ್ತ ಸೆರಗಿನ
ನೀವಿಗಳ ಸಂವರಿಸಿ ಮುಸುಕುತ ಚರಣಗತಿಗಳಲಿ ॥
ನೂವುರದ ಝಣಝಣಿಕೆ ಮಿಗಿಲಾ
ಭಾವಕಿಯು ಬಿಸಿಲೊಳಗೆ ಕಂಡಳು
ದೇವಿ ನೋಡಿವಳಾರೊ ಬರಹೇಳುವೆನೆ ಮನೆಗೆನಲು ॥ ೧೨ ॥

ತರುಣಿ ಕಡುಸುಖಿಯುಪ್ಪಳಿಳೆ ಬಿಸಿ
ಲುರಿಗೆ ಬಾಡಿಹಳಕಟ ಪೃಥು ಘನ
ವುರಶಿರಸುಧಮ್ಮಿಲ್ಲ ತುಡಿಗೆಯ ಭರಕೆ ಬಳಕುವಳು
ಕರೆಸಿ ನಾರಿಯನೆನಲು ಕೆಲ ಸಾ
ರ್ದರಸನೇನೆಲೆ ತರುಣಿಯುವಧರಿ
ಸರಸಿಯರು ಬರಹೇಳ್ದರೆಮ್ಮಯ ಮನೆಗೆ ನಿಮ್ಮನನು ॥ ೧೩ ॥

ಕೆಳದಿಯರು ನಿಮಗುಂಟೆ ನಮ್ಮಯ
ನಿಳಯವಿದೆಲಾ ಕುಳಿರಿಯೆಂದರೆ
ಎಲೆ ನೃಪಾಗ್ರಣಿ ಕೇಳು ತಾನೊಂದೆನ್ನ ಮನವೊಂದು ॥
ಚೆಲುವ ನಿನಗಾ ಸೋತು ಬಂದೆನು
ಒಲಿದು ಬರಲುಪಚರಿಸ ಬೇಹುದು
ಸುಲಭ ಸೊಬಗನು ರತಿಯ ಸುಖವನು ಸಲಿಸು ನೀಯೆನಲು ॥ ೧೪ ॥

ಸುರಪ ಜಾರನು ವಹ್ನಿಯುಗ್ರನು
ನರಕಪತಿ ಯಮ ನಿರುತಿ ಹೆಳವನು
ವರುಣನತಿವಿಕಟಾಂಗಿ ಚಂಚಲ ಮರುತ ಯಕ್ಷೇಶ ॥
ವರಸಹೋದರನೀಶ ತಿರುಕನು
ಸುರರು ಸರಿಯಲ್ಲೆನಗೆ ಮಿಕ್ಕಿನ
ಸುರತವಲ್ಲಭನಾಗಿ ಕೂಡುವುದೆನುತ ನಾಚಿದಳು ॥ ೧೫ ॥

ಒಲ್ಲೆನೆಲೆ ಸತಿ ಹೋಗು ಲಕ್ಷ್ಮಣ
ನಲ್ಲಿಗೆಂದೆನೆ ಹೋಗಿ ಕೇಳ್ದೈ
ವಲ್ಲಭನೆ ನಿನ್ನಣ್ಣನಲ್ಲಿಗೆ ಸೋತು ನಾ ಬಂದೆ ॥
ಒಲ್ಲೆನಕಟಾ ಫುಲ್ಲಹೇತಿಯ
ಭಲ್ಲೆಹಕೆ ಕಡುನೊಂದೆ ನನ್ನಯ
ನಲ್ಲನಾಗಿಯೆ ಮನ್ಮನೋರಥವೀಯಬೇಕೆನಲು ॥ ೧೬ ॥

ಪರಸತಿಯುಳಿನಗಾಗದೆಂದರೆ
ಮರಳಿ ಕೋಪದಿ ರಾಮನಲ್ಲಿಗೆ
ಸ್ಫುರಿತ ದನುಜಾಕಾರೆ ಬರುತಿರೆ ದೇವ ಕಂಡರಿತು ॥
ತರುಣಿ ರಕ್ಕಸಿಬಂದಿದೇನೈ
ಯರಸ ತಮ್ಮಗೆ ಕುರುಹ ಹೇಳ್ವೈ
ಬರೆದನಾಕೆಯು ಬೆನ್ನಲುಗುರಲಿ ಮೂಗ ಕೊಯ್ಯೆಂದು ॥ ೧೭ ॥

ಕುರುಹಿದೇ ರಾಘವನ ತನ್ನನು
ಬರಿದೆ ಕಾಡದಿರಿರಿಸಿಕೊಳ್ಳೆನೆ
ಮರೆಸಿ ಕಪಟದಿ ಮೆರೆವ ಮುರುಕಿನ ಬೆನ್ನನೋಡುತ್ತ ॥
ಅರಿತು ನಸುನಗುತಾಗ ಲಕ್ಷ್ಮಣ
ತುರುಬು ಹಿಡಿಯಲು ದಾಡೆ ಮೂಡಿತು
ಒರಲುತಿರೆ ಹೆಡಮುಡಿಯಗಟ್ಟಿದ ಕುರುಹು ಲೇಸಾಯ್ತು ॥ ೧೮ ॥

ಅಸುರೆ ಗುರುಗುರುಗುಟ್ಟಿ ಬಯ್ಯಲು
ಅಸಿಯುಲರಿದನು ಮೂಗು ಕಿವಿಗಳ
ಬಸಿವ ನೆತ್ತರ ಮುಸಡ ತೋರದೆ ಕೈನೆ ಹೋಗೆನಲು
ಬಸಿರಬಡಿಬಡಿದಳುತ ಹೋಗಲು
ಅಸುರ ಖರದೂಷಣರ ಬಳಿಗೆನೆ
ಮುಸುಳಿಸಿತು ರಕ್ಕಸರ ಮೋರೆಗಳಸುರೆ ಗೋಳಿಡಲು ॥ ೧೯ ॥

ತೆಕ್ಕುವಳ್ಳಿಯ ಬಿಟ್ಟಮಂಡೆಯ
ಉಕ್ಕಿ ನೊರೆಗಟ್ಟಿಳಿವ ರಕ್ತದ
ಲಕ್ಕೆ ಬಾಯೆತ್ತಣದು ಕೇಳ್ದರದೇನದೇನಾಯ್ತು ॥
ರಕ್ಕಸನೆ ನಿನ್ನಳಿಯನಳಿದನು
ಸೊಕ್ಕಿ ಮಾನವ ಮೂಗ ಕೊಯ್ದನು
ಧೊಕ್ಕನೇಳೆನೆ ಕವಡಿತಾಕ್ಷಣ ದನುಜನಾಸ್ಥಾನ ॥ ೨೦ ॥

ನೆರೆದ ಭಟರೀರೇಳು ಸಾವಿರ
ಮೊರೆವ ಭೇರಿಮೃದಂಗ ಕಹಳೆಯು
ಬಿರಿದನುಬ್ಬಟೆಯಿಂದ ಕವಿತಹ ಖರನ ಮೋಹರವ ॥
ಅರಸ ದೂರದಿ ಕಂಡು ನಸುನಗು
ತರರೆ ಲಕ್ಷ್ಮಣ ನೋಡುನೋಡಾ
ಮರುಳು ಕೈನೆಯು ಹರಿಬದವರನು ಎಂದ ಮುನಿವಂದ್ಯ ॥ ೨೧ ॥

ಎಲ್ಲಿ ಮಾನವನೆಲ್ಲಿ ನರಮೃಗ
ವೆಲ್ಲಿ ಕವಿಕವಿ ತೋರುತೋರಾ
ಕೊಲ್ಲು ಕಡಿಕಡಿ ಕೆಡಹು ಕೆಡಹಾ ಕರುಳನುಗಿ ಸದೆಸ ॥
ಹಲ್ಲ ಕಳೆಕಳೆ ತಲೆಯ ಹರಿಯಿಸು
ಭಲ್ಲೆಹದಿಯಿರಿ ನೂಕುನೂಕೆನು
ತೆಲ್ಲದೆಸೆಯಲಿ ಕವಿದು ಮುತ್ತಿತು ಜನಕನಳಿಯನನು ॥ ೨೨ ॥

ಮುತ್ತಿದನು ಖರನೊಂದು ಮುಖದಲಿ
ಮತ್ತೆ ದೂಷಣನೊಂದು ದೆಸೆಯಲಿ
ಇತ್ತಲೊಂದೆಸೆಗವಿದು ಮುತ್ತಿದ ತ್ರಿಶಿರನೆಂಬವನು ॥
ಒತ್ತಿ ಬರುತಿರೆ ಲಕ್ಷ್ಮಣನು ತಾ
ಮತ್ತೆ ದಳಭೇದನಕೆ ನೇಮವ
ನಿತ್ತು ನೋಡೆನೆ ತಮ್ಮ ಸೈರಿಸುಯೆಂದ ಸಿರಿರಾಮ ॥ ೨೩ ॥

ಮೊಗವ ನೋಡುತ ಜನಕಜಾತೆಯ
ಬಿಗಿದ ಜಡೆಗಳ ಜಾಲವೆಲ್ಲವ
ತೆಗೆದು ಭಸಿತವ ಜಪಿಸೆ ಪಟ್ಟವ ಬಿಗಿದು ಭಾಳದಲಿ ॥
ಉಗುಚಿ ಬಿಲುಗವಸಣಿಗೆ ಸೆಳೆದನು
ಬಿಗಿದನಾರಿಯ ನೀವಿ ಸರಳನು
ತೆಗೆದು ಸೀತಾರಾಮನಿಳಿದನು ಪರ್ಣಮಂದಿರವ ॥ ೨೪ ॥

ತೆರಳು ತೆರಳಲೆ ಗೊರವ ಕಾದುವ
ಭರವು ಲೇಸಾಯ್ತಾಯ್ತು ಕಾದಡೆ
ಮರಳಿದರೆ ತಲೆವುಳಿವುದಲ್ಲದೆ ನಿನ್ನನುಳುಹುವೆನೆ ॥
ಧರೆಗೆ ಬಿಲ್ಲನು ಬಿಸುಟು ನಡೆಯೆನ
ಲರಸ ರಾಘವ ನಗುತ ನಿಂದಿರೆ
ಸರಳ ಮಳೆಯನು ಸುರಿದರಂಬರ ಮುಳುಗಲತಿಬಲರು ॥ ೨೫ ॥

ಹರಿವ ಮಂಜಿನ ಮುತ್ತಿಗೆಗೆ ಸುರ
ಗಿರಿಗೆ ತಳ್ಳಳವೇ ಮದೇಭದ
ನೆರವಿ ಕಂಠೀರವಗೆ ಗಣ್ಯವೆ ಸೊಕ್ಕಿ ಮುಂಬರಿವ ॥
ಉರಗ ಸಂತತಿ ಗರುಡಗಿದಿರೇ
ನರಿಯ ಮೋಹರವಿದಿರೆ ಕೇಸರಿ
ಗರರೆ ನರಹರಿ ಧರೆಯಭಾರವ ನಿಳುಹೆ ತೊಡಗಿದನು ॥ ೨೬ ॥

ಸುರಗಿ ಕಡಿತಲೆ ಚಕ್ರ ಭಲ್ಲೆಹ
ಪರಶು ಕವಣೆ ಮುಸುಂಡಿ ತೋಮರ
ಸುರಿವ ಸರಳಿಂದೆತ್ತ ನೋಡಿದಡತ್ತ ಮುಸುಕುತ್ತ ॥
ಹರಿಯ ಮಹಿಮೆಗದೇನು ಗಣ್ಯವೊ
ಸುರಪತನಯನ ಕಡ್ಡಿಯಟ್ಟಿದ
ತರಣಿಕುಲಿ ಕೂರ್ಗಣೆಗಳಿಂದವೆ ಸವರಿ ದಾನವರ ॥ ೨೭ ॥

ಮುರಿದ ಚೂಣಿಯ ತರಿದನಸುರರ
ಮೆರೆದ ವೀರಕ್ಷತ್ರ ತೇಜವ
ಬರತುದಸುರಾಂಬುಧಿ ಮಹಾದ್ಭುತವಾಯ್ತು ಸಂಗ್ರಾಮ ॥
ಹರಿದ ತೋಳ್ಗಳ ಮುರಿದ ಕಾಲ್ಗಳ
ಪರಿವ ರಕ್ತದ ಮೆರೆವ ಮುಂಡದಿ
ಹರಿಗರುಳ ದಾನವರು ಹರಣವ ಬೀಳುಗೊಡುತಿರಲು ॥ ೨೮ ॥

ಮತ್ತೆ ಮುಸುಕಿದ ತ್ರಿಶಿರನೆಂಬವ
ನೊತ್ತದಸುರರ ಸೇನೆ ಸಹಿತವೆ
ಕುತ್ತಿಕಡಿಕೆಡಹೆಕಟ ಮಾನವ ಬಡವನಲ್ಲೆನುತ ॥
ಮತ್ತೆ ಕರಿಘಟೆ ತುರಗ ಬಲುದಳ
ಪತ್ತಿ ಪಟುತರವಾಗಿ ನೂಕಲು
ಹತ್ತುಕೋಲಿಂದರಸ ತತ್ತರದರಿದನಸಿಬರನು ॥ ೨೯ ॥

ಕಾದುವನು ತಾ ಯಮುನ ಬೆಸಗೊಳ
ಹೋದನತ್ತಲು ಮತ್ತೆ ದೂಷಣ
ಹೋದ ಕೆಡೆಕೆಡೆಯೆನುತ ಮುತ್ತಿದ ಜಗತ್ಪತಿಯ ॥
ಕೋದನನಿಬರ ಬಾಣದಲಿ ಹರಿ
ತೀದುದಸುರಾನೀಕ ದೂಷಣ
ವ್ಯಾಧಿಯೋಯೆನೆ ಕಡಿದ ತಲೆಗಳು ಮತ್ತೆ ಮೂಡುತಿರೆ ॥ ೩೦ ॥

ಕಡಿದ ತಲೆಗಳು ಸವೆಯದಿರೆ ಕಡಿ
ಕಡಿದು ಬೇಸರೆ ಮರುತನೆಂದನು
ಒಡೆದು ಬಸುರೊಳು ಕಡಿದ ತಲೆಯನು ಸಿಕ್ಕಿಸಿವನಳಿವ ॥
ತೊಡುವ ಸರಳೊಂದಲ್ಲದಿದ್ದರೆ
ಕೆಡಹಲರಿದೀ ಖಳನನೆನೆ ಕೇ
ಳ್ವೊಡನೆ ರಾಘವ ಕಡಿದು ಬಸುರೊಳು ತಲೆಯ ಹೆಟ್ಟಿದನು ॥ ೩೧ ॥

ಕೆಡೆದವನ ಖರನೊಡನೆ ಗಳಚಿದ
ದಡಿಗ ಸೇನಾನೀಕದೊಡನವ
ಹೊಡೆದು ಸದೆದನು ಕಡಿದು ನಡೆದನು ರಾತ್ರಿಚರಬಲವ
ಪೊಡವಿಪತಿ ಕೂರಂಬು ಲಕ್ಷವ
ಕಡಿಯೆ ಕಡಿತ ಪ್ರಳಯಕಾಲದ
ಸಿಡಿಲನಾದದವೋಲು ಧನು ಟಂಕಾರವೆಸವುತಿರೆ ॥ ೩೨ ॥

ನೆರೆದ ಮೇಘದ ಘಟ್ಟ ಪವನನ
ಖುರಪುಟಕ್ಕಿದಿರಾದ ತೆರದಲಿ
ಕರಿಯ ಜಂಗುಳಿಯೊಳಗೆ ಹರಿ ಹರಿದಂತೆ ಬಯಲಾಯ್ತು ॥
ಉರಿಯ ಮುತ್ತಿದ ಶಲಭತತಿಯೆನೆ
ಖರನ ಪಡೆ ಹುಡಿಯಾಯ್ತು ದಾನವ
ಹರಿಯ ಸಮ್ಮುಖಕಾಗಿ ಸೂಠಿಯಲಟ್ಟಿದನು ರಥವ ॥ ೩೩ ॥

ಎಲವೊ ನೀದಿಟದಾವ ಕುಲದವ
ಖಳೆಯ ಮೂಗಿಗೆ ನಿನ್ನ ತಲೆಬಳು
ವಳಿಯ ತೆರದಿರು ಬಿಸುಡು ಕೈದುವ ತಲೆಯ ಕಾವೆನೆನೆ ॥
ಕುಲವಬೆಸಗೊಳಲೆಲವೊ ಮನೆಯಲಿ
ಬೆಳೆದ ಮಗಳುಂಟೇನು ಫಡ ಫಡ
ಗಳಹುತನ ಬೇಡಳಿದೆಯಾದರೆ ಬಿಲ್ಲ ಬಿಸುಡುವೆನು ॥ ೩೪ ॥

ಎಲಲೆ ಮಾನವ ಪ್ರಳಯವಹ್ನಿಯ
ಹೊಳಲ ಹೊಗುವಂಗವಣೆಯಾಯಿತು
ತಲೆಮರಸಿ ನೀಹೋದಡಾಯ್ತಿಂದಿನ ರಣಾಗ್ರದಲಿ ॥
ಬಲಿಯ ಕೊಡುವೆನು ಹೋಗು ಸ್ಥೈರಿಸು
ಸುಲಭ ಶಾಕಿನಿಯರಿಗೆ ಹಿತನಹೆ
ಬಲುಹು ನೋಡುವಡಾಂತುಕೊಳ್ಳೆನುತೆಚ್ಚ ನರಹರಿಯ ॥ ೩೫ ॥

ಅಹುದಹುದು ಖರ ಖರ ಶರಾಸನ
ಮಹಿಮನೈ ತಪ್ಪೇನು ತಪ್ಪೇ
ನಹಿತನಾದೊಡೆ ಕುಂದೆ ಗುಣದಲಿ ಕಲಿಗೆ ಮತ್ಸರವೆ ॥
ರಹಣನಲ್ಲಲ್ಲಸುರ ಸಾಹಸಿ
ಮಹಿಮ ಮಝುರೇ ಪೂತು ಮಝುಯೆನು
ತಹಿಮಕರಕುಲ ತರಿದು ಬಿಸುಟನು ಸರಳ ಸಾರವನು ॥ ೩೬ ॥

ಹಾರಿತಾ ಖಳನಂಬು ಪುನರಪಿ
ಮೂರುಮುಡಿಯಲಿ ಕರೆದ ರಕ್ಕಸ
ತೂರಿದನು ರಘುನಾಥ ಮತ್ತವ ಸುರಿದ ನಿಮ್ಮಡಿಯ ॥
ತೂರು ತೂರಿನ್ನೊಮ್ಮೆಯೆನುತವೆ
ಮೀರಿ ಮತ್ತೈವಡಿಯ ಸುರಿದನು
ತೂರಿದನು ಕಾರಿದನು ರಘುಪತಿ ನೂರು ಬಾಣಗಳಲಿ ॥ ೩೭ ॥

ಗಂಡುಗಲಿ ಆ ನರಹರಿಯು ಕೋ
ದಂಡವನು ಬಲು ಬೋಳೆಯಿಂದಿಸೆ
ತುಂಡು ಮೂರಾಯ್ತೇನ ಹೇಳುವೆನಸುರನುಬ್ಬಟೆಯ ॥
ಕಂಡು ಮೆಚ್ಚುತ ಶಾರ್ಙ್ಗಧರ ಕೈ
ಗೊಂಡನಾ ಶರಭಂಗನಿತ್ತು
ದ್ದಂಡ ಚಾಪವ ಸೆಳೆದು ದನುಜನ ಧನುವ ತುಂಡಿಸಿದ ॥ ೩೮ ॥

ತೂರಿದನು ಮಂತ್ರಾಸ್ತ್ರ ಹಲವನು
ತೋರಿದನು ಕೈಲಾಗು ವೇಗದಿ
ತೂರಿದನು ಕೈದುಗಳ ಮೂವತ್ತೆರಡು ಭೇದದಲಿ ॥
ಹಾರಿತಂತಃಧೈರ್ಯವಪದೆಸೆ
ಮೀರಿ ಬಂದುದು ಬಳಿಕ ದನುಜನ
ಮೂರು ಬಾಣದಿ ಶಿರವನೆಚ್ಚಾಡಿದನು ರಘುನಾಥ ॥ ೩೯ ॥

ಸುರರನಟ್ಟೆತು ಮುಂಡವತ್ತಲು
ಮರಳಿ ರುಂಡವು ಬೀದಿವರಿವುತ
ಹರಿತರಲು ರಾಘವನು ನಗುತವೆ ಕಡಿಯೆ ಹಿಂಗುತಿರೆ ॥
ಉರುಳುತುರುಳುತ ಖಳನ ತಲೆ ನರ
ಹರಿಯ ಮೂದಲಿಸಿತ್ತು ಬಲಿಯಲಿ
ಚರಣ ಮೂರರ ಕಪಟದಳತೆಗೆ ಸರಿಯಿದಾಯ್ತೆನುತ ॥ ೪೦ ॥

ಬಿದ್ದನಸುರನು ರಾಮನನಿಬರ
ಗೆದ್ದನಸುರರನೆಂದು ಸುರರು
ಬ್ಬೆದ್ದು ಗುಡಿಗಟ್ಟುತ್ತ ಸುರಿದರು ಪುಷ್ಪವೃಷ್ಟಿಯನು ॥
ಬಿದ್ದು ಶಾಕಿನಿಯರಿಗೆ ಹೇಳಿತು
ಹೊದ್ದಿದರ ಹೊರೆವಾತನಿತ್ತಲು
ಮುದ್ದು ಜಾನಕಿಯೆಡೆಗೆ ಬಂದ ವಿಭೂತಿಭೂಷಣನು ॥ ೪೧ ॥

ಹರಿದು ಕೊರಳಪ್ಪಿದಳು ಜಾನಕಿ
ಹರುಷ ಮಿಗೆ ಸೌಮಿತ್ರನೆರಗಿದ
ಧುರಪರಿಶ್ರಮಬಿಂದು ಸಿರಿಮೊಗದಲ್ಲಿ ತೋರುತಿರೆ ॥
ಮೆರೆವ ಲತೆಮನೆಯಲ್ಲಿ ಸೀತಾ
ತರುಣಿಯೊಡನಿರುತಂದು ಮುದದಲಿ
ಪರಮ ಪಾವನ ಮಹಿಮನಿತ್ತನು ಜಗಕೆ ಮಂಗಳವ ॥ ೪೨ ॥

---

## ೬ನೇ ಸಂಧಿ

ಪಲ್ಲ ॥ ಲಲನೆಯರ ಬುದ್ಧಿಗಳು ಕಾರ್ಯ
ಪ್ರಳಯವನು ತಹುದೆಂಬುದಾಯಿತು
ಖಳನು ಸೀತೆಯನೊಯ್ದ ಹರಿಣದ ಗೋಣ ಹರಿ ಕೊಯ್ದ ॥

ಪದ ॥ ನೀಗಿದಳು ನಿಜ ಸುತನ ಹರಣವ
ಕೂಗಿದಳು ಕಿವಿ ಮೂಗು ಮೊದಲೇ
ಹೋಗಿ ಕಂಡಳು ಸೋದರ ತ್ರಿತಯವನು ಮತ್ತವಳು ॥
ನಾಗಶಯನಗೆ ದನುಜರಸು ಹೊಣೆ
ಯಾಗೆ ಲಂಕೆಗೆ ತಿರುಗಿ ಹೋದಳು
ಮೂಗೊರತಿ ದಶಕಂಠನಲ್ಲಿಗೆ ಹೇತುಭೂತವೆನೆ ॥ ೧ ॥

ಬಳಿಕ ರಕ್ಕಸಿ ಅಳಲಿ ಅಲ್ಲಿಂ
ದಿಳಿದು ಕಿವಿಮೂಗಿತ್ತ ಹಳಿವಿಗೆ
ಖಳಗೆ ಹೇಳೀ ಸತಿಯನೊಯ್ವಾ ನೆರೆಯಲಾಳಿಸುವೆ ॥
ಹೊಳಲ ಮಧ್ಯದಲೆನುತ ಹೋಗಲು
ಹೊಲಸಿನಟ್ಟುಳಿಗಾಗಿ ನರಿಗಳು
ಹಲವು ನಾಯ್ಗಳು ಹದ್ದುಕಾಗೆಯು ಹಿಂಡು ಕವಿವುತಿರೆ ॥ ೨ ॥

ಕಡಿದ ಮೂಗಿನ ಕೈನೆ ರಾವಣ
ನೆಡೆಗೆ ಹರಿದಳು ಸುರಿವ ರಕ್ತದಿ
ಬಿಡುದಲೆಯ ನೆರೆಬಿಚ್ಚಿದುಡಿಗೆಯ ಬಡಿಯುತಲಿ ಬಸುರ ॥
ನಿಡುಸರದಲೊದರುತ್ತ ಹರಿತರ
ಲೆಡಹಿ ಬಿದ್ದಳೊ ತಂಗಿ ತಪ್ಪದು
ಒಡೆದುವ್ಯೆ ಕಿವಿ ಮೂಗು ನೊಂದಳು ಭಂಗವಾಯ್ತೆಂದ ॥ ೩ ॥

ತಂಗಿ ಯಾರಿಂದಾಯ್ತು ಮುಖಸಿರಿ
ಭಂಗ ನಿನಗೆನಲಣ್ಣ ಕೇಳಿದ
ತುಂಗ ಪೀನಸ್ತನನಿತಂಬದ ಸಿರಿಯ ಮಾನವಿಯ
ಅಂಗ ಚೆಲುವದನೇನ ಪೇಳ್ವೆನ
ನಂಗಮೂರುತಿ ನಿನಗೆ ತಹೆನೆಂ
ದಂಗವಿಸಿ ನಾ ಹೋಗೆ ಕೊಯ್ದನು ಮನುಜ ಕಿವಿಮೂಗ ॥ ೪ ॥

ಆರು ನಾರಿಯ ಹೆಸರದಾವುದು
ಕಾರಣವದೇನೆಲ್ಲ ತಿಳುಹೆನೆ
ನಾರಿಗೀ ಹದಿನಾಲ್ಕು ಲೋಕದೊಳಿಲ್ಲ ಪಡಿಯಿಡಲು ॥
ನಾರಿಯುಳದಂತಿರಲಿ ಕಲಿಗಳ
ವೀರ ನಿನ್ನೀ ಪಟ್ಟದರಸಿಯು
ರೋರೆಗೈವರು ಸತಿಯ ಸೌಂದರ್ಯದ ವಿಡಾಯದಲಿ ॥ ೫ ॥

ಬೇರ ಬಲ್ಲವಗೆಲೆಯ ಹೆಸರ ವಿ
ಚಾರವಂತಿರಲೆನ್ನನುಡಿಯಾ
ನಾರಿ ನಗಳೇ ನಿನ್ನ ನೆರದಿ ಮಹೀಶ ಸಭೆಯೊಳಗೆ ॥
ಮಾರಮಥನನ ಧನುವ ಗೆಲಿದವ
ನಾರಿ ಸಹಿತಡವಿಯಲಿಯಿದ್ದೆಡೆ
ಸಾರಿ ಮೂಗನು ಸಂಚಕಾರವನಿತ್ತೆ ಸತಿಗೆನಲು ॥ ೬ ॥

ಆಲಿಸಲು ಕಾಮಾಸ್ತ್ರ ವ್ಯೆಯಲಿ
ಕಾಲನಿಟ್ಟುದು ಕೇಳಿದದರಿಂ
ಗೋಲು ಮರುಮೊನೆದೋರೆ ಮನದಲಿ ಛಲವು ಬೇರೂರೆ ॥
ಬಾಲೆಯನು ಕದ್ದೊಯ್ವ ಮಾಯಾ
ಲೀಲೆಯರಿವನು ಮಾವನೆನುತವೆ
ಬಾಲೆಯನು ಸಂತವಿಸಿ ಪುಷ್ಪಕವೇರಿ ಹೊರವಂಟ ॥ ೭ ॥

ಬಂದೆರಗಿ ಮಾರೀಚ ಮಾವಗೆ
ನಿಂದು ಬಿನ್ನಪ ಮಾಡಿದನು ಯಿಲಿ
ತಂದೆ ಬಯಸುವಿರೆನ್ನ ಮೇಲತಿ ಲೇಸಸನವರತ ॥
ಇಂದಿನೊಂದುರುತರದ ಕಾರ್ಯವ
ಒಂದುಗಳೆಯದೆ ಮಾಡಿದರೆ ನಿ
ಮ್ಮಿಂದ ಹಿತವರದಾರು ತನಗೆನೆ ಖಳನು ಬೆಸಗೊಂಡ ॥ ೮ ॥

ಏನು ಕಾರಿಯವೆಲ್ಲ ಕುಶಲವೆ
ದಾನವೇಂದ್ರ ಲಲಾಮ ಹೇಳೆನೆ
ಜಾನಕೀ ವಧುಸಹಿತ ರಾಮಂಗಡಪಿ ಮನೆ ಕಂಡ್ಯಾ ॥
ನೀನೆನಗೆ ನಿಜ ಹಿತವನಾದರೆ
ಮಾನಿನಿಯ ತಂದೀಯ ಬೇಕೆನೆ
ಮೌನವಾದನು ಮುಕ್ಕುಳಿಸಿ ಬಿಸುಸುಯ್ದು ಮಾರೀಚ ॥ ೯ ॥

ಪೊಡವಿಪತಿ ಚಿಕ್ಕಂದು ಮಿಟ್ಟಿಯ
ಹೊಡೆಯೆ ನಡುಗಡಲಲ್ಲಿ ಬಿದ್ದೆನು
ಕಡೆಗೆ ಹಾರುವ ವೇಷಿಯಾಗಿರೆ ಕೊಲ್ಲದುಳುಹಿದನು ॥
ಜಡೆಯ ಹೊತ್ತೆನು ಮನ ವಿರಕ್ತಿಯ
ಹಿಡಿದುದಿಂದಿನ ಯೌವನದಲಾ
ಮಡದಿಯಾಶೆಯ ಬಿಡು ವೃಥಾ ಕೆಡಬೇಡ ಹೋಗೆಂದ ॥ ೧೦ ॥

ಸಿರಿಕೆಡುವುದಾಯುಷ್ಯ ಹರಿವುದು
ಪರಕೆ ಬಾಹಿರವಿಲ್ಲಿದುರ್ಯಶ
ಪರಸತಿಯ ಸಂಯೋಗ ನರಕದ ಯೋಗ ಪಾಪೌಘ ॥
ತರುಣಿಯರು ನಿನಗಿಲ್ಲವೇ ನರ
ನರಸಿಯೊಬ್ಬಳೆ ಚೆಲುವೆಯಾದಳೆ
ನೆರದ ಭಾಗ್ಯವನುಣ್ಣು ಸಾಯದಿರಕಟ ಸತಿಗಾಗಿ ॥ ೧೧ ॥

ಮಾವ ನಮಗವ ಹಿತವನೆಂದೀ
ಜೀವಗಳ್ಳನ ಬಳಿಗೆ ಬಂದರೆ
ಸಾವ ಬಯಸಿದ ಮತ್ತೆ ಬೊಮ್ಮದ ಬೋಧೆ ಹಸನಾಯ್ತು ॥
ಏವೆ ಬಡದೈವಕ್ಕೆ ಹಲುಬಿದ
ಡೀವ ವರವುಂಟೇನು ತನಗಿವ
ಸಾವ ಬಯಸಿದ ಕಡಿದು ಬಿಸುಡುವೆ ಬಾರದಿರಲೆಂದ ॥ ೧೨ ॥

ತಂದುಕೊಡು ನೀ ಸತಿಯನೆಂದರೆ
ಹಂದೆ ನವಗಿವ ಬುದ್ಧಿಗಲಿಸುವ
ಕೊಂದು ಕಳೆವೆನು ನಿನ್ನನಾರೆಂದಿದ್ದೆ ಮಾನವನ ||
ತಿಂದು ತೇಗುವೆನೆನಲು ನಡೆ ನಡೆ
ತಂದುಕೊಡುವೆನು ಸತಿಯ ನಾನವ
ನಿಂದ ಸತ್ತರೆ ನರಕವಿಲ್ಲಲೆ ಹರಿಯ ಕೊಡುವೆನು || ೧೩ ||

ಎನುತ ನಡೆತರುತನಿಮಿಷಾರಿಯು
ಮನಕೆ ಮಂತ್ರವನಿತ್ತನೆಲವೊ
ಮನುಜನಿದಿರಲಿ ಕಾದಿ ಗೆಲುವೊಡೆ ಪುರಹರಂಗರಿದು ||
ಮನುಜರಿಬ್ಬರ ಮಾಯದಿಂದವೆ
ಮನೆಯನಗಲಿಪೆ ಬಳಿಕ ನೀನಾ
ವನಿತೆಯನು ಕದ್ದೊಯ್ವುದೆಂದವ ಬುದ್ಧಿಗಲಿಸಿದನು || ೧೪ ||

ಹರಿಣನಾದನು ದನುಜ ಹೇಮದ
ಚರಣ ವಜ್ರದ ಬಾಲ ಮರಕತ
ಖುರಪುಟಂಗಳು ಪುಷ್ಯರಾಗದ ಕೋಡು ಮೌಕ್ತಿಕದ ||
ಕಿರಣ ರದನದ ಪಂಕ್ತಿ ಹೇಮದ
ಹರಿಣ ರಾಮನ ಮುಂದೆ ಸುಳಿಯಲು
ಮರಣಕಾಲಕೆ ಸೊಬಗ ಮೆರೆದುದು ಬಣ್ಣಿಸುವೊಡಳವೇ || ೧೫ ||

ಸರಿಮಿಗಿಲು ಕತ್ತುರಿಗೆ ಬೆವರಿನ
ಪರಿಮಳಂಗಳ ಸುಧೆಗೆ ದಶಗುಣ
ಹರಿಣನಧರಾಮೃತವ ತುಂಬಿಯು ನೆರವಿ ಕಂಬಲಿಸೆ ||
ಸೊರಹೆ ನಾ ಮಯ ವಿಶ್ವಕರ್ಮರು
ಬರೆಯಲರಿದೀ ರೂಹವೆಂದರು
ಧರಣಿಯಚ್ಚರಿಯೆನಲು ಸುಳಿವ ದು ಉಪಮೆಗೆಡೆಗೊಡದೆ || ೧೬ ||

ರಾಮನಾಶ್ರಮದಿದಿರಲಾಡುವ
ಹೇಮಮೃಗವನು ಕಂಡು ಸೀತಾ
ಕಾಮಿನಿಗೆ ಮನವಾಯ್ತು ಹೊರವಂಟಳು ನಿಜಾಲಯವ ||
ಪ್ರೇಮದಿಂದೆಳೆ ಹುಲ್ಲ ಕೊಡಲಾ
ಕಾಮರೂಪದ ಹರಿಣ ಬರದಿರೆ
ರಾಮಚಂದ್ರನ ಕಾಡಿದಳು ರಮೆ ಹಿಡಿದು ಕೊಡುಯೆನುತ || ೧೭ ||

ಕೊರಳನಪ್ಪಿಯೆ ಬಿಡದೆ ಕಾಡುವ
ಸರಸಿಜಾಕ್ಷಿಯ ನುಡಿಯ ಬಂಧಕೆ
ಚರಣವಿಡುತವೆ ಲಕ್ಷ್ಮಣಾಂಕನ ಮೊಗವ ನೋಡುತಿರೆ ॥
ಅರಸ ನಿನೇಬಲ್ಲೆ ಹೇಮದ
ಹರಿಣವನು ನಾ ಮುನ್ನ ಕಾಣೆನು
ಹಿರಿದು ಬೇಡೆನಲಮ್ಮೆಯತ್ತಿಗೆ ಮುನಿವಳೆನಗೆಂದ ॥ ೧೮ ॥

ಹಿತವನಹುದಹುದೀತ ಕಂಡೆವು
ಕ್ಷಿತಿಪನೀಪರ್ಯಂತ ವೇತಕೆ
ಸತಿಯ ಬಯಕೆಯ ಸಲಿಸಿ ನಾ ತಹೆನೆಂಬ ಮಾತಿಲ್ಲ ॥
ಹಿತವ ತಪ್ಪುವನಲ್ಲ ತಹವರ
ಮತಿಗೆ ಕಿತ್ತಡಿಯಿಡುವೆ ನೀನನೆ
ಸತಿಯ ಬಿಟ್ಟಡಿಯಿಟ್ಟು ಹರಿಣನ ಹಿಡಿದು ತಹೆನೆಂದು ॥ ೧೯ ॥

ದನುಜ ಮರ್ದನ ಧನುವ ಕೊಂಡನು
ಮನೆಗೆ ತಮ್ಮನ ಕಾಹ ಹೇಳಿದ
ಕನಕಮೃಗವಿದನೀಗ ತಹೆಸಿದೊ ಸಿಕ್ಕುತಿದೆಯೆನುತ ॥
ವನಜಲೋಚನ ಬೆನ್ನಲೈತರೆ
ಕನಕಮೃಗ ಹಿಡಿಹಿಡಿಯಲೋಡಿತು
ತನಗೆ ವಶವಾಯಿತಾಯ್ತೆನೆ ತತ್ಕ್ಷಣಾರ್ಧದಲಿ ॥ ೨೦ ॥

ಕೆಲೆವುದಲೆವುದು ಗಿಡುವ ಸರಳಿಸಿ
ನೆಲನ ಕೆರೆವುದು ಹಿಕ್ಕೆಯಿಕ್ಕುವು
ದೆಳೆಲತೆಯ ನೆರೆಗಚ್ಚಿ ನಿಜ ನೆಳಲಿಂಗೆ ಬೆದರುವುದು ॥
ಉಲುಹನಾಲಿಸಿ ಕೆಲಕೆ ಲಂಘಿಸಿ
ಹಲವು ಗಿಡುಗಳ ಸುಳಿಯಲಡಗುತ
ಬಳಿಯ ಬಹುದೆಳೆವುಲ್ಲ ತೋರಲು ಹಿಡಿಯಲಡಗುವುದು ॥ ೨೧ ॥

ಈ ಪರಿಯಲನ್ಯಾಯ ಮೃಗವಾ
ಶ್ರೀಪತಿಯ ಕೊಂಡೋಡತೊಡಗಿತು
ಭಾಪುರೇ ಹಿಡಿಹಿಡಿಯೆ ತಪ್ಪುವುದೇಕ ದೇಶದಲಿ ॥
ಕೋಪವಿಲ್ಲದೆ ಸತಿಯ ಸ್ನೇಹಕೆ
ತಾಪವನು ಮರೆದೊಡನೆ ತೊಳಲಲು
ಭೂಪತಿಯ ಬಳಲಿಸಿತು ನಗಿಸಿತು ಸಕಲಯೋಗಿಗಳ ॥ ೨೨ ॥

ಕೆರಳಿ ಹರಿ ಬೆನ್ನಟ್ಟಲಾ ಮೃಗ
ತಿರುಗಿ ಮೂಡಣ ದೇಶದತ್ತಲು
ಮರಳಿ ಬಡಗಲು ಮುಂದುವರಿಯದೆ ಪಡುವಲೆಡಹಾಯ್ದು ॥
ತಿರುಗುತಿರಲರವಿಂದಮಿತ್ರನ
ಕಿರಣ ಕೆಂಪಡಸಿತ್ತು ಗಗನವು
ಸಿರಿಸವೆದ ಮನೆಯಾಯ್ತು ದಿನಪತಿ ಗಿರಿಯ ಮರೆಗಿಳಿದ ॥ ೨೩ ॥

ಹಿಡಿಯಲರಿದೀ ಮೃಗವ ಮಾಣಲಿ
ಕಡೆಗೆ ಚರ್ಮವನಾದೊಡೀವೆನು
ಮಡದಿಗೆನುತವೆ ಬಾಣವೊಂದನು ತೀವಿ ತೆಗೆದೆಸಲು ॥
ಕಡಿಯೆ ತಲೆ ಗಗನಕ್ಕೆ ಹಾರಿತು
ಕೆಡವುತವೆ ಚೀರುತ್ತ ಮತ್ತದು
ಕಡೆಗೆ ಹಾ ಲಕ್ಷ್ಮಣನೆ ಹಾಯೆನುತೆನುತ ತಲೆ ಬೀಳೆ ॥ ೨೪ ॥

ಒಲಿದರಿಷ್ಟವನೀವರಲ್ಲದೆ
ಮುಳಿದು ವಾಂಛಿತವೀವರುಂಟೇ
ಒಲಿದು ಕೊಡುವದರಿಂದ ನರಹರಿ ಮುನಿದಡತಿ ಲೇಸು ॥
ಖಳನು ತಪದಲಿ ಹಲವು ಕಾಲದಿ
ಬಳಲುತಿದ್ದರೆ ಕರುಣದಿಂದವೆ
ಸಲಿಸಿದನು ಕೈವಲ್ಯ ಪದವಿಯ ಪುಣ್ಯವೆಂತವನ ॥ ೨೫ ॥

ನೋಡುತಿದ್ದುದು ತಲೆ ಮುರಾರಿಯ
ಕೂಡಿ ಸುಖಿಸಿತು ಬಳಿಕಲಿತ್ತಲು
ಕೇಡು ನುಡಿಯನು ಕೇಳಿ ಸೀತಾ ದೇವಿ ಕಳವಳಿಸೆ ॥
ಬಾಡಿ ಬಸವಳಿವುತ್ತ ಕಂಬನಿ
ಕೋಡಿವರಿದವು ಹಲುಬಿ ಲಕ್ಷ್ಮಣ
ನೋಡು ಹೋಗೆನ್ನರಸನೇನಾದನೊ ವನಾಂತರದಿ ॥ ೨೬ ॥

ತಾಯೆ ರಾಘವನಳಿಯ ದಾನವ
ನಾಯಿಗಳ ಕಡು ಕಪಟವಲ್ಲದೆ
ರಾಯನಳಿದರೆ ಭೂಮಿ ಕದಡದೆ ಮಾಂಬುದೇ ನೀನು ॥
ನೋಯೆ ನುಡಿಯದಿರಕಟಯೆನೆ ನಿ
ನ್ನಾಯತವ ನಾಬಲ್ಲೆನೈ ಕಿರುದಾಯಿ
ಮಾಡಿದ ಮಂತ್ರದಿಂದೊಡ ಬಂದೆ ನೀನೆಂದು ॥ ೨೭ ॥

ಕುಲಕೆ ಕುಂದನು ತಂದೆ ಪಾತಕಿ
ಯೊಲುಪಳಾನಲ್ಲಳುಪಿ ನಿಂದರೆ
ಮೊಲೆಗಳನು ಕೊಯ್ದಡಕಿ ಪತಿಯೆಡೆಗೆನ್ನ ಜೀವನನು ॥
ಕಳುಹುವೆನುಯೆನೆ ಲಕ್ಷಣಾಂಕನು
ತಲೆಯು ನಾಚಿಯೆ ಸುರಿಯೆ ಕಂಬನಿ
ಯಿಳಿಯೆ ಕೊಲ್ಲದಿರಕಟ ಶಿವ ಶಿವ ಹೋಹೆ ನಾನೆಂದ ॥ ೨೮ ॥

ಗೆರೆಯ ದಾಂಟದಿರೆನುತ ರಾಮನ
ಹೊರೆಗೆ ಲಕ್ಷ್ಮಣನಳುತ ತೆರಳಿದ
ತರುಣಿ ಜಾನಕಿ ಹಲುಬುವಾ ಧ್ವನಿ ಕೇಳಿ ರಾವಣನು ॥
ಶಿರದ ಬೋಳಿನ ಕನಕ ಪಾತ್ರೆಯ
ಮರಳುತಿಹ ಮಣಿಮಾಲೆ ಕೈಯಲಿ
ಹರಹರಾಯೆನುತಿಸಿದು ನಿಂದನು ತರುಣಿಯಾಶ್ರಮದ ॥ ೨೯ ॥

ಪರಸತಿಯು ತರಹೋಗಲಾಗಳೆ
ತಿರಿವ ಭಾಗ್ಯವು ಬಂದುದಸುರಗೆ
ಶಿರವು ಮುಂಡಾಗ್ಸ್ತಿಕಟ ಸಿರಿಸವೆದೊಂದು ರೂಪದಲಿ ॥
ಹಿರಿಯರಿವರೆಂಬಂತೆ ಬಳಲುತ
ತರುಣಿ ಭಿಕ್ಷಾಂದೇಹಿ ನಾವೀ
ಬರುತ ಬೈಗಾಯ್ತಿಲ್ಲಿ ಬಂದೆವು ತಾಯೆ ನೀಡೆಂದ ॥ ೩೦ ॥

ಮುಂಡೆ ಬೋಳಿನ ಕರ ಕಮಂಡಲ
ದಂಡ ಧೋತ್ರದ ಕಾಸೆ ವೇಷದ
ಲಂಡ ಸನ್ಯಾಸಿಯನು ಹಿರಿಯರೆನುತ್ತ ಭಿಕ್ಷವನು ॥
ಕೊಂಡು ನೀಡಿದರಹಹ ಬಾರೆವು
ಗಂಡರಿಲ್ಲದ ಮನೆಯ ಹೊಗೆವೆನೆ
ಪುಂಡರೀಕದಳಾಕ್ಷಿ ಮರೆದಾ ಗೆರೆಯ ದಾಂಟಿದಳು ॥ ೩೧ ॥

ತುಡುಕಿದನು ಮುಂಗೈಯ ಹೊಣಿಗ
ನೊಡನೆ ಗಗನಕೆ ಚಿಗಿದು ಪುಷ್ಪಕ
ದೆಡೆಗೆ ಹಾಯ್ದನು ನಡುಗುವಬಲೆಯ ರೋದನ ಧ್ವನಿಗೆ ॥
ಗಿಡಮರಗಳೊಡ ಮರುಗುತಿರ್ದುವು
ಪೊಡವಿವಲ್ಲಭ ಹಾ ಮುರಾಂತಕ
ಕಡುಗರುಣಿ ಹಾಹಾ ಮದೀಯ ನಿಧಾನ ಹಾಯೆನುತ ॥ ೩೨ ॥

ಹುಲುಹಸುವು ಕಂಗೆಟ್ಟು ಕೊಬ್ಬಿದ
ಹುಲಿಯ ಬಾಯಲಿ ಬಿದ್ದ ತೆರದಲಿ
ಗಿಳಿಯ ಮರಿ ಕಡು ಮೂರ್ಖ ಬೇಡನ ಬಲೆಯೊಳಾದಂತೆ ॥
ಕಳವಳಿಸಿ ಕಂಗೆಟ್ಟು ಹಲುಬುತ
ಲಲನೆ ಹಮ್ಮೈಸಿದಳು ಶಿವ ಶಿವ
ಕುಲವ ಕೊಯ್ದನು ರಮೆಯ ರಾವಣನೊಯ್ದನಕಟಕಟ ॥ ೩೩ ॥

ಏಕೆ ಸುಳಿದುದೊ ಮೃತ್ಯು ಮೃಗವದ
ನೇಕೆ ಬಯಸಿದೆ ರಾಮಚಂದ್ರನ
ನೇಕೆ ಕಳುಹಿದೆ ಕೆಟ್ಟು ನುಡಿದೆನದೇಕೆ ಲಕ್ಷ್ಮಣನ ॥
ಈ ಕುಠಾರಂಗೇಕೆ ಸಿಲುಕಿದೆ
ನೇಕೆ ವಿಧಿಯೇ ಕೊಲ್ಲದುಳುಹಿದೆ
ಹಾ ಕರುಣಿ ಹಾ ದೇವ ಹಾ ಶಿವ ಕರುಣಿಸೈ ಹರನೆ ॥ ೩೪ ॥

ಕುತ್ತವನು ಹಿಡಿದಂತೆ ತುಡುಕಿದ
ಹತ್ತು ತಲೆಯವ ಸತಿಯ ತನಗದು
ಮೃತ್ಯುದೇವತೆ ರೂಪುಗೊಂಡಿರಲಕ್ಕರಿಂದೊಯ್ದ ॥
ಇತ್ತಲಿಹ ಮಾರಿಯನು ಬೇಗದ
ಲತ್ತಲೆಳೆದೊಯ್ವಂತೆ ರಾವಣ
ಮೃತ್ಯು ಲಕ್ಷ್ಮಿಯ ನೊಯ್ದ ಪರಿಯಲಿ ಜಾನಕಿಯನೊಯ್ದ ॥ ೩೫ ॥

ಕೇಳಿ ಗಿರಿತರು ನಿಚಯ ಮೃಗಕುಲ
ಕೇಳಿ ವನಚರ ಪಕ್ಷಿಸಂಕುಲ
ಕೇಳಿರೈ ಮುನಿನಿಕರ ಹೆಣ್ಣಿನ ಬಾಯ ಹುಯ್ಯಲನು ॥
ಕೇಳದಿರ್ದೊಡೆ ದೋಷವುಂಟದ
ಕೇಳ್ದುಪೇಕ್ಷಿಸಲಾಗದೆಂದಳು
ಕಾಳ ರಕ್ಕಸನೊಯ್ವ ರಾಮನ ಸತಿಯ ಕಪಟದಲಿ ॥ ೩೬ ॥

ಜನಕಭೂಪನ ಮಗಳು ರಾಮನ
ವನಿತೆಯೆನ್ನನು ದನುಜನೊಯ್ವನು
ಮುನಿವನೌಕಸರೆಲ್ಲ ಕೇಳುವುದೆನ್ನ ಹುಯ್ಯಲನು ॥
ಇನಿಯಗರುಹುವುದೆನುತ ತುಡಿಗೆಯ
ಕನಕ ರತುನವ ಬೀರುತಿರ್ದಳು
ವನಿತೆ ಹಲುಬಿದಳಕಟ ರಾಘವ ಕೃಪೆಯ ಮಾಡೆನುತ ॥ ೩೭ ॥

ಘಡಘಡೆಲವೊ ಕಳ್ಳ ನಿಲು ನಿಲು
ತುಡುಕಿ ತಿಂಬೆನು ತಲೆಯ ತಂಡವ
ಬಿಡುಬಿಡೆಲೆ ರಘುಕುಲನ ರಾಣಿಯ ನರಿಯೆಲಾಂಯಿಂದ ॥
ಒಡತಿಯಂಜದಿರವ್ವಯೆನುತವೆ
ತೊಡಚಿ ನಿಲ್ಲೆಲೆ ಕುನ್ನಿಯಾಪರೆ
ಕುಡಿಯಲೆರೆವನು ಮರುಳು ತಂಡಕೆ ನಿನ್ನ ರಕುತವನು ॥ ೩೮ ॥

ಕೇಳಿ ಹೆಬ್ಬುಯ್ಯಲ ಜಟಾಯು ಕ
ರಾಳವದನನು ಬಂದು ತಾಗಿದ
ಕಾಳಮೂಳನೆ ಸತಿಯ ಬಿಡು ಘಡಯೆನುತ ಪಕ್ಷದಲಿ ॥
ಬೀಳೆ ಹೊಡೆದನು ಕೆಡಹಿ ನೆಲನಲಿ
ತೂಳಿ ತುಳಿದನು ಚುಂಚುಪುಟದಲಿ
ಶೂಲವಿಕ್ಕಿದ ಪರಿಯಲಸುರನು ಚಚ್ಚಿ ಬೀಸಿದನು ॥ ೩೯ ॥

ಅತ್ತಲೆಳೆವನು ಪುಷ್ಪಕವ ಖಳ
ನಿತ್ತಲೆಳೆವನು ಖಗನು ಪುನರಪಿ
ಯತ್ತಲಿತ್ತಲು ಘಾಸಿಯಾದನು ಖಗನ ಚುಂಚುಕದೆ ॥
ಮತ್ತೆ ಮಾಯವ ನೆನೆದು ಮರ್ಮವ
ನಿತ್ತು ನೋಡುವ ಸತ್ವದಳತೆಯ
ನುತ್ತಮನೆ ಹೇಳೆನಲು ಖಗ ನಿಜ ನೆರನ ಹೇಳಿದನು ॥ ೪೦ ॥

ದುರುಳ ದಾನವ ಕಪಟದಿಂದವೆ
ಚರಣದಳವನು ನೆರನ ಹೇಳಿದ
ಮರಳಿ ಹೊಡೆದಾಡುತ್ತ ದನುಜನ ನಯನವಿಪ್ಪತ್ತ ॥
ಭರದಿ ಚುಚ್ಚಲು ಕಣ್ಣುಗಾಣದೆ
ಕುರುಡನಾದನು ದನುಜನಾಕ್ಷಣ
ಕೆರಳಿ ಖಡ್ಗದಿ ಕೊರಳನರಿಯಲು ತಲೆಗಳವು ನೆಗೆಯೆ ॥ ೪೧ ॥

ಇನ್ನಿರಿಯಬಹುದೆನುತ ರಾವಣ
ತನ್ನ ಚಂದ್ರಾಸದಲಿ ವಿಹಗನ
ಬೆನ್ನ ಹೊಯ್ದರೆ ಕಡಿಗಳೆರಡರ ನೆತ್ತರುಕ್ಕುತಿರೆ ॥
ಭಿನ್ನ ಕಂಠದಲೊದರಿ ಕೆಡೆದರೆ
ಖಿನ್ನ ಜಾನಕಿ ವರವನಿತ್ತಳು
ತನ್ನ ಪತಿಯನು ಕಾಂಬ ತನಕೀ ಜೀವವಿರಲೆಂದು ॥ ೪೨ ॥

ಹೋದನತ್ತಲು ಸತಿಯ ಕೊಂಡಾ
ಹಾದರಿಗನನ್ನೆವರ ತಡೆದನು
ಕಾದುವರೆ ನಿಲ್ಲೆಲವೊ ಮುದುನಾಯೆನುತ ಸಂಪಾತಿ ॥
ಹಾದಿಗಟ್ಟಿದನೆಲವೊ ಬಿಡು ಬಿಡು
ಮೇದಿನಿಯ ನಂದನೆಯನೆಂದರೆ
ಹೋದವನನೆಡಗಾಲ ನುಸುಳಿದು ತನ್ನ ಪುರಕಾಗಿ ॥ ೪೩ ॥

ಇದಿರುಗೊಳುತಿರೆ ಪುರವ ಹೊಕ್ಕನು
ಮದಮುಖನು ನಿಜ ನಿಳಯಕೈದಿದ
ಸುದತಿಯಳುವುದ ಕಂಡು ಚಿಂತಿಸಿ ತಾಯಿ ಕೈಕಸೆಯು ॥
ಸದನದೊಳಗನವರತ ಸಂತಾ
ಪದಲಿ ಹಳವಿಸುತಿರಲು ಕೇಡಿಂ
ಗದುವೆ ಕಾರಣ ಮನೆಯೊಳಿರಿಸದೆ ವನಕೆ ಕಳುಹೆನಲು ॥ ೪೪ ॥

ವರ ಜನನಿ ಯುಕುತಿಯನು ಮನ್ನಿಸಿ
ಧರಣಿಜಾತೆಗೆ ಕಾನನಾಂತರ
ದಿರವ ಮಾಡಲು ಕಂಡು ರಾವಣಗೆಂದ ವಿಭಿಷಣನು ॥
ಅರಸ ಕಾಹಿಂದಿರಿಸ ಬೇಹುದು
ಪರಮ ವಿಶ್ವಾಸಿಗಳ ನಿನ್ನಾ
ಸರಮೆ ತ್ರಿಜಟೆಯರಿರಲಿಯೆನೆ ಖಳನಹುದುಯಿರಲೆಂದ ॥ ೪೫ ॥

ರಾಮರಾಘವ ಲಕ್ಷ್ಮಿವಲ್ಲಭ
ರಾಮ ರಾಕ್ಷಸಮಥನ ಮುರಹರಿ
ರಾಮ ರಕ್ಷಿಸು ರಕ್ಷಿಸೆನ್ನ ನಾಥ ಜನಬಂಧು ॥
ರಾಮರಾಮೆಂದೊರಲಿ ಹಲುಬುವ
ರಾಮಮಂತ್ರವ ಬಿಡದೆ ಜಪಿಸುವ
ಕಾಮಿಗಳಿಗಿಷ್ಟಾರ್ಥ ಸಲಿಸುವಾನತ ಪ್ರಿಯನು ॥ ೪೬ ॥

ಇತ್ತಲಣ್ಣನ ಹಾದಿಯನು ಬೆಂ
ಬತ್ತಿ ಲಕ್ಷ್ಮಣನಳುತ ತೆರಳಿದ
ಹೊತ್ತ ದುಗುಡದಿ ಸುರಿವ ಕಂಬನಿ ಕಡು ನಿರೋಧದಲಿ ॥
ಹತ್ತಿ ಬರೆಬರೆ ಕಂಡು ರಘುಪತಿ
ಚಿತ್ತದಲಿ ಕಡು ನೊಂದು ನುಡಿದನು
ಇತ್ತಲೇತಕೆ ಬಂಪೆ ದೇವಿಯ ಬಿಟ್ಟರಣ್ಯದಲಿ ॥ ೪೭ ॥

ಜನನಿ ಖರಖರ ಕೆಟ್ಟ ನುಡಿವುತ
ಮನವ ನೋಯಿಸುತಿರಲು ನೆರೆಯದೆ
ಧನುವಿನಲಿ ಗೆರೆಯಿಟ್ಟು ದಾಂಟದಿರೆನುತ ಬಂದೆನೆನೆ ॥
ಅನುಜ ಕೆಡಿಸಿದೆಯಕಟ ದೇವಿಯು
ದನುಜರೊಯ್ಯದೆ ಮಾಣರೈ ಶಿವ
ವನಿತೆಯರ ಬಿರುನುಡಿಗೆ ಮನಗುಂದುವರೆ ಬಲ್ಲವರು ॥ ೪೮ ॥

ಬಂದು ಮನೆಯೊಳಗರಸಿ ಕಾಣದೆ
ಇಂದುಮುಖಿ ಕಡುಮುನಿಯದಿರಳೆನು
ತೆಂದ ರಾಘವ ಹೇಮಮೃಗವಿದ ತಂದೆ ನೋಡೆನಲು ॥
ಒಂದು ನುಡಿಯಿಲ್ಲದಿರೆ ಶಿವ ಶಿವ
ನೊಂದೆನಕಟಾ ವಿಧಿಯೆ ತನ್ನನು
ಕೊಂದೆಯರ್ಧಾಂಗಿಯನು ತಾನುಳಿದೆಂತು ಬದುಕುವೆನು ॥ ೪೯ ॥

ಒಳಗೆ ಕಾಣೆನು ಸತಿಯನಕಟಾ
ಸುಳಿದ ಹೆಜ್ಜೆಯು ಹೊರಗೆ ಕಾಣೆನು
ಯಿಳೆಯು ಪಲ್ಲಟವಲ್ಲಲೇ ಹರಿಯಲ್ಲವೇ ನಾನು ॥
ಕಲಿ ರಘುಜ ನಾನಾದೊಡರಸಿಯು
ಗಳಿಗೆಯುಗಲಿರಲರಿಯೆನದು ದಿಟ
ನಳಿನಸಂಭವನೆಯಿಲ್ಲ ಸೀತಾರಾಮನಲ್ಲೆಂದ ॥ ೫೦ ॥

ಅರಿವು ತಲೆಕೆಳಗಾಯ್ತು ಧೈರ್ಯದ
ಹೊರಿಗೆ ತಪ್ಪಿತು ಕರಣ ಕರಗಿತು
ಕೊರೆದು ಮತಿಗತವಾಯ್ತು ಮಾಯಾಪಾಶ ಬಿಗುಹೇರೆ ॥
ಮರುಗಿದನು ಭಿಡೆಯನ್ನು ಮರೆದನು
ಹೊರಗೆ ಬಲಿದುದು ಮೂರ್ಛೆಯೋಗದ
ಲರಿಯದಿದ್ದನು ರಾಮ ಮಾನಿಸರಳವೆ ವಿಧಿಲಿಖಿತ ॥ ೫೧ ॥

ಹೊರಳಿದನು ಲಕ್ಷ್ಮಣನು ಭಯದಲಿ
ಸರಿಮಿಗಿಲ ದುಃಖದಲಿ ನೊಂದನು
ಹಿರಿದುಬಳಲಿದನಣ್ಣ ನಾ ನಿನ್ನೆಂತು ತಿಳುಹುವೆನು ॥
ಬರಲಿದೇತಕೆ ಮೃತ್ಯುರೂಪಿನ
ಹರಿಣನೇತಕೆ ಬಯಸಲೇತ
ಕ್ಕರಸನೈದಲದೇಕೆ ವಿಧಿಯೇ ಕೊಂದೆ ಹಾಯೆಂದ ॥ ೫೨ ॥

ಕೆಂಡಮರಿಯಾಯ್ತು ಬ್ಜನುದಯವು
ಪುಂಡರೀಕದಳಾಕ್ಷ ತೊಳಲಿದ
ಕಂಡಿರೇ ದೇವಿಯನು ಶುಕಪಿಕಮಧುಪಸಂಕುಲವು ॥
ಕಂಡಿರೇ ತರುಗಳಿರ ಸೀತೆಯ
ಕಂಡಿರೇ ಲತೆಗಳಿರ ಸೀತೆಯ
ಕಂಡಿರೇ ದಶದಿಕ್ಕುಗಳಿರೆಂದೆನುತ ತೊಳಲಿದನು ॥ ೫೩ ॥

ಇರುಳು ಹಗಲೆಂದೆಂಬ ಕತ್ತಲೆ
ಖರೆಯ ಬಿಸಿಲೆಂದೆಂಬ ಹಗಲನು
ಇರುಳು ಮಾಡುವ ಮೃಗವುಮಾನಿಸರೆಂಬ ಮಾನಿಸರ ॥
ಹರಿಣನೆಂಬನು ಚಂದ್ರಿಕೆಯ ಖರ
ಕಿರಣನೆಂಬನು ಚಂದ್ರಕಾಂತದ
ಪುರುಳಿಯನು ಬೆಳುಗೆಂಡವೆಂಬನು ವಿರಹಿ ವ್ಯೆಮರೆದು ॥ ೫೪ ॥

ಹರಿಹರ ಬ್ರಹ್ಮಾದಿ ದೇವರು
ಹಿರಿಯರೆಂದರೆ ಬಿಡದು ಮಾಯೆಯು
ಸಿರಿಯನಗಲಿ ವಿರಾಮನಾದನು ರಾಮನಡವಿಯಲಿ ॥
ಹರಿಗೆ ಧಾವತಿಯುಂಟೆ ತಿಳಿಯಲು
ಹಿರಿದು ಕಷ್ಟ ಮನುಷ್ಯ ಜನ್ಮವು
ಹರಿ ನೃಜನ್ಮದಿ ಬಂದ ಕಾರಣದಿಂದ ತೊಳಲಿದನು ॥ ೫೫ ॥

ಮತ್ತೆ ಧೈರ್ಯದಲೆದ್ದು ಲಕ್ಷ್ಮಣ
ನೆತ್ತಿದನು ರಘುಕುಲನನುದಕವ
ನೊತ್ತಿದನು ಕಂಗಳಿಗೆ ಆ ವನದಂತರಾಳದಲಿ ॥
ಸುತ್ತನೋಡುವೆನೆನುತ ನಡುವಿರು
ಳತ್ತಲಿತ್ತಲು ತೊಳಲುತಿರೆ ಬಲು
ನತ್ತಲೆಗೆ ಕಡೆಯಾಯ್ತು ನಳಿನೀರಮಣನುದಯದಲಿ । ೫೬ ॥

ಬರಬರಲು ವನದೊಳಗೆ ರಕ್ತದ
ಹೊರಳಿಯಲಿ ಹೊರಳುತ್ತ ಬಿದ್ದಿಹ
ಹಿರಿಯದೇಹದ ಖಗನ ಕಂಡಾ ರಾಮ ಚಿಂತಿಸಿದ ॥
ಹರಣ ಹೋಗದ ಕಥನವೇನೆನೆ
ಹರಿಯ ಕಂಗಳು ದಣಿಯೆ ನೋಡಿದ
ಪರಮ ಸಖ ನಾ ನಿನ್ನ ತಂದೆಗೆ ರಾಮ ಕೇಳೆಂದ ॥ ೫೭ ॥

ಅಂಬುಜಾಕ್ಷಿಯ ಹುಯ್ಯಲಿಗೆ ನಾ
ಮುಂಬರಿದು ನೆಗೆವುತ್ತ ಕಂಡೆನು
ಶಂಬರಾರಿಯ ತಾಯಿಯವಳೆಂದರಿತು ಸೂಠಿಯಲಿ ॥
ಅಂಬರದಲಬ್ಬರಿಸಿ ಕಾದಿದೆ
ಶಂಭು ಕೊಟ್ಟಾ ಚಂದ್ರಹಾಸದಿ
ಡೊಂಬ ರಾವಣ ಹೊಡೆಯಲೀ ವಿಧಿಯಾಯ್ತು ತನಗೆಂದ ॥ ೫೮ ॥

ಪಾತಕಾರಿಯ ಪದಪಯೋಜವ
ಧಾತುಗುಂದದೆ ನೋಡಿ ಮನದೊಳ
ಗೋತು ಬೆರಸಿದ ಧನ್ಯನೈ ಪರಬೊಮ್ಮವನು ವಿಹಗ ॥
ಆತನೂರ್ಧ್ವಕ್ರಿಯೆಯನಾಗಿಸಿ
ಸೀತೆಯರಸುತ ಕೆಲವು ದಿವಸಕೆ
ಭೂತಳೇಶ್ವರ ಶಬರಿಯಾಶ್ರಮದತ್ತ ತಿರುಗಿದನು ॥ ೫೯ ॥

ಹರಿ ಶಬರಿಯಾಶ್ರಮಕೆ ಬಂದಾ
ಧರಣಿಜಾತೆಯ ಸುದ್ದಿ ಕೇಳಿದು
ಮರಳಿ ಕ್ರೌಂಚಾರಣ್ಯಕಿಳಿದನು ಮುಂದುಮುಂದತ್ತ ॥
ವಿರಹ ತಾಪದಿ ತೊಳಲುತಿರ್ದನು
ಪರಮ ಪಂಪಾ ಸರಸಿಗೈದಿದ
ನರಸ ತಮ್ಮನ ಮುಲಗಿ ಡೆಂಡಣಿಸುತ್ತ ಬರುತಿದ್ದ ॥ ೬೦ ॥

ಮನವಳುಪಿ ದಿವಪತಿಯ ಸೂಳುತ
ದನುವೆನಿಪ್ಪವನೊಬ್ಬನಪ್ಸರ
ಮೊನೆಗೆ ಕರೆದರೆ ಕೆರಳಿ ಶಪಿಸೆ ಕಂಬಂಧವೆಸರಿನಲಿ ॥
ದನುಜ ಯೋಜನದುದ್ದ ಕೈಯಲಿ
ಎನಿತು ಖಗಮೃಗ ಸಿಕ್ಕಲನಿತನು
ಮುನಿದ ಮುಂಡದ ಬಾಯಲಿಡುತವನಿರ್ದ ಹಲಗಾಲ ॥ ೬೧ ॥

ಅವನ ತೆಕ್ಕೆಯಲರಿಯದಕಟಾ
ರವಿಕುಲೇಶನು ಸಿಲುಕೆ ಲಕ್ಷ್ಮಣ
ನವನ ತೋಳ್ಗಳ ಕಡಿಯಲೊಡನವ ದಿವ್ಯರೂಪಿನಲಿ ॥
ಅವನಿಜಾತೆಯ ಸುದ್ದಿ ಕೇಳಿದ
ರವಿಜನಾಳಹ ಮುಂದೆ ರಾಕ್ಷಸ
ನಿವಹ ಲಯದಲಿ ಸೀತೆನಿನಗಹಳೆನುತ ಸುರ ಹೋದ ॥ ೬೨ ॥

ಬಳಲಿದನು ರಘುನಾಥ ಬಿಸಿಲಿನ
ಜಳಕೆ ಪಲ್ಲವಿಸಿಪ್ಪಶೋಕೆಯು
ನೆಳಲ ಸಾರ್ದು ಸಮೀಪವೊಪ್ಪುವ ಕಮಲ ಪಂಕ್ತಿಗಳ ॥
ತಿಳಿಗೊಳನ ಹೊಕ್ಕಲ್ಲಿ ಹಿಂದಣ
ಬಳಲಿಕೆಯ ನೀಗಿದನು ಮೊಗವನು
ತೊಳೆದು ವಾರಿಯನೀಂಟಿ ಸಾಕಾರವನು ಸಾರಿದನು ॥ ೬೩ ॥

ಮುಗಿದುದಿಲ್ಲಿಗೆ ಸಂಧಿಯದರೊಳ
ಗೊಗೆದ ಪದ ಚೌಷಷ್ಟಿ ನಿರ್ಮಿತ
ವಘನಿವಾರಣನರಸಿಯನು ದಶಕಂಠ ಕಪಟದಲಿ ॥
ತೆಗೆದಶೋಕಾ ವನದೊಳಿರಿಸಲು
ನಿಗಮದೂರನು ಬನದೊಳರಸಿದ
ಮುಗುದ ಮೂರುತಿ ನರರಿಗೀಪರಿಯೆಂದು ತೋರಿಸಿದ ॥ ೬೪ ॥

---

## ೭ನೇ ಸಂಧಿ

ಪಲ್ಲ ॥ ಚಲನಭವನಿತಿಹಾಸ ಕಥನವ
ತಿಳಿಯ ಹೇಳುವೆ ಕೇಳಿ ನರಹರಿ
ಸಲಹಿದನು ಲೋಕೈಕ ವೀರನ ಪರಬಲಾಂತಕನ ॥

ಪದ ॥ ಬೇಡಿದವನಾ ಶೂಲಿಯಂಘ್ರಿಯ
ಬೇಡನವ ತಾನಿತರ ದೈವವ
ಬೇಡಿದವನೀ ಲೋಕವೆಲ್ಲವ ಬೇಡಿ ಕಡೆಗಾಣ ॥
ಬೇಡ ನಾಕಾ ಲೋಕಪಾಲಿಯ
ಬೇಡದಿರು ಬೇಡಾ ಕಪಾಲಿಯ
ನಾಡ ಮಾತೇನಾ ಕಪಾಲಿಯ ಹಂಗು ನಮಗಿಲ್ಲ ॥ ೧ ॥

ಹರಿಯು ವನದಲಿ ಕಂಡು ದೂರದಿ
ತರಣಿಸುತ ಹನುಮಂತ ದೇವನ
ಕರೆದು ಕಳುಹಿದ ನರರದಾರೋ ನೋಡಿ ಬಾಯೆನುತ ॥
ಅರಸನಿದ್ದಾ ತರುವ ಸಾರಲು
ತರಣಿಕುಲ ಕರ ಬಳಲಿ ನಿಪ್ರಿಯು
ಲಿರಲು ಸ್ವಪ್ನವ ಕಂಡು ಕಣ್ದೆರೆದೆಂದ ಲಕ್ಷ್ಮಣಗೆ ॥ ೨ ॥

ಬಳಲಿ ಕಾಲೊಡೆದಡವಿಗೊಳನಲಿ
ಮುಳುಗಿದಾರನು ಕಾಣದಾನಿರೆ
ಹೊಳೆವ ಕುಂಡಲದೊಟ್ಟ ಕಿರುಗಪಿ ಹರಿದು ಬಂದಿನ್ನು ॥
ಮುಳುಗಲೆತ್ತಿದನೆನಲು ಕೇಳ್ದಾ
ಫಲವನೆಂದನು ತಮ್ಮನೊಬ್ಬನು
ಬಲುಹಿನಗ್ಗದ ಭೃತ್ಯ ನಿನಗಹನಾತ್ಮಹಿತನಹನು ॥ ೩ ॥

ಮಾತ ಕೇಳುತ್ತನಿಲಸಂಭವ
ಮಾತೆಯಿತ್ತಾ ವರವ ನೆನೆದನು
ಚೂತಶಾಖೆಯನಲುಗಿ ದನಿಗೊಡಲರಸ ನೋಡಿದನು ॥
ಈತನಾರೆಂದೆನುತ ಹರಿಯಿರೆ
ವಾತಸಂಭವ ಬಂದು ಕಂಡನು
ಚೂತನೂತನ ಫಲದ ದಶಕವ ಕಾಣಿಕೆಯನಿತ್ತು ॥ ೪ ॥

ಹೊನ್ನ ಕುಂಡಲ ಹೊತ್ತ ಕಪಿಯಿಾ
ಹೊನ್ನ ಕಚ್ಚುಟವೆಂತು ಘಟಿಸಿತು
ತನ್ನ ಕಾಂಬುದಕೇನು ಕಾರಣವೆನಲು ಕಪಿ ನುಡಿದ ॥
ತನ್ನ ತಾಯುಪದೇಶವೆನಗಿದು
ನಿನ್ನ ಸಿರಿಚರಣಾಬ್ಜ ಗತಿಯೆನೆ
ನಿನ್ನ ಪೂರ್ವಾಪರವ ಹೇಳ್ಬೈ ಪಾಲಿಸುವೆನೆಂದ ॥ ೫ ॥

ನಿನ್ನ ರೂಪಿದು ಹೊಸತು ರಕ್ಕಸ
ಕುನ್ನಿಗಳ ಕಡು ಕಪಟದಳತೆಯು
ಹೊನ್ನ ಮೃಗ ಬಳಿವಿಡಿದು ಬಳಲಿಕೆಯಾಯ್ತು ನಗೆಯಾಯ್ತು ॥
ನಿನ್ನ ನಂಬುವರಮ್ಮೆಯೆಂದರೆ
ಮುನ್ನ ನೊಂದವರಳುಕುವರು ದಿಟ
ಎನ್ನ ಪತಿ ತರಣಿಜನ ನುಡಿಸುವೆ ಹರನ ಹೊಣೆಗೊಡುವೆ ॥ ೬ ॥

ಪರಮ ತೀರ್ಥದಲಪ್ಸರೇಶ್ವರ
ಧರಣಿ ದೇವರ ಶಾಪದಿಂದವೆ
ಕರಿಯ ರೂಪದಿ ಬಂದಬಂದರನಾ ಪ್ರಭಾಸದಲಿ ॥
ದುರುಳ ದಾನವ ಕೊಲುತಲಿಪ್ಪುದ
ನರಿಯ ಭಾರದ್ವಾಜ ಬಂದಾ
ಶರಧಿ ಮಜ್ಜನ ಮಾಡಲಟ್ಟಿತು ದಂತಿರಕ್ಕಸನು ॥ ೭ ॥

ಹರನೆ ಶಂಕರ ಭರ್ಗ ಭಯಹರ
ಶರಣು ಮೃತ್ಯುಂಜಯ ತ್ರಿಯಂಬಕ
ಕರುಣವಾರಿಧಿ ಭಾಳಲೋಚನ ಕಾಯ್ವುದೆಂದೆನುತ ॥
ಧರೆಗೆ ಕೆಡವಿದ ಜಡೆಯಲೋಡುತ
ತಿರುಗಿ ನೋಡುತ ಬೀದಿವರಿವುತ
ಕರಿಯ ಕೈಯೊಳಗಾಗುತಾಗುತ ಮುನಿಪನೋಡುತಿರೆ ॥ ೮ ॥

ಅರಸ ಕೇಸರಿಯೆಂಬ ಕಪಿವರ
ನಿರದೆ ಹರಿತಂದೊದೆದು ದೈತ್ಯನ
ಶಿರವನಪ್ಪಳಿಸಿದರೆ ಚಲ್ಲನೆ ಮುತ್ತು ಚೆಲ್ಲುತಿರೆ ॥
ಹರಣ ಹಾರಿತು ದಿವ್ಯ ರೂಪದಿ
ಸರಿದನಾತನು ಮುನಿಪನಾ ಕಪಿ
ವೆರಸಿ ಮುನಿಸಭೆಗೈದಿ ಹೇಳಿದ ವೀರನಾಳ್ತನವ ॥ ೯ ॥

ಕೇಳಿ ಮುನಿವರರೀತ ಬಲದಲಿ
ಬಾಲ ಶಶಿವರೌಳಿಯನು ಹೋಲುವ
ಹೇಳಲೇನದ ನನ್ನ ಪ್ರಾಣವ ಕಾಯ್ದನೆನೆ ಮೆಚ್ಚಿ ॥
ಬಾಳೆನುತ ವರವೀವೆನೆಂದರೆ
ಭಾಳನೇತ್ರನ ಶಕ್ತಿಯುಳ್ಳ ವಿ
ಶಾಲಮತಿಯುಹ ವಜ್ರಕಾಯದ ಮಗನ ಬೇಡಿದನು ॥ ೧೦ ॥

ವರವನಿತ್ತನು ಕಪಿ ಮುನೀಂದ್ರರ
ಹೊರೆಯಲಿರ್ದನು ಜನನಿಯುದ್ಭವ
ವೊರೆವೆ ಪುಂಜಿಕೆಯಪ್ಸರ ಸ್ತ್ರೀ ಹರನ ನಾಟ್ಯವಲಿ ॥
ಮರುಳು ಭೃಂಗಿಯ ತನುವ ಹಳಿದರೆ
ಕೆರಳಿ ಕಪಿಯಾಗೆಂದು ಶಪಿಸಲು
ಧರೆಯೊಳಂಜನೆ ಕುಂಜರಾಖ್ಯಂಗುದಿಸಿ ಜೆಳೆವುತಿರೆ ॥ ೧೧ ॥

ಮನದ ಮೋಹದಲೀಯಲೊಲ್ಲದೆ
ಮನೆಯೊಳಾತ್ಮಜೆ ಪುಷ್ಪವತಿಯೆಂ
ದೆನಿಸಿದದರಿಂದವನ ವಿಂಶತಿ ಸಹಿತ ಪಿತೃಕುಲವು ॥
ಇನಿತುವುಳಿಯದೆ ನರಕ ಕೂಪದಿ
ನನೆದರೈ ಬಹುಕಾಲ ವೃಷಳಿಯ
ದೆನಿಪ ತತ್ಸುತೆಗುಚಿತ ವರನನು ವನದೊಳರಸಿದನು ॥ ೧೨ ॥

ತನ್ನ ಮಗಳನು ಕೇಸರಿಗೆ ಸಂ
ಪನ್ನ ಮುನಿಗಳ ನಡುವೆ ಕೊಡಲವ
ಕನ್ಯೆಯಳ ಚೇಲವನು ಸೆಳೆದರೆ ಕೆರಳಿ ಮುನಿಕುಲವು ॥
ಮುನ್ನ ನಾವಿವಗಿತ್ತ ಮಗ ಮ
ತ್ತನ್ಯರಿಂದುದ್ಭವಿಸಲೆಂದೆನೆ
ತನ್ನ ತರಳಿಕೆಗಳುಕಿ ಕೇಸರಿ ತಪಕೆ ತೆರಳಿದನು ॥ ೧೩ ॥

ಮಡದಿ ಬಳಿಕಾ ಮುನಿಗಳನುಮತ
ವಿಡಿದು ಮಲಯಾದ್ರಿಯಲಿ ತಪವಿರೆ
ಮೃಡನು ಭೂಭಾಗವನು ನೋಡುತ್ತಬಲೆಯಾಶ್ರಮಕೆ ॥
ನಡೆದು ಬರೆ ವಲಿಮುಖರ ಸುರತವ
ಮೃಡನವಲ್ಲಭೆ ಕಂಡು ಬಯಸಲು
ಮೃಡನು ತದ್ರೂಪದಲಿ ಕೂಡಿದನಿಂದ್ರಿಯವ ಬಿಸುಟ ॥ ೧೪ ॥

ವಾಯುಭುಗ್ಭೂಷಣನ ತೇಜವ
ವಾಯು ತಂದೆಮ್ಮವ್ವೆಗಿಕ್ಕಲು
ರಾಯ ಕೇಳಾನುದಿಸಿದೆನು ಕಂಡೆಮ್ಮವ್ವೆ ಜನ ನುಡಿಗೆ ॥
ತೋಯರಾಶಿಯಲಡಗೆ ಮರುತನು
ತಾಯ ನೆಲೆಯನು ತಿಳುಹೆ ಮೊಲೆಯುಣ
ಲಾಯತಾಕ್ಷಿಯ ತರಲು ಕಳುಹಿದೆನೆನ್ನ ಬಾಲವನು ॥ ೧೫ ॥

ಹೇಳಲೇನದ ನಾನು ಮಾಡಿದ
ಖೂಳತನವನು ಬಾಲದಿಂದ ವಿ
ಶಾಲನೇತ್ರೆಯ ತಂದು ಚರಣಕ್ಕೆರಗೆ ಮುಖದಿರುಹಿ ॥
ಹೇಳಿದಳು ಕೌಪೀನ ಕುಂಡಲ
ವಾಲ ಗೋಚರವಾದುದಾವಂ
ಗಾಳುವನು ನಿನಗಾತನಾತನ ಭಜಿಸಿ ಬದುಕೆಂದು ॥ ೧೬ ॥

ಎಲವೊ ತಿಳಿ ನೀ ಕಂದಮೂಲವ
ಮೆಲುವರೆನ್ನಂತಪ್ಪ ಸತಿಯರು
ಕಳಿತ ಹಣ್ಣುಗಳುಣಿಸು ನಿನ್ನದು ಕಾಯ್ಗಳಿರಲೆನಗೆ ॥
ಬಳಿಕ ಹಸಿದಾ ರವಿಯ ರಥವನು
ಕಳಿತ ಹಣ್ಣೆಂದಾನು ತುಡುಕಲು
ನಳಿನಸಖ ಮುಳಿದೆರಗಲಸುವಳಿದಬ್ಧಿಯಲಿ ಬಿದ್ದೆ ॥ ೧೭ ॥

ತರಳ ಮಾರುತ ನಡುಗೆ ಸಾಸಿರ
ಕಿರಣಶರಧಿಯಲಾಯ್ದನೆಲುಗಳ
ಸರಸಿಜಾಸನಗೀಯೆ ಜೀವಿಸೆ ಹರನ ಮುಂದಿರಿಸೆ ॥
ಗಿರಿಜೆಯಿತ್ತಳು ವಜ್ರಕಾಯವ
ಹರನ ಸಮುಜೀವಿತವ ಬಳಿಕಾ
ಕಿರಣವಲ್ಲಭನಲ್ಲಿ ಕಲಿತೆನು ಶಾಸ್ತ್ರಸಂಗತಿಯ ॥ ೧೮ ॥

ಎರಡಣಲ ಹಲ್ಲುಗಳು ಹೋದುವು
ಶರಧಿಮಧ್ಯದಲದರಿನಿಂದವೆ
ಹರನು ಮಾಡಿದ ನಾಮಕರಣವ ಹನುಮನೆಂದೆನೆಗೆ ॥
ಅರಸ ಬ್ರಹ್ಮನ ಮಗಳಹಲ್ಯೆಯ
ಸುರಪ ಬೇಡಿದ ತರಣಿ ಬೇಡಿದ
ಸರಸಿಜಾಸನನೀಯದಾ ಮುನಿ ಗೌತಮಂಗಿತ್ತ ॥ ೧೯ ॥

ಮುನಿಪನಿಲ್ಲದ ಹೊತ್ತು ತದ್ರೂ
ಪಿನಲಿ ಸುರಪತಿಯವಳ ಕೂಡಲು
ಜನಿತನಾದನು ವಾಲಿಯೆಂಬ ಕುಮಾರ ಮತ್ತೊಮ್ಮೆ ॥
ಮನವು ಸೋತಾ ಭಾನು ಕೂಡಲು
ಮುನಿಯ ರೂಪದ ಮಗನ ಹಡೆದಳು
ಜನಪ ಸುಗ್ರೀವಾಖ್ಯರಿಬ್ಬರ ಹದನ ಮುನಿಯರಿಯ ॥ ೨೦ ॥

ಹೋದವೀ ಪರಿ ಹಲವು ದಿನಗಳು
ಹಾದಗದ ಹಸು ಮಕ್ಕಳಿಬ್ಬರ
ಹಾದಿಯನು ಮುನಿ ತಿಳಿದಹಲ್ಯೆಯ ಸುರಪ ಭಾನುಗಳ ॥
ಕ್ರೋಧದಲಿ ಶಪಿಸಿದನು ಕಪಿರೂ
ಪಾದರಿಬ್ಬರು ಸುಖದೊಳಿರುತಿರೆ
ಸಾಧುಸನ್ಮತ ವಾಲಿ ಪಡೆದನು ವರವ ತಪದಿಂದ ॥ ೨೧ ॥

ಬಳಿಕ ಗುರುಪೂಜಾರ್ಘಸಿನಜನ
ಬಳಿಯೊಳಾಸಿರೆ ಕೇಳು ಮುಂದಣ
ಕಲಹವನು ಸುಗ್ರೀವ ಬಾಲಿಯು ವೈರ ಕಾರಣವ ॥
ಖಳನು ದುಂದುಭಿ ಮಹಿಷರೂಪನು
ಕಲಹವನು ಶಿವನಲ್ಲಿ ಬೇಡಲು
ಕಳುಹಿದನು ಪುರಮಥನ ಬಾಲಿಯ ಬಳಿಗೆ ಪೋಗೆಂದು ॥ ೨೨ ॥

ದನುಜ ತಾಸೀರೈದು ಯೋಜನ
ತನುವಿನಗಲದಲಿಪ್ಪ ಮಹಿಷಮುಖ
ವನಗಜಂಗಳ ಕೋಟಿ ಸತ್ವದ ಭುಜಪರಾಕ್ರಮನು ॥
ಮನುಜ ದಿವಿಜರ ಬಗೆಯದಾದನು
ಮನುನುಥಾರಿಯೆ ಬಲ್ಲನೊಬ್ಬನು
ವನಚರಂಗಳ ಚಾರಿವರಿವನು ಕೊಣಕಿ ದಣಿವಂತೆ ॥ ೨೩ ॥

ಬೆಟ್ಟದಂತಿಹ ದನುಜ ಬಾಲಿಯ
ಪಟ್ಟಣಕ್ಕುಬ್ಬಸವ ಮಾಡಿಗ
ನಟ್ಟಸಮರಂಗವಲಿ ದನುಜನ ಬಾಲಿ ಕೆಡಹಿದನು ॥
ಅಟ್ಟಿಯನು ಮಾತಂಗನಿಹ ಗಿರಿ
ಗಿಟ್ಟಡಾ ಮುನಿ ನೊಂದು ಶಪಿಸಿದ
ನೆಟ್ಟಗಿಲ್ಲಿಗೆ ಬರಲು ವಾಲಿಗೆ ಮರಣಕರವೆಂದು ॥ ೨೪ ॥

ಅವನ ಮಗ ಮಾಯಾವಿ ತಪದಲಿ
ಶಿವನ ಮೆಚ್ಚಿಸಲೀಶನಿತ್ತನ
ದವಗೆ ದಶಗಜಕೋಟಿ ಸತ್ವವ ಪಡೆದು ಬಾಲಿಯನು ॥
ಕವಿಸಲೆಂದವ ಬಂದನಾಗಳೆ
ಕವಿದು ಹಳಚಿದ ಕಾದಿ ಸೋಲದೆ
ಜವಗೆಡಲು ವರುಷಾಂತಕಿಳಿದನು ಬಿಲವನಾ ದನುಜ ॥ ೨೫ ॥

ಉರಿಯ ಶೇಷವ ಶತ್ರುಶೇಷವ
ಪಿರಿದು ಋಣಶೇಷವನುಪೇಕ್ಷಿಸಿ
ಯಿರಿಸಿ ಬಿಡಲದು ಹೆಚ್ಚಿ ಮರಳಿದು ಮಾರಿ ಬಪ್ಪಂತೆ ॥
ತಿರುಗಿ ಹೊಡ್ಡಿದ ದನುಜನುಳಿದರೆ
ತರುಚರಂಗಳ ಬದುಕಲೀವನೆ
ಸುರವಿರೋಧಿಯೆನುತ್ತ ತಮ್ಮಗೆ ಬುದ್ಧಿಗಲಿಸಿದನು ॥ ೨೬ ॥

ಕುರುಹು ಮರಣಕೆ ನೊರೆಯೆ ತನಗೆಂ
ದರುಹಿ ಬಿಲದೊಳು ಬಾಲಿ ಕಾದಲು
ಬಿರು ಬೆವರಿ ನೊರೆಗಟ್ಟಿಬರಲಂಜಿದನು ಸುಗ್ರೀವ ॥
ತೆರೆದ ಬಿಲವನು ಮುಚ್ಚಿ ರಾಜ್ಯದ
ಹೊರಿಗೆಗೇರಿದ ಸಿಂಹಪೀಠವ
ಮುರಿದು ದನುಜನ ಬಾಲಿ ಬಂದನು ಕಂಡನುತ್ಸವವ ॥ ೨೭ ॥

ಕೇಡಹಾರಿದನೆನ್ನ ತಮ್ಮನು
ಕೋಡಗತ್ವವ ಮೆರೆದ ತಪ್ಪೇ
ನಾಡಲೇತಕೆ ಕೊಲುವೆನೆನುತಿರೆ ಶಾಪದದ್ರಿಯಲಿ ॥
ಬೀಡು ನಮಗಾಯ್ತರಸ ಬಾಲಿಯು
ಕೇಡುಹಾರುವ ರವಿಜ ಕಾರ್ಯದ
ಪಾಡು ನಿಮಗುಂಟವನ ಸಖ್ಯದಿ ಕಾರ್ಯವಹುದೆಂದ ॥ ೨೮ ॥

ಚಲನಭವ ಪೂರ್ವಾಪರಂಗಳ
ತಿಳಿಯಲಿತಿಹಾಸವನು ಹೇಳಲು
ಛಲದ ರಾಯರ ದೇವನಭಯದ ಕರವ ನೆಗಹುತ್ತ ॥
ಹಲವು ಮಾತೇನೆಲವೊ ಹನುಮಾ
ಸಲಿಸಿವೆನು ಸೀನೆಂದ ತೇಜವ
ಕಲಿಯೆ ನಿನ್ನಭಿಮತವನಿತ್ತೆನು ತಮ್ಮನಾಣೆಂದ ॥ ೨೯ ॥

ನಾಳಿಕಾಕ್ಷನು ಹರಿಯ ತನಯನ
ಪಾಲಿಸಿದೆನೆಲೆ ಹನುಮ ವನದಲಿ
ಹೇಳು ಸುದ್ದಿಯ ಹತ್ತು ದಿನ ಹದಿನೈದು ದಿನದೊಳಗೆ ॥
ಕೇಳಿದುದನೆನಲರಸ ವನದಲಿ
ಕಾಳ ರಕ್ಕಸನೊಬ್ಬ ಸತಿಯನು
ಗೋಳಿಡುತ್ತಿರಲೊಯ್ದುದುಂಟೆಂದನು ಸಮೀರಭವ ॥ ೩೦ ॥

ಕೇಳಿ ಸುದ್ದಿಯ ರಾಮ ಕಿಬ್ಬದಿ
ಕೋಲುಗೊಂಡಂತಳಲಿ ಮರುಗಲು
ಹೇಳಿದನು ಹನುಮಂತ ಬಾಲಿಯ ನಂಟ ರಾವಣನು ॥
ಬಾಲಿ ತಾ ನಿಮಗಹಿತನಲ್ಲವೆ
ಕೋಲ ಮೊನೆಯಿಂದವನ ಕೆಡಹಿದ
ರಾಳು ತಾನಹ ನಿಮಗೆ ರವಿಸುತ ಸೇನೆಸಹಿತೆಂದ ॥ ೩೧ ॥

ಸಾವಿರಕ್ಷೋಹಿಣಿಯು ಸಹಿತಾ
ರಾವಣನು ದಿಗ್ವಿಜಯ ಮಾಡಲು
ದೇವರಾಯನ ಸೂನು ಕಂಕಾಳಲವೃತಿ ಪಾಂಥಿಯು ॥
ಮೊವುತಿರೆ ಉಬ್ಬಸದಿ ದನುಜಗೆ
ಸಾವು ಸಂಘಟಿಸಿತ್ತು ತೊಟ್ಟಿಲ
ಕಾವಿನಲಿ ಕಟ್ಟಿರ್ದಲಿದ್ದನು ಹಲವು ವತ್ಸರವು ॥ ೩೨ ॥

ಕಾವುದೆನ್ನನು ವೀರನೀ ಸು
ಗ್ರೀವನಂದದಲೆಂದು ಹಲುಬಲು
ಜೀವಗಳ್ಳನ ಬಿಟ್ಟನೆಲವೋ ಮುಂಪೆ ಸಿನಗೊಂಡು ॥
ನೋವು ಬಂದರೆ ನಾವು ನೆರವಹೆ
ವಾವ ಭಯ ನಿನಗಿಲ್ಲವೆಂದಿಪ
ಸಾವುದುಚಿತವು ಬಾಲಿಯಿರೆ ಗೆಲಲರಿದು ರಾವಣನ ॥ ೩೩ ॥

ತೋರು ಬಾಲಿಯ ಕೊಂದು ತೋರುವೆ
ತೋರಲವ ಬಳಿಕಾಳುತನವನು
ಏರಿ ಸಿಂಹಾಸನವನಾಳಲಿ ರಾಜ್ಯಭೋಗವನು ॥
ಬೇರೆ ಮಾತೇನಿನ್ನು ತವಕದಿ
ತೋರು ರಾವಣ ಬಾಲಿಗಳನೆನ
ಲೇರಿದನು ಹರಿ ಹರಿದು ಗಿರಿಯನು ನುಡಿದನಿನಜಂಗೆ ॥ ೩೪ ॥

ಸಲೆ ಜಗತ್ರಯದೊಡೆಯ ಹನುಮನ
ಕಳುಹಿ ತಮ್ಮನ ಮಲಗಿ ರಮಣಿಯು
ಹಲುಬುತಿರ್ದನು ತಮ್ಮ ತಿಳಿಹುತ್ತಿರ್ದನೆಂಬಲ್ಲಿ ॥
ತಿಳಿಯೆ ಮುಗಿದುದು ಸಂಧಿ ಪದನವು
ಬಳಿಕ ಭಗಣ ತ್ರಿಗುಣ ಸಂಖ್ಯೆದಿ
ಲುಳಿದುದೊಂದೆನೆ ರಾಮ ಸಲಹಿದ ಭಕ್ತ ಸಂತತಿಯ ॥ ೩೫ ॥

---

## ೮ನೇ ಸಂಧಿ

ಪಲ್ಲ ॥ ದೇವ ಗಡ ಕರುಣದಲಿ ಲೋಕವ
ಕಾವ ಗಡ ಕಪಟದಲಿ ಕೊಲುವು
ದಿದಾವ ಸಾಹಸವಕಟ ರಾಘವ ಕೊಂದ ಬಾಲಿಯನು ॥

ಪದ್ಯ ॥ ಎಲೆ ದಿವಾಕರತನಯ ನಿನ್ನಯ
ಛಲವು ಫಲಿಸಿತು ಹರಿ ಮನುಷ್ಯರ
ಚೆಲುವ ರೂಪದಿ ಬಂದು ಸಲಹಿದ ನಿನ್ನ ಬಾಲಿಯನು ॥
ಕೊಲುವೆನೆಂದನು ಕಾಂಬೆ ನಡೆಯೆನೆ
ಜಲಜಲೋಚನೆ ಬಿಸುಟ ತೊಡಿಗೆಯ
ತಲೆಯಲಿಟ್ಟಾ ಗಿರಿಯನಿಳಿದನು ಹರಿಯ ಕಾಣಿಕೆಗೆ ॥ ೧ ॥

ರಾಮನೋ ನಯನಾಭಿರಾಮನೊ
ಕಾಮನೋ ಕಂಗಳಿಗೆ ಭಕ್ತ
ಪ್ರೇಮನೋ ಶರಣರಿಗೆ ಕಾಮಿತ ಕಾಮಧೇನುವಲ ॥
ಶ್ರೀಮನೋವಲ್ಲಭನೊ ಮುನಿಹೃ
ದ್ಧಾಮನೋ ಸತ್ಪುಣ್ಯ ನಾಮನೊ
ಸ್ವಾಮಿ ತಪ್ಪನೆನುತ್ತ ಚರಣಕ್ಕೆರಗಿದನು ರವಿಜ ॥ ೨ ॥

ತೊಡಿಗೆಯನು ಕಾಣಿಕೆಯನಿತ್ತರೆ
ಪೊಡವಿಪತಿ ಕರ ನೊಂದು ಸುಯ್ದನು
ಪೊಡವಿಜೆಯನಾ ಪಾಪಿಯಗಲಿದೆಯೆಂದು ಹಲುಬುತಿರೆ ॥
ಪೊಡವಿಪತಿ ನೋಯದಿರು ಬಾಲಿಯು
ಕೆಡಹಿಕೊಟ್ಟರೆ ಭೃತ್ಯ ನಾನಹೆ
ಕೊಡು ಪರೀಕ್ಷೆಯನವನ ಮರಣಕೆ ನಂಬುಗೆಯನೆಂದ ॥ ೩ ॥

ಹರನ ಗಿರಿಯನು ಮಗುಚಬೇಕೇ
ತರಣಿಯನು ತರಬೇಕೆ ಮದದಿ
ಕ್ಕರಿಯ ದಾಡೆಯ ಮುರಿಯಬೇಕೇ ಪರೀಕ್ಷೆಯೆಂತೆನಲು ॥
ಅರಸ ನಮಗನಿತೇಕೆ ಬಾಲಿಯ
ಕರದಲಳಿದವನಟ್ಟೆ ಯೋಜನ
ಕಿರಲು ಬೇಸರದೊಮ್ಮೆ ನೆಗಹೆನೆ ತೋರು ನಡೆಯೆಂದ ॥ ೪ ॥

ದೃಷ್ಟಿಪಥದಿಂದರಿವನುತ್ತಮ
ನೆಟ್ಟನುಸುರಿದೊಡರಿವ ಮಧ್ಯಮ
ಕಷ್ಟರೈ ಕರ ದಾಕ್ಷಿಣಾತ್ಯರು ಮೂಢಬುದ್ಧಿಗಳು ॥
ದೃಷ್ಟನೈ ಸುಗ್ರೀವನನುಚಿತ
ದೃಷ್ಟನದು ನೃಪರಿಂಗೆ ಶವವನು
ಮುಟ್ಟಲಾಗದುಯೆಂದು ಬಿಲ್ಲಲಿ ನೆಗಹಲನುಗೈದ ॥ ೫ ॥

ಅಟ್ಟಿಯನು ಧನು ಕೊಪ್ಪಿನಲಿ ಮಿಡಿ
ದಿಟ್ಟರದು ಯೋಜನಕೆ ಹಾರಿತು
ಮುಟ್ಟಿ ಮರಳುತ್ತಿರಲು ಕಂಡತಿಗಳದ ಸುಗ್ರೀವ ॥
ಕಟ್ಟೊಣಗಿ ಲಘುವಾಯ್ತು ಮಾಣಲಿ
ಬೆಟ್ಟತಾಗಿಯೆ ಬೆಳೆದ ತಾಳೇ
ಳಿಟ್ಟ ಸರಳೊಂದರಲಿ ಕೆಡೆದರೆ ವಾಲಿಗದು ಕುರುಹು ॥ ೬ ॥

ದೂರಬಹುದೀಶ್ವರನ ಸೋತರೆ
ತೋರು ನೀ ತಾಳೇಳನೆಂದರೆ
ಮೂರು ಯೋಜನದುರಗ ಬಾಲವ ಸುತ್ತಿ ಮಲಗಿಹುದು ॥
ತೋರಲುರಗನ ಮೇಲೆ ಬೆಳೆದಿಹ
ವಾರುಮರ ಮತ್ತೊಂದ ರಾಘವ
ನೂರಿ ಬಾಲದ ಮೇಲೆ ಬಿಲ್ಲಿನ ತಿರುವನೇರಿಸಿದ ॥ ೭ ॥

ನೊಂದು ಸರ್ಪನು ತೆಕ್ಕೆ.ನಿಗುಚಿದ
ಡಂದು ಮರಗಳು ಸರುತದಿಂದಿರ
ಲೊಂದು ಬಾಣದಿ ತರಿದು ಬಿಸುಟರೆ ತಾಳೆವುರುಳುತಿರೆ ॥
ಬಂದು ಚರಣದ ಮೇಲೆ ಬಿದ್ದನು
ತಂದೆ ನಿಮ್ಮನು ಕೆಟ್ಟ ನುಡಿಪೆನು
ಮಂದಬುದ್ಧಿಯ ತಪ್ಪನೆಣಿಸದಿರೆಂದ ಸುಗ್ರೀವ ॥ ೮ ॥

ಮಹಿಯನಗ್ಗದ ರೋಮ ಕೂಪದಿ
ವಹಿಸಿದಾ ವೈಕುಂಠನೆನಿಪನ
ನಹಿಪಧರಿಸಿದನವನನಾ ವಾಸುಕಿಯರಿಬ್ಬರನು ॥
ಸಹಿತ ಧರಿಸಿದನಬ್ಧಿಯಬ್ಧಿಯ
ನಹಹ ಕುಡಿದನಗಸ್ತ್ಯ ಹಿರಿಯರ
ಸಹಿಮೆಗವಧಿಗಳುಂಟೆ ದೈವಜ್ಞರಿಗೆ ಸರಿಯಿಲ್ಲ ॥ ೯ ॥

ಕೆಡಹಿ ಕೊಡುವನು ರಾಮ ಬಾಲಿಯು
ಪಡೆಯು ಸಹಿತಾಳಾಗಿ ರಾಮನ
ಮಡದಿಯನು ತೋರಿಸುವ ಲಂಕೆಗೆ ಹೋಗಿ ಸುಗ್ರೀವ ॥
ನುಡಿದು ತಪ್ಪದವೋಲು ಹಂಪೆಗೆ
ನಡೆದು ನಂಬುಗೆಯಿತ್ತರಿಬ್ಬರು
ಕಡೆಗೆ ತಪ್ಪಿದರಿಂಗೆ ಶಿಕ್ಷಾಕರ್ತು ವಿರುಪಾಕ್ಷ ॥ ೧೦ ॥

ರವಿಕುಲಾನ್ವಯ ಕುಮುದಬಾಂಧವ
ಪವಿಧರಸ್ತುತ ಪಾವನಪ್ರಿಯ
ನವಪತಾಮಹನಯ್ಯನೊಯ್ಯನೆ ಮಡದಿಯಗಲಿರಲು ॥
ದಿವಸದೊಡೆಯನು ಕಾಣಲಾರದೆ
ಸವೆದ ಚೆಲುವಿಂ ಪಡುವಲಿಳಿದನು
ಭುವನಪತಿ ವಿರುಪಾಕ್ಷಲಿಂಗನ ಸನ್ನಿಧಿಯೊಳಿರ್ದ ॥ ೧೧ ॥

ತರಣಿಯುದಯದಲುಪ್ಪವಡಿಸಿದ
ಸಿರಿ ಮನೋಹರಮೂರ್ತಿಯೆಂದನು
ತರುಚರೇಂದ್ರರ ಕೂಡಿ ಕಳುಹುವ ಬಾಲಿಯೊಡನೀಗ ॥
ಧುರಕೆ ನೀ ನಡೆ ನಮ್ಮ ಬೆಂಬಲ
ವಿರಲು ನಿನಗಿನ್ನಾವ ಭಯವಿ
ಲ್ಲೊರಸಿಬಿಡುವೆನು ಕಾದು ನೀ ಹೋಗಂಜಬೇಡೆಂದ ॥ ೧೨ ॥

ಹರುಷದಲಿ ಹೊರೆಯೇರಿ ರವಿಜನು
ಹರಿಯ ನೇಮವ ಪಡೆದು ಹರಿಜನ
ಹರಿಬಕೋಸುಗ ಹರಿದು ಬಾಗಿಲೊಳಿರ್ದು ಮೂದಲಿಸೆ ॥
ಕರೆಯ ಕೇಳಿದ ಬಾಲಿ ತಮ್ಮನು
ಹಿರಿದು ಸೊಕ್ಕಿಹನೊರೆಸಿ ಬಿಡುವೆನು
ಪುರವಿದಾರಣ ಕಾಯಲೊಮ್ಮೆಗೆ ಕೊಲ್ಲದಿರೆನೆಂದ ॥ ೧೩ ॥

ಮನೆಯ ಹೊರವಂಟಿಂದ್ರನಂದನ
ನಿನಜನೊಳು ಸಮರಂಗವಿಡಿದನು
ಕನಲಿ ಕಿಡಿಕಿಡಿಯಾಗಿ ಹಲುಮೊರೆವುತ್ತ ಸೂಠಿಯಲಿ ॥
ಮೊನೆಯೊಳಗೆ ಹೊಯ್ದಾಡೆ ಸುತ್ತಣ
ವನದ ತರು ಹುಡಿಯಾಯ್ತು ಕಪಿಗಳು
ಮನದ ತಾಮಸವೊಗೆದು ಖತಿಯಾವರಿಸಿ ಕಿಡಿಗೆದರೆ ॥ ೧೪ ॥

ಹೊಕ್ಕು ತಿವಿದನು ಬಾಲಿ ತಮ್ಮನ
ಉಕ್ಕಿನಂದದ ದೇಹವದುರಿತು
ಮುಕ್ಕುಳಿಸಿ ಮೂಗಿನಲಿ ರಕ್ತದ ಧಾರೆ ಸುರಿಯುತಿರೆ ॥
ಬಿಕ್ಕಿ ಬಿರಿದನು ಮುಷ್ಟಿ ಘಾತದ
ಲುಕ್ಕಿ ತಮದಲಿ ರವಿಜನಣ್ಣನ
ಮಿಕ್ಕು ತಿವಿದರೆ ಡೆಂಡಣಿಸಿದನು ಬಾಲಿ ಬಸವಳಿದು ॥ ೧೫ ॥

ಕೆರಳಿ ಝುಮ್ಮಿಡುತೆದ್ದು ತಮ್ಮನ
ಶಿರವನಪ್ಪಳಿಸಿದರೆ ತಿರ್ರನೆ
ತಿರುಗಿಬಿದ್ದನು ಶಿರವ ತಡೆವುತ ಮತ್ತೆ ಚೇತರಿಸಿ ॥
ಹರಿಗಳಿಬ್ಬರು ಹೋರುತಿರೆ
ಹರಿ ನಿಧಾನಿಸಿ ಕುರುಹನರಿಯದೆ
ಮರನ ಮರೆವಿಡಿದೆಸಲು ನೆರೆಯದೆ ಮೂಗನಾಗಿರ್ದ ॥ ೧೬ ॥

ಹರಿಯುಗಳ ಸಮರಕ್ಕೆ ಹರಿತಹೆ
ಹರಿ ನಭೋಗತಿಗೆಟ್ಟನತ್ತಲು
ಹರಿಯ ಕಂಗಳು ತಿರುಗಿ ಮುಚ್ಚಿದ ಸಾವಿರಾಲಿಗಳ ॥
ಅರಿದೆಸಲು ಬೇಕೆನುತ ಬಹ ನರ
ಹರಿ ನಿಧಾನಿಸಿ ಬಿಲ್ಲ ಮರೆದನು
ಹರಿ ತನೂಜನ ಕೂಡೆ ಕಾದಿತು ಜಾಂಬವಾದಿಗಳು ॥ ೧೭ ॥

ಹುರುಳುಗೆಟ್ಟನು ರವಿಜನಂಗದ
ಲರುಣಜಲದೊರತೆಗಳು ಮಸಗಿತು
ಹೊರಳುತಿರಲೆಡಹಾಯ್ದು ತೆಗೆದರು ಹನುಮ ಜಾಂಬವರು ॥
ತರಣಿತನಯನ ಕೊಂಡು ಶಾಪದ
ಗಿರಿಯನೇರಿದರವರು ಸಾಸಿರ
ಕಿರಣ ಮಗನಪಜಯಕೆ ತಲೆಗುತ್ತಿದನು ಶರಧಿಯಲಿ ॥ ೧೮ ॥

ಇಂದು ನೋಡುವೆನೆನ್ನ ಕಂದನ
ಕುಂದು ಹೆಚ್ಚನೆನುತ್ತ ದಿನಪತಿ
ಬಂದನುದಯಾಚಲಕೆ ರಾಘವ ಬಂದನವನೆಡೆಗೆ ॥
ಕೊಂದವನು ನೀನೈಸೆ ಸುರಪನ
ಕಂದ ನಗುವನು ನಿನ್ನ ನುಡಿ ದಿಟ
ವೆಂದು ಬಗೆದೆನಗಿನಿತು ಘನವೇ ರಾಮ ಹೇಳೆಂದ ॥ ೧೯ ॥

ಒಣಮರನ ನೆಸಬಹುದು ಕೋಣನ
ಹೆಣನ ನೆಗಹಲು ಬಹುದು ಚೌಕದ
ಲುಣಬಹುದತಿನಂಟುಗೊಳಬಹುದರಿಯ ಕಡುಗಲಿಸಿ ||
ರಣದೊಳಗೆ ರಾವಣನು ಬಾಲಿಯು
ಕೆಣಕಿ ಗೆಲಿದರೆ ನಿನ್ನ ಹವಣೇ
ತ್ರಿಣಯುಗರಿದೆಲೆ ನಂಟೆ ಮನದಂಘವಣೆ ಲೇಸೆಂದ || ೨೦ ||

ನೀನೆಲ್ಲೈ ಬಲು ವೀರನಪ್ಪುದ
ನಾನು ಕಂಡೆನು ಸಹಸದಳತೆಯು
ಜಾನಕಿಯು ಖಳಗಿತ್ತು ಕಾಡಲಿ ತೊಳಲುತಿಹ ನಿನ್ನ ||
ನಾನು ನಂಬಿದರಿದುವೆ ಕಂಡೆನು
ಹಾನಿಯಸುವಿಂಗಳಿವು ತಪ್ಪಿತು
ಮಾನವರು ಬಹುಭಾಷಿಗಳು ದಿಟವರಿಯಬಹುದೆಂದ || ೨೧ ||

ನಿಂದಿಸುವ ನುಡಿಗೇಳಿ ಲಕ್ಷ್ಮಣ
ನೆಂದನೆಲವೋ ಬಗುಳಬೇಡೆನೆ
ತಂದೆ ಸೈರಿಸು ನೊಂದು ನುಡಿದರೆ ನಮಗೆ ಮನಕತವೇ ||
ಒಂದು ರೂಪಿಬ್ಬರಿಗೆ ಕುರುಹನು
ಮುಂದೆ ಕೊಟ್ಟರೆ ಕೊಂದುಕೊಡದಿರೆ
ಕೊಂದವನು ನಾನಲ್ಲದವನೇ ಬಳಿಕ ಹೇಳೆಂದ || ೨೨ ||

ಕೇಳಿ ಧೈರ್ಯದಲೆದ್ದು ಮರುದಿನ
ಬಾಲಿಯೊಳು ಕಾದಲ್ಕೆ ಹೋಗುತ
ಮಾಲೆ ಹೂವಿನ ಕುರುಹು ತನಗೆನುತರ್ಕನಂದನನು ||
ಬಾಲಿಯನು ಮೂದಲಿಸಿ ಕರೆದನು
ಮೂಲ ಗೆಲುವಿಂದುಬ್ಬಿ ಬೇಗದ
ಲಾಳುದೋರಿದರಿಂದು ತೋರುವೆ ನಿನಗೆ ಹೊಸ ಪರಿಯ || ೨೩ ||

ಎನಲು ಕೇಳುತ ಕನಲಿಯಿಂದ್ರನ
ತನಯ ಹೊರವಡೆ ತಾರೆ ತಡೆದಳು
ಮನುಜ ಬೆಂಬಲವಾದನೆಂಬುದ ನಾನು ಕೇಳಿದೆನು ||
ಎನಲು ಸತಿ ನೀನೇನ ಬಲ್ಲೈ
ಮನುಜನಾಗಲಿ ದನುಜನಾಗಲಿ
ಅನುವರಾಂಕಕೆ ಕರೆಯೆ ನಿಂಬರೆ ವೀರ ಸುಡಲೆಂದ || ೨೪ ||

ಇದಿರಲಾಂತರೆ ಮನುಜನಾಗಲಿ
ವಿದಿತ ದಾನವ ದೇವನಾಗಲಿ
ಕದನದಲಿ ಗೆಲಿವಲ್ಲದುಳಿವನೆ ಸುರಪನಂದನನು ||
ಸುದತಿ ಬಿಡು ಬಿಡು ಸರಗನಹಿತನ
ತ್ರಿದಶರೊಳಗಿಟ್ಟಿಲ್ಲದಿರೆನೆನು
ತುದಧಿಮಥನನು ಹೊಯ್ದು ಹಳಚಿದ ತರಣಿನಂದನನ || ೨೫ ||

ನಿನ್ನಿನಂತೋಡಿದರೆ ಬಿಡೆನೆಲೆ
ಕುನ್ನಿ ಕಾದುವ ಭರವ ನೋಡುವೆ
ಯಿನ್ನು ನೀ ತಲೆವೆರಸಿ ಹೋದರೆ ಸತಿಯು ನಿನಗಿತ್ತೆ ||
ಮುನ್ನಿನಂತಲ್ಲೆನುತ ಭರದಲಿ
ತನ್ನ ತಮ್ಮನ ಹೊಯ್ದು ಕೆಡಹಿದ
ನಿನ್ನು ಬಗುಳೆಂತೆಂತು ಮೂದಲೆ ಬಾಯ ಬಿರಿಸೆಂದ || ೨೬ ||

ಕೈದುವಿಬ್ಬರಿಗಿಲ್ಲ ಮುಷ್ಟಿಯು
ಕೈದು ಹಳಚಿದರೇನ ಹೇಳುವೆ
ಹೊಯ್ದು ಹೊಯ್ಗಳ ದನಿಗೆ ಮಾರ್ನುಡಿಗೊಡಲು ಗಿರಿ ಗಹನ ||
ಬೈದು ಮೂದಲಿಸುತ್ತ ಕೋಪದಿ
ಸುಯ್ದು ಕಿಡಿಕಿಡಿಯಾಗಿ ಕಪಿಗಳು
ಹೊಯ್ದು ಹೋರುತ್ತಿರಲು ರಘುಪತಿ ಕಂಡು ಬೆರಗಾದ || ೨೭ ||

ಎಲೆಲೆ ಶಿವ ದಿಟಕಿವರು ಕಪಿಗಳೆ
ವಿಲಯಕಾಲದ ರುದ್ರನಂದದಿ
ಛಲದಿ ವೀರರು ಹೊಕ್ಕು ಹೋರುವರೆರಡು ರೂಪಿನಲಿ ||
ಎಲೆಲೆ ಕುಲಗಿರಿ ಬಾಲವೊತ್ತವೊ
ಭಲರೆ ಭಾಪುರೆ ಕಪಿಗಳಿಬ್ಬರು
ಕಲಿಗಳಿವರಿಗೆ ಪ್ರತಿಯು ಕಾಣೆನು ಭುವನ ಮೂರರಲಿ || ೨೮ ||

ಬಿಡದೆ ಕಾದಿದರಿಬ್ಬರೊಡಲುಗ
ಲೊಡೆದು ಸುರಿದರುಣಾಂಬು ಕಡಲಿಡೆ
ನಡುಗಿ ಡೆಂಡಣಿಸುತ್ತ ಸುಗ್ರೀವಾಂಕ ಧೃತಿಗೆಡಲು ||
ಹಿಡಿದು ಸದೆದನು ಮೋಹವಿಲ್ಲದೆ
ಮಿಡುಕುಗೆಟ್ಟನು ರವಿಜ ರಾಘವ
ತೊಡಚಿ ಬಾಣವ ಬಿಟ್ಟ ಬಾಲಿಯ ಮೇಲೆ ಕಡುಗನಲಿ || ೨೯ ||

ಉರಿಯನುಗುಳುವ ಬಾಣ ಹರಹರ
ಹರಿಭವನ ಹರಣಕ್ಕೆ ಬಂದುದು
ಉರವ ಧಟ್ಟುಗಿಯಲ್ಕೆ ಬಿದ್ದನು ಬಾಲಿ ತಲೆಯೂರಿ ॥
ನರಕಿ ಮೋಸದಲೆನ್ನ ಕೊಲಿಸಿದೆ
ನೆರೆದ ಛಲ ನಿನಗಿಂದು ಸಂದುದೆ
ಹರಹರಾ ಶಿವ ಶಿವ ಮಹಾದೇವೆನುತ ಹೊರಳಿದನು ॥ ೩೦ ॥

ಪೊಡವಿಪತಿ ಶಂಕಿಸುತ ಬರುತಿರೆ
ನುಡಿದನೆಲೆ ಕರುಣಾಳು ತನ್ನನು
ಅಡಗಿ ಕೊಲುವಂತಾನು ದ್ರೋಹಿಯೆ ದೇವರಡಿಗಳಿಗೆ ॥
ಕಡೆಗೆ ರಾಘವ ಕಪಿಯನಿದಿರಲಿ
ಕೆಡಹಲಾರದೆ ಮರನ ಮರೆಯಲಿ
ಕಡಿದನೆಂಬಪಕೀರ್ತಿಭಾಜನನಾದೆ ನೀನೆಂದ ॥ ೩೧ ॥

ದಡಿಗ ರಾವಣನೆನಗೆ ಗಣ್ಯವೆ
ಹಿಡಿದು ತಲೆಗಳ ಮುರಿದು ಸೀತೆಯ
ಕೊಡಲು ನೆರೆಯನೆಯೊತ ನರೆ ಸೊರಹಿದರೆ ನಂಬಿದೆಲ ॥
ಉಡಲು ಬಹುದೇ ತೊಗಲು ನನ್ನೀ
ಯಡಗು ಬೋನಕ್ಕಹುದೆ ರಾಘವ
ಮಡದಿಯನು ಖಳನೊಯ್ಯೆಯೆನ್ನಲಿ ಮೆರೆದೆ ಪೌರುಷವ ॥ ೩೨ ॥

ಅರಿಯೆನೆಲವೋ ಮುನ್ನ ನಿನ್ನನು
ಮರುಗದಿರು ಬದುಕುವರೆ ಕಾವೆನು
ಉರಿವ ವೇದನೆಗಳೆದು ಮುನ್ನಿನ ಪರಿಯಲಿರಿಸುವೆನು ॥
ಹೊರಿಗೆಯೇನೆನೆ ನಿನ್ನ ಮೂರ್ತಿಯ
ನಿರುಗೆಯಿದಿರಲಿ ಹರಣವಳಿವೆನು
ಬರಿದೆ ಕಾಡದಿರಿನ್ನು ನಿನ್ನಲಿ ಕೂಡಿಕೊಳ್ಳೆಂದ ॥ ೩೩ ॥

ಉರಗವಿಷ ತಲೆಗೇರಿ ಸಾಯರೆ
ಮರನ ಕೊಂಬುಡಿದಲ್ಲಿ ಸಾಯರೆ
ಶರಭ ಹರಿಶಾರ್ದೂಲ ಘಾತದಲುಗ್ರ ರೋಗದಲಿ ॥
ಹರಣವಳಿಯದೆ ನಿನ್ನ ಮಂಗಲ
ಸಿರಿಪದಾಂಬುಜದಿದಿರಲಳಿವಂ
ಥರರೆ ತನ್ನಂತಾರು ಧನ್ಯರು ಸುಡಲಿ ಸಂಸೃತಿಯು ॥ ೩೪ ॥

ವಲ್ಲಭೆಯನೊಯ್ದವನ ತೋರಲು
ಬಲ್ಲೆನೆಂದೀ ಧೂರ್ತ ಮೋಸದಿ
ಕೊಲ್ಲುಯೆಂದರೆ ಮುಂದು ಕಾಣದೆ ವಿರಹಕಾತರನ ॥
ಹೊಲ್ಲೆಹವ ಮಾಡಿದೆನು ಶಿವ ಶಿವ
ಖುಲ್ಲತನವೆನಗಾಯಿತೆನುತವೆ
ಬಿಲ್ಲ ಬಿಸುಟನು ವೀರ ಬಾಲಿಯ ಮೇಲೆ ಹೊರಳಿದನು ॥ ೩೫ ॥

ಆವ ಜನ್ಮಾಂತರದ ಸುಕೃತವಿ
ದಾವ ಯುಗದ ತಪಃಪ್ರಭಾವವೊ
ಸಾವು ಬಹ ಸಮಯಕ್ಕೆ ಗೋಚರನಾದೆ ನೀನೆನಗೆ ॥
ದೇವ ನಿನಗಿದು ಸಹಜ ಶರಣರಿ
ಗೋವನಲ್ಲಾ ಕೂಡಿಕೊಳ್ಳೀ
ನೋವ ಸೈರಿಸಲಾರೆ ಕಾವರೆ ಕೂಡಿಕೊಳ್ಳೆಂದ ॥ ೩೬ ॥

ಕೊರಳ ಪುಷ್ಕರಮಣಿಯ ತೆಗೆಯೆನೆ
ಸರಳ ಮೊನೆಯಲಿ ರಾಮ ತೆಗೆದರೆ
ಹರಿಯ ಮಂಗಳಮೂರ್ತಿಯನು ಮನದಲ್ಲಿ ಕಂಗಳಲಿ ॥
ಬೆರಸಿ ಆತ್ಮಾರಾಮನಾದನು
ಹರಿಯ ಮಗನಂಗದನ ರಘುಪತಿ
ಹಿರಿದು ಪಾಲಿಪೆನೆನಲು ಕೇಳ್ದಾ ತಾರೆ ಹರಿತರಲು ॥ ೩೭ ॥

ಹರಿದು ಹಳವಿಸಿ ಬಸಿರು ಹೊಸೆವು
ತ್ತುರಿಯ ಬಾಣದಲಸುವ ಬಿಟ್ಟಾ
ಹರಿಯ ತಕ್ಕೈಸಿದಳು ಬಾಲವ ನೀವಿ ಹಣೆವೊರಸಿ ॥
ಹರಿಯ ಬೈದಳು ಹಿರಿದು ಕೋಪದಿ
ಧರೆಗೆ ಕೆಡೆದಳಃ ಬಾಯ ಬಿಟ್ಟಳು
ಕರುಣದಲಿ ಕಣುನೆನೆದು ಸೋರಲು ಮರುಗಿದನು ರಾಮ ॥ ೩೮ ॥

ಕರೆದು ಕಣನಲಿ ಕಾದಿಕೊಲಃವುದು
ಅರಸು ನೀತಿಯು ಧರ್ಮಸಾರವು
ಹರಸಿ ಕಟ್ಟಿದ ಕುರಿಯೊ ನಿನಗೀ ಬಾಲಿಯಕಟಕಟ ॥
ಶರಧಿಯನು ಕಡೆದಾತನೊಂದೇ
ಸರಳಿನಿಂದಸುವಳಿವನೇ ಹೇ
ಳರಸಘೆಂದಾ ತಾರೆ ಹಲುಬಿದಳಳಲಿ ನಿಜ ಪತಿಯ ॥ ೩೯ ॥

ಅಕ್ಕಿಯನು ಕರು ತಿಂದೊಡೊಬ್ಬಳು
ಬೆಕ್ಕ ಶೂಲಕ್ಕಿಕ್ಕಿದಳು ಗಡ
ರಕ್ಕಸನು ಸತಿಯೊಯ್ಯೆ ನಮ್ಮಲಿ ಮೆರೆದೆ ಪೌರುಷವ ॥
ಅಕ್ಕಟಕ್ಕಟ ನಿರಾಪರಾಧಿಯು
ದಿಕ್ಕುಗೆಟ್ಟಿರದಳಲು ನಿನ್ನನು
ಒಕ್ಕಲಿಕ್ಕಿಯೆ ಕಾಡದುಳಿವುದೆ ಭವಭವಾಂತರಕೆ ॥ ೪೦ ॥

ತನ್ನ ಸುಖವೆಂತಂತು ಪರರಿಗೆ
ನಿನ್ನ ಸತಿ ವಿರಹದಲಿ ನೀನತಿ
ಬನ್ನಬಡುತಿದ್ದವರಿಗೀ ಪರಿಯಹುದೆ ತಾನಿಂದೂ ॥
ನಿನ್ನಲಿಲ್ಲ ವಿಚಾರವಕಟಾ
ಎನ್ನ ಪತಿಯೇಗುವನು ಶಿವ ಶಿವ
ನನ್ನ ನಗಲಿಸಿ ನಿನಗೆ ಹೇಳೇನಾಯ್ತು ಪರಿಣಾಮ ॥ ೪೧ ॥

ಎರೆಯನನು ನೆನೆನೆನೆದು ಮನದಲಿ
ಮರುಗುವಬಲೆಯ ನೋಡಿ ಚಿಂತಿಸಿ
ಮೊರಲಿ ತಾ ಬಿರುಗಾಳಿಯಂದದಿ ಸುಯ್ದು ಸಿರಿ ರಾಮ ॥
ಅರಗುಲಿಗ ನಾನಾದೆನೀತನ
ಮರಹಿನಿಂದವೆ ಕೊಂದೆನೆಂದನು
ತುರುವ ಬಾಲಿಯ ಮಗನ ತಕ್ಕಿಸಿಕೊಂಡ ಹರಿತಂದು ॥ ೪೨ ॥

ಹುಟ್ಟಿದಾತಗೆ ಮರಣ ತಪ್ಪದು
ನೆಟ್ಟನೀಶ್ವರವಿಹಿತದಿಂದಜ
ಸೃಷ್ಟಿಗೀಶ್ವರ ಕೊಲೆ ಕೃತಾರ್ಥನುಯೆನಲು ಜಾಂಬವನು ॥
ಇಷ್ಟು ದಿನ ವರಿಯಂತ ಸಾಧಿಸಿ
ಅಟ್ಟಿತ್ತೈ ನಮ್ಮಳಲು ರವಿಸುತ
ಕೊಟ್ಟನೈ ಬಲುಗೇಡನೆಂದಳು ತಾರೆಯುಳಲುತ್ತ ॥ ೪೩ ॥

ಉರಿಯುಲಿಟ್ಟರು ಕಪಿಯ ಕಾಯುವ
ಸುರವಿಮಾನದೊಳೊಪ್ಪುತೊಯ್ಯಲು
ಹರಿಯ ಹಗೆಯದು ರಾಘವೇಶ್ವರ ಮುಗುಚಗೆಂದೆಂದು ॥
ಕರೆದು ನುಡಿವಂಬರದ ವಾಣಿಗೆ
ತರಣಿಕುಲ ತಲೆಗುತ್ತಿ ನಿಂದಿರೆ
ಹರಿಯ ನಿರ್ಯಾಣಕ್ಕೆ ನಸಕಾದಿಗಳು ತಲೆದೂಗೆ ॥ ೪೪ ॥

ಪಟ್ಟವನು ರವಿಜಂಗೆ ರಘುಪತಿ
ಕಟ್ಟಿದನು ಕಿಷ್ಕಿಂಧಪುರದಲಿ
ಮುಟ್ಟಿ ಬಂದುದು ವರುಷಕಾಲವು ಮೇಘವಾವರಿಸಿ ॥
ನೆಟ್ಟನರಸನ ವಿರಹಶೋಕದ
ಕಟ್ಟಳೆಯ ಕಂಬನಿಯ ಹೋಲುವ
ತಿಟ್ಟವೆನಲಂಬರವು ತುಂತುರ್ವನಿಯ ಸುರಿವುತಿರೆ ॥ ೪೫ ॥

ಮಳೆಯ ತುಂತುರ್ವನಿಗೆ ಹಣಗುತ
ಸುಳಿವ ಗಾಳಿಗೆ ನಡವುಗೊಳುತಿರೆ
ಮಳೆಯ ಸಾರುತ ಹಲ್ಲುಗಿರಿವುತ ನಿಂದ ಕಪಿಗಳನು ॥
ಖಳ ಕುಲಾಂತಕ ರಾಮ ಕಂಡನು
ಜಲವು ಬಲುಹಾಯ್ತೊಯ್ತು ಕಂಡರೆ
ತಿಳಿಯಲಾರದೆ ತಮ್ಮ ಬಳಗನು ಕಳುಹ ಹೇಳಿಂದ ॥ ೪೬ ॥

ಅಳುಕಿ ನಡೆವನು ಬಾಲಿ ತಾ ಸಹ
ಮಳೆಯ ಮುಗಿಲಿಗೆಯೆನಲು ಲಕ್ಷ್ಮಣ
ತಿಳಿಯಲ್ಕೆ ಹೊಸತೊಂದು ಹಗರಣವಿದನು ನೋಡೆಂದ ॥
ಮಳೆಯ ಕಳೆದರು ನಾಲ್ಕು ತಿಂಗಳು
ಚಳಿಯ ಕಳೆದರು ನಾಲ್ಕು ತಿಂಗಳು
ಕಳೆಯೆ ಬೇಸಗೆ ನಾಲ್ಕು ಕಾದುವರಿವರು ಬಳಿಕೆಂದ ॥ ೪೭ ॥

ಹೇಳಿದನು ಸುಗ್ರೀವ ಸೇನಾ
ಜಾಲವನು ನೆರಹುವೆನು ತಡೆಯದೆ
ಆಳುಗೆಲಸಗಳಲ್ಲಿ ನೋಡುವುದೆಮ್ಮ ಕೈಚಳಕ ॥
ಖೂಳರಾವಲ್ಲೆನಲು ಜಾಂಬವ
ಹೇಳುತಿಬ್ಬರ ಸಂತಯಿಟ್ಟನು
ಪಾಳಿಯಲಿ ಮಳೆಗಾಲದವಸಾನದಲಿ ಬಹುದೆಂದು ॥ ೪೮ ॥

ಹರಿಯ ಚರಣಕ್ಕೆರಗಿ ಜಾಂಬವ
ತರಣಿಸುತ ನಳ ನೀಲ ಮರುತಜ
ನೆರಸಿ ತೆರಳಲು ಬಳಿಯಲಂಗದ ಸಹಿತ ರಾಜ್ಯವನು ॥
ಹರಿಯ ನೇಮದಲ್ಲೈದಲಿತ್ತಲು
ಧರಣಿವಲ್ಲಭ ತಮ್ಮ ಸಹಿತವೆ
ಇರುಳು ಹಗಲೆಂದೆಣಿಸುತಿರ್ದನು ಕಾಲವಶನಾಗಿ ॥ ೪೯ ॥

ಆಯಿತಿಲ್ಲಿಗೆ ಸಂಧಿ ಪದನವ
ದಾಯಿತ್ತೈತಾವೈವತ್ತಚಿತವು
ರಾಯ ರಾಘವ ಕುಲಶಿರೋಮಣಿ ಭಾನುನಂದನನ ॥
ಹೊಯಿದು ಬಾಲಿಯ ಕಾಯ್ದು ತತ್ಸುತ
ನಾಯುವಂತನ ಮಾಡಿ ಸತ್ಯವ
ಬೀಯಮಾಡದೆ ರಾಮನಿದ್ದನು ತಮ್ಮ ಸಹಿತಲ್ಲಿ ॥ ೫೦ ॥

---

## ೯ನೇ ಸಂಧಿ

ಪಲ್ಲ ॥ ಧರಣಿಸುತೆಗುಂಗುರವ ಕಳುಹಲು
ಮರುತನಂದನ ಕಡಲದಾಂಟಿಯೆ
ಮೊರಕಿದಸುರೆಯ ಕೊಂದು ಲಂಕೆಯ ಹೊಕ್ಕ ಕಪಿರುದ್ರ ॥

ಪದ ॥ ಭರದಿ ತೊರೆಗಳುಯಿಳಿದು ಯೋಗಿಯ
ಭರವ ಹೋಲಿತು ಕೀರ ಕೇಕೆಯ
ನೆರವಿ ಶಾಖೆಗಳಲ್ಲಿ ಸುಸ್ವರದಲ್ಲಿ ದನಿದೋರೆ ॥
ಹರಿದುವಾಕಾಶದಲಿ ಆ ಬಕ
ಸರಸಿಜಾರಿಯ ಕಳೆಗಳೇರಿತು
ಶರದ ಋತು ಕಡೆಗಂಡುದರಸಗೆ ಜಯವ ಸೂಚಿಸಿತು ॥ ೧ ॥

ಹರಿದುಹೋಗುವುದಲ್ಲಿಗಾತನ
ಮೊರಕೆ ಮುರಿಯದಿರವನ ಹಿರಿಯನ
ಹರಣಗೊಂಡಪಕೀರ್ತಿ ಹಿರಿದೆಲೆ ತಮ್ಮ ಸುಗ್ರೀವ ॥
ಹಿರಿಯರಸುತನದಿಂದ ಮರೆದನು
ಮರಳು ಮಾಡಿದ ನಮ್ಮನವನನು
ಪರಿಕಿಸುವ ಮನವರಿತು ನೆನೆವೆವು ತಕ್ಕುದನು ಬಳಿಕ ॥ ೨ ॥

ಧನುವ ಕೊಳುತಲಿ ಜವದಿ ಲಕ್ಷ್ಮಣ
ನಿನತನೂಜನ ಪುರವನೈದಲು
ವನಚರಂಗಳು ಗುಂಡು ಸುರಿವುತ ಧಿಕ್ಕರಿಸುತಿರಲು ॥
ಅನುವದಾಯ್ತು ರೆ ಭಾಷೆವಂತನು
ದಿನಪಸುತನವ ಕಾಣಬರುತಿಹ
ಮನವ ನೋಡುವೆನೆನುತ ಕಪಿಗಳ ಜರೆದು ನಡೆತಂದ ॥ ೩ ॥

ಕೋಡಗಂಗಳು ಗುಂಡು ಬಡಿಗೆಯ
ಬೇಡಬೇಡೆನೆ ಸುರಿದು ಹಲುಗಿರಿ
ದೇಡಿಸುತ್ತಿರೆ ನೋಡಿ ಲಕ್ಷ್ಮಣ ಸರಳ ತುಡುಕಿದನು ॥
ಓಡುತವೆ ಕಿಬ್ಬಸುರ ಬದಿಗಳ
ತೀಡುತವೆ ಮುರಿಮುರಿದು ದಿಟ್ಟನೆ
ನೋಡುತಿರೆ ಗಹಗಹಿಸಿ ಲಕ್ಷ್ಮಣ ಹತ್ತಿದನು ಗಿರಿಯ ॥ ೪ ॥

ಬಂದನೋಲಗ ಸಮಯದಲಿ ರವಿ
ನಂದನಂಗಿಂತೆಂದ ಲಕ್ಷ್ಮಣ
ಹಿಂದೆ ಬಾಲಿಯ ಕೊಲಿಸುವಲ್ಲಿಯ ಮಾತನೀ ಮರೆದ ॥
ಅಂಥತನವಹುದೈಸಲೇ ಸಿರಿ
ಬಂದ ಬಳಿಕಿನೊಳಾದು ಬಲ್ಲರು
ಹಿಂದಣುಪಕಾರಗಳದಂತಿರಲೇನು ಮತನೆಂದ ॥ ೫ ॥

ಪಿತನನಿರಿದನ್ಯಾಯಕಾರಿಗೆ
ಪತಿಯ ಬಗೆಯದ ಸತಿಗೆ ರಣದೊಳು
ಪತಿಯಬಿಟ್ಟೋಡಿದಗೆ ಮಾಡಿದ ಗುಣವ ಮರೆವವಗೆ ॥
ವ್ರತವ ನಿಂದಿಸುವವಗೆ ಮಧು
ಪರಿಣತಗೆ ನೋಡುವಡಿಹಪರಂಗಳ
ಗತಿಗಳಿಲ್ಲದನರಿತಿರೆಂದಳು ತಾರೆ ರಮಣಂಗೆ ॥ ೬ ॥

ಎಣಿಕೆಗೊಳ್ಳದೆ ಮತ್ತನಾಗಿರೆ
ಮಣಿವಿಭೂಷಣೆ ಮತ್ತೆ ಜರೆದಳು
ಬಣಗೆ ಬೆರತಿರವೇಳು ಬಾಲಿಯ ಬಳಿಯಲೈದದಿರು ॥
ಮಣಿದು ಬದುಕುವುದುಚಿತ ರಾಮನ
ಸೆಣಸು ಲೇಸಲ್ಲೆನಲು ಕೇಳ್ದಾ
ಕ್ಷಣದೊಳೆದ್ದನು ರವಿಜ ಬಂದನು ರಾಘವನ ಹೊರೆಗೆ ॥ ೭ ॥

ಶರಣು ರಘುಕುಲರಾಮ ಜಯ ಜಯ
ಶರಣು ಸೀತಾರಾಮ ಜಯ ಜಯ
ಶರಣು ನೀಲಶ್ಯಾಮ ಮಂಗಳನಾಮ ಗುಣಧಾಮ ॥
ಶರಣೆನುತ ಸುಗ್ರೀವ ಕಂಡನು
ಮರುತಸುತ ನಳ ನೀಲನಂಗದ
ಹಿರಿಯ ಜಾಂಬವರೊಡನೆ ಕಪಿಬಲ ಭಾರ ಸಹಿತಂದು ॥ ೮ ॥

ಕರೆಸಲಂದೀರೈದು ದಿಕ್ಕಿನ
ತರುಚರೇಶ್ವರ ಭಟರ ಪಡೆಗಳ
ಶರಭ ಶತಬಲಿ ಗಂಧಮಾದನ ವೃಷಭ ಸಂಪಾತಿ ॥
ಬಿರುದ ಪನಸ ಗವಾಕ್ಷ ಗವಯರು
ಹಿರಿಯ ನೈಂದ ಸುಷೇಣ ತಾರಣ
ರರರೆ ಕಪಿಬಲ ನೆರೆದುದರ್ಬುದ ಪದ್ಮಪಡೆಗಳಲಿ ॥ ೯ ॥

ಲೆಕ್ಕಲೆಕ್ಕದ ಭಟರು ಕಾಣಿಕೆ
ಯಿಕ್ಕಿ ಕಂಡುದು ಜಾನಕೀಶನ
ಮಿಕ್ಕುಮೀರಿಯೆ ಬಂದುಕೂಡುವ ಪಡೆಗೆ ಗಡಿಯಿಲ್ಲ ॥
ದಿಕ್ಕು ತೆಕ್ಕನೆ ತೀವಿತಮಮಾ
ಲೆಕ್ಕಿಸುವಡಯ್ಯಯ್ಯೊ ತೀರದು
ಅಕ್ಕಟಾ ಧರೆ ಕುಸಿಯೆ ಫಣಿಪನ ಕೊರಳು ವೆಂಟಣಿಸಿ ॥ ೧೦ ॥

ಹರಿಯ ಬಲವನು ನೋಡಲಿಂದ್ರನ
ಬರಲು ಹೇಳೋ ಲೆಕ್ಕಗೊಂಬರೆ
ಉರಗರಾಯನ ಕರೆಯೊ ಬರೆಯಲು ಗಗನಭಿತ್ತಿಯನು ॥
ತೆರಹುಮಾಡೋ ಧರಣಿಮಧ್ಯದಿ
ಕರಸಹಸ್ರದಿ ಬರೆವ ಕರಣಿಕ
ವರರ ಕರೆಸುವಡೊಳ್ಳಿತೆಂದುದು ವೀರ ಪಾಠಕರು ॥ ೧೧ ॥

ಅವನಿಪತಿಯೋಲಗದ ಮಧ್ಯದಿ
ರವಿಜ ನುಡಿದನು ತನ್ನ ಸೇನೆಗೆ
ತವಕದಲಿ ಪಡೆ ಜುಟ್ಟುಕಟ್ಟಿಯೆ ಬರಲಿ ತಾವೀಗ ॥
ಅವನಿಪತಿಗೆವಮ್ಮಾಳುದೋರುವ
ಸವೆದು ಬರಲೇಳೆಂಟು ಪದ್ಮವು
ಶಿವನ ಸರಿಬಲರಮಮ ಬಂದುದು ರವಿಜನಾಳುಗಳು ॥ ೧೨ ॥

ಹೊನ್ನಪಪಕದ ಬಾಲಚೌರಿಯ
ಮನ್ನಣೆಯ ಪಟುಭಟರು ರಪಿಜನ
ತನ್ನ ಸರಿಬಲದವರ ಕೋಟಿಗೆವೊಬ್ಬರೊಬ್ಬರಿಸೆ ॥
ಮುನ್ನ ತೋರಲು ರಘುಕುಲೋತ್ತಮ
ಮನ್ನಿಸಿದ ಸುಗ್ರೀವನಾಳನು
ತನ್ನ ಕೆಲದಲಿ ಕರೆದುಕೊಂಡನು ನೀಲನೈತಂದ ॥ ೧೩ ॥

ಆಳುಗಳೊ ಧನುಜರಿಗೆ ಪಿಗತಕ್ಕೃ
ಪಾಳುಗಳೊ ಮರೆವೊಗಲು ಕರು
ಣಾಳುಗಳೊ ಕದನಕ್ಕೆ ಕರೆವನ್ನಾಳು ಬಲಸ್ಲಾಳು ॥
ಆಳುಗಳು ಹಗೆಯುವನ ಹೆಂಡಿರ
ಗೋಳುಗಳು ಮಗುಳವನ ಓಂಡಿನ
ನೀಲನರ್ಬುದ ಪದ್ಮ ಪಡೆಗಳಲಾಳುವೋರಿದನು ॥ ೧೪ ॥

ಕರುಣಿ ಜಾಂಬವ ಬೊಮ್ಮಸಂಭವ
ಹರಿಯ ಕಾಂಬವ ನಮಿತ ಶಾಂಭವ
ಹರುಷಗೊಂಬವ ಓರಿಯನೆಂಬವ ಹರಸಿಕೊಂಬವನು ॥
ಹರಣಮಾಂಬವ ಕೆಡಬಿರೆಂಬವ
ತಿರುಗೆ ತಿಂಬವ ಖಳನ ಬಿಂಬವ
ಮರಳೆನೆಂಬವ ಮಂತ್ರಿಯೆಂಬವ ಮುಂದೆ ನಿಂತಿರ್ದ ॥ ೧೫ ॥

ಸಿಡಿಲ ಮೋಹರದಂತೆ ಕರಡಿಯ
ಪಡೆಗಳುಗುರಿಂ ನೆಲನ ಬಗೆಯುವ
ಬಡಬನಂತುರಿದೋರೆ ಭೈರವ ನರವಿಯಂದದಲಿ ॥
ನಡೆದು ಬಂದನು ಜಾಂಬವಂತನು
ಕೊಡುಕೊಡೀ ವೃದ್ಧರಿಗೆ ನೇಮವ
ಪಿಡಿವನೈ ಹಿತನೆನುತ ರಘುಜಂಗಾಳುದೋರಿದನು ॥ ೧೬ ॥

ಹಾಸುವರ ಫಣಿಪತಿಯ ದಿಗಿಭವ
ಬೀಸುವರ ಸಾಗರವ ಕೈಯಿಂ
ದೀಸುವರ ಪಟುಭಟರ ಕೇಸರಿಯಾಳುದೋರಿದನು ॥
ವಾಸವನ ಮೊಮ್ಮಗನ ಬಲ ವಾ
ಕಾಶದಮರರು ಹೊಗಳಲಾ ಚಾ
ರಾಶಿಯರ್ಬುದ ಪದ್ಮಪಡೆಗಳಲಾಳುದೋರಿದನು ॥ ೧೭ ॥

ನೆಲನ ಪಡೆಯೋ ಪ್ರಳಯ ಕಾಲಾ
ನಲನ ಬಳಗವೊ ಗಂಧಮಾದನ
ಬಲವೊ ಮಾರಿಯ ಕುಲವೊ ಬಲ್ಲಿದ ಕಾಲಮೃತ್ಯುಗಳೊ ॥
ಕಲಿತನದ ಬಲು ಮೈಂದ ಪನಸನು
ಮಲಯ ಗವಯ ಗವಾಕ್ಷ ಕುಮುದನು
ಕಲಹರಿಪುವಹ ಕಂಪ ಹಂಪರು ಹಲವು ನಿರ್ಬುದವ ॥ ೧೮ ॥

ಏಳದೇನೈ ಹನುಮ ನೀನಿ
ನ್ನಾಳುದೋರೆನಲೈಯ್ಯ ದೇವೆ
ನ್ನಾಳುತನವೇಗುವುದು ಡಿಂಗರಿಗಂಗೆ ಬೇರುಂಟೆ ॥
ಆಳು ತಾನೆನೆ ನಗುತ ರಾಘವ
ಯೇಳುಯೇಳೆನ್ನಾಣೆ ನಿನಗೆನೆ
ಬಾಲ ಘಂಟೆಯ ತೋಳಬಿರುದಿನ ಭಟರ ತೋರಿಸಿದ ॥ ೧೯ ॥

ಹರಿಗಳೋ ಖಳರುರಿಗಳೋ ದಿ
ಕ್ಕರಿಗಳೋ ನಡೆತಪ್ಪ ಹೇಮದ
ಗಿರಿಗಳೋ ಹನುಮಂತ ದೇವನ ವೀರ ಸಿರಿಗಳೆನೆ ॥
ಅರರೆ ಬಲವೊಂಬತ್ತು ಪದ್ಮವ
ಮರುತನಂದನನಾಳುದೋರಲು
ತರಣಿಕುಲ ಕರ ಮೆಚ್ಚುತೆಲ್ಲರಿಗಿತ್ತನುಡುಗೊರೆಯ ॥ ೨೦ ॥

ನೆರೆದ ಸಭೆಯೊಳಗರಸ ನುಡಿದನು
ಸರಸಿಜಾಸನ ಸುತನೆ ಕೇಳೈ
ಹಿರಿಯ ನೀನತಿ ಬುದ್ಧಿವಂತನು ಹಿತವನಹೆ ನಮಗೆ ॥
ನಿರುತ ಕೃತ್ಯವನಿನ್ನು ಪೇಳೆನೆ
ಮರುತನಂದನನರಸಿಹೋಗಲಿ
ಧರಣಿಸುತೆಗುಂಗುರವ ಕಳುಹುವುದೆಂದ ಜಾಂಬವನು ॥ ೨೧ ॥

ತರಣಿಜನ ಮತದಿಂದ ಹನುಮಗೆ
ಹರಸಿ ಕಟ್ಟಿದ ವೀರಪಟ್ಟವ
ಕರೆದು ನರಹರಿ ಬುದ್ಧಿಗಲಿಸಿದ ಮುದ್ರಿಕೆಯನಿತ್ತು ॥
ಹಿರಿಯತನದಲಿ ನಡೆವುದೆಲವೋ
ಮರುಳುತನಗಳ ಮರೆದು ಕಳೆವುದು
ಸರಸಿಜಾಸನನೆಂದು ಕಾಂಬುದು ಜಾಂಬವಂತನನು ॥ ೨೨ ॥

ಮರೆಯದಿಗು ಮನದಲ್ಲಿ ದೈವವ
ಜರೆಯದಿರು ಗರ್ವದಲಿ ಹಿರಿಯರ
ಕುರುಹನರಿವುದು ಹಲವು ತೆರದಲಿ ಕೋಡುವುದುಂಗುರವ ॥
ಎರಗುವುದು ಮಾನ್ಯರಿಗೆ ಬುದ್ಧಿಯ
ಕಿರಿಯರೆನ್ನದೆ ಕೇಳಿ ಕಲಿವುದು
ಮರಿಗಳಾಸರನರಿತು ಬಿಡುವುದು ಬಲವನಿರುಳಿನಲಿ ॥ ೨೩ ॥

ಒಬ್ಬ ಮಾರ್ಗವ ನಡೆಯಲಾಗದು
ಒಬ್ಬ ಸ್ವಾರ್ಥವ ನೆನೆಯಲಾಗದು
ಒಬ್ಬನೇ ಉಣಬಾರದೈ ಮೃಷ್ಟಾನ್ನ ಫಲಗಳನು ॥
ಒಬ್ಬನಿದ್ದಿರಲಾಗದಡವಿಯ
ಲೊಬ್ಬನಿದ್ದೆಯ ತಾಳಲಾಗದು
ಒಬ್ಬ ಗಾನವ ಮಾಡಲಾಗದು ಹನುಮ ತಿಳಿಯೆಂದ ॥ ೨೪ ॥

ವೈರಿಯಲಿ ಗಣಿಕೆಯಲಿ ಶಿಖಿಯಲಿ
ನಾರಿಯಲಿ ದುರ್ಮಿತ್ರನೆಡೆಯಲಿ
ವಾರಿಸಿಧಿಯಲಿ ಅಡವಿಯುಗ್ಗದ ಶೃಂಗಶಿಖರದಲಿ ॥
ಚಾರು ಲಜ್ಜೆಯನುಳಿದ ವಿಧವಾ
ನಾರಿಯಲಿ ಫಣಿಯಲ್ಲಿ ನಂಬುಗೆ
ಸೇರೆ ಕೆಡುವನು ನೋಡಿ ನಡೆವುದು ಹನುಮ ತಿಳಿಯೆಂದ ॥ ೨೫ ॥

ಶ್ವಸನಸಂಭವನೆಂದ ದೇವಿಯು
ರಸೆಯ ಹೊರಗೊಳಗಿರಲಿಯರಸುವೆ
ಬಿಸಜಲೋಚನೆಯನ್ನನರಿಯಳು ನಾನು ಮುನ್ನರಿಯೆ ॥
ವಸುಮತೀಶ್ವರ ಕುರುಹ ಬೆಸಸೆನೆ
ಕುಸುಮಶರದಲಿ ನೊಂದು ರಾಘವ
ಬಿಸುಸುಯಿದು ಪರಿಮಿತದಿ ಪೆಣ್ಣಿನ ಚೆಲುವ ಬಣ್ಣಿಸಿದ ॥ ೨೬ ॥

ಅಳಿಯನಿವಹದವೋಲು ಕುಂತಳ
ವಳಯ ಮಿಂಚಿನ ಥಾಳ ಕಂಗಳ
ಚೆಲುವು ಪಕ್ಷದ ಪೂರ್ಣಚಂದ್ರನು ಮುಖದ ಸೊಬಗುತನ ॥
ತಳದಳಂಬುಜ ಕುಲಿಶ ಚಿಹ್ನವು
ಹೊಳೆವ ಕಂಬುಗ್ರೀವ ವಾಮದ
ಮೊಲೆಯ ಕಾಕನಖಾಂಕ ರೇಖೆಯು ಹನುಮ ತಿಳಿಯೆಂದ ॥ ೨೭ ॥

ಮುಡಿ ಕಲಾಪದ ಬೆಡಗ ಸೋಲಿಪ
ವಡಿಗಳಸುಗೆಯ ತಳಿರ ಹಳಿವವು
ನಡೆ ಮರಾಳಕೆ ನಡೆಯ ಕಲಿಸುವವಬ್ಜ ನಯನಗಳು ||
ನುಡಿ ಗಿಣಿಗೆ ನುಡಿಗಲಿಪುವಬಲೆಯು
ನಡುವು ಹಿಡಿಯೊಳಗಡಗುವುದೆನಲು
ಒಡತಿ ತನ್ನನು ತಿಳಿವ ಕುರುಹನು ಬೆಸಸಬೇಕೆಂದ || ೨೮ ||

ಜಾನಕಿಯ ಮದುವೆಯಲಿವೊಂದನು
ಕಾಮಜನ ಕೇಳಿಯಲಿವೊಂದನು
ಕಾನನಕೆ ಹೊರವಂಟ ಸಮಯದಿ ನುಡಿದ ಕುರುಹೊಂದ ||
ನೀನು ಕೇಳೀರೈದುದಿನದಲಿ
ಜಾನಕಿಯ ಸುದ್ದಿಯನು ತಪ್ಪದು
ದಾನವರ ಕಪಟಕ್ಕೆ ಸಿಕ್ಕದಿರಣ್ಣ ವ ಕೇಳೆಂದ || ೨೯ ||

ಗಳಿಗೆ ಮೂರಕೆ ಮೂರು ಲೋಕವ
ತೊಳಲಿ ಬಹೆ ನಾ ನಿಮ್ಮ ಕರುಣದಿ
ದಳವನಿದನಾರೈದು ನಡೆಯಲು ತೀರದೆಂದೆನಲು ||
ಬಳಿಕ ದಿನ ಹದಿನೈದನಿತ್ತನು
ಚಲನಸಂಭವ ಕೊಂಡ ಮಾಸವ
ಗಳಿಗೆ ತಳುವಿದೊಡಗ್ನಿಯೊಳಗಹೆನೆಂದ ರಘುನಾಥ || ೩೦ ||

ಅಸ್ತುಯೆಂದಭವಾವತಾರ ಸ
ಮಸ್ತ ದಳಸಹಿತರಸನಡಿಗಳ
ಮಸ್ತಕದ ಮೇಲಿಟ್ಟುಕೊಂಡತಿವಿನಯಪರನಾದ ||
ಸ್ವಸ್ತಿ ಅಭ್ಯುದಯೋಸ್ತುಯೆನೆ ಕಪಿ
ಹಸ್ತಿಮರ್ದನರೊಂದು ಕಡೆಯಲ
ಗಸ್ತ್ಯ ದಿಕ್ಕಿಂಗಾಗಿ ಜಾಂಬವರೊಡನೆ ತೆರಳಿದರಾ || ೩೧ ||

ನಡುವೆ ಉಳಿಯದ ತೆರದಲನಿಬರು
ಬಿಡದೆ ಕೈಗಳ ಕೊಟ್ಟು ನಡೆಯಲು
ಉಡಿದುಬಿದ್ದುವು ಗಿರಿತರುವ್ರಜ ವೀರರುಪಟಳಕೆ ||
ಪೊಡವಡುಹಿ ನೆಗೆಯಲ್ಕೆ ಕಪಿಗಳು
ಪಡುವ ಮೂಡಣ ದಿಕ್ಕುಮುಟ್ಟಿ
ತ್ತಡವಿ ಗಿಡುಮರ ಕುಲನಗಂಗಳ ತೊಳಲಿಯರಸುತಿರೆ || ೩೨ ||

ಕರೆದು ಕೂಗುವರಲ್ಲಿ ಕೆಲಬರು
ಗಿರಿಗಳೇರಿದು ಕೆಲರು ನೋಳ್ಪರು
ಸರಸಿಯಲಿ ಕೈದೊಳಸಿನೋಳ್ಪರು ಕೆಲರು ಗುಹೆಗಳಲಿ ॥
ಧರಣಿಜಾತೆಯನರಸುತಿರ್ದರು
ತರಣಿಕುಲಪತಿ ದಿನವನೆಣಿಸಲು
ಹರಿಜನಂಗದ ಜಾಂಬವಾದಿಗಳರಸುತೈದಿದರು ॥ ೩೩ ॥

ನಡೆದು ಪಡೆ ಧೂಪಿಸಿತು ಬಿಂಜದಿ
ಕುಡಿಯೆ ನೀರನು ಕಾಣದಸವಳಿ
ದೊಡನೆ ಬೆಸಗೊಳೆ ಜಾಂಬವಂತನು ಚಂಡಿಯಾಶ್ರಮದ ॥
ಮಡುವಿನುದಕವ ತಿಳಿದು ಹೇಳಲು
ಕಡುಗಿ ಮರ್ಕಟರೈದುತಲ್ಲಿಗೆ
ಮಡುವನಿಳಿದಿಳಿದೊಡನೆ ಮುಳುಗಿದರೊಬ್ಬರುಳಿಯದಿರೆ ॥ ೩೪ ॥

ಮುಂದು ಮುಂದೊತ್ತುತ್ತಲಿಳಿದರೆ
ಚಂದ್ರರಶ್ಮಿಯೊಳೆಸೆವ ಪಟ್ಟಣ
ದಂದವದು ಕರ ಚೋದ್ಯ ಸುರುಚಿರ ರತುನಮಯವೆನಲು ॥
ಬಂದು ಕೋಟೆಯ ಹೊರಗೆ ನಿಂದಾ
ಮಂದಿಯಬ್ಬರ ಕೇಳಿ ಮುರಿಮುರಿ
ಯೆಂದು ಕಾಹಿನ ಭೂತವಟ್ಟಲು ಸೇನೆ ಕಂಗೆಡಲು ॥ ೩೫ ॥

ಕಳವಳಿಸ ಬೇಡಕಟ ಕಪಿಗಳ
ಬಳಗದೊಳಗೊಂದುಗುರು ಹೋದರೆ
ತಲೆಯ ತೆರುವೆನು ತೋಟಿ ನಿಮ್ಮೊಳಗೇಕೆ ಮಾಣೆನಲು ॥
ಚಲನಭವ ನೀ ಕೊಯ್ದೆ ಗಂಟಲ
ಬಳಿಕಲೇನೈ ಪಾಪಿ ಮಕ್ಕಳ
ಅಳಲು ನಿನ್ನನು ತಾಗಲೆಂದುದು ಮರುಳು ಮರ್ಕಟರು ॥ ೩೬ ॥

ಕೆಟ್ಟೆವೆಲ್ಲಿಯ ಮರೆಯಮಾರಿಯೊ
ಕೆಟ್ಟ ಕೇಡನದಾರು ಬಲ್ಲರು
ನೆಟ್ಟನೆಲ್ಲಿಗೆ ತಂದೆ ನಮ್ಮನೆನುತ್ತ ಗೋಳಿಡಲು ॥
ದಿಟ್ಟ ಮಾರುತಿ ಕೇಳ್ದು ಹೋ ಕಂ
ಗೆಟ್ಟು ಹಲುಬದಿರೆನುತ ಭೂತವ
ನಟ್ಟಿ ಸದೆದನು ಕೇಳಿದಾ ಪುರದೊಡತಿ ಹರಿತರಲು ॥ ೩೭ ॥

ಫಾಳ ನಯನದ ಭಸಿತಭೂಷಣೆ
ವೋಳಿಭೂತದ ತಂಡವೊಡನಿರೆ
ಶೂಲ ಕಕ್ಷಡೆ ಖಡ್ಗವಿಡಿದಿಹ ದೇವಿಗಿದಿರೆದ್ದು ॥
ಪಾಲಿನೆನುತವೆ ಕಪಿಗಳೆರಗಲು
ಕೇಳಿ ವಾರ್ತೆಯನಾ ಸ್ವಯಂಪ್ರಭೆ
ಬೀಳುಗೊಟ್ಟಳು ಯೋಗದಂಡವಿ ಬಾಗಿಲನು ತೋರಿ ॥ ೩೮ ॥

ಬಂದರಾ ಗುಹೆಯಿಂದ ಮೇಲಕೆ
ಸಂದುನಿಪ್ಪತ್ತೇಳು ದಿನವರ
ವಿಂದವದನೆಯ ಸುದ್ದಿಯೆಂತೆಂದರಿಯೆ ಅಕಟೆನುತ ॥
ಕೊಂದುದೋ ನೀರಡಿಕೆ ಮಾರಿಯು
ತಂದುದೋ ನಮಗೆನುತ ವರುಣನ
ಕಂದ ಸಂಪಾತಿಯನು ಕಂಡರು ಪರ್ವತೋಪಮನಾ ॥ ೩೯ ॥

ಆರು ನೀವೇಂದರುಣ ತನಯ ವಿ
ಚಾರಿಸಲು ಜಾಂಬವನು ಹೇಳಿದ
ವೀರ ರಾಘವನಾಳು ರಾವಣ ದೇವಿಯರನೊಯ್ದು ॥
ಜಾರನಿಪ್ಪೆಡೆಯರುಪ ಬಲ್ಲಿರೆ
ತೀರಿತವಧಿಯೆನಲ್ಕೆ ಭೀಕರ
ವಾರಿನಿಧಿಯೊಳು ಲಂಕೆ ತೋರುವೆ ಬನ್ನಿ ನೀವೆಂದ ॥ ೪೦ ॥

ಏರಿ ನೀವೆಲ್ಲೆನ್ನ ಬೆನ್ನನು
ತೋರುವೆನು ನಿವಗೆನುತ ಮಲಗಿದ
ರೇರಿ ಕಪಿಗಳು ಕುಲುಲುಗುಟ್ಟಲು ಕೇಳಿ ಖಗನೆದ್ದ ॥
ತೋರಿದನು ಮದಕರಿಯನಿರುವೆಗ
ಳೇರಿದಂತಿರೆ ತಿಳುಹೆ ಖಗಪತಿ
ಮೂರು ಕೂಟದ ಗಿರಿಯ ಲಂಕೆಯ ತೋರಿಸಿದನಂದು ॥ ೪೧ ॥

ಇಳಿದು ಕಪಿಗಳು ಮುಂದೆ ಹರಿದುವು
ಜಲದಿ ತೀರದಲಾಣೆಯಿಟ್ಟಂ
ತಳವುಗೆಟ್ಟುವು ನಿಂದು ಸ್ಥೈವೆರಗಾಗಿ ಮರ್ಕಟರು ॥
ಗುಳುಗುಳು ಧ್ವನಿ ತಾಳ್ದ ಕಡಲಿನ
ಜಲಚರಂಗಳು ಹೊಳೆವ ಸುಳಿಗಳು
ನೆಲೆಯ ದಾಂಟುವರಾರು ನೋಡುವರಾಲಿ ಝುಮ್ಮಿಡಲು ॥ ೪೨ ॥

ತರಳಭಂಗ ತರಂಗ ತುಂತುರು
ನೊರೆಯುವೊಟ್ಟಿಲು ತೆರೆಯು ಭೀಕರ
ವುರುಳಿ ಘುಳುಘುಳು ಜಠರ ಕಣಕುಲ ಕಮಠ ಪಾಠೀನ ॥
ಕರಿಮಕರ ನಕ್ರಾಳಿ ಸೇವಿತ
ನೆರವಿ ಬುದ್ಬುಧ ತಿಮಿತಿಮಿಂಗಲ
ವರ ಜಳೂಕ ಧ್ವಾನ ಕಲ್ಲೋಲದಲಿ ಕಡಲೆಸೆಯೆ ॥ ೪೩ ॥

ಹತ್ತ ಹಾರುವೆನೆನಲು ತೆಗೆಯಿ
ಪ್ಪತ್ತಹಾರುವೆನೆನಲು ನಾಮೂ
ವತ್ತ ಹಾರುವೆನೆಂದನೊಬ್ಬನು ಒಬ್ಬ ನಾಲ್ವತ್ತ ॥
ಹತ್ತು ಹತ್ತನು ಹಾರಲಾರದೆ
ಯಿತ್ತರಾ ಹನುಮಂಗೆ ಶಕ್ತಿಯ
ಕೆತ್ತಕದವಾಯಿತಬುಧಿ ಲಂಕೆಗೆ ಲೆಂಕನಂತಾಯ್ತು ॥ ೪೪ ॥

ಕಡಲ ದಾಂಟುವೊಡರಿದು ಸಿರಿಯಿ
ದ್ದೆಡೆಯ ಕಾಣೆವುಯೆನಲು ರಾಘವ
ನೊಡಲನುರುಹುವ ನಮ್ಮ ಕೊಲಿಸುವನೊಡನೆ ಸುಗ್ರೀವ ॥
ಮಡದಿ ಮಕ್ಕಳ ಗೋಳು ಹನುಮನ
ಹಿಡಿಯಲೆಂದಲ್ಲಲ್ಲಿ ಕೆಲಬರು
ಬಡವರಳಲಲು ಹನುಮನೆಲ್ಲರಿಗೆಂದ ಕೈಮುಗಿದು ॥ ೪೫ ॥

ದಾಟುವೆನು ಶರಧಿಯನು ಕರುಣದ
ನೋಟವಾಯಿತು ನನಗೆ ನಿಮ್ಮನು
ಕೋಟಲೆಗೆ ಕೈಗೊಡೆನು ಉಸುರಿರಲೆನ್ನ ಕಾಯದಲಿ ॥
ಕೋಟೆ ಕುಟಿಲದ ಲಂಕೆಗಿಂಕೆಯ
ಗೋಟುಗೋಟೆನಲರಸುವೆನು ಮರು
ಳಾಟವೇ ಕೃಪೆಮಾಡಿಯೆನುತನುವಾದನನಿಲಭವ ॥ ೪೬ ॥

ಹೋಲಿಕೆಗೆ ಹೊರತಾಗಿ ಬೆಳೆದನು
ಭೂಲತಾಂಗಿಯ ಕೀಲು ಕಳಚಲು
ಕಾಲಹತಿಗೆ ಮಹೇಂದ್ರಗಿರಿ ತಲೆಬಿರಿಯಲೇರಿದನು ॥
ಬಾಲ ಪರಿವೇಷವನು ಹೋಲಿತು
ಕಾಲನೂರಿದನುಸುರ ನುಂಗಿದ
ಮೇಲೆ ದಿಟ್ಟಿಸಿ ಕಿವಿಯ ಮಿಳ್ಳಿಸುತಾರಿ ಘುಟನೆಗೆದ ॥ ೪೭ ॥

ಅದ್ವಿತವನಿಯಜಾಂಡ ಘೀಳಿಡೆ
ರದನಿಗಳು ತಲೆಗೊಡಹೆ ವಾಸುಕಿ
ಹೆಮರಿ ಹೆಡೆಗಳ ಹಲವನಾಂತನು ಭಾಪು ಮಝಯೆನುತ ॥
ಬೆದರಿದನು ದಿನನಾಥ ಚಂದ್ರಮ
ಕುದಿಯಲಭ್ರದ ತಾರೆ ಚೆಲ್ಲಲು
ಕದನ ಕಲಿ ಹನುಮಂತೆ ಲಂಕೆಯ ಹಾಯ್ದ ಸಂಭ್ರಮಕೆ ॥ ೪೮ ॥

ಹರಿಣ ವೇಗವು ತೀವ್ರ ಧರೆಯೊಳು
ಹರಿಣನಿಂ ಸರಳಧಿಕ ಸರಳಿನಿಂ
ಮರುತನುಂ ಪವಮಾನನಿಂದತಿ ವೇಗಿ ದಿನನಾಥ ॥
ತರಣಿಯಿಂ ಕರ ದೃಷ್ಟಿವೇಗವು
ತರಣಿ ದೃಷ್ಟಿಗೆ ಮನವು ಕರ ಲಘು
ಅರರೆ ಮನವೇಗವನು ಮೀರಿದ ಮರುತನಂದನನು ॥ ೪೯ ॥

ವಾಯುಜನ ನಿಜವರಿಯಲಮರರು
ಮಾಯದವಳನು ಕಳುಹೆ ಸುರಸೆಯು
ಬಾಯದೆರೆದಬ್ಬರಿಸಿ ಚೀರಲು ದಿಟ್ಟನೆರಗಿದನು ॥
ಬಾಯ ಹಲ್ಲುಗಳುದುರೆ ಒದರಿದ
ಛಾಯುವತಿ ಸುರರಿಂಗೆ ಮೊರೆಯಿಡೆ
ಸಾಯಲಟ್ಟಿದಿರೆನಲು ಸಂತವಿಸಿದರು ನೊಂದವಳ ॥ ೫೦ ॥

ಕಂಡು ಸಿಂಹಿಕೆ ನೆಳಲ ಹಿಡಿದಾ
ಕುಂಡಲಿಯ ತಡೆಯಲ್ಕೆ ಮಾರುತಿ
ಕಂಡು ಬೆರಗಾಗುತ್ತ ಬಲ್ಲಿದನಾಣೆಯಿಟ್ಟಂತೆ ॥
ಗಂಡುಗಲಿ ಹನುಮಂತನಾ ಮುದು
ರಂಡೆಯೊಡಲೊಳು ಹೊಗುತ ಸೀಳಲು
ತುಂಡು ಕಪಿಬಲದೊಳಗೆ ಬಿದ್ದುದು ಮುಗಿಲ ಕಡಿಯಂತೆ ॥ ೫೧ ॥

ವೀರ ಮಾರುತಿಯಧಟ ಬಣ್ಣಿಸು
ತಾರಿತಿತ್ತಲು ಕಪಿ ಭಟಾವಳಿ
ಯಾರು ಸರಿ ಹನುಮಂಗೆ ಪೂತುರೆ ಭಾಪು ಮಝಯೆನುತ ॥
ದಾರಿಯಲಿ ಮೈನಾಕ ಕಂಡುಪ
ಚಾರ ಮಾಡಲು ತಿಳಿಯಲರಿಯದೆ
ಘೋರು ನೀನೆನಲಾ ಹಿಮಾದ್ರಿಯ ಮಗನು ಕೇಳೆಂದ ॥ ೫೨ ॥

ಮುನ್ನ ಸುರಪತಿ ಗಿರಿಗಳೆರಕೆಯು
ತನ್ನ ವಜ್ರದಿ ಹೊಡೆದ ಕಾಲದ
ಲೆನ್ನ ತಲೆಕಾಯ್ದನಿಲನಿರಿಸಿದ ಕಡಲ ಮಧ್ಯದಲಿ ॥
ಮುನ್ನಿನ ಪ್ರಾಣೋಪಕಾರ
ಕ್ಕಿನ್ನು ಪ್ರತ್ಯುಪಕಾರವೇ ಕೇ
ಳೆನ್ನ ಮನೆಗೈತಂದು ಬಳಲಿಕೆ ಕಳೆದು ಹೋಗೆಂದ ॥ ೫೩ ॥

ಒಡೆಯನವಸರದಲ್ಲಿ ಭೃತ್ಯರು
ಒಡಲ ಸುಖಕೆಳಸುವುದು ಪಾತಕ
ಪೊಡವಿಜೆಯ ನೆಲೆಕಂಡು ಬರುತವೆ ಬಹೆನು ನಿಮ್ಮೆಡೆಗೆ ॥
ತಡವಹುದು ತನಗೆನುತ ವಾತಜ
ನೃಡನ ಭಾವನ ಬೀಳುಗೊಂಡನು
ಕಡುಗಿ ಲಂಕೆಯ ಪಿರಾರಿ ತೃಣಬಿಂದುವನು ಕಪಿ ಕಂಡ ॥ ೫೪ ।

ಗಾಳಿಯಣುಗನು ಮುನಿಯ ಚರಣಕೆ
ಬೀಳಲಭಯವನಿತ್ತು ಮನ್ನಿಸಿ
ಕೇಳಿದನು ಕಪಿಸಿಂಹ ನೀನಾರೆಲ್ಲಿಗೈದಿಪ್ಪೆ ॥
ಹೇಳೆನಲು ನರಹರಿಯ ರಾಣಿಯ
ಖೂಳ ರಾವಣ ಕದ್ದುತರೆ ಭೂ
ಪಾಲ ರಾಘವನರಸ ಕಳುಹಲು ಬಂದೆ ನಾನೆಂದ ॥ ೫೫ ।

ಬಟ್ಟೆಯನು ಬೆಸಸುವುದು ಮುನಿ ಮ್ಹುಂ
ದೆಷ್ಟು ಯೋಜನ ಲಂಕೆಗೆಂದೆನೆ
ದಿಟ್ಟನೀ ಕಪಿಯೆಂದು ಕಂದಫಲೋದಕಂಗಳನು ॥
ಕೊಟ್ಟು ಕೇಳೆಲೆ ವೀರ ನೀನೇ
ಮುಟ್ಟಿ ಲಂಕೆಯ ಹೊಗುವೆ ದಿಟದಿಟ
ಮುಟ್ಟದೇ ಪಾತಕವು ಹಾದಿಯ ತಿಳುಪಲೆನಗೆಂದ ॥ ೫೬ ।

ಉರಗನೊಡಲನು ಹೊದ್ದುವಾ ದ
ಳ್ಳುರಿಯ ಕತ್ತರಿವಾಣಿಯನು ಹೇ
ಮರುಳೆ ಹೊಗುವವರುಂಟೆ ಲಂಕೆಯ ನಿನ್ನ ಹವಣೇನು ॥
ಕರಿಯ ಲಂಕಿಣಿ ನುಂಗುತಿಪ್ಪಳು
ಪುರವನಿರುಳಿಂಗಂಣ ಕೇಳವ
ಳಿರಲು ದೇವಿಯನರಸ ತೀರದು ಕಪಿಯೆ ನಿನಗೆಂದ ॥ ೫೭ ।

ಗುರುವೆ ಬ್ರಹ್ಮಾಂಡವ ಚರಾಚರ
ವೆರಸಿ ಮೂಲಾವಿದ್ಯೆ ನುಂಗಲು
ಮರಳಿಯುಗುಳಳೆ ಜೀವರಾಶಿಯು ಸಾಕದಂತಿರಲಿ ॥
ಉರಿಗಳೇ ಕಡು ಶೈತ್ಯವಲ್ಲಿಯು
ಗರಳವಮೃತವು ಹರಿಯು ಕೃಪೆಯೆನ
ಗಿರಲು ಕತ್ತರಿವಾಣಿ ಪಥ್ಯವು ಮುನಿಪ ಕೇಳೆಂದ ॥ ೫೮ ॥

ಆರ ಹವಣಲ್ಲಿಲ್ಲ ಮುನಿದರ
ಮಾರಿ ರಾವಣನಿಪ್ಪ ಲಂಕೆಯು
ಮಾರಮಥನಂಗರಿದು ಹೊಗಲೆನೆ ಮುನಿಗೆ ಕಪಿ ನುಡಿದ ॥
ವೀರವೇಗುವುದವನ ತೆಗೆ ಕೈ
ವಾರಿಗಂಜುವೆ ಹಳೆಯ ಹೆಣನವ
ವೀರನೇ ಘಡವೊಳ್ಳೆ ಹೆಬ್ಬಾವಹುದೆ ಹೊಗಳಿದರೆ ॥ ೫೯ ॥

ಸುಡುವೆ ಲಂಕೆಯ ಸಹಿತವೆಲ್ಲರ
ಹುಡುಕು ನೀರದ್ದುವೆನು ಮುರುಕಿಸಿ
ಹಿಡಿದು ಮೂಪಿಡಿಗೊಳಿಸಿ ತೊಡೆವೆನು ಹಣೆಯ ಬರಹವನು ॥
ಬಡಿವೆ ನೆರವಿಗೆ ಬಂದೊಡಮರರ
ಬಡ ಕಪಿತ್ವವ ನೋಡಬೇಡೆನೆ
ಕಡುಹ ಬಲ್ಲೆನು ಸೊರಹುವವರಿಗೆ ನೀನು ಗುರುವೆಂದ ॥ ೬೦ ॥

ಎನಲು ಪವನಜ ಬೆಳೆದನಾ ಕ್ಷಣ
ಕಿನನ ಮಂಡಲ ಮುಟ್ಟುವಂತಿರೆ
ಘನ ಕಪೀಂದ್ರನ ವೀರತೇಜವ ಕಂಡು ಮುನಿವರನು ॥
ಮನವಲಿವನತಿ ವೀರನೆನುತವೆ
ಹನುಮ ಹೇಳುವೆ ಪಥವನೆನ್ನಯ
ಕನಕ ಕುಂಡಲವದನು ತಂದೆನಗಿತ್ತ ಬಳಿಕೆಂದ ॥ ೬೧ ॥

ಎತ್ತಬಹುದೀರೇಳು ಲೋಕವ
ನೆತ್ತಲರಿದಾಯ್ತವನ ಕುಂಡಲ
ವುತ್ತೆ ಮಾರುತಿ ಬಲುಹಿನಿಂ ದಾಡೊತ್ತಿ ತಕ್ಕವಿಸಿ
ಹೊತ್ತು ಡೆಂಡಣಿಸುತ್ತ ಬರುತಿರೆ
ಮತ್ತೆ ತಾನಿದಿರೆದ್ದು ಮುನಿ ನಗು
ತೆತ್ತಿ ತಾಯೆನುತೆಡದ ಕೈಯಲಿ ಕಿವಿಯಲಿಕ್ಕಿದನು ॥ ೬೨ ॥

ಗುರುವೆ ನಿಮ್ಮಲಿ ನಾವು ವೀರರೆ
ಸರಣಿಯನು ಬೆಸಸುವುದು ತನಗೆನೆ
ಭರದಿ ಹಾರುತ ಕೆಳಗೆ ಲಂಕೆಯನೋಡದೈತಂದೆ ॥
ತಿರುಗಿ ಹೋಗೆನೆ ತಪ್ಪದೀತನು
ಹಿರಿಯನೊ ಘಡ ಬೇಹುಗಾರನೊ
ಕರುಳನುಗಿವೆನೊ ಸೆಣಸು ಲೇಸಲ್ಲೆಂದ ಮನದೊಳಗೆ ॥ ೬೩ ॥

ಮರುಳೆ ನೋಡುವುದೇನು ನೀ ತರ
ಹರಿಸಿ ನಿನ್ನಯ ಸತ್ವದಳತೆಯ
ಲರಿಯದಬ್ಧಿಯ ಹವಣು ನೋಡದೆ ಮೀರಿದೈತಂದೆ ॥
ಉರಿವುತಿದಕೋ ಲಂಕೆ ಸಾಸಿರ
ಕಿರಣನುದಯದವೋಲು ಚೆಲುವಿನ
ಕರುವನಿಟ್ಟಂದದಲಿ ನೋಡೆನೆ ಕಂಡ ಕಪಿರುದ್ರ ॥ ೬೪ ॥

ಜಿಗಿದನನಿಲಜ ಮರಳಿ ಲಂಕೆಗೆ
ಹಗಲು ಕಂದಿತು ದಿನವಿಯೋಗದ
ಲಗಲಿದುವು ಚಕ್ರಾಂಕ ಪದ್ಮಿನಿ ಮೊಗವ ಮುಚ್ಚಿದಳು ॥
ಒಗೆದವೊಂದೊಂದುಡುಗಣಂಗಳು
ಖಗಕುಲಂಗಳು ತರುವ ಸಾರಲು
ಮಗನ ಬಳಲಿಕೆಗಳೆಯ ತಂಬೆಲರೆಸೆಯೆ ಸಂಜೆಯಲಿ ॥ ೬೫ ॥

ಸುರಪತಿಯ ಕರಿ ಹೇರುತಿದೆ ದಶ
ಶಿರನ ಕಮ್ಮಟದಲ್ಲಿ ಹುಳ್ಳಿಯ
ನರರೆ ಮಝು ಸಿರಿವಂತ ರಾವಣ ಸತಿಗೆ ಕೆಟ್ಟನಲ ॥
ಧರಣಿಜೆಯ ಕೊಡಲಿವನ ಭಾಗ್ಯಕೆ
ಸರಿಯದಾವುದು ಖಳನು ಪಾಸಟಿ
ಹರಿಗೆನುತ್ತವೆ ಹತ್ತಿ ಸಾರಿದ ಲಂಕಿಣಿಯ ಕಂಡ ॥ ೬೬ ॥

ಹರಿಯ ನಾಮವ ನೆನೆಯಲಘತತಿ
ಹರಿವುದಚ್ಚರಿಯಲ್ಲ ಶಿವ ಶಿವ
ಹರಿಣ ಹರಿಯಣ ಹರಿಗೆ ಹರಿಹರಿ ಹರಿಸು ಹರಿಯೆನಲು ॥
ದುರಿತ ಹರಿಯದೆ ಜಗವ ಹೊರೆಯಲು
ಹರಿಸಮಾಖ್ಯದಿ ನಿಖಿಲ ಪ್ರಾಣಿಯ
ವಿರಚಿಸನೆ ಕರಣಾಳು ಕಮಲಾವಾಸನೊಲವಿನಲಿ ॥ ೬೭ ॥

---

## ೧೦ನೇ ಸಂಧಿ

ಪಲ್ಲ ॥ ಪುರಸಿರಿಯನನುಭವಿಸಲಾರದೆ
ಮರುಳು ರಾವಣ ವನಕೆ ನೂಕಿದ
ಪರಿಯನರಿಯದೆ ಹನುಮನರಸಿದ ಪುರದಿ ಲಕ್ಷ್ಮಿಪ್ರಿಯನು ॥

ಪದ ॥ ಗುರುಪದವ ಭಜಿಸಿದನ ಹೃದಯದ
ಪರಿಯಲಂತಿರಲಂಧಕಾರವು
ಹರಿದು ಭುವನವ ಹಬ್ಬುತಿದ್ದುದು ರಜನಿಮುಖದಲ್ಲಿ ॥
ಕರತಳವನೀಡುತ್ತ ದನುಜೆಯ
ಹೊರೆಗೆ ಮಾರುತಿ ಸೇರುತಿರ್ದನು
ಹರುಷಗೊಂಡಳು ಕಂಡು ರಕ್ಕಸಿ ತುತ್ತು ಸವಿಯೆನುತ ॥ ೧ ॥

ಕರಿಯ ಗಿರಿ ಕೈಕಾಲು ಧರಿಸಿದ
ಪರಿಯನುಸುರುವೆನೇನ ಕಂಗಳು
ವುರಿಯನುಗುಳಲು ಕೋರೆ ದಾಡೆಗಳೆರಡು ಸಿಡಿಲಂತೆ ॥
ಸುರೆಯ ರಾಟಳ ಸಾವಿರಂಗಳ
ಸರಿತದಲಿ ತಿದ್ದಿದರೆ ಬಾಯಿಗೆ
ಭರದಲುಂಡವಳೊಡಲ ಬೆವರದು ಶರಧಿಗೈದುತಿದೆ ॥ ೨ ॥

ತೇಗುವಳು ಥರ್ರೆಂದು ಬಯಲಿಗೆ
ತೂಗುವಳು ಡೆಂಡಣಿಸಿ ಭೂಮಿಗೆ
ಬಾಗುವಳು ನಿಂದಿರ್ದು ವಾಡುವಳೋರೆ ಬಾಯ್ದೆರೆದು ॥
ತೂಗಿ ತಲೆಯನು ನಗುವಳಳುವಳು
ಆಗುಳಿಸುವಳು ನೆರವಿ ಬೆಚ್ಚಲು
ಬೀಗಿದಾ ಹೊಮ್ಮೊಲೆಯವೊಲಹಿಗೆ ಕಪಿಯ ನಗಿಸಿದಳು ॥ ೩ ॥

ಅಸುರೆ ಸುರೆಯಿಂದುಬ್ಬಿ ಕೊಬ್ಬಿರೆ
ಬಸಿವ ಮೂತ್ರದಿ ತೋದ ಸೀರೆಯ
ನಸುರರಿಕ್ಕೆಲದಲ್ಲಿ ಕಳೆದುಡಿಗೆಗಳನೋಸರಿಸೆ ॥
ಸಸಿನೆಮಾಡುತ್ತೈದಿ ಬರಲಾ
ಬಸಿವ ಶೂಲದ ಹೆಣನ ನೆತ್ತರ
ಕುಸುರಿಗರುಳನು ತಿಂದು ದಣಿದು ಪಿಶಾಚ ಮೆರೆವುತಿರೆ ॥ ೪ ॥

ಅರಿಕೆಯಾದರೆ ದನುಜೆ ಸೀತೆಯ
ಮರೆಸಲಳವಲ್ಲರಸಲೆನಗೆನು
ತುರುವ ಲಂಕಿಣಿ ಚೀರಿ ಬೊಬ್ಬಿಡೆ ಹನುಮ ಹರಿತಂದು ॥
ಒರಲದಿರು ಮುದುಗ್ಗೈಸೆ ಎನುತವೆ
ತಿರುಗಿ ಮೊಲೆಗಳ ಚೂಣಿಗಾರದೆ
ಹೊರಗೆ ಸಾರಿದು ಬಾಲಕೊರಳಿಂಗುರುಳಸಿಕ್ಕಿದನು ॥ ೫ ॥

ಆಲಿಗಳು ಹೊರಹಾಯ್ದು ರಕ್ಕಸಿ
ಕಾಲಡೆಂಡಣಿಸುತ್ತ ಹಿಡಿದಿಹ
ಶೂಲ ಬಿದ್ದುದು ಬಸಿಯೆ ನೊರೆಗಳು ಸೂಸಿ ಗುರುಗುರಿಸೆ ॥
ಬಾಲವೋ ಲಂಕಿಣಿಗೆ ಪ್ರಳಯದ
ಕಾಲವೋ ಹೃಚ್ಛೂಲವೋ ಯಮ
ಜಾಲವೋ ಎನಲರುಣವಾರಿಯಲಸುವ ನೀಗಿದಳು ॥ ೬ ॥

ಹತ್ತು ಸಾವಿರ ಖಳರ ಬಾಲದಿ
ಸುತ್ತಿ ಶಿಲೆಗಪ್ಪಳಿಸೆ ದನುಜೆಯ
ತೆತ್ತಿಗರ ಸಂಹಾರವಾಯಿತು ಖಳೆಯ ಹೇರೊಡಲ ॥
ಎತ್ತಿ ಲಂಕೆಯಲಿಟ್ಟಡಡಿಯಲಿ
ಸತ್ತುದಾ ಖಳನಿಚಯವಗಣಿತ
ಮೊತ್ತಿ ಕಾಗೆಯ ಹಣ್ಣ ರಾಶಿಯನಾನೆ ತುಳಿದಂತೆ ॥ ೭ ॥

ಖಳೆಯ ಕೊಂದನು ಹನುಮ ನಿತ್ಯವ
ಸಲಿಸಲೋಸುಗ ಮುಖಕರಾಂಘ್ರಿಯ
ತೊಳೆದು ಬಳಲಿಕೆಗಳೆದು ಕಡಲಲಿ ಮುಳುಗಿ ಮೌನದಲಿ ॥
ಸಲೆ ನಿರಂಜನ ನಿತ್ಯ ನಿರ್ಮಲ
ಸುಲಭ ಗುಣ ನಿರ್ಮುಕ್ತ ಮಾಯಾ
ಲಲನೆಯರಸ ನಿಜಸ್ವರೂಪನ ನೆನೆದು ಭಜಿಸಿದನು ॥ ೮ ॥

ಖಳೆ ವಿಶಾಪವ ಪಡೆದು ಹನುಮನ
ಹಲವು ಪರಿಯಲಿ ಹರಸಿ ವರವನು
ಕಲಿಯೆ ಬೇಡೆನೆ ಸತ್ತಳೀ ಸತಿಯಾರು ನೀಯೆನುತ ॥
ಎಲೆಗೆ ನೀನಾರೆತ್ತಳವಳೆನೆ
ತಿಳಿವಡೀ ಲಂಕೆಯನು ನುಂಗುತ
ಹಲವು ಕಾಲವ ಕಳೆದೆನೆಂದರೆ ಹಿರಿದು ನೊಂದಿಹೆನು ॥ ೯ ॥

ಹೇಳು ಹೇಳಾ ಕತೆಯನೆಂದರೆ
ಹೇಳಲೇನದ ಧನಪ ಲಂಕೆಯ
ನಾಳುತಿರಲಾನೊಬ್ಬ ಯಕ್ಷನ ಮಗಳು ಸಿರಿಯಿಂದ ॥
ಬಾಲಕಾಂತಾನಿಕರದೊಳಗತಿ
ಖೇಳಮೇಳದೊಳಾಡುತಿದ್ದೆನು
ಭಾಳಲೋಚನ ತಿರಿವ ತಮ್ಮಡಿಯಾಗಿ ನಡೆತಂದ ॥ ೧೦ ॥

ಬೊಟ್ಟಿನಲಿ ತುಡುಕಿದ ವಿಭೂತಿಯ
ಕೊಟ್ಟು ಭಿಕ್ಷವ ನೀಡು ಎಂದೆನೆ
ಅಟ್ಟುದಿಲ್ಲೆಲೆ ಗೊರವಯೆಂದರೆ ನಿನ್ನ ಚಿತ್ತದಲಿ ॥
ನೆಟ್ಟನಿದ್ದುದ ನೀಡುಯೆನಲಾಂ
ಕೊಟ್ಟೆನೈ ಮೂರಣ್ಣೆಗಲ್ಲನು
ಮುಟ್ಟಿ ನುಂಗಿದ ನಿನಗೆ ಬಹುಫಲವಾಗಲವುಯೆಂದ ॥ ೧೧ ॥

ಹನುಮ ವರವನು ಕೊಡುವೆ ಬೇಡೆನೆ
ತನಗೆ ಮುಂದಿರದಿಪ್ಪುದೇ ವರ
ವೆನಲು ಸುಖಿಯಾಗೆನುತ ಹರಸಿದಳಬಲೆ ಹರುಷದಲಿ ॥
ವಿನುತ ತನುಶೃಂಗಾರೆಯಾಗಲು
ಮನುಮಥನ ಮಸೆದಲಗಿನಂತಿರೆ
ಮನದಲಚ್ಚರಿವಟ್ಟ ಮಾರುತಿಯವಳ ನೊಬಗಿಂಗೆ ॥ ೧೨ ॥

ಹೇಳಿದಳು ಇತಿಹಾಸ ಕತೆಯನು
ಬೀಳುಗೊಟ್ಟಳು ಬಳಿಕ ಯಕ್ಷಿಣಿ
ಯಾಲಯಕ್ಕೈದಿದಳು ರಕ್ಕಸವರನ ಪುರದೊಳಗೆ ॥
ಬಾಲದಣುವನು ಹೊಗುವುಪಾಯವ
ಬಾಲೆಸೀತೆಯನರಸುವಂದವ
ನಾಲಿಸುತ್ತಿರಲತ್ತ ಕಳಕಳವಾಯ್ತು ಪುರದೊಳಗೆ ॥ ೧೩ ॥

ಹರಿದು ಹುಯ್ಯಲನೊಬ್ಬ ಹೇಳಲು
ಕೆರಳಿ ದಶಗಳನೆಂದನೆಲವೋ
ಮರುಳುಗೊಂಡಾ ಕೊಲುವ ಕೋಡಗವುಂಟೆ ಲಂಕಿಣಿಯ ॥
ಅರಸ ನಿಮ್ಮಡಿಯಾಣೆಯೆಂದರೆ
ಹಿರಿದು ಚಿಂತಿಸಿ ಕಾಹ ಹೇಳಿದ
ಪುರಕೆ ಯಮದಂಡಾದಿ ನಾಯಕರಿರುಳು ಕಾಯ್ದಿರಲು ॥ ೧೪ ॥

ಹೊಗಬಹುದು ಕಾಳಾಹಿ ತುಂಬಿದ
ಹಗೆಯವನು ಹಸಿದಿರ್ದ ಹುಲಿಗಳ
ಮೊಗವ ಕೆರಳಿದ ಸಿಂಗ ಜಂಗುಳಿ ದಳವ ಭೈರವಿಯು ||
ಮೊಗವ ಮಾರಿಯು ಮನೆಯುನಗ್ಗದ
ಜಗವ ಸುಡುವಾ ಕಿಚ್ಚು ಮೀರಿದು
ಹೊಗುವಡಳವಲ್ಲಿರುಳು ಲಂಕೆಯುನಾವ ವೀರರಿಗೆ || ೧೫ ||

ಆಗಳ ಒಳಿಯುವನಾವ ನೋಡೋ
ಬಗಿದು ಬಪ್ಪವನಾವ ತಿಳಿಯೋ
ಹೊಗುವನಾರವನಲ್ಲಿ ನೋಡೆಲೆ ಮುಂದೆ ಹುಲಿಮೊಗವ ||
ಮಿಗುವನಾರೋ ನಿಲ್ಲು ನಿಲ್ಲೋ
ಬಗೆಯದಿರು ಸುಯಿದಾನ ಹೋ ಮೈ
ದೆಗೆಯಬೇಡೆನೆ ಖಳರು ಲಂಕೆಯನಿರುಳು ಕಾಯ್ದಿರಲು || ೧೬ ||

ನೊಣ ಸುಳಿಯೆ ಕಡಿಖಂಡ ಮಾಡುವ
ರಣವಿಶಾರದ ಭಟರು ಕಾಯ್ದಿರೆ
ಗಣನೆಗೊಳ್ಳದೆ ಚಿಕ್ಕರೂಪದಿ ಒಳಗೆ ನುಸುಳಿದನು ||
ಅಣುವನರಸಿದನೊಂದಿರುಳು ದಿನ
ಮಣಿಗೆ ಮುನ್ನಿನ ಮಣಿಹವಾಯಿತು
ತ್ರಿಣಯನಿಲಯದಲಡಗಿ ಹಗಲನು ಕಳೆದ ಹನುಮಂತ || ೧೭ ||

ಕತ್ತಲಿಗೆ ಕೈವೀಸಿ ದಿನಪತಿ
ಯತ್ತ ಸರಿಯಲು ಹನುಮ ತೊಳಲಿದ
ಮತ್ತೆ ಪುರದೊಳಗಿರುಳು ದನುಜರ ಕೇರಿ ಕೇರಿಗಳ ||
ಸುತ್ತಿ ಸುತ್ತಾವರವ ನೋಡಿದ
ಡೆತ್ತನೋಡಿದಡತ್ತ ಕಾಯ್ದಿಹ
ಮೊತ್ತದಸುರರು ಕಾಣದಂತಿರೆ ಮನೆಯಲರಸಿದನು || ೧೮ ||

ಹೊಕ್ಕನೋಲಗ ಶಾಲೆಯನು ಕಪಿ
ಚಿಕ್ಕ ರೂಪಿಂದರಸುತಿರಲುದ
ಯಾರ್ಕನಂತಿರೆ ಖಳನ ಭದ್ರಾಸನವು ಬೆಳಗುತಿರೆ ||
ದಿಕ್ಕುಗೆಟ್ಟಿಹೆನೆಂದು ಮರುಗಿದ
ನಕ್ಕು ಮರುಭಾವಿನುತ ತಿಳಿದನು
ಧೊಕ್ಕನಲ್ಲಿಂದೆದ್ದು ಶೂರ್ಪಣಖಿಯ ಮನೆಗಾಗಿ || ೧೯ ||

ಅರಿಸುವಳು ಕಿವಿಮೂಗ ತನ್ನಯ
ಸರಿಯ ಮಾಡುವಳಲ್ಲದಿದ್ದರೆ
ಸರಸವಾಡುವರೆನುತ ನಿಜ ಮಂದಿರಕೆ ಬಂದವರ ॥
ಭರದಿ ನಿದ್ರೆಯೊಳಿಪ್ಪರ್ಸೈ ಸ
ಯ್ಯರಿದ ಮೂಗಿನ ಮೂಳಿ ಕಿವಿಗಳ
ನೆರವಿಯೊಳು ನಗುತರಸಿ ಬೊಕ್ಕಸದಾಲಯುವ ಹೊಕ್ಕ ॥ ೨೦ ॥

ಪಟ್ಟೆ ಪೀತಾಂಬರದ ಗಡಣವ
ಬಿಟ್ಟು ನೋಡಿದನರ್ಘ್ಯ ವಸ್ತ್ರವ
ಸುಟ್ಟೊಡಹುದದು ಲೇಸು ಬಣ್ಣಿಸೆನೆನುತ ಹೊರವಂಟ ॥
ನೆಟ್ಟನುಗ್ರಾಣದಲಿ ರತುನದ
ಬೊಟ್ಟೆನಂತಿರೆ ಕಂಡು ರಾವಣ
ಕೆಟ್ಟನಕಟವನುಣ್ಣಲರಿಯದೆ ಸತಿಗೆ ಮರುಳಾಗಿ ॥ ೨೧ ॥

ಕೆಲವೆಡೆಗೆ ಕೆಂದಳಿರ ಹಸೆಗಳು
ಕೆಲವು ಕೆಲವೆಡೆ ಪುಷ್ಪವಸೆಗಳು
ತೊಳಿಪ ಹವಳದ ಹಲಗೆಯೊಂದೆಸೆ ಕೋಟಿ ಸಂಖ್ಯೆಯಲಿ ॥
ಖಳನ ಭಾಗ್ಯಕೆ ಸರಿಯದಾವುದು
ಕೇದಿಯರ ಹಡಪಿಗರ ಲೆಂಕರ
ನಿಳಯದಲಿ ಹನುಮಂತ ದೇವಿಯನರಸಿ ತೊಳಲಿದನು ॥ ೨೨ ॥

ತಪ್ಪುವನೆ ರವಿಕುಲದ ರಾಘವ
ನೊಪ್ಪಗೆಡಿಸಿದ ಶೂರ್ಪನಖಿಯನು
ಮುಪ್ಪುರಿಯ ದಾನವರನೊರಸಿದ ಸಕಲ ದಳಸಹಿತ ॥
ತಪ್ಪಿದಿಂದ್ರನ ತನುಜ ನಯನವ
ಕಪ್ಪವಿತ್ತುದ ಕಂಡು ಸೀತೆಯ
ತಪ್ಪ ರಾವಣ ಹೆಡ್ಡನೆಂಬುದ ಹನುಮ ಹೇಳಿದನು ॥ ೨೩ ॥

ಅಕ್ಕಿಯರುಗಳುಯೆಂಬ ಹಣನಿಗೆ
ರೊಕ್ಕವನು ತೆಗೆಯೆಂಬ ಹರದನು
ಲೆಕ್ಕ ತಪ್ಪಿಸಿ ಹೊಡೆವನಳತೆಯ ತೂಕ ತೊಲೆಗಳಲಿ ॥
ನಕ್ಕು ನಂಬಿಸಿ ಹೊತ್ತುಗಳೆವಾ
ಠಕ್ಕುತನದಲಿ ತೆಗೆದುಕೊಂಬಾ
ಹೊಕ್ಕು ಹೊರಡುವ ಹರದರಂಗಡಿಗಂಡು ನಗುತಿರ್ದ ॥  ॥

ಧೋತ್ರ ಮಡ ಪರಿಯಂತ ಯಜ್ಞದ
ಸೂತ್ರ ವೊಪ್ಪಿಡಿ ಮಾತ್ರ ಮುಟ್ಟಿಯ
ನೇತ್ರವೆರಡರ ಸರಿತ ಮಧ್ಯದಲಿಟ್ಟು ಗುಣಿಸುತ್ತ ॥
ಶ್ರೋತ್ರಿಯರು ತಾವೆಂದು ದಾನಕೆ
ಪಾತ್ರರಾವೆಂದೆಂಬ ಗಡ್ಡದ
ಹೋತೃಗಳ ಮನೆಮನೆಯ ಹೊಕ್ಕರಸಿದನು ಹನುಮಂತ ॥ ೨೫ ॥

ಜನನಿಗಕ್ಷಿಗಳಿಲ್ಲ ದಾಸಿಯು
ಮನೆಯ ಕೆಲಸದಿ ಬಳಲಿಬಿದ್ದಳು
ಮನೆಯಳೊಬ್ಬಳೆ ತರುಣಿಯಿರಲು ತಥಾಪಿಯಿನ್ನೊಂದು ॥
ಮನೆಯ ಪತಿ ಪರದೇಶಕ್ಕೈದಿಯೆ
ದಿನಗಳಾದುವು ಹಲವು ಪಥಿಕನೆ
ನಿನಗೆ ರಾತ್ರಿ ನಿವಾಸ ಘಟಿಪುದೆ ಮೂಢ ತಿಳಿಯೆನಲು ॥ ೨೬ ॥

ಉಟ್ಟ ನಿರಿ ಸೋಂಕಿದರೆ ಕೊಲಃವುದೆ
ಮುಟ್ಟೆ ಲಿಂಗವ ಬೆರಳು ಬೇವುದೆ
ಹೊಟ್ಟೆವೊಡೆವುದೆ ಕಃಡಿದ ಬಳಿ ನೀರಿಂಗೆ ಕಾಲುಗಳ
ಕಟ್ಟುವುದೆ ಸೂರುಳುಗಳೆಲೆ ಒಡ
ಹುಟ್ಟಿದೆಳೆಸಿದೆನೆಂದು ಬಾಯನು
ಕಟ್ಟೆ ಹಣವನು ಗಳಿಪುದೆಂದಳು ಗಣಿಕೆ ಮಗಳಿಂಗೆ ॥ ೨೭ ॥

ಗಿಣಿಯನೋದಿಸಿ ಕಾಮಶಾಸ್ತ್ರವ
ಗಣಿಸಿ ತದ್ದಿನದಾಯವೆಣಿಸುವ
ಬಣಗು ವಿಟ ತೆಗೆಯೆಂಬ ಕುಂಟಣಿ ಮತ್ತೆ ಕರೆಯೆನಲು
ಅಣಕಿಸುವ ವಿಟನೆಂದ ನುಡಿಗಳ
ನೆಣಿಸದಡಿಗಡಿಗೆದ್ದು ವೀಣೆಯ
ಗಣಿಕೆ ನುಡಿಸಲು ಕುಣಿವ ಹಂಸೆಯ ಕಂಡ ಕಪಿರುದ್ರ ॥ ೨೮ ॥

ನಗುವುದಳುವುದು ಮನವನಾರ್ಜಿಸಿ
ತೆಗೆವುದರ್ಥವನಾವ ಪರಿಯಲಿ
ಬಗೆಯಬೇರಿರಿಸುವುದು ಬಾಹ್ಯದ ಮಮತೆಗಳ ಬಯಸೆ ॥
ಉಗುಳದಂತಸ್ತವನು ವಿಟರನು
ಜಗುಳಿ ಸಿಪ್ಪೆಯಮಾಡು ನೀನೇ
ಮಗಳೆ ನಡೆವುದು ಗಣಿಕೆಯರೋದಿಸಲು ಕೇಳ್ದ ॥ ೨೯ ॥

ಕಂಠದಗ್ರದಲ್ಲಿದೆ ಲೋಕದ
ಗಂಟಲನು ನೆರೆ ಕೊಯ್ದು ಮಾತಿನ
ನೆಂಟುತನಗಳ ಬೆಳಸಿ ಭೂಪರ ಹಣಗಳನು ತಿಂದು ॥
ಎಂಟು ಮಡಿ ಕರ ಹಿತವನಾಡುತ
ಕಂಟಕರು ನಿಜ ಶ್ರೇಯಪ್ರಾಪ್ತಿಗೆ
ಶುಂಠತನದಲಿ ಮೆರೆವ ಕರಣಿಕಧೂರ್ತರನು ಕಂಡ ॥ ೩೦ ॥

ಹುಸಿವೊಳೆತುದಂತ್ಯಜೆಯಲಾ ಹುಸಿ
ಯೆಸೆದುದಂಕುರ ಸಮ್ಮಗಾರನ
ಲಸಗನಿಂ ಬೆಳೆದೆಸೆವ ಶಾಖೆಗಳಾಯ್ತು ಜಾರೆಯಲಿ ॥
ಕುಸುಮವರಳಿತು ಗಣಿಕೆಯಲಿ ಫಲ
ವೆಸೆದುದಾ ಹುಸಿಯಕ್ಕಸಾಲಿಯ
ಲೊಸೆದು ಹಣ್ಣಾಯ್ತೆಂದು ಕಂಡನು ಚಿನ್ನಕೊಯ್ಕರಲಿ ॥ ೩೧ ॥

ಗುರುವ ಭಜಿಸು ಮುಕುಂದನರ್ಚಿಸು
ವುರುಳದಿರು ವಿಷಯಾಂಧಕೂಪದಿ
ತರುಣಿ ಧನ ಮಹಿಯೆಂಬ ಮಮತೆಗೆ ಕೆಡಿಸದಿಹಪರವ ॥
ಜರೆಯ ಬೇಡಾರ್ಯರನು ಸಜ್ಜನ
ನೆರವಿಗುಪಹತಿಯೆಣಿಸದಿರು ಇಹ
ಪರಕೆ ಸುಖಿಯಹೆಯೆಂದು ಗುರು ಶಿಷ್ಯನನು ಬೋಧಿಸಿದ ॥ ೩೨ ॥

ದಾನವಿರಹಿತ ಧನವು ದೈವ
ಧ್ಯಾನವಿಲ್ಲದ ತಪವು ಕಲ್ಪವಿ
ಧಾನವಿಲ್ಲದ ಪೂಜೆ ಮನ್ನಣೆಯಿಲ್ಲದೋಲಗವು ॥
ತಾನವಿಲ್ಲದ ಗೀತ ಕೇಳುವ
ತಾನುಯಿಂಗಿತವರಿಯದಭಿನಯ
ವೇನು ಫಲವದರಿಂದ ತಿಳಿಯೆಂದೊಬ್ಬವೋದಿಸಿದ ॥ ೩೩ ॥

ಧರಣಿಜೆಯನೆಳೆತಂದು ರಾವಣ
ಹಿರಿದು ಕ್ಷೇಮದಲಿರಿಸದುಳಿವನೆ
ಹಿರಿಯ ಮನೆಯದನೋಕ್ಷೆನೆನುತವೆ ಕಳೆದು ಬಾಗಿಲನು ॥
ಹಿರಿಯ ಮಂಚದಿ ಕೆಡೆದು ಗೊರೆವುತ
ಸುರಿವ ಬೆವರೊರತೆಗಳ ಹೋಲಲು
ಹಿರಿಯಗಿರಿಯಂತರುಣ ಮಂಚದಿ ಕುಂಭಕರ್ಣನಿರೆ ॥ ೩೪ ॥

ಉಸುರಪಥದೊಳಗಾಗೆ ಬೇಸ
ತ್ತುಸುರಬಿಟ್ಟಗೆ ತೊಲೆಯ ತಾಗುವ
ನುಸುರ ತೆಗೆದರೆ ಮೂಗ ತಾಗುವ ಬೆಳೆದನಾಕ್ಷಣಕೆ ॥
ನುಸುಳಿ ಮಂಚದ ಕಾಲಪಿಡಿದನು
ವೊಸೆದು ನಿದ್ರೆಯನಿತ್ತು ಲೋಕವ
ಕುಸುಮಭವನುಳುಹಿದನು ಮರ್ಝು ಭಾಪೆನುತ ಬೆರಗಾದ ॥ ೩೫ ॥

ಸಿರಿಯವೊತ್ತಿನ ಮನೆಯೊ ಮೇಣ್ ಜಯ
ಸಿರಿಯ ಪೆಣ್ಣಿನ ತವರುಮನೆಯೋ
ಸುರರ ಬಂಧನ ಮನೆಯೊ ವೀರರ ಬಿರುದು ಸುಮ್ಮಾನೆಯೊ ॥
ಅರಮನೆಯೊ ಸರ್ವಾರ್ಥ ಸುಖಗಳು
ನೆರೆದ ಮನೆಯೋ ನೀತಿಗಲಿವರ
ಗುರುಮನೆಯೊಯೆನಲಿಂದ್ರವೈರಿಯ ಮನೆಯ ನೋಡಿದನು ॥ ೩೬ ॥

ಬಂಧಿಶಾಲೆಯೊಳಕಟ ಶಿವ ಶಿವ
ವೊಂದು ಕಡೆಯಲಿ ಖಚರ ಕಿನ್ನರ
ರೊಂದು ಕಡೆಯಲಿ ಸಿದ್ಧ ವಿದ್ಯಾಧರ ಮಹೋರಗರು ॥
ಒಂದು ಕಡೆ ಗಂಧರ್ವ ಸೆರೆಗಳು
ಗೊಂದಣದ ಗೀರ್ವಾಣ ನಿಚಯದ
ಲಿಂದುಮುಖಿಯಿರದುಳಿಯಲೆನುತವೆ ಹನುಮನರಸಿದನು ॥ ೩೭ ॥

ಬಳಸಿ ಪಚ್ಚೆಯ ಕೋಟೆಯಂತಿರೆ
ತುಳಸಿ ಬೆಳೆದಿರೆ ಮನೆಯ ಚೌಕದಿ
ಹೊಳೆವ ರತುನದ ಮನೆ ವಿಭೀಷಣ ಪುಣ್ಯಭೂಷಣನ ॥
ಒಳಗೆ ಹೊಕ್ಕನು ಮುನ್ನಯೆಲ್ಲಾ
ಖಳರ ಮನೆಗಳ ಹೊಕ್ಕ ಪಾಪವ
ಕಳೆಯಬೇಕಂದಲ್ಲಿ ಹೇಳುವ ಪುಣ್ಯಕಥೆ ಕೇಳ್ದ ॥ ೩೮ ॥

ಪಿರಿದು ಮಡುವಿನೊಳುತ್ತಮಾಮೃತ
ಶರಧಿ ಹುಟ್ಟಿದವೋಲು ಶಿಲೆಯಲಿ
ಸರಸಿರುಹ ಬೆಳೆದಂತೆ ಕೌಡಿಕೆ ರಾಶಿಯೊಳಗಿರ್ದ ॥
ಅರಿಭಯಂಕರ ಪಾಂಚಜನ್ಯದ
ಪರಿಯಲಸುರನ ಪುರದ ನಡುವೀ
ಹರಿಯ ಕಥೆಗಳಪೂರ್ವವೆಂದಾ ಹನುಮ ಮೆಚ್ಚಿದನು ॥ ೩೯ ॥

ಪರಿಮಳದ ಪೂರಾಯವೆನಿಸುವ
ಹಿರಿಯ ಪುಷ್ಪಕದೊಳಗೆ ಹೊಕ್ಕನು
ಧರಣಿಜಾತೆಯನರಸುತಿರೆ ಹನುಮಂತ ಭೀತಿಯಲಿ ॥
ಪರಿಚರರು ಹಲರೆಸೆಯೆ ಬೆರಗಾ
ಗೆರಡು ಘಳಿಗೆಗೆ ಮತ್ತೆ ತಿಳಿದನು
ಉರಿಯನುಗುಳುವ ರತುನ ಮಂಚದಿ ಕಂಡ ರಾವಣನ ॥ ೪೦ ॥

ಅವಳಿ ಗಿರಿಯೋ ಅವನ ತೊಡೆಯೋ
ಕವಲುದಲೆಯೋ ಪೂರ್ಣ ಕಲೆಯೋ
ಶಿವ ಶಿವಾ ತೋಳುಗಳೊ ನೀಲಾಚಲದ ಬೀಳುಗಳೋ ॥
ಅವನಿಜೆಯು ತರಲವಗೆ ಸಲುವುದು
ರವಿಕುಲಂಗಿವ ಸಾಟಿಯೆಂದಾ
ಪವನಸಂಭವ ಖಳನ ಸೊಬಗಿಗೆ ಸಂತಸಂಬಟ್ಟು ॥ ೪೧ ॥

ಇವ ಕಣಾ ಕುಸುಮಾಸ್ತ್ರನೆಂಬವ
ನಿವನೆ ಬಹುಮುಖ ಮದನಕಾಮನು
ಇವನೆ ದಾಡೆಯನುಳ್ಳ ಮಕರಧ್ವಜ ಮಹಾದೇವ ॥
ಇವನು ರಕ್ಕಸನೆಂದು ನಿಂದಿಸು
ವವರು ಪಾಪಿಗಳೈಸೆ ಲೋಕದ
ಲಿವನ ಚೆಲುವಿಗೆ ಸೋಲದಿಪ್ಪಾ ಸತಿಯರಿಲ್ಲೆಂದ ॥ ೪೨ ॥

ಎಲೆಲೆ ಮಂಜರನೊಡನೆ ಕಾಣೆಲೆ
ಗಿಳಿಯು ಮರಿಯಾ ಬೀಡನಡವಿಯು
ಹುಲಿಯು ಕೆಲದಲಿ ಹರಿಣ ನಿದ್ರೆಯ ತಳೆದ ಪರಿಯಲ್ಲಿ ॥
ಖಳನ ಬಲು ಥಗೆಯಾರಲೊಂದೆಸೆ
ಸೆಳಿಯ ಮಂಚದಿ ಪವಡಿಸಿರ್ದಳು
ಜಲಜನಾಭನ ವಧುವ ಹೋಲುವ ರಾವಣನ ರಾಣಿ ॥ ೪೩ ॥

ಮಡದಿಯರ ನಂಬಿದರೆ ಕುಲವನು
ಕೆಡಿಸುವರು ದಿಟ ಮಾನಹಾನಿಯು
ಪೊಡೆಯಗಾನೇನೆಂಬೆನಪಕೀರ್ತ್ಯಾಯ್ತು ರಾಮಂಗೆ ॥
ಕಡಿದು ಬಿಸುಡುವೆನೆನುತ ದನುಜನ
ಖಡುಗವನು ಸೆಳೆದವನ ಕೊರಳುಗ
ಳೆಡೆಗೆ ಹಾಯ್ದನುಪೊಡೆಯನಾಜ್ಞೆಯ ನೆನೆದು ಹಿಂಗಿದನು ॥ ೪೪ ॥

ನೆನೆದನಣುವ ವಿವೇಕವಿಲ್ಲದೆ
ವನಿತೆ ನಕುಲನ ಕೊಂದ ಗಾದೆಯು
ಹನುಮ ಮಾಡಿದನೆನಿಸಬಾರದು ದೇವ ನನಗಿತ್ತ ॥
ತನು ಕುರುಹನಾರ್ಸೈವೆನೆನುತಾ
ಕನಕ ಮುದ್ರಿಯ ಮುಟ್ಟಿ ದಾಡೆಯು
ಮೊನೆಗಳಂಕುರಿಸಿದರೆ ದನುಜರ ಮಾಯೆ ಬಲುಹೆಂದ ॥ ೪೫ ॥

ಕೆಂಡವೊರಲೆಗೆ ಸಾಧ್ಯವೇ ಖಳ
ದಿಂಡೆಯರ ಮಾಯೆಯನು ಗೆಲುವರೆ
ಪುಂಡರೀಕದಳಾಕ್ಷನಲ್ಲದೆ ವೀರರಿಲ್ಲೆನುತ ॥
ಕೊಂಡು ಚಂದ್ರಾಸವನು ಝಳಪಿಸಿ
ದಂಡೆ ರೋಮವ ಬೋಳಿಸಿದರದು
ಮುಂಡು ಧಾರೆಗಳಾಗೆ ನಗುತವೆ ಹನುಮ ಬೀಸಾಟ ॥ ೪೬ ॥

ದಾನವಾರಿಯ ವಿರಹಕಾರದೆ
ಜಾನಕೀ ಸತಿ ಹರಣವಳಿದಳೊ
ದಾನವನು ತಪ್ಪಂದು ಶರಧಿಯ ಬಿದ್ದಳೋ ಮೇಣು ॥
ಏನ ಮಾಡುವೆನಕಟ ಲಂಕೆಯೊ
ಳಾನು ದೇವಿಯನರಸಿ ಕಾಣೆನು
ತಾನೆ ನೋಡಲಿ ಕಿತ್ತು ಲಂಕೆಯನೊಯ್ವೆ ತಾನೆಂದ ॥ ೪೭ ॥

ಕೀಳ್ವೆ ಲಂಕೆಯ ದನುಜನರಿತರೆ
ಸೀಳ್ವೆನಹಿತರ ವಂಶ ವಂಶವ
ತಳ್ವಿಕೊಟ್ಟರೆ ದನುಜರೆಲ್ಲರ ಹಿಂಡ ಸದೆಬಡಿವೆ ॥
ಬಳಿಕ ನೋಡುವೆ ದನುಜಗಿನುಜರ
ಬಲುಹನೆನುತಾ ವೀರ ಲಂಕೆಯ
ನಳಿನ ನಾಳವ ಭದ್ರಗಜ ಕೀಳ್ವಂತೆ ಕೀಳ್ಬಗೆದ ॥ ೪೮ ॥

ಸುತ್ತುತಿರೆ ಬಾಲವನು ಲಂಕೆಯ
ಕಿತ್ತು ಕೆಡಿಸದಿರರರೆ ಎನುತವೆ
ಹೆತ್ತ ತನಯಂಗರುಪಲಸುಕೆಯ ಬನದ ಕಡೆಯಿಂದ ॥
ಉತ್ತಮದ ಹೊಗಂಪು ಬರುತಿರ
ಲತ್ತ ನೋಡುವೆನೆನುತ ಬಾಲದ
ಸುತ್ತ ಸಡಲಿಸಿ ಗಂಧವಾಹನ ಬಳಿಯುಲೈದಿದನು ॥ ೪೯ ॥

ಲಂಕೆಗೀಶಾನ್ಯದಲಿ ಮೆರೆದಿಹ
ಪಂಕಜಾಕರವದಗ ಸುತ್ತ ಮೃ
ಗಾಂಕ ಸಲಹಿದ ಕೃತ್ರಿಮದ ವನರುಹಗಳೊಪ್ಪಿರಲು ||
ಶಂಕರಾರಿಯ ಕುಸುಮಗಂಧದ
ಲಂಕರೀಷ್ಣುವದೆನಿಸಿ ಮೆರೆವ ವ
ನಾಂಕಲಕ್ಷ್ಮಿಗೆ ಮನವನಿತ್ತಾ ಹನುಮ ಬರುತಿರ್ದ || ೫೦ ||

ಸಿರಿಯ ಸನ್ನಿಧಿಯಿಂದ ಮಾವಿನ
ಮರನು ಫಲಭರದಿಂದಲೊಪ್ಪಿರೆ
ಹರುಷದಿಂದವೆ ಚಿಗಿದು ಕೊಂಬೆಯನಡರಿ ನೋಡುತಿರೆ ||
ಕರುಣಿ ರಾಘವ ಶ್ರುತಿ ಶಿರೋಮಣಿ
ಹರಣವಲ್ಲಭ ಹಂಸವರ್ಧನ
ತರಣಿಕುಲ ಕೃಪೆಮಾಡುಯೆನುತಿರೆ ಕೇಳಿದನು ನುಡಿಯ || ೫೧ ||

ಹಾನಿ ನಿನ್ನದು ಶರಣು ಜನರಭಿ
ಮಾನ ನಿನ್ನದು ದೇವವಂದ್ಯನೆ
ಮಾನಿನಿಯ ಬೇಸರನು ನೀನಿಂತುಪೇಕ್ಷಿಪರೆ ||
ಏನ ಮಾಡುವೆನಾರಿಗೆಂಬೆನು
ದಾನವರ ಬಲೆಯೊಳಗೆ ಸಿಲುಕಿದೆ
ಭಾನುಕುಲ ನೀನುಳಿಯೆ ಗತಿಯಿನ್ನುಂಟೆ ಸದ್ಗತಿಗೆ || ೫೨ ||

ಎಂಬ ನುಡಿಗೇಳಿದ ಸಮೀರಣ
ಸಂಭವನು ಹಾಯೆಂದು ಶೋಕದ
ಕಂಬನಿಯ ಮಿಡಿವುತ್ತ ಕಂಡನು ದೇವಿಯಾನನವಾ ||
ಅಂಬು ನಾಂಟಿದ ಮೃಗದ ಶಿಶುವಿಂ
ಗಂಬುಜಾನನೆ ಪಡಿಯ ಹೋಲುತ
ಬಿಂಬವಿದ್ದುದು ರಾಮಚಂದ್ರನ ನೆನಹು ಮಾತ್ರದಲಿ || ೫೩ ||

ಹಗಲಿನಿಂದುವಿನಂತೆ ಬಾಡಿದ
ಮೊಗದ ಬಿಚ್ಚಿದ ಕೇಶಪಾಶದ
ಮುಗಿದ ಸರಸಿಜದಂತೆ ದೃಗುಯುಗದೊರೆತ ಕಂಬನಿಯ ||
ಒಗುವಪಾಂಗದ ಮಾಸಿದಂಬರ
ಹೊಗೆವ ಬಿಸುಸುಯ್ದಧರವೊಣಗಿರೆ
ಬಗಿವ ದಾಳಿಂಬವನು ಹೋಲುವ ಛಾಯ ಬಿಡುತಿರಲು || ೫೪ ||

ತನು ಬಳಲಿ ಮೈಮರೆದು ಕಂಡಳು
ಕನಸನೆಲೆ ಸಖಿ ಸರಮೆ ಕೇಳೆಂ
ದೆನಲು ಹೊಂಗೊಡಲರಸ ನೇಮದಿಂದೊಬ್ಬ ॥
ವನಚರನು ಜಲಧಿಯನು ದಾಂಟಿಯೆ
ದನುಜಪುರವನು ಸುಟ್ಟು ಮುದ್ರೆಯ
ನೆನಗೆ ಕೊಟ್ಟಾ ನರಸನಾಳೆಂದೆನಲು ಕಣ್ದೆರೆದೆ ॥ ೫೫ ॥

ಲೇಸು ಬಂಧನಮೋಕ್ಷ ನಿಮಗಪ
ಹಾಸ್ಯ ದನುಜಗೆ ರಾಮಚಂದ್ರನ
ಲೇಸು ವಾರ್ತೆಗಳೀಗ ಬಹುದೆಂದೆನಲು ಭೂಜಾತೆ ॥
ಆಶೆಬಡುತಿರೆ ಪುರದಲಿತ್ತಲು
ಸಾಸಿಗನು ಕನಸಿನಲಿ ಭಾಗ್ಯದ
ಮೊಸಲಳಿವುದ ಕಂಡು ಜೋಯಿಸರುಗಳ ಕೇಳಿದನು ॥ ೫೬ ॥

ಇರುಳು ಖಳನರಮನೆಗೆ ವಿಪ್ರರು
ಬರಲು ದಂಡದವೋಲು ನಮಿಸಲು
ಹಿರಿಯರಿಗೆ ಕನಸಿನಲಿ ಕಿರಿ ಮಗ ತೆಂಕ ಮುಖವಾಗಿ ॥
ಅರುಣ ಕುಸುಮವ ಮುಡಿದು ತೈಲವ
ಶಿರದೊಳೊತ್ತಿಯೆ ಒಬ್ಬನೇ ಮಗ
ಹಿರಿಯ ಕತ್ತೆಯನೇರಿ ಹೋಹುದ ಕಂಡೆನೆಂತೆಂದ ॥ ೫೭ ॥

ನೋಡಿದರು ಶಾಸ್ತ್ರಗಳ ಹಲವನು
ಕೇಡು ಕಂಡೆನಲಂಜಿ ನುಡಿದರು
ಮಾಡೆ ಶಾಂತಿಯ ಕ್ಷೇಮವಹುದೆನೆ ಬೇಸರಿಂದೊಬ್ಬ ॥
ಮಾಡಿದರೆ ಹಾಡಿದರೆ ದೈವವ
ಬೇಡಿದರೆ ತನಯಂಗೆ ತಪ್ಪದು
ಕೇಡು ದಿಟವೆನಲವರ ಕಳುಹುತ ವನಕೆ ನಡೆತಂದ ॥ ೫೮ ॥

ಕಂಗಳಿರೆ ಕಂಗಾಣನಾವನು
ಹೆಂಗಳಿಗೆ ಮರುಳಾದ ದಾನವ
ನಂಗಸಿರಿಗಳು ಹೋದ ಕೇಡನು ಕಂಡು ಕಂಡರಿತು ॥
ಸಿಂಗನರಸಿಯ ಹಾದರಕೆ ಕು
ರಂಗನೊಪ್ಪವ ಪಡೆದ ಪರಿ ಖಳ
ಪುಂಗವನು ಮನವರಿಯ.ಲೈದಿದ ಜಾನಕಿಯ ಬಳಿಗೆ ॥ ೫೯ ॥

ಹೊಡೆಸಿಕೊಂಡವು ಭೇರಿ ಬಸುರನು
ಹೊಡೆವ ಪರಿ ನಿಸ್ಸಾಳನಂತವು
ಬಿಡದೆ ನೆಲನುಗ್ಗಡಿಪ ಕಂಚುಕಿ ನಿಕರವಾಯೆನಲು ॥
ನಡುಗಿಯಬ್ಬರ ಕೇಳಿ ರಾಮನ
ಮಡದಿ ಸರಮೆಯ ಕೇಳಲೆಂದಳು
ಒಡತಿ ರಾಮನ ಭಜಿಸು ಪಾತಕಿ ಬಂದ ದಶಕಂಠ ॥ ೬೦ ॥

ಧರೆಯನೀಕ್ಷಿಸಿ ಕಂಬನಿಗಳಲಿ
ಕರಗಿ ರಾಮನ ನೆನೆವುತಿರ್ದಳು
ಸುರವಿದಾರಣ ವನದಬಾಹ್ಯದಲೋಲಗವನಿತ್ತ ॥
ದುರುಳ ಕಾಹಿನ ರಕ್ಕಸಿಯರನು
ಕರೆದು ಕೇಳಿದ ನೀನು ಹೇಳೌ
ಸರಮೆ ಮುನ್ನಿನ ಪರಿಯೆ ಸೀತೆಯ ಮನದ ಪರಿಯೆಂದ ॥ ೬೧ ॥

ಎನ್ನ ಹೊಗಳಿದಡಾಲಿಸುವಳೇ
ಚೆನ್ನ ತಾನೆಂದೆಂಬಳೇ ದಿಟ
ತನ್ನ ರಾಯನ ಹಂಬಲುಂಟೇ ಮನದ ಹದನೇನು ॥
ನನ್ನಿ ಹುಸಿಯದೆ ಹೇಳುಯೆನಲಾ
ಚನ್ನೆ ಬಡವರನೆಡಹಿ ಕಾಣಳು
ತನ್ನ ಜೀವವದಲ್ಲಿ ಒಡಲಿಹುದಿಲ್ಲಿ ಜಾನಕಿಯ ॥ ೬೨ ॥

ಕೇಳಿ ಚಿಂತಾಲೋಲ ಬಿಸುಸು
ಯ್ದೇಳು ನೂರ್ವರು ರಾಣಿವಾಸವು
ಮೇಳವಿಸೆ ಜನಕಜೆಯನೊಲಿಸಲು ದಾಡೆಗಳ ಮರೆಸಿ ॥
ವೋಳಿಗನ್ನಡಿವಿಡಿದು ತುರುಬನು
ಸಾಲುಮಿಸೆಯ ತಿದ್ದಿ ಪಳಿಯನು
ಕಾಲುವರೆ ಮುಂಜೆರಗನುಟ್ಟೊಯ್ಯಾರದಲಿ ಬಂದ ॥ ೬೩ ॥

ಬಿಡದೆ ಹೇಡಿಯ ಹಾವು ಸುತ್ತಿದ
ಪಡಿಯಲಕಟಾ ಧರಣಿನಂದನೆ
ಪೊಡವಿ ಬಾಯ್ದೆಗೆ ಹೊಗುವೆ ಪಾಪಿಯ ಗಸಣಿಗಾರೆನಲಾ ॥
ಪೊಡವಿಪತಿ ಕೃಪೆಮಾಡುಯೆನುತವೆ
ಧಡಿಗ ದಾನವ ಖಡ್ಗವಿಡಿದಿಹ
ಕಡೆಯ ಕಲ್ಪದ ಸಿಡಿಲಮರಿಯೆಂಬಂತೆ ಮುಂದಿರ್ದ ॥ ೬೪ ॥

ಹರಿಯು ಪೀಠವನಿಕ್ಕಿ ಕುಳ್ಳಿ
ರ್ದರಿದಿಶಾಪಟೆ ಮಲ್ಲನೆಂದನು
ತರುಣಿ ಕರ ಬಡವಾದೆಯಿನ್ನೂ ತಿಳಿಯದೇ ಮುನಿಸು ॥
ಅರಮನೆಗೆ ಬಹುದೆನುತ ರತ್ನಾ
ಭರಣವಿದಕೋ ತೊಟ್ಟುಕೊಳ್ಳಿದ
ಮರಳು ಮಾನವಗಾಗಿ ಹಲುಬದಿರರಸಿಯಾಗೆಂದ ॥ ೬೫ ॥

ಉರುಹುವೆನು ನಾನೀ ಶರೀರವ
ಹರಿಯ ವಿರಹಕೆ ಲಕ್ಷ್ಮಿ ಬಳಿಕಿ
ಲ್ಲಿರುಹದಿರಲೀ ನಾಯಿ ಕಟಕಿಯ ಬಿಡನು ನಾನೇವೆ ॥
ಸರಮೆ ಕೇಳೆನ್ನರಸನಿದಿರಲಿ
ನರಿಯು ಹೋಲುವ ಪಾಪಿ ತಲೆಗಳ
ನರಿಸಿಕೊಳ್ಳದೆ ಬದುಕಲೊಲುವರೆ ಹೋಗ ಹೇಳೆನಲು ॥ ೬೬ ॥

ಸುರಪ ನಾಯಕನಗ್ನಿಯಿಂಥನಿ
ಮರುತ ಬೋವನು ಯಮನು ಗೋವನು
ವರುಣನಸಗನು ಹರನು ಹರಸುವ ಯಕ್ಷ ಧನಗಾಹಿ ॥
ತರಣಿಶಶಿಯಿಕ್ಕೆಲದ ದೀವಿಗೆ
ಗುರುವೆ ದಿನ ದಿನ ತಿಥಿಯ ಹೇಳುವ
ಶರಧಿ ಕಾಲುವೆ ಲಂಕೆ ದುರ್ಗವು ಮನುಜರೆನಗಿದಿರೆ ॥ ೬೭ ॥

ಕಡ್ಡಿಯನು ಹಿಡಿದೆಂದಳವನಿಜೆ
ದೊಡ್ಡ ಧನುವಿಗೆಯಿವನು ಸಭೆಯೊಳ
ಗಡ್ಡಬಿದ್ದನು ಒರಲಿದಗ್ಗದ ಧನುವ ಮುರಿದಿಟ್ಟ ॥
ಕಡ್ಡಿಯಲಿ ಕಾಕನನು ಗೆಲಿದಾ
ಬೊಡ್ಡಿ ಶೂರ್ಪಣಖಿಯ ಮೂಗೊ
ಯ್ದೊಡ್ಡಿದಾ ಖರದೂಷಣಾದ್ಯರ ಗೆಲಿದನೆನ್ನರಸ ॥ ೬೮ ॥

ಮಿಡುಕನುಳ್ಳರೆ ನಿನ್ನ ಮುಡಿಯನು
ಹಿಡಿದು ನಾನೊಯ್ದಾಗ ರಾಘವ
ತೊಡಚಿದನೆ ಸೌಮಿತ್ರಿ ಮೇಣ್ಪಡಬಂದನೇಯೇನು ॥
ಒಡೆಯರಿಲ್ಲದ ಮನೆಯ ಹೊಕ್ಕಾ
ತುಡುಗುನಾಯ್ತುಡುಗೊಳಲು ವೀರವೆ
ಪೊಡವಿಪನ ಮುಂದೊಯ್ಯೆ ತಲೆಗಳನರಿಯದುಳುಹುವನೆ ॥ ೬೯ ॥

ಮೃತ್ಯುಮಾರಿಯುರೆನ್ನ ಮನೆಯಲಿ
ಬತ್ತಗುಟ್ಟುವರುಳಿದ ದೇವರು
ತೊತ್ತುಗೆಲಸವ ಗೈವರೆನ್ನಯ ಹೆಂಡಿರೆಲ್ಲರನು ॥
ತೊತ್ತುಗೈಸುವೆಯರಸಿಯಾಗೆನೆ
ಮತ್ತೆ ನುಡಿದಳು ರಾಮನಿನ್ನೀ
ಹತ್ತುತಲೆಗಳ ಕಡಿಯೆ ಬಳಿಕವರೆನ್ನ ತೊತ್ತಿಯರು ॥ ೭೦ ॥

ಹಲವು ಮಾತೇನೆನ್ನ ರಾಜ್ಯದ
ಸಲುಗೆಯಾಣೆಯು ಅಂಕಟೆಂಕವು
ಚೆಲುವೆ ನಿನ್ನದು ಮನದ ಖತಿ ಬೇಡರಸಿಯಾಗೆನಲು ॥
ತಲೆಯು ತಂಡವ ತರಿಸಿ ನಿನ್ನೀ
ಕುಲವ ಕೂಗುವೆ ಹೆಂಡಿರೋಲೆಯ
ಕಳೆಸದಿದ್ದರೆ ಪುಣ್ಯವಧು ನಾನಲ್ಲ ಬಗುಳದಿರು ॥ ೭೧ ॥

ಖಳನು ಕೋಪದಲುಕ್ಕಿ ದೇವಿಯ
ನೊಲಿಸಲಾರದೆ ಚಂದ್ರಹಾಸವ
ಸೆಳೆದನೀಗಲೆ ಕಡಿದು ಬಿಸುಡುವೆನೆಂದು ಹರಿತರಲು ॥
ಕೊಲುವೆಡೆಯುಲಡಹಾಯ್ದು ದನುಜನ
ತಲೆಯ ಮುರಿವೆನೆನುತ್ತ ಹನುಮನು
ಹಲುಮೊರೆದು ಕರತಳವ ನೀವುತ ಹತ್ತೆ ಸಾರಿದನು ॥ ೭೨ ॥

ಎಲವೊ ರಾವಣ ಮರುಳುಗೊಂಡಾ
ಅಲಗಿನಿಂದೊಲಿಸುವರೆ ಹೆಂಗುಸ
ಹಲವು ತಲೆ ಬಹುಬುದ್ಧಿ ನಿನಗೆಂದೆನುತ ರಾವಣನ ॥
ಲಲನೆ ತಡೆದಳು ಬಳಿಕ ಕಾಹಿನ
ಖಳೆಯ ಕರೆದೇಕಾಂತವಾಡಿದ
ತಿಳುಹಿ ಸೀತೆಯ ಮನೆಗೆ ತರೆ ನಿನಗೀವೆನಿಚ್ಛಿತವ ॥ ೭೩ ॥

ಹೋದನತ್ತಲು ದನುಜನಿತ್ತಲು
ಮೇದಿನೀಸುತೆ ಹಲುಬುತಿರ್ದಳು
ಕಾದಲನ ನಾನಗಲಿ ಶಿವ ಶಿವ ಪಾಪಿಯಾದೆನಲ ॥
ಈ ದುರಾತ್ಮಕನೆನ್ನ ತೊತ್ತಿನ
ಭೇದಗಿಚ್ಛಿನಿತಳಲಿಸಿತಲಾ
ಹಾ ದಯಾನಿಧಿ ಹಾ ಕೃಪಾನಿಧಿ ಕರುಣಿಸುವುದೆನಲು ॥ ೭೪ ॥

ಕಾಣಿಸಿದ ವನಲಕ್ಷ್ಮಿಯಂತಿರೆ
ವಾಣಿಯತ್ತೆಗೆ ವಾಯುವಾತ್ಮಜ
ಕಾಣಿಕೆಯನುಂಗುರವನಿತ್ತನು ಕಿತ್ತನರ್ತಿಯನು ॥
ಜಾಣರರಿಯಲು ಪದನವರ್ಕ
ಶ್ರೇಣಿ ಷಡ್ಗುಣ ಗುಣಮಿತೋತ್ತರ
ಕಾಣಿಸಲು ರಘುನಾಥ ಚರಿತದಿ ಮುಗಿದುದೀ ಸಂಧಿ ॥ ೭೫ ॥

---

## ೧೧ನೇ ಸಂಧಿ

ಪಲ್ಲ ॥ ಮುರಿದು ಹೇಳಾವನವ ಅಕ್ಷನ
ಕೊರಳ ಮುರಿದನು ಸೇನೆಯೆಲ್ಲವ
ನೊರಸಿ ಕಮಲಜಶಕ್ತಿಗೊಳಗಾದನು ಸಮಿರಾರಭವ ॥

ಪದ ॥ ಆಯುವಂತರು ರಾಮಲಕ್ಷ್ಮಣ
ರಾಯರಿದ್ದರು ಸುಖದಲೆನ್ನಯ
ತಾಯೆ ಭಯವಡಬೇಡ ರಾಮನ ಮುದ್ರೆಯುಂಗುರವ ॥
ವಾಯುಸುತ ನಾ ತಾಯೆ ದನುಜರ
ಮಾಯವಲ್ಲಬುಧಿಯನು ದಾಂಟಿದೆ
ಸಾಯೆ ಸವರುವೆ ದನುಜಕೋಟಿಯನೆಂದ ಹನುಮಂತ ॥ ೧ ॥

ಕಂಡು ಬೆರಗಾದಳು ಧರಾಸುತೆ
ಕುಂಡಲಿಯೆ ನೀನೆಲ್ಲಿ ರಾಮನ
ಕಂಡೆ ನೀನಾರೆಲ್ಲ ದಿಟವೇ ದನುಜಮಾಯವೆನೆ ॥
ತೊಂಡ ರಾವಣ ಕದ್ದು ನಿಮ್ಮನು
ಕೊಂಡು ಬರೆ ಹಂಪೆಯಲಿ ರಾಮನ
ಕಂಡೆ ಬಾಲಿಯ ಗೆಲಿದ ರಾಮಗೆ ರವಿಜನಾಳಾದ ॥ ೨ ॥

ಹನುಮನೆಂಬಭಿಧಾನ ಅಂಜನೆ
ತನಯ ನಿಮ್ಮಡಿ ಡಿಂಗರಿಗ ನಾ
ನಿನಿಜ ಜಾಂಬವ ನಳನು ಕೇಸರಿಯಂಗದಾದಿಗಳು ॥
ಇನಕುಲಂಗೆಪ್ಪತ್ತು ಕೋಟಿಯ
ಮೊನೆಯ ನಾಯಕರಾಯ್ತು ನಿಮ್ಮಯ
ತನಯ ನಾನಹುದವ್ವ ಹುಸಿಯಲ್ಲರಸನಾಣೆಂದ ॥ ೩ ॥

ಸುಡುವೆ ಲಂಕೆಯ ದನುಜರಾಂತರೆ
ಹುಡುಕುನೀರದ್ದುವೆನು ಮುರುಕಿಸಿ
ತೊಡೆವೆ ದನುಜರ ಹಣೆಯ ಬರಹವನೆನಲು ಮಾವನಿತೆ ॥
ಕಡುಹು ಹಿರಿಯವು ಕಾಣಬಾರದೆ
ಒಡ ಕಪಿಯೆ ಸೊರಹದಿರು ಸಾಕೆನ
ಲೊಡನೆ ಬೆಳೆದರೆ ಕಂಡು ಧರಣಿಯ ಮಗಳು ಹೆದರಿದಳು ॥ ೪ ॥

ಆ ಕಪೀಶ್ವರ ಮುನ್ನಿನಂತಿರೆ
ಲೋಕವರಿದಿಹ ಕುರುಹು ಮಾಣಲಿ
ಸಾಕು ಮೂರೇಕಾಂತ ಚಿಹ್ನವ ಹೇಳು ಹನುಮಯೆನೆ ॥
ಕಾಕನಂಗುಟರೇಖೆಯುರದಲಿ
ಲೋಕವಂದಿತೆ ಮಚ್ಚೆ ಮಡದಲಿ
ಆಕಕುಸ್ಥಜ ಪೇಳ್ದ ಕುರುಹನು ತಾಯೆ ಅವಧರಿಸು ॥ ೫ ॥

ಹಸೆಯಲಿದ್ದಂದೊಬ್ಬನಾಟಕೆ
ರಸವಿಚಿತ್ರದಿ ಭಾವಚಿತ್ರದ
ಲೆಸೆವ ಹೆಣ್ಣಿನ ಬೊಂಬೆಯಾಡಿಸೆ ದೇವ ನೋಡುತಿರೆ ॥
ವಸುಮತೀಭವೆ ನೀವು ಕನಲಿದ
ಡಸುರಮರ್ದನನರಿತು ತಿಳುಹಿದ
ಕುಸುಮಲೋಚನೆ ಏಕಪತ್ನೀವ್ರತನು ತಾನೆನುತ ॥ ೬ ॥

ಜಲವ ಸಂಧ್ಯಾವಂದನೆಗೆ ನೀ
ವೊಲಿದು ತರುತಿರೆ ನಿಮ್ಮ ಲೋಚನ
ಹೊಳೆಯೆ ಜಲಚರವೆಂದು ವಾರಿಯ ನೀವು ಚೆಲ್ಲುತಿರೆ ।
ಖಳವಿದಾರಣ ನಗಲು ನಾಚಿದ
ರೊಲುವ ಸುರತದಿ ಹಾರ ನಡುವಿರೆ
ಮುಳಿದು ರಾಘವ ಕಿತ್ತನದನವಧರಿಸು ಕುರುಹುಗಳ ॥ ೭ ॥

ಎಲೆ ಮಗನೆ ಕುರುಹಾಯ್ತು ನಂಬಿದೆ
ಖಳರು ಕಂಡರೆ ಕುರುಕುಗಡಲೆಯು
ಮೆಲುವರೈ ನೀ ಹೋಗಿ ರಮಣಂಗೆನ್ನ ಹುಯ್ಯಲನು ॥
ತಿಳಿಯೆ ಬಿನ್ನವಿಸಯ್ಯ ಕಂದಾ
ಖಳರಿಗಿತ್ತನೆ ಸೆರೆಯಿದಕಟಾ
ಹಲವು ಪರಿಯಲಿ ರಾಮ ಕರುಣಿಸುವಂತೆ ಬಿನ್ನವಿಸು ॥ ೮ ॥

ಎಂದು ಬಹ ನನ್ನರಸ ರಾಘವ
ಕಂದ ಹೇಳ್ಬೆ ಮುನ್ನ ಸೀತೆಯು
ನಿಂದು ನೀನೊಡಗೊಂಡು ಬಾಯೆನನೇನು ಎಲೆ ಮಗನೆ ॥
ಇಂದಿರಾಪತಿಯೊಮ್ಮೆ ನೆನೆಯನೆ
ಇಂದು ತನಕಾಂ ಬೆಂದ ಬೇಗೆಯು
ನೊಂದುವನು ದಾತಾರನರಿಯನೆ ಹೇಳು ಹನುಮಯ್ಯ ॥ ೯ ॥

ನಿಮ್ಮ ಸದ್ಗುಣನ ವಿಷಯವ
ನಿಮ್ಮ ಮೂರ್ತಿಯ ಚೆಲುವ ಬಣ್ಣಿಪ
ನಿಮ್ಮ ಮೃದುವಚನದ ವಿಲಾಸದ ಲೀಲೆಗಳ ನೆನೆದು ॥
ನಿಮ್ಮ ವಿರಹಾಗ್ನಿಯಲಿ ಬೇಯುತ
ಲಮ್ಮ ಕರ ಬಡವಾದನೆಂದರೆ
ಹಮ್ಮಯಿಸಿದಳು ದೇವಿ ಕಂಬನಿಯಿಂದ ಕರಗಿದಳು ॥ ೧೦ ॥

ಖಳನವೊಲು ಫಡ ಕಳ್ಳನೇ ಹರಿ
ಕಳಚಿ ದನುಜರ ಹೆಂಡಿರೋಲೆಯ
ಬಳಿಕ ಕರೆಸುವ ರಾಮ ನಿಮ್ಮನೆನುತ್ತ ಕೈಮುಗಿದ ॥
ಕಲಿಗಳಂಕುಶ ರಾಮ ಭೃತ್ಯರ
ಬಲುಹನೆಂಟರೊಳೊಂದ ತೋರುವೆ
ಕೊಲುವೆ ದನುಜರ ಸುಡುವೆ ಲಂಕೆಯ ಮುರಿವೆನೀ ವನವ ॥ ೧೧ ॥

ಮಣಿದು ಬದುಕುವುದಾವ ಜೀವನ
ಖಣಕೆ ನಿಮ್ಮ ಕೃಪಾವಲೋಕನ
ವಣುವಿನಷ್ಟಿರೆ ಖಳರು ನೊಣ ಸಮವೊರಸಿ ಬಿಸುಡುವೆನು ॥
ಬಣಗು ರಾವಣ ನಿಮ್ಮ ಕದ್ದರೆ
ತ್ರಿಣಯ ಮೆಚ್ಚಲು ದೈತ್ಯ ವಂಶದ
ಹಣೆಯ ಬರಹವ ತೊಡೆವೆ ಹೊಣೆ ನಾನವ್ವ ಕೇಳೆಂದ ॥ ೧೨ ॥

ಇಂದು ನಾ ಬಂದಂತೆ ಹೋದರೆ
ಮುಂದೆ ಖಳರಿಗೆ ರಾಮನೇಳಿಲು
ಕೊಂದು ಕೂಗುವೆ ದನುಜನಳವರಿತವನ ಲಂಕೆಯನು ॥
ಅಂದಗೆಡಿಸುವೆ ಕಂಡಕಂಡವ
ರೆಂದು ಸೀತೆಯ ತಂದ ರಾವಣ
ನಂದೆ ಮಾರಿಯ ತಂದ ತನಗೆಂಬಂತೆ ಮಾಡುವೆನು ॥ ೧೩ ॥

ನೆರೆದ ರಾಮನ ಕಟಕದೊಳಗಣ
ನೊರಜು ಮಾತ್ರವು ನಾನು ದನುಜರ
ನೊರಸಿಬಿಡುವರೆ ರವಿಕುಲೇಂದ್ರನು ನೇಮಗೊಡನೆನಗೆ ॥
ನೆರೆದ ಕಪಿಭಟರೆನ್ನ ಕಂಡರೆ
ಸರಸವಾಡುಗು ತನ್ನನೀತಂ
ಗರಸು ಪರಿಯಂತೇಕೆ ನೀ ದಿಟ ವೀರನಹೆಯೆಂದು ॥ ೧೪ ॥

ಎನುತ ಬಾಲವ ಬೆಳೆಸಿ ಮಾರುತಿ
ವನವ ಮುರಿದೀಡಾಡ ತೊಡಗಿದ
ವನವದೇಗುವುದಸುರ ಸಂಗದಿ ಕೇಡು ಬಂದುದಲ ॥
ಇನಿತು ಪುರಸಿರಿಯುಳ್ಳೊಡಂ ಪರ
ವನಿತೆಗೆಳೆಸಲು ಕೇಡು ತಪ್ಪದು
ಘನವಲಾ ಪತಿದೇವತಾವ್ರತವೇನ ಹವಣಿಸದು ॥ ೧೫ ॥

ಎಲ್ಲ ಲೋಕದ ಭಟರ ಪರಿಯಂ
ತಲ್ಲ ಮಾರುತಿ ಮುರಿಯೆ ಜಾಣನು
ಮಲ್ಲನೆರಡಂಘ್ರಿಯಲಿ ಬಾಯಲಿ ಕಾಲು ಕೈಯ್ಗಳಲಿ ॥
ನಿಲ್ಲದುಡಿಯಲು ನೆಗ್ಗು ನಿಟಿಲೆಂ
ದಲ್ಲಿಗಲ್ಲಿಗೆ ವಿಹಗ ಸಂಕುಲ
ಅಳ್ಳೆದೆಯ ತಾನಳುವ ತೆರದಲಿ ಮರಗೆ ಹಲುಬಿದುವು ॥ ೧೬ ॥

ಹಿರಿಯರನು ಕರೆವಂತೆ ಬನ್ನಿಯ
ನರೆಯ ಹೊತ್ತವರಂತೆ ಮುತ್ತವ
ಹರನ ವಾಹನದಂತೆ ನಂದಿಯ ಮರನ ಕಪಿ ಕಿತ್ತ ॥
ತರುಣಿಯರ ಕಿವಿಯಂತೆ ಹಾಲೆಯ
ಹರಿಯ ಹಣೆಯಂತೆಸೆವ ತಿಲಕವ
ಕರ ಬಡವನಂತೆಸೆವ ತಾರಿಯ ಮರನ ಕಪಿ ಕಿತ್ತ ॥ ೧೭ ॥

ಫಲದಿ ಪುಷ್ಪದಿ ತೆನೆಗಳಿಂದವೆ
ತಳಿರ ತೋರಣದಂತೆ ಮೆರೆದಿಹ
ಹುಳಿಸೆಗಳ ತನಿವಣ್ಣು ತುಂಬಿದ ಮರನ ಕಪಿ ಮುರಿದ ॥
ಪ್ರಳಯ ಗಾಳಿಯ ತೆರದಿ ತೆಂಗನು
ಹಲಸು ಖದಿರವು ಬಯನಿ ಮರಗಳ
ನೆಳೆಯ ನೇರಿಳು ನುಗ್ಗೆ ಮಾವನು ಕೋಪದಿಂದುಡಿದ ॥ ೧೮ ॥

ಹರಿಯು ಉಡಿನೂಲಂತೆ ಎಕ್ಕೆಯು
ಸರಿಸದಲಿ ಕರೆವಂತೆ ಬಾಗೆಯು
ಪರಮ ಪಾಯಸವುಂಡು ತೇಗುವರಂತೆ ತೇಗುವನು ॥
ನೆರೆದ ಮಂದಿಯು ತೆರದಿ ಪೂಗವ
ಹರಿಜನಭಿಮಾನದವೊಲರ್ಜುನ
ತರುವ ತೊತ್ತನು ಬಯ್ವ ತೆರದಲಿ ತೊಂಡೆಗಳ ಕಿತ್ತ ॥ ೧೯ ॥

ಈಳೆ ಹೊಂಗೇದಗೆಯ ಕಂಚಿಯ
ಬಾಳೆ ತತ್ತರಿಪೆಳೆಯ ಬಳ್ಳಿಯ
ಸಾಲ ಸಂತಾನವನು ಜರೆನರೆಗೆಡಿಪ ಭೂರುಹವ ॥
ಓಳಿ ಮೆಣಸನು ದ್ರಾಕ್ಷೆಯನು ರಸ
ದಾಳಿದಾಳಿಂಬಂಗಳಿಂದವೆ
ಬಾಲದಿಂದಲಿ ಕಿತ್ತೊರಸಿ ಹುಡಿಹುಡಿಮಾಡಿದನು ಹನುಮ ॥ ೨೦ ॥

ಬರೆಸಿಡಿಲ ಹರವರಿಯಲಿಟ್ಟಂ
ತರಚಿ ಬೀಳುವ ಕಿತ್ತು ಬಿಸುಡುವ
ನಿರಿನಿಟಿಲುನೆಗ್ಗೆಂಬ ಧನಿಗೆಚ್ಚೆತ್ತು ಕಾವರರು ॥
ಮರೆದು ಕಳವಳಿಸುತ್ತ ಬೆಚ್ಚಿ
ತ್ತುರುವ ದಾನವರುಂಡು ಸುರೆಯಲಿ
ಯೆರಗಿ ಬೀಳುತ್ತರಸಿ ಡೆಂಡಣಿಸುತ್ತ ಹರಿತರಲು ॥ ೨೧ ॥

ಎಲೆ ಇದೆತ್ತಣ ಮಾರಿ ನೋಡಾ
ಫಲವ ಕಳುವವರಲ್ಲಲೇ ದಿಟ
ಹೊಲಬು ನಮ್ಮರಮನೆಯ ಮದಗಜವಲ್ಲಲೇಯೆನುವ ॥
ಖಳರ ಕಣ್ಣಿಗೆ ಚಿಕ್ಕಟಾಗಿರೆ
ಹೊಲಬು ತಪ್ಪಿದ ಕಪಿಯೆ ಬಾ ಬಾ
ಕೊಲದಿರೋ ಸಭೆಯಲ್ಲಿ ಕಟ್ಟುವ ಹಿಡಿಯೊ ಹೆದರಿಸದೆ ॥ ೨೨ ॥

ಎನುತ ಹರಿತಹ ಜಂಬುಮಾಲಿಯ
ವನದ ಕಾಹಿನ ಭಟರ ಬಳಗವ
ಹನುಮ ಹೆಮ್ಮರದಿಂದ ಹೊಡೆದಪ್ಪಳಿಸಿ ಮೃತ್ಯುವಿನ ॥
ಮನೆಯನೈದಿತು ಜಂಬುಮಾಲಿಯ
ವನದ ಕಾಹಿನ ಖಳರ ಬಳಗವು
ತನುವನುಳಿದುವು ಜೀವ ದನುಜಂಗರುಪಲೈದಿದುವು ॥ ೨೩ ॥

ಎಲೆಲೆ ಕಪಿ ಕಪಿ ಕೆಡಹು ಕೆಡಹೋ
ಕುಲುಲು ಕೂ ಕೂ ಕೊಲ್ಲು ಕೊಲ್ಲೋ
ಬಲೆಯನೊಡ್ಡೋ ಹುಯ್ಯಲಿಕ್ಕೋ ನಾಯಕರ ಕರೆಯೊ ॥
ಕೊಲುವ ಕೋಡಗವಲ್ಲ ಮೊರೆಯೋ
ಖಳರು ಸತ್ತರು ಹಲಬರೆಂಬಾ
ಕಳವಳವ ಕೇಳ್ದುಪ್ಪವಡಿಸಿದ ವೀರ ದಶಕಂಠ ॥ ೨೪ ॥

ಖಳ ಹಸಿದ ಹುಲಿಯಂತೆ ಘರ್ಜಿಸು
ತೆಲವೊ ಪಿತ್ತವು ತಲೆಯನೇರಿತೆ
ಖಳರ ಮರ್ಕಟ ಕೊಲುವುದುಂಟೆ ಭವಿಷ್ಯ ಹಾರಿತಲ ॥
ಗಳಹಿದರೆ ತಲೆದಂಡವೆನುತವೆ
ಖಳನು ಹಲುಮೊರೆವುತ್ತಲಿರ್ದನು
ತಲೆಯ ಭಾರವನಿಳುಹೆ ಕಾಳಗಕಕ್ಷ್ಮ ಹೊರವಂಟ ॥ ೨೫ ॥

ಕತ್ತಲೆಯ ಕೆತ್ತಿದನು ಕಿರಣದ
ಲತ್ತ ಭುವನವ ಭಾನು ಬಿಸಿಲನು
ಬಿತ್ತುತಿರ್ದನು ಕಪಿಯ ಧೈರ್ಯವ ನೋಡಲೈತಂದ ॥
ಇತ್ತ ಹೊಂದೋರಣದ ತೊಲೆಯಲಿ
ಅತ್ತಲಿತ್ತಲು ಹನುಮ ತಿರುಗಲು
ಮುತ್ತಿತಮರಾರಿಗಳು ಶಿಖಿಯನು ಶಲಭ ಕವಿವಂತೆ ॥ ೨೬ ॥

ಹೊಡೆದುವಗಣಿತ ಭೇರಿ ನಿಸ್ಸಳ
ಪಡೆಯ ತುರಗದ ಗಜದ ಥಟ್ಟಿನ
ಕಡೆಯ ಕಾಣೆನು ಕೊಂತ ಭಲ್ಲೆಯ ಶೂಲ ಸಬಳದಲಿ ॥
ಇಡುತ ಬಾಣದಲೆಸುತ ಕವಿದರೆ
ಧಡಿಗ ದಾನವರೆರಡು ಕಡೆಯಲಿ
ಜಡಿದು ಹೆಮ್ಮರದಿಂದ ಹೊಡೆದೀಡಾಡಿದನು ಹನುಮ ॥ ೨೭ ॥

ತುರಗ ಹರಿದುವು ಕರಿಗಳೋಡಿತು
ವರ ವರೂಥಗಳಚ್ಚು ಮುರಿದುವು
ಹರಿಯ ಖುರಪುಟದಿಂದ ಹತಹತವಾಯ್ತು ದಾಯದಳ ॥
ಹರಿಗೆ ಹರಿದುವು ಸಬಳ ಮುರಿದುವು
ಶಿರಗಳೊಡೆದುವು ಕರಗಳುಡಿದುವು
ಸಿರಿಯ ನೆಚ್ಚಿನ ಬಂಟ ಕೊಂದನದೇನ ಬಣ್ಣಿಸುವೆ ॥ ೨೮ ॥

ಕನಕ ಮಾಡಿದ ಕೃತ್ಯ ಕನಕನ
ಕನಲಿ ನುಂಗಿದ ಗಾದೆಯಾಯಿತು
ದನುಜರುಕ್ಕಿನಲಾಳವಿಂಡಿಗೆಯುರುಳು ಕೈಕೊಳಲು ॥
ಹನುಮ ಸರ್ರನೆ ತಿರುಗಿ ಹೊಡೆವರೆ
ದನುಜರಟ್ಟೆಗಳಾಡುತಿದ್ದುವು
ಕನಲಿ ಸರಳನು ಸುರಿವುತಕ್ಷಕುಮಾರ ಹರಿತಂದ ॥ ೨೯ ॥

ಆಯೆನುತ ಭುಜಹೊಯ್ದು ಮಾರುತಿ
ಹಾಯ್ದನಕ್ಷನ ಗಜವನೊದೆದನು
ಸಾಯೆನುತ ಖಳರಾಯನಂದನನುತ್ತಮಾಂಗವನು ॥
ಕಾಯದಿಂದವೆ ಕಳಚಲಸುರರು
ಬಾಯಿಬಿಟ್ಟುದು ಮುರಿದ ತಲೆ ಖಳ
ರಾಯನೋಲಗದಲ್ಲಿ ಬಿದ್ದುದು ದೈತ್ಯ ಖತಿಗೊಂಡ ॥ ೩೦ ॥

ಮುಳಿದು ರಾವಣ ರಥವನೇರಿದ
ಕೊಲುವೆನಿವನಾರಾದರೆನುತವೆ
ಹುಲುವ ನೌಕರಿಗೇಕೆ ನೀವೆಲೆ ತಂದೆ ನಿಲ್ಲೆನುತ ॥
ಛಲದ ಭಟನಿಂದ್ರಾರಿಯೇರಿದ
ಲುಳಿಯ ತೇರಿನ ಕರಿಯ ವಾಜಿಯ
ಲುಲಿವ ಕಹಳಾಭೇರಿನಿಸ್ಸಳ ಜಗವನಂಜಿಸಿತು ॥ ೩೧ ॥

ದಡಿಗ ಕಾಳಗಕೈದಲಾ ಕ್ಷಣ
ಪೊಡವಿಸುತೆಗೆಡಗಣ್ಣು ಕುಣಿದುದು
ನಡುಗುತಿರೆ ಸುರವೃಂದ ಕಾರ್ಬೊಗೆ ದೆಸೆಯನಾವರಿಸೆ ॥
ಕೊಡಹಿಕೊಂಡವು ತಲೆಯ ದಿಗ್ಗಜ
ಕಡಲು ಮೇರೆಯ ಮೀರಲಸುರರ
ತೊಡರ ಹಾಹೆಯನೆಡದಕಾಲಿಂಗಿಟ್ಟು ಹೊರವಂಟ ॥ ೩೨ ॥

ಕುಣಿವ ಕುದುರೆಯ ತೇರು ತೆಕ್ಕೆಯ
ನೆಣಿಕೆಗೆಟ್ಟಾನೆಗಳ ಹಿಂಡಿನ
ಬಣಗು ದಿಗ್ಗಜವೆಂಬ ಬಿರುದಿನ ಭಟರ ತಿಂಥಿಣಿಗೆ ॥
ಫಣಿಪನಳುಕಿದ ಕಮಠನುಳುಕಿದ
ತ್ರಿಣಯನಾಲಿಸೆ ಶರಧಿ ಝಾಡಿಸೆ
ಹಣಗಿ ನೋಡುತ ಹನುಮನೇರಿದ ತೋರಣದ ತೊಲೆಯ ॥ ೩೩ ॥

ಕಡುದುರಿನ ಸಂದೋಹವಮವೂ
ಬಡಬ ಶಿಖಿಯನು ಮುತ್ತುವಂದದಿ
ಜಡಿದು ಮುತ್ತಿತು ವೀರ ಹನುಮನ ವೈರಿ ಪರಿವಾರ ॥
ಬಡ ಕಪಿತ್ವವ ಮೆರೆದು ಕಬ್ಬುನ
ದಡಗುಳಿಯು ಸರ್ರೆಂದು ತಿರುಹಿದ
ಹೊಡೆದರಜಗಿಜಿಯಾಯ್ತು ಗಾಣದ ಲೋವಿನರದಂತೆ ॥ ೩೪ ॥

ಹೋಯಿತಯ್ಯಯ್ಯವನ ಬಲು ದಳ
ಬೀಯವಾಯಿತು ತುರಗ ಸಂತತಿ
ಕಾಯವನು ಬಿಟ್ಟೋಡಿ ಹೋದುವು ಭದ್ರದಂತಿಗಳು ॥
ಆಯುವಂತರು ಕೆಲರು ಕೆಲರು ಪ
ಲಾಯನಂಗಳ ಮಾಡಲಸುರ ನಿ
ಕಾಯ ನಾಯಕನಣುಗ ಕರ ಖತಿಗೊಂಡು ಹರಿತಂದ ॥ ೩೫ ॥

ತೆರಳು ತೆರಳೆಲೆ ಕಪಿಯೆ ಕಾದಿದ
ತರಳತನ ಸಾಕಾಯ್ತು ಸಾಯದೆ
ಸರಸವಾಡುವೆ ಮನುಜ ದಿವಿಜರು ನೋಡಲೋಡುವರು ॥
ಮರುಳು ಮರ್ಕಟ ನಿನ್ನ ಕೊಂದರೆ
ಹಿರಿದು ಹೆಸರೆನಗುಂಟೆ ಬಡವಾ
ನರನೆ ಹೋಗೆನೆ ಹನುಮ ಕೊಂಡನು ಲಾಳವಿಂಡಿಗೆಯ ॥ ೩೬ ॥

ಸುರರ ಗೆಲಿದಿಹೆ ವರದ ಬಲದಲಿ
ನರರ ಗೆಲಿದಿಹೆ ಜನ್ಮಗುಣದಲಿ
ಸುರನರರ ಪರಿಯಲ್ಲ ವಾನರನೆನ್ನ ಪರಿ ಹೊಸತು ॥
ಬಿರಿದು ಬಿರಿವುದು ವೀರ ಹರಿವುದು
ಸುರಿವುದಪಜಯವೆನ್ನ ಕಂಡರೆ
ಹುರುಳುಗೆಡುವರು ವೀರರೆಂದಪ್ಪಳಿಸಿದನು ಖಳನ ॥ ೩೭ ॥

ಹೊಡೆದ ಗಾಯಕ್ಕೆಡದ ಮುಂಗೈ
ಯಡಸಿ ಗದೆಯಲಿ ಕಪಿಯ ತಿವಿದರೆ
ಹಿಡಿದು ಗದೆಯನು ಖಳನ ನೆತ್ತಿಯ ಹೊಡೆದ ಹನುಮಂತ ॥
ಸಿಡಿದು ಬಿದ್ದುದು ಮಕುಟ ಮಾರುತಿ
ಯೊಡನೆ ಕುಟ್ಟಲು ತೇರು ನುಗ್ಗಾ
ಯ್ತೊಡನೆ ಪಡಿ ರಥವೇರಿ ಸುರಿದನು ಸರಳನಳವಿಯಲಿ ॥ ೩೮ ॥

ನುಚ್ಚು ನೂರಾಯ್ತೆಚ್ಚ ಶರಗಳು
ಕಿಚ್ಚು ಮಸಗಿತು ವಜ್ರಕಾಯದಿ
ವೆಚ್ಚವಾದುವು ಕೈದು ಬಾಣವ ತರಿಸು ತರಿಸೆನಲು ॥
ಮುಚ್ಚುಮರೆಯೇಕಸುರ ಸೋತನು
ಹುಚ್ಚು ರಾವಣನೆನಲು ಸುರರಿಪು
ಬೆಚ್ಚಿ ಬೊಮ್ಮನು ಕೊಟ್ಟ ಬಾಣವ ಬೇಗ ತೆಗೆದೆಚ್ಚ ॥ ೩೯ ॥

ಕಿಡಿಯನುಗುಳುವ ಬಾಣ ಹನುಮನ
ಹಿಡಿಯಲಾರದೆ ಸುತ್ತಿ ಬರುತಿರೆ
ಹಿಡಿಸಿಕೊಂಬೆನು ನಾನು ಬಾಣವೆ ಕಟ್ಟು ಬಾಯೆನುತ ॥
ಎಡೆಗೊಡಲು ವಿಧಿಪಾಶವಾಕ್ಷಣ
ಹಿಡಿದು ಕೋಡಗಗಟ್ಟು ಕಟ್ಟಿತು
ದಡಿಗ ಕೋಪದಿ ಬಂದು ಗದೆಯಲಿ ಹೊಯ್ದ ಕಿಡಿ ಚೆಲ್ಲೆ ॥ ೪೦ ॥

ಕೊಲುವೆನೀತನನೆನುತ ಖಡ್ಗದಿ
ಸೆಳೆದು ಹೊಡೆಯಲು ನಿಂದನರಸನ
ಬಳಿಗೆ ಕೊಂಡೊಯ್ದೊಪ್ಪಿಸುವೆನೆನುತಸುರ ಸೈರಿಸಿದ ॥
ಹಲುಗಿರಿದು ಹುಬ್ಬಿಕ್ಕುತೇಡಿಸಿ
ಬಲದ ಬದಿಯನು ತುರಿಸಿ ಹಣುಗಲು
ಖಳನು ನಗುತಾ ಧ್ವಜಕೆ ಕಟ್ಟಿದ ಮರಳಿದನು ಪುರಕೆ ॥ ೪೧ ॥

ನಾನು ಕಟ್ಟಿದ ಕರುವಿನಂತಾ
ದಾನವನ ಬಳಿಯಲ್ಲಿ ಹೋದರೆ
ಭಾನುಕುಲಜನ ದೂತನೇಳಿಲು ಮುಂದೆ ದನುಜರಿಗೆ ॥
ಹಾನಿ ಹತ್ತನು ಹಣ್ಣಿ ದನುಜನ
ಮಾನಗೆಡಿಸುವೆನೆನುತ ಹನುಮನು
ಮೇನಕಾಪತಿಯಂತೆ ಬೆಳೆದರೆ ನೆಗ್ಗಿತಾ ರಥವು ॥ ೪೨ ॥

ಎಲೆಲೆ ಹುಲು ಕಪಿ ದೊಡ್ಡಿತಾಯಿತು
ನೆಳದೊಳದ್ದಿತು ತೇರು ತಾ ತಾ
ಬಲುಹ ನೋಡುವೆ ಎಲವೊ ವಜ್ರದ ರಥವ ತಾರೆನಲು ॥
ಚಳಕದಲಿ ಪಡಿ ರಥವ ತಂದರು
ಬಲು ಗಜಂಗಳ ಹೊಡಿಯದರೊಳು
ಖಳರು ಭಾಳವ ಕೊಟ್ಟು ಮಿಳಿಗಳಲೆತ್ತಿ ಮೊಂಟೆದಗು ॥ ೪೩ ॥

ಕೀಳೊ ಮುಂದಣ ತಳಿಯನಗುಸೆಯ
ಬೀಳುಗುಟ್ಟೋ ಮುರಿದ ಕೋಟೆಯ
ಹೋಳೊ ಕಾಲುವೆಯಗಳು ಕುಳಿ ತೆವರೇರಲರಿದೆನಲು ॥
ಗಾಲಿವೊಗೆದುವು ಕೀಲು ಮುರಿದುವು
ಗೋಳುಗುಟ್ಟಿತು ಪುರಜನಂಗಳು
ಘೀಳಿಡುತ್ತಾನೆಗಳು ನೆತ್ತರು ಕಾರಿ ಸಾವುತಿರೆ ॥ ೪೪ ॥

ಮತ್ತೆ ಹೂಡಿದ ಕೇಡನೋಡದೆ
ಹತ್ತು ಸಾವಿರ ಮದಗಜಂಗಳ
ಕಿತ್ತು ಮೇರುವ ಮಿಂಟಲಹುದರಿದಾಯ್ತು ಎಳೆಯಲಿಕೆ ॥
ಒತ್ತಿ ಕರಿಗಳ ಹೊಯ್ದು ನೂಕಿದ
ಸತ್ತು ಸಮೆದುವು ಮೆರೆವನಂತಪ
ವೃತ್ಯುವನು ಪುರಕೊಯ್ವ ಪರಿಯಲಿ ಛಲದಿ ಕೊಂಡೊಯ್ದ ॥ ೪೫ ॥

ಕೇಡು ಬಪ್ಪುದನರಿಯ ರಾವಣ
ನೋಡು ನೋಡಿದು ಕಪಿಯೆ ಶಿವ ಶಿವ
ಬಾಡಬಾಗ್ನಿಯನರಗಿನರಮನೆಯೊಳಗೆ ಬಂಧಿಸುವ ॥
ಕೇಡುಗರನೇನೆಂಬೆನಪದೆಸೆ
ಬೀಡುಬಿಟ್ಟುದು ಪುರದೊಳಂದಾ
ನಾಡಗಾವಳಿ ಕೂಡೆ ಖಳನೋಲಗಕೆ ನಡೆತಂದ ॥ ೪೬ ॥

ಕೊಳ್ಳರಸ ಕೋಡಗವನೆಂದರೆ
ಕೊಲ್ಲದೇತಕೆ ತಂದೆ ನೀನದ
ನೆಲ್ಲಿ ಅಕ್ಷನ ಕೊಂದ ಹುಲುಗೋಡಗವನೆಂದೆನುತ ॥
ಕೊಲ್ಲು ಕೊಲ್ಲೆನೆ ಕೊಡಲಿ ಕತ್ತಿಗೆ
ಯಲ್ಲಿ ಪಟುಭಟರೆರಗುತಿರ್ದರು
ಕಲ್ಲು ಕಬ್ಬುನವಡಸಿದಂತಿರೆ ದನುಜ ಬೆರಗಾದ ॥ ೪೭ ॥

ಹೊಡೆಯದಿರಿ ಹೋ ನಿಲ್ಲಿ ನಿಲ್ಲಾಂ
ನುಡಿಸಿ ಕೇಳುವೆನೆನುತ ವಿಭಿಷಣ
ನುಡಿದ ಬಿನ್ನವಿಸಂಜಬೇಡೆನೆ ಹನುಮನಿಂತೆಂದ ॥
ಘಡ ಹೊರಸೆ ಕೇಳೆಲವೊ ರಾವಣ
ನುಡಿವೆನಂಜಿಕೆಯೆಂತುಟರಿಯೆನು
ಒಡೆಯ ರಾಘವನಾಳು ನಿನಗಾಂ ಬೊಮ್ಮರಕ್ಕಸನು ॥ ೪೮ ॥

ಅರಸ ಕೇಳಿವನಾಳುತನಗಳ
ಸೊರಹಲಿಂದ್ರಾರಾತಿಗಿದಿರೇ
ಧರಣಿಯೊಳಗಾ ವೀರರೆಂಬವರಿಲ್ಲವೀ ಕಪಿಯು ॥
ಖುರಪುಟಂಗಳ ಬಿಗಿಸುವುದೆ ತರ
ನರನ ದೂತನ ಕಂಡರಿನ್ನುಳಿ
ದರನು ಲೆಕ್ಕಿಸಲೇಕೆ ಪರಿಕಿಸಲರಿಯಬಹುದೆಂದ ॥ ೪೯ ॥

ಮರುಳೆ ಕೋಳದಲಿದ್ದ ಹರಿಯಲಿ
ಹಿರಿದು ಗಳಹುವೆ ನಿಲ್ಲು ನೀನಾ
ತರುವನೇತಕೆ ಕಿತ್ತೆ ಬಿನ್ನವಿಸೋಜೆಯಿಂದೆನಲು ॥
ಮರುಳುತನ ಮುನ್ನಿಲ್ಲ ನಿನ್ನೀ
ಪುರವ ಹೊಕ್ಕರೆ ಮರುಳು ಹಿಡಿವುದು
ತರುವರಿಯ ಬೇಡೆನಲು ಕೇಳದೆ ಕಿತ್ತುದೀ ಬಾಲ ॥ ೫೦ ॥

ಘಡ ಇದೇನೋ ಸುಭಟರಂದದಿ
ಗೆಡಹುತಿಹ ಹುಲು ಕಪಿಯು ಬಣ್ಣಿಸಿ
ನುಡಿಸಿ ಕೇಳುವನೆಲ್ಲ ದಾಂಟಿದೆಯೆಂತುಯಿಊಕಡಲ ॥
ಬಡಗೊರವನೆಲ್ಲಿಪ್ಪ ಹೇಳೆನೆ
ಕಡಲ ತೀರದಲಿಪ್ಪ ಲಂಕೆಯು
ಸುಡುವ ನಿನ್ನನು ಕಡಿವ ಮುಕ್ತಿಯು ಕೊಡುವ ಜಯವಡೆವ ॥ ೫೧ ॥

ಒಡೆಯ ರಾಮನ ಕೃಪೆಯೊಳೆನಗೀ
ಕಡಲು ಕಾಲುವೆ ಖಳರು ಹುಳುಗಳು
ನುಡಿಯಲಾತ್ಮಸ್ತ್ರೈತ್ಯ ನರಕವು ನಿನಗೆ ನೆರೆದಿರ್ದ ॥
ಪಡೆಗೆ ಲಂಕೆಗೆ ನಿಮ್ಮ ಮಕ್ಕಳ
ಮಡುಹಲಾನೆ ಸಮರ್ಥ ರಾಮನ
ಪಡೆಯನೆಣಿಪರೆ ಕಟ್ಟಕಡೆಯಣ ಸೊರಜು ತಾನೆಂದ ॥ ೫೨ ॥

ಅಂದೆ ರಾವಣ ಕೊಲಲು ನೇಮಿಸೆ
ಯೆಂದ ವಿಭಿಷಣರಾಯ ಕೇಳಾ
ಮುಂದೆ ಕಾದುವ ವೀರತಿಕೆಯಿದರಿಂದ ಲಘುವಹುದೇ ॥
ಬಂದ ದೂತನ ಕೊಲುವನರಸೇ
ಒಂದು ಭಂಗವ ಮಾಡಿ ಬಿಡು ತಾ
ನೊಂದು ಹುಲುಗಪಿವೀರನನು ಬೇಹಿಂಗೆ ಕಳುಹುವರೇ ॥ ೫೩ ॥

ಎನಲು ಕಟ್ಟುತೆ ಕಪಿಯ ಪಹರೆಯೊ
ಳನಿಮಿಷಾರಿಗಳಿಟ್ಟರಾಕ್ಷಣ
ತನುವ ನಿಗುಚಿದ ಜಾನುಮಾತ್ರಕೆ ಬೆಳೆದು ನಿಂತಿರಲು ॥
ವನಜಮಿತ್ರನು ವನಧಿಗೈದಿದ
ಮನದ ಹಂಬಲ ಬಿಟ್ಟಳಬ್ಜಿನಿ
ಹನುಮ ರಾಮನ ಪದಪಯೋಜವ ನೆನೆವುತಿರುತಿರ್ದ ॥ ೫೪ ॥

ಪವನಸಂಭವನಂದು ಸೆರೆಯಿ
ದ್ದವನಿಜಾತೆಗೆ ಕುರುಹ ಹೇಳಿದ
ದಿವಿಜರಿಪುವಿನ ವನವ ಮುರಿದನು ಕೊಂದ ಅಕ್ಷನನು ॥
ಸವೆದುವೈವತ್ತೈದು ಪದನವು
ವಿವರದಲಿ ಕವಿ ಕಟ್ಟುವಡೆದನು
ನವರಸದಿ ರಾಮಾಯಣಾಖ್ಯದಿ ಮುಗಿದುದೀ ಸಂಧಿ ॥ ೫೫ ॥

---

## ೧೨ನೇ ಸಂಧಿ

ಪಲ್ಲ ॥ ಕೇಡನಿತಗಿರತ್ತರದು ತನ
ಗೂಡುವುದು ಕೈಯ್ಯೊಡನೆಯೆಂಬುದ
ನಾಡಲೇಕದ ಕಂಡುದಾ ದಶಕಂಠ ಚರಿತದಲಿ ॥

ಪದ ॥ ಹಿರಿಯ ಹಸ್ತ ಪ್ರಹಸ್ತರೊಂದೆಡೆ
ಸುರನರಾಂತಕರೆಂಬರೊಂದೆಡೆ
ಕರಣಿ ಮಂತ್ರಿ ನಿಯೋಗಿ ಮಾವುತ ಮಲ್ಲರೊಂದೆಸೆಗೆ ॥
ಹರಿಯ ಪೀಠದಲಖಿಳ ದೇವರ
ನೆರವಿ ಜೀಯೆನಲೊಂದು ಕಡೆಯಲಿ
ಪರಮ ವಿಭವದಲಸುರನೋಲಗ ಕಣ್ಗೆ ಸೊಗಸಾಯ್ತು ॥ ೧ ॥

ಕೆಲದ ಕೈದೀವಿಗೆಯುಸನಿಯು
ಕ್ಕಳುಕಿದಂತಿದರಲಂಜನಾಸುತ
ಹಲುಗಿರಿದು ಹುಬ್ಬಿಕ್ಕಿ ಗಿರಿಗಿರಿಗುಟ್ಟಿ ಖಳ ಕಂಡ ॥
ಎಲೆಲೆ ಸಿಕ್ಕಿದನೆನ್ನ ಭಾವನು
ತಲೆಯ ಚುಚ್ಚೋ ಚುಚ್ಚೆನುತ್ತಿರೆ
ಬಲದ ಬದಿಗವ ಪಂಜುದೋರಲು ಹನುಮ ಘೀಳಿಟ್ಟ ॥ ೨ ॥

ಎಂದ ಮತ್ತವ ನಿಲ್ಲು ಸುಡದಿರೊ
ಒಂದು ಹಳೆಯರಿವೆಯನು ಬಾಲಕೆ
ತಂದು ಹೊತ್ತಿಸಿ ಮೆರೆಸಬೇಕೀ ನಗರದಗಲದಲಿ ॥
ಕೊಂದು ಕಳೆವ ಉಪಾಯದಿಂದವ
ನಿಂದು ಸತ್ತರೆ ಸಾಯಲುಳಿದರೆ
ಬೆಂದ ಬಾಲದ ಮೋಟುದೋರಲಿ ತನ್ನ ರಾಮಂಗೆ ॥ ೩ ॥

ಒಂದು ಸೀರೆಯ ತೊಯ್ದು ತೈಲದಿ
ತಂದು ಸುತ್ತಲು ಕಪಿಯ ಬಾಲವು
ವೊಂದು ಮೊಳ ಮಿಗೆ ಮುಂದೆ ಸುತ್ತಿದರೊಂದು ಹಚ್ಚಡವ ॥
ತಂದರೆಣ್ಣೆಯ ಹಾಡಗಳ ಖಳ
ರೊಂದೆರಡು ಮೂರೆಂದು ಸುತ್ತಲು
ಮುಂದೆ ಗೇಣರೆಗೇಣು ಮೊಳ ತೋಳನಿತು ಬೆಳೆವುತಿರೆ ॥ ೪ ॥

ಸುತ್ತಿದಿಮ್ಮಡಿ ಬೆಳೆವುತಿರೆ ಖಳ
ಮತ್ತೆ ತರಿಸಿದ ನೆರಹಿ ಸೀರೆಯ
ಹೊತ್ತು ಕೊಪ್ಪರಿಗೆಗಳಲೆಣ್ಣೆಯ ತಂದು ಸುರಿವುತಿರೆ ॥
ಮತ್ತೆ ಬೆಳೆಯಲು ಕೆರಳಿ ರಕ್ಕಸ
ಸುತ್ತು ಸುತ್ತೆನುತಂದು ಸುತ್ತಲು
ಹತ್ತು ಸಾವಿರ ಮೊಳವು ಸವೆದುದು ಮತ್ತೆ ಬೆಳೆವುತಿರೆ ॥ ೫ ॥

ಒಂದು ಸೀರೆಗೆ ಹತ್ತು ಸುತ್ತಾ
ಯ್ತೊಂದು ಸೀರೆಯಲೈದು ನಾಲ್ಕಾ
ಯ್ತೊಂದು ಸೀರೆಯಲೊಂದು ಹಚ್ಚಡವೊಂದು ಸುತ್ತಾಯ್ತು ॥
ಮುಂದೆ ಮುಂದೆಯು ಬೆಳೆಯುತಿರ್ದುದು
ತಂದು ಸೀರೆಯ ತೋದು ಸುತ್ತುವ
ಮಂದಿ ಬೇಸರೆ ಹನುಮ ಬೆಳೆಸಿದ ಬಾಲ ಜಾಲವನು ॥ ೬ ॥

ತಂದ ಸೀರೆಗಳಾಯ್ತು ಸಾಕಿ
ನ್ನೆಂದು ನೋಡಲು ಬಾಲದಗ್ರವು
ಮುಂದೆ ಮೊನೆದೋರಿದರೆ ಕಂಡೀ ಪರಿಯ ದಶಕಂಠ ॥
ಇಂದೆಯೀತನ ಛಲವ ನೋಡುವೆ
ನೆಂದು ನಾನಸಮರ್ಥನೇ ಫಡ
ತಂದು ಬೆಟ್ಟವನೊಟ್ಟಿ ಸೀರೆಯನೆಣ್ಣೆ ದೋಣಿಗಳ ॥ ೭ ॥

ನೆಟ್ಟನೆಣ್ಣೆಯ ದೋಣಿ ಸವೆದರೆ
ತಟ್ಟನೇ ತಾರಗಸೆ ಕುಸುಬೆಯ
ಮುಟ್ಟಿ ತೀರಲು ತುಪ್ಪ ಹೆರೆಗಳ ರಸದ ಬಾವಿಗಳ ॥
ಪಟ್ಟಣದೊಳುಳ್ಳಲ್ಲಿ ತಾ ತಾ
ಸುಟ್ಟನೇ ಸೇಲೆಗಳು ತರಿಸೋ
ಉಟ್ಟುದುಳಿಯುಲಿ ತರಿಸು ಕಮ್ಮೆಣ್ಣೆಗಳ ಹರವಿಗಳ ॥ ೮ ॥

ಈಸು ತೀರಿದುವೆಣ್ಣೆಯೆಂದರೆ
ಮಿಸಿಗಡಿದೇರಂಡ ತೈಲವ
ಸಾಸಿವೆಯನಂಕೋಲೆ ತೈಲವ ಹುನಿಗಿಲೆಣ್ಣೆಗಳ ॥
ಬೇಸರದೆ ನಿಂಬಗಳ ತಾರಿಯ
ರಾಶಿ ಮಿಾನಡಗುಗಳ ಬಸೆಗಳ
ಹೇಸದಾ ಖಳರಂದು ಸೇಲೆಯ ತೋದು ಸುತ್ತುತಿರೆ ॥ ೯ ॥

ತರಿಸಿ ಸುತ್ತಿದ ಪಟ್ಟವಾಳಿಯ
ನಿರದೆ ಚಿತ್ರಾವಳಿ ಗಜಾವಳಿ
ಜರಿಯ ಪುಲ್ಲಿಯ ಸೂಕರಾವಳಿ ಹಲವು ವರ್ಣಗಳ ॥
ಪುರದ ಮನೆಗಳ ಸೂರೆಗೊಂಡರು
ಕೆರಳಿದವರಿವರೆನ್ನದಸುರನ
ಅರಿದ ತಲೆಗಳಿಗಿಕ್ಕಲೆಂದುದು ಸುಯ್ದು ಪೌರಜನ ॥ ೧೦ ॥

ಅರಸಿ ಕಾಣೆನು ಗುಣವ ಪುರದಲಿ
ಬರತು ಹೋಯಿತು ಸ್ನೇಹರಸಗಳು
ಮರೆಯ ಮಾತೇನಸುರ ಮಂಡೋದರಿಯವುಟ್ಟಲಿಗೆ ॥
ಹರಿವುದನು ಕಂಡಣುವ ನಾಚಿದ
ಮುರಿದುದಾತನ ಲಜ್ಜೆ ಸಾಕೆಂ
ಧುರುವ ಬಾಲವ ನಿಲಿಸಿ ನಸುನಗುತಿರ್ದ ಮನದೊಳಗೆ ॥ ೧೧ ॥

ಬಾಲವೋ ಮುರಿಮುರಿದು ಸುಡುವಾ
ಶೀಲವೋ ಯಮಜಾಲವೋ ಹೃತ್
ಶೂಲವೋ ಕಡೆಗಾಲವೋ ಹಳೆ ಸಾಲವೋ ಶಿಖಿಗೆ ॥
ತಾಳದುಣಿಸೋ ಖಳರ ಸೆಣಸೋ
ಧಾಳಿಯೋ ಸುಡುವಾಳಿಯೋ ಎನೆ
ಗೋಳುಗುಟ್ಟಿಸಿತೆಂದು ಬಾಲವು ಖಳರಿಗುರಿಮಾರಿ ॥ ೧೨ ॥

ಉರಿಯನಿಟ್ಟರು ಪುರವ ಸುಟ್ಟರು
ಉರಿದು ಕೆಟ್ಟರು ಸಿರಿಯ ಕೊಟ್ಟರು
ಮರಣವಟ್ಟರು ಮಾರಿಗಿಷ್ಟರು ಧರ್ಮಭ್ರಷ್ಟರೆನೆ ॥
ನರಕಪುಷ್ಟರು ಸೊಪ್ಪನುಟ್ಟರು
ಹರಿಗೆ ಕಷ್ಟರು ಸುಖವಬಿಟ್ಟರು
ನೆರೆದವನಿಷ್ಟರು ಪುರಕೆ ಭ್ರಷ್ಟರು ನಾಮನಷ್ಟರೆನೆ । ೧೩ ॥

ಉರಿಯ ಬೇಲಿಯಕಟ್ಟಿ ಪುರದೊಳ
ಗುರಿಯ ಬಿತ್ತುವೆನುರಿಯ ಬೆಳೆಸುವೆ
ಸಿರಿಯನಳಿಸುವೆ ಜನರ ಬಾಯಿಂದುರಿಯ ಜಪಿಸುವೆನು ॥
ಉರಿವೊಗದ ಮನೆಯಿಲ್ಲ ಲಂಕೆಯ
ಹರಿಯ ಕಟ್ಟೋ ಹರಿಯ ಬಿಡಿಸೋ
ಹರಿಯ ಘಸಣಿಯು ಬೇಡ ಮರೆಯೋಯೆನಿಸ ಬೇಕೆಂದ ॥ ೧೪ ॥

ಉರಿಯ ಭರ ಪುಟವಾಗಲನಿಲಜ
ನೆರಡು ಕೈಯಲಿ ಬಿಚ್ಚಿ ಬೀಸಲು
ನೆರೆದ ಹೆಜ್ಜೇನೊಟ್ಟಲಿಗೆ ಕಿಚ್ಚಿಟ್ಟ ತೆರನಾಯ್ತು ॥
ಹರಿಯ ಕಟ್ಟಿನ ಬಿಗುಹು ಬಿಚ್ಚಿತು
ಉರಿಯ ಬಾಲದ ವೀರನೋಲಗ
ನೆರೆದ ಮಂದಿಗೆ ಹಚ್ಚಿ ಕಿಚ್ಚನಃ ಹಬ್ಬಿಸುತ್ತಿರ್ದ ॥ ೧೫ ॥

ಉರಿ ಹರಿಗಳಿಬ್ಬರಿಗೆ ದಶಶಿರ
ಕರವ ಬೀಸಿದನೈ ವಿನೋದವ
ನಿರದೆ ನೋಡುವೆನೆನುತ ನಸುನಗುತಣುವನನು ನೋಡಿ ॥
ಅರರೆ ನಮಗಾಲಸ್ಯಹರಣವ
ನಿರದೆ ಮಾಡಿದನೈ ಕೃತಾರ್ಥನು
ತರುಚರನ ಮರುಳಾಟ ನೋಟವು ಕಣ್ಗೆ ಸೊಗಸಾಯ್ತು ॥ ೧೬ ॥

ಆರತಿಯನೆತ್ತಿದನು ರಾಮನ
ಕೀರುತಿಯ ಬಿತ್ತಿದನು ದನುಜರ
ಶೂರತೆಯನೊತ್ತಿದನು ಹಬ್ಬುವ ಬಾಲಗಿಚ್ಚಿನಲಿ ॥
ಜಾರತೆಯ ಹೆಚ್ಚಿಸಿದ ಖಳರಿಗೆ
ಮಾರಿಯನು ಮುತ್ತಿಸಿದ ಮನೆಗಳ
ಏರಿಯನು ಹೊತ್ತಿಸಿದ ಮರೆಯುದೆ ಕೇರಿಕೇರಿಗಳ ॥ ೧೭ ॥

ಭುಗಿಲು ಭುಗಿಭುಗಿ ಭೋರುಭೋರೆನೆ
ಧಗಿಲು ಧಗಧಗ ಚಿಟಿಲುಚಿಟಿಲೆನೆ
ವೊಗೆದು ದಳ್ಳುರಿ ಹೆಚ್ಚಿ ಕೆಂಡವು ಹೊಟ್ಟೆಹಾರುತಿರೆ ॥
ಹೊಗೆಯ ಕತ್ತಲೆ ಬಗೆಯ ಬತ್ತಲೆ
ಹಗೆ ವಿದಾರಣ ದನುಜ ಮಾರಣ
ನಗೆಗೆ ಕಾರಣ ಮದನಿವಾರಣ ಹನುಮ ಸುಡುತಿರ್ದ ॥ ೧೮ ॥

ಎಲೆಲೆ ಕೋಡಗ ಹರಿದುಕೊಂಡುದು
ಹೊಳಲು ಸುಡುತಿದೆ ಕರಿಘಟಾವಳಿ
ಗಳನು ಸಂಕಲೆ ಕಡಿದು ತುರಗಂಗಳನು ಹೊರವಡಿಸೊ ॥
ಎಳೆದು ತೆಗೆಯೋ ಕುಂಭಕರ್ಣನ
ಕಳೆದು ಬಿಡು ಸುರಸೆರೆಯನೆನುತಿರ
ಳೆಳೆದರಿರುವೆಗಳಹಿಯನೆಳೆವಂತಾ ಘಟಶ್ರವನ ॥ ೧೯ ॥

ಚಿಟಿಲು ಚಿಟಿಚಿಟಿ ಚಿಟಿಲು ಚುರುಚುರು
ಚಿಟಿಲು ಝುರು ಝುರು ಭುಗಿಲು ಭುಗಿಭುಗಿ
ಚಿಟಿಲು ಚಿಟಿಮಿಟಿ ಭೋರುಭೋರನೆ ಚುಯ್ಯಿ ಚುಯ್ಯೆಂದು ॥
ನಿಟಿಲನಯನದ ವಿಸ್ಫುಲಿಂಗದ
ಪಟುತರಾನಲ ಜಗವ ಸುಡುವಾ
ನಟನೆಯಾದುದು ಘೋರು ಸುರುಸುರು ಭೋರು ಭೋರೆನಲು ॥ ೨೦ ॥

ಮಾನವುಳ್ಳವನಾದಡನ್ಯರ
ಮಾನಿನಿಗೆ ಮರುಳಹನೆ ತಾನಭಿ
ಮಾನಶೂನ್ಯನ ಪುರದಲಿದ್ದೆಮಗಾಯ್ತು ಮಾನಹತಿ ॥
ಈ ನಗರದೊಳಗಿಹನೆ ಮರುಳನು
ಜೇನದಸಿಯನು ಹಾಯ್ದ ಪಾಡಾ
ಯ್ತೇನ ಹೇಳುವೆ ಸುಲಿದು ಸುಡಿಸಿದನೆಂದು ಜನ ಮರುಗೇ ॥ ೨೧ ॥

ಎಲ್ಲಿ ಕರೆ ಬುಗುಡಿಯನು ತೊತ್ತಿಯು
ಳೆಲ್ಲಿ ಮಸಣಿಯು ಕುರುಡಿಯಕ್ಕನು
ಹೊಲ್ಲ ಬೈಚಿಯರೆಲ್ಲಿ ಬೆಂದರೊ ನೋಡಿ ಕೋಣೆಯಲಿ ॥
ತಳ್ಳಳಿಸಿದರು ಕೆಡುಕು ಕೈನೆಯು
ಬುಳ್ಳಿ ಮಕ್ಕಳ ಕರೆವುದೆಂದಾ
ಚೆಲ್ಲಗಿತ್ತಿಯರಳುತ ಹೊರವಡೆ ಹನುಮ ನಗುತಿರ್ದ ॥ ೨೨ ॥

ಬೀಡಿಗತಿ ಚೆಲುವೆಂಬ ದೈತ್ಯನ
ಮಾಡು ಮಂಟಪ ಸಜ್ಜೆವನೆಗಳು
ಸೂಡಿಮಂಗಳವಾಯ್ತು ಬೆಂದುದು ಕಟಕ ಕಳವಳಿಸೆ ॥
ಜೋಡೆಯರು ಕೆಳೆಯದಿರು ತೊತ್ತಿಯು
ರೋಡಿ ಮಿಂಡರ ಬೆನ್ನು ಹತ್ತಿತು
ಹಾಡಿ ಹನುಮನ ಹರಸಿ ಬಾಳೆನುತಿರಲು ತವತವಗೆ ॥ ೨೩ ॥

ಹತ್ತುತಲೆಯುವ ಸುಲಿಸಿ ಹಬ್ಬಿದ
ಕತ್ತಲೆಯಲಭಿಮಾನವುಳಿದುದು
ಮೃತ್ಯು ಹನುಮನ ಬಾಲಗಿಚ್ಚಿನ ಮಾರಿಯುಃಪಟಳಕೆ ॥
ಸತ್ತಲಜ್ಜೆಯಲೊದರಿ ಹೊರವಡು
ತತ್ತೆಯುಳಿಯನು ಭಾವ ಮೈದುನ
ಬತ್ತಲೇಶ್ವರರಾಯ್ತು ನಗಿಸಿದ ಹನುಮನೀಜಗವ ॥ ೨೪ ॥

ನೀರ ಹೊರಗಿಕ್ಕುವುದು ಮೂರೇ
ಬಾರಿಯೆಂಬುದು ಇಲ್ಲಿ ಕಂಡುದು
ಯಾರು ತಮ್ಮನು ಕಾಣರೆಂದು ಕುಮಾರ್ಗದಲಿ ನಡೆದು ॥
ಜಾರನೊಡನಿಹ ಸುರತ ಕೇಳಿಯ
ನಾರಿಯರು ಹುಟ್ಟಿರ್ದ ಪರಿಯಲಿ
ಮಾರಿಗಿಚ್ಚಿಂಗೋಡಲಾಯಿತುಯೆಂದು ಜನ ನಗಲು ॥ ೨೫ ॥

ಹೊಗಲು ಹೊರವಡಲಾರದಾಯಿತು
ನಗುವಡಳುವರೆ ಕೂಡದಾಯಿತು
ಉಗುಳೆ ನುಂಗಲು ಬಾರದಾಯಿತು ಉಬ್ಬಸದ ಪರಿಯು ॥
ಬಗೆಯಲರಿದಾಯ್ತು ಕಟ ಹಿಡಿದುದ
ತೆಗೆಯಲಿಕ್ಕಲು ನೆರೆಯದಂದದಿ
ಹಗೆಯ ಪುರಜನ ಸತ್ತುದಸತಿಯು ಸಂಗದೋಷದಲಿ ॥ ೨೬ ॥

ಬಿದ್ದನೇ ದಶಕಂಠ ಮಾರುತಿ
ಗೆದ್ದನೇ ಮಝು ಭಾಪು ವೀರರ
ನುದ್ದಿದೆಲುವುಗಳೆತ್ತ ಹೋದುವು ತತ್ತ ಸಮಯದಲಿ
ಕ್ಷುದ್ರರಭಿಮತ ಸಿದ್ಧಿಯಾದರೆ
ಭದ್ರವೆಲ್ಲಿಯದಮಮ ಲೋಕಕೆ
ಛಿದ್ರವೆನುತಮರಾಳಿ ನಗುತಿರೆ ಕೈಯಮರೆಗಳಲಿ ॥ ೨೭ ॥

ಕೆತ್ತಿ ತಿದ್ದಿದ ಗಡ್ಡಮೀಸೆಯು
ಹತ್ತು ಮುಖದೊಳಗೊಪ್ಪುತಿರ್ದುದು
ವೊತ್ತಿಬಾಲದಲೊರಸಿಯೆಣ್ಣೆಯನೂಡಿದಂತಾಯ್ತು ॥
ಹೊತ್ತಿಸಿದೊಡಾರತಿಯ ಹೋಲಲು
ಹತ್ತು ಕೈಯಲಿ ಹೊಡೆದು ನಂದಿಸೆ
ಮತ್ತು ಪವನಜ ಹೊತ್ತಿಸಲು ಖಳ ಹೊಡೆದು ನಂದಿಸಿದ ॥ ೨೮ ॥

ಹಿರಿಯತನ ಮುನ್ನಿಲ್ಲ ಬಾಲಕೆ
ತರುವಲಿತ್ವವು ಹಿರಿದು ಬೇಡೆನೆ
ತರಳತನದಲಿ ಗಡ್ಡಮೀಸೆಯ ನೀನು ಸುಡಬಹುದೆ ॥
ಸರಸವರಸುಗಳೊಡನೆ ಸಲ್ಲದು
ಹಿರಿಯತಿಕೆ ನಿನ್ನಿಂದ ಹೋಯ್ತೆನೆ
ಸಿರಿಯ ಕದ್ದೆಳೆತಂದಡಂದೇ ಹೋಯ್ತು ನಾನೇವೆ ॥ ೨೯ ॥

ಒಬ್ಬನಿಂದಲೆ ನಾಡು ಕೆಡುವುದು
ಒಬ್ಬನಿಂದಲೆ ನಾಡು ಬೆಳೆವುದು
ಒಬ್ಬ ರಾವಣ ಹುಟ್ಟೆ ಲಂಕೆಗೆ ಮಾರಿಯನು ತಂದ ॥
ಇಬ್ಬರಿಂಗೊಂದರಿವೆಯಾಯಿತು
ಒಬ್ಬ ಕಪಿಯನು ಸುಟ್ಟರಾತನು
ಒಬ್ಬರಾಲಯ ಉಳಿಯದಂತೆನೆ ಪುರವ ಸುಟ್ಟನಲ ॥ ೩೦ ॥

ಖಳನ ಹೊಲಗೇರಿಗಳ ಸುತ್ತಲು
ಬೆಳೆದ ತುಳಸಿಯ ವನವ ಕಂಡನು
ಚಲನಸಂಭವನಳುಕಿ ಸುಟ್ಟೊಡೆ ಕೆಡುಕು ಒಹುದೆನುತ ॥
ಚಳಕದಲಿ ಕೈನೀಡಿ ಕಿತ್ತನು
ಸುಲಭತನವೇನೋ ವಿಕುಂಠನ
ಬಳಸಿ ಕೈಮುಗಿದೆತ್ತಿಯಬುಧಿಯ ಬಡಗ ತಡಿಗಿಟ್ಟ ॥ ೩೧ ॥

ಬಲು ನುಡಿಯು ಚಪಲೆಯರ ಚೆಲುವಿನ
ಹೊಳೆವ ಕಂಗಳ ಥಾಳವಲಗುವ
ಮೊಲೆ ಮುಡಿಯು ಸುಲಿಪಲ್ಲ ಕುಣಿಕುಣಿದೆಸೆವ ಕುಂತಳದ ॥
ಸೆಳೆಯು ನಡುವಿನ ಸುಳಿಯು ನಾಭಿಯು
ಕಳೆದವುಡಿಗೆಯು ಹಂಸ ಗಮನದ
ಚೆಲುವೆಯರ ನೆರವಿಂಗೆ ದೃಷ್ಟಿಯ ವಿಟರು ಕಳುಹಿದರು ॥ ೩೨ ॥

ಪಟ್ಟಣವನಂಗಡಿಯು ಮಳಿಗೆಯು
ಸುಟ್ಟನೋಲಗ ಕರಣಶಾಲೆಯು
ಪಟ್ಟದರಮನೆ ಹರದ ಹಾರುವರತುಳಗೇರಿಗಳ ॥
ಅಟ್ಟಿ ಸುಟ್ಟನು ಅಮುವು ಲೆಂಕರ
ಮುಟ್ಟಿ ಮೂಜಗದಸುರ ಭಟರಿಗೆ
ಜಟ್ಟಿಗನು ಹನುಮಂತ ಲಂಕೆಯು ಸುಟ್ಟು ಕೂಗಿದನು ॥ ೩೩ ॥

ನಿದ್ದೆವಶದಲಿ ಮರೆದುದಕಟಾ
ಮದ್ದು ತೇವುದ ಅಂಗಲೇಪದ
ಶುದ್ಧ ಹಸ್ತದ್ರಾವಣಂಗಳ ತಿಲಕದೌಷಧಿಯು ॥
ಹೊದ್ದಿದವರನು ಸುಲಿದು ಮನೆಯೊಳ
ಗಿದ್ದ ವಸ್ತುವ ತರಿಸಿಕೊಂಬಾ
ಸಿದ್ಧಗುಟಿಯನು ಹಲುಬಿ ಮುದುಗುಂಟಣಿಯರೊರಲಿದರು ॥ ೩೪ ॥

ಒಂದು ಕೇಡಲ್ಲಸುರ ಸೀತೆಯು
ತಂದ ಕಾರಣ ವನವು ಮುರಿದುದು
ಕಂದನಳಿದನು ಪುರವು ಸುಲಿದುದು ಮಾನಹತಿಯಾಯ್ತು ॥
ಬೆಂದುಹೋಯಿತು ಲಂಕೆ ಕೋಡಗ
ವೊಂದುಮಾಡಿತು ಇಷ್ಟನಕಟಾ
ಮುಂದೆ ನೆರೆದಿನ್ನೇನ ಮಾಡುವುದೆಂದು ಜನ ಮರುಗೇ ॥ ೩೫ ॥

ಹರನ ಭವನವ ಹಲವನುಳುಹಿದ
ಕರುಣದಲಿ ಕೈಕಸೆಯು ಬೇಡಿದ
ಡಿರಿಸಿದನು ಮನೆಯೊಂದ ಮತ್ತಾಪುರದ ಸಿರಿಯ ಂತೆ ॥
ವರ ವಿಭೀಷಣನೊಂದು ಗೃಹವನು
ಮರಳಿ ನಿದ್ರಾಮುದ್ರ ನಿಲಯುವ
ನಿರಿಸೆ ಕೋಗಿಲೆ ಬಣ್ಣವಾದುದು ಲಂಕೆ ಸಕಳಂಕೆ ॥ ೩೬ ॥

ಕಡಲಲದ್ದಿದನುರಿವ ಚಾಲವ
ಕೊಡಹಿ ಕಿಚ್ಚನು ಕಂಡಡಂಜುವ
ಕೊಡತಿಯೆನುತವೆ ಹನುಮ ಬರುತಿರೆ ಸೀತೆ ನೋಡಿದಳು ॥
ಪೊಡವಿಸುತೆ ಪ್ರಣತೋऽಸ್ಮಿ ಪ್ರಮೂಜಗ
ದೊಡತಿ ಸುಪ್ರಣತೋऽಸ್ಮಿ ರಾಮನ
ಮಡದಿ ಶರಣನತೋऽಸ್ಮಿಯೆನುತವೆ ಹನುಮ ಬರುತಿರ್ದ ॥ ೩೭ ॥

ತರುಣ ಬಂದನು ತಮ್ಮ ಬಂದನು
ಸಿರಿಗ ಬಂದನು ಹಿತಗ ಬಂದನು
ಅರಸನಾಳವ ಬಂದ ನೋಡಾ ಬಂದನೆಲೆ ಸರಮೆ ॥
ಹರನವೊಲು ಬದುಕಣ್ಣಯೆನುತಾ
ವರದಿ ಹರಸಿದಳೆತ್ತಿದುತ್ಸವ
ದಿರವ ಬಿನ್ನವಿಸಿದರೆಯವನಿಜೆಯಾಲಿಸಿದಳಂದು ॥ ೩೮ ॥

ಕರೆ ಮನದ ರಕ್ಕಸರ ಬೆದರಿಸಿ
ಮುರಿದೆನಕ್ಷನ ವನವ ಲಂಕೆಯ
ನುರುಹಿಬಿಟ್ಟೆನು ಬಂದ ಕುರುಹನು ಖಳಗೆ ತೋರಿದೆನು ॥
ಅರಸನಾಜ್ಞಾಪಿಸಿದನೆಲ್ಲವ
ನರುಹಿದೆನು ನಿಮ್ಮಡಿಗೆ ರಾಘವ
ಪುರುಷಗೊಂಬಂತೊಂದು ಕುರುಹನು ಕರುಣಿಸುವುದೆಂದ ॥ ೩೯ ॥

ಕಡು ಹಿತವ ತಾಯ್ಮಕ್ಕಳೆಡೆಯಲಿ
ಮಡದಿಪತಿಯೊಳಗೊಡೆಯ ಭೃತ್ಯರೊ
ಳೊಡನುಡಿವರಿಂದಹುದು ಕೆಡುವುದು ವೈರ ಮೋಹಗಳು ॥
ಪೊಡವಿಪತಿ ಕರುಣಿಸುವ ತೆರದಲಿ
ನುಡಿಯಬೇಹುದು ಮಗನೆ ಹನುಮಾ
ಮಡದಿ ಸೈರಿಸಳಿನ್ನು ಹರಣವ ಬಿಡುವಳೆಂದೆನ್ನು ॥ ೪೦ ॥

ವಸಿತೆಯೊಲವನು ವರಗೆ ನುಡಿವುದು
ಹನುಮ ಕೇಳಿದು ನೀತಿ ಬಾಹ್ಯವು
ಜನಕಸಾಸರೆ ಕಳೆದ ಚಣದಿಂ ಪತಿಯೆ ಇಹಪರವು ॥
ಹನುಮ ನಾನಿಲ್ಲಿದ್ದ ಪರಿಯನು
ದನುಜರಳವಿಯಲೆನ್ನ ದುಃಖವ
ನಿನಯುಗರುಹೈ ಬಸುರಬಂದೆನು ನಿನ್ನನೆಲೆ ತಂದೆ ॥ ೪೧ ॥

ಎನುತ ಬಿಕ್ಕಿದಳವನಿನಂದನೆ
ನೆನೆದು ರಾಮನ ಗುಣಕೆ ಬಿರಿದಳು
ವನಿತೆ ಜನ್ಮದಿ ಬಂದ ಯನ್ನಂತಾರು ಪಾಪಿಗಳು ॥
ಎನಗೆ ಗತಿಯಿನ್ನಾರು ಹನುಮಾ
ಮನದ ಹಂಬಲ ಬಿಟ್ಟನರಸನು
ಇನಿತು ದಿನ ತಡವಾಯ್ತು ಹರಹರ ಮರೆದನೆಂತಕಟ ॥ ೪೨ ॥

ಏಕೆ ತಾನುದಿಸೆದೆನು ಜನಕಂ
ಗೇಕೆ ಮಂಥರೆ ಕಿಚ್ಚನಿಟ್ಟಳೊ
ಯಾಕೆ ನೂಕಿದಳಡವಿಗೆನ್ನನು ಕೈಕೆ ಕಡು ಮುನಿದು ॥
ಯಾಕೆ ಸುಳಿದುದು ಮಾಯ ಮೃಗವದ
ನೇಕೆ ಬಯಸಿದೆ ದೇವನನುಜನ
ನೇಕೆ ಬಯ್ದೆನಯೋಧ್ಯೆಯೆತ್ತಲು ಲಂಕೆ ಸೆರೆಯೆತ್ತ ॥ ೪೩ ॥

ಆವ ಕರ್ಮವ ಮಾಡಿ ಹುಟ್ಟಿದೆ
ನಾವಹೆಂಗುಸನಳಲಿಸಿದೆನೋ
ಸಾವು ಬಾರದು ಶಿವನೆ ಕರುಣಿಸನಾಥೆಯಾದೆನಲ ॥
ಏವೆನೇವೆನು ಮಗನೆ ಹನುಮಾ
ನೋವು ಘನವೆನಗಾರಿಗೆಂಬೆನು
ಕಾವರಾರೆಲೆ ಕಂದ ಬಳಲಿಕೆಯರಿವರಾರೆಂಬೆ ॥ ೪೪ ॥

ಮೊದಲೆ ಹೆಂಗುಸ ಜನ್ಮ ಕಷ್ಟವು
ಆದರಿನಿಂ ವನವಾಸ ದುಃಖವು
ವಿದಿತ ಪತಿಯಗಲಿಕೆಯ ಶೋಕಕ್ಕಾವುದಂತರವು ॥
ಕುದಿದು ಸಾವೀ ಸೆರೆಯಿದೆತ್ತಲು
ಬದುಕಲರಿಯೆನು ಇನ್ನು ನೀನೀ
ಹದನನರಸಂಗರುಹು ಹನುಮಾ ನಿನ್ನ ಬೇಡಿದೆನು ॥ ೪೫ ॥

ಕೇಳಿ ಮಮ್ಮಲ ಮರುಗಿ ಪವನಜ
ನಾಲತಾಂಗಿಯ ನಂಬಿಸಿದ ಭೂ
ಪಾಲ ರಾಘವ ನಿಮ್ಮ ನೆನೆದಡಿಗಡಿಗೆ ವ್ಯೆಮರೆವ ॥
ನಾಳೆ ತಹೆನೀ ಲಂಕೆಗರಸನ
ಪಾಳೆಯವನುಮ್ಮಳಿಸಬೇಡೀ
ಕಾಳುಮೂಳನ ಕೊಂದು ನಿಮ್ಮಯ ಸೆರೆಯ ಬಿಡಿಸುವೆನು ॥ ೪೬ ॥

ತಡವುವುಂಟೇ ಹನುಮ ನೇಮವ
ಕೊಡನೆ ರಾಘವನೆನ್ನ ಸೆರೆಯನು
ಬಿಡಿಸನೇ ಬಂಧನದ ಬೇಗೆಯನರಿಯನೇಯಿನ್ನು ॥
ನುಡಿ ಮಗನೆ ನನಗಾಸೆಮಾತನು
ಕೊಡುವುದೆನ್ನೊಡಲುರಿಯ ನಂದಿಸು
ಪೊಡವಿಸುತೆಯಂತಿಪ್ಪ ದುಃಖಿಗಳುಂಟೆ ಲೋಕದಲಿ ॥ ೪೭ ॥

ಅರಸಿನವನಂಜನವನಂಬರ
ವೆರಸಿ ಭೂಷಣ ಭೋಜನಂಗಳ
ನರಸಿ ತೊರೆದಿರಿ ನಿಮ್ಮ ದುಃಖವ ದೈತ್ಯರಿಂಗೂಡಿ ॥
ಅರಿದು ತಲೆಗಳ ಸಹಿತ ನಿಮ್ಮನು
ತರಿಸುವನು ಶ್ರೀರಾಮನೆಂದೆನೆ
ತರುಣ ನಿನೇ ಬಲ್ಲೆ ನಂಬಿದೆಯೆಂದಳಿಂದುಮುಖಿ ॥ ೪೮ ॥

ಮರಳಿಬಾರದೆಯಿದ್ದನಾದರೆ
ಹರಿಗೆ ಹಗೆಗೊಂಡವನು ನಂಜನು
ಸಿರಿಯೆ ನಾ ನಿಮಗಿಕ್ಕಿದಾತನು ಬೇಡ ತೋರದಿರೆ ॥
ಮರುತನೊಡಲೊಳಗಲಗನಿರಿದವ
ಕರುಣಿ ರಾಮನ ಬೀಡು ದೂರವೆ
ಹಿರಿದು ಚಿಂತಿಸ ಬೇಡಿ ಸೆರೆಯನು ಬೇಗ ಬಿಡಿಸುವೆನು ॥ ೪೯ ॥

ಎನಗೆ ಹರಿಯಿತ್ತವಧಿ ತುಂಬಿತು
ಜನನಿ ಮೂರೇ ಗಳಿಗೆ ತಡೆದರೆ
ಅನಲನೊಳಗಹನರಸನೆಂದರೆ ದೇವಿ ಕಳವಳಿಸೆ ॥
ಹನುಮ ಹರಿಯಡಿಗೀವುದಿದನೆಂ
ದೆನುತ ಚೂಡಾಮಣಿಯನಿತ್ತಳು
ಜನನಿ ಜೀಯ ಹಸಾದವೆಂದನು ಹನುಮ ಪುಟನೆಗೆದ ॥ ೫೦ ॥

ಕಾಮಿತವನೊಲಿದೀವ ನಾಕದ
ಭೂಮಿರುಹದುರುಶಾಖೆಶಾಖೆಗ
ಳಾ ಮಹಾದ್ರುಮದಿಂದ ಬೇಡಲು ಕೊಡದೆ ವಾಂಛಿತವ ॥
ರಾಮ ಭೃತ್ಯನ ಚರಿತವಘ ನಿ
ರ್ನಾಮವೆನಿಸಲು ತೀರದೇ ಕರು
ಣಾಮೃತಾಬ್ಧಿಯ ಡಿಂಗರಿಗರಿಹಪರವ ನಾಧಿಸರೆ ॥ ೫೧ ॥

ನಗಚರನ ಬಾಲತ್ವ ದನುಜರ
ಹೊಗಿಸಿತಬುಧಿಯು ಮೊರೆಯನಹಿತನ
ಮೊಗಕೆ ಬಂದುದು ಕರಿಕು ರಾಮಾಯಣದ ಕಥೆಯೊಳಗೆ ॥
ಒಗೆದುದ್ಯೆವತ್ತೆರಡು ಪದದಲಿ
ಮುಗಿದುದ್ದಿಲ್ಲಿಗೆ ಸಂಧಿ ಕವಿತಾ
ಸೊಗಸು ಮಿಗೆ ವಾಲ್ಮೀಕಿ ಮುನಿಪತಿಯೊಲಿದು ಬಣ್ಣಿಸಿದ ॥ ೫೨ ॥

---

## ೧೩ನೇ ಸಂಧಿ

ಪಲ್ಲ ॥ ಒಡೆಯನೊಲಿದವ ಮಾಡಿದುಪಹತಿ
ಪೊಡವಿಪನ ಕಿವಿಗೊಗೆಯೆ ವನವನು
ಬಿಡದೆ ಸೂರೆಯುಗೊಂಡು ಮಾರುತಿ ಮನ್ನಣೆಯ ಪಡೆದ ॥

ಪದ್ಯ ॥ ಮೊಲೆಯುಕೊಟ್ಟಳ ಕೊಂದರುಂಟೇ
ಮುಳಿದು ಮಿಟ್ಟಿಯಲೆಚ್ಚ ಬೇಡಂ
ಗೊಲಿದು ಮುಕ್ತಿಯ ಕೊಟ್ಟರುಂಟೇ ಎಡೆಯ ನೊದೆದಲ್ಲಿ ॥
ಕಲೆಯ ಧರಿಸಿದರುಂಟೆ ದಾನವ
ನೊಲಿದುಕೊಟ್ಟರೆ ಕೆಡಹಿ ಕಟ್ಟಿದ
ಸುಲಭತೆಗೆ ನಮೊಯೆನುತಲಿದ್ದುದು ಯೋಗಿಜನನಿವಹ ॥ ೧ ॥

ಭೂರಿಭುಜಬಲ ಹನುಮ ಬೆಳೆದಾ
ವಾರಿನಿಧಿಯನು ದಾಟುತಿರೆ ದಿ
ಗ್ವಾರಣಂಗಳ ಕುಂಭ ಕುಸಿಯಲು ವಿಸುನಿಯುಪ್ಪರಿಗೆ ॥
ನೀರಿನಂದದಿ ಕರಗಿ ಹರಿದುವು
ವಾರಿಧಿಗೆ ಹೊರಗೊಳಗೆ ಕಿಚ್ಚಿಂ
ತೀರಲಸುರರು ಹಲವು ಕಾಲಕೆ ಮೂರಿ ಮನವಣಿಯೆ ॥ ೨ ॥

ಕೆರಳಿ ದಶಗಳನವುಡುಗಡಿಯುತ
ತರುಚರನ ನೀನಟ್ಟುಯೆಂದರೆ
ಪುರವ ಸುಟ್ಟನು ನೋಡು ನೋಡೀ ಬಾಣಸಿಗ ಮೂಳ ॥
ಉರಿವ ಪರಿಯಾಯ್ತೆಲವೊ ಬೆನ್ನಲಿ
ಕರುಳನುಗಿಯುಗಿ ಕೊರಳು ತಲೆಗಡಿ
ತಿರುಹು ಕೀಳ್ನಾಲಗೆಯ ಮತ್ತೇನೈಸೆ ನೋಡೆಂದ ॥ ೩ ॥

ನಡುಗಿ ಬಿನ್ನವಿಸಿದನು ಪಾವಕ
ಕಡೆಗೆ ತಪ್ಪಿನಿತಿಲ್ಲವೆನ್ನಲಿ
ಕಡುಹಿನಿಂದವೆ ಗಾಳಿಯಟ್ಟಿದೊಡುರಿದೆ ನಾನೇವೆ ॥
ಕೆಡಹಿ ಕಟ್ಟುವುದವನಯೆಂದರೆ
ಹಿಡಿಯೆ ನಾನೇನಲ್ಲ ದೇವರು
ಕಿಡಿಯ ಬೆಂಬಳಿ ಬೀಸಹೇಳಿದರಾನು ಬೀಸಿದೆನು ॥ ೪ ॥

ಕೋಡಗವನಟ್ಟುವುದುಯೆಂದರೆ
ಕೇಡ ಹಣ್ಣಿದಿರೆನಗೆ ನಿಮ್ಮಯ
ಕೋಡಕೊರೆಯದೆ ಕರುಣಿಸಿದ್ದರೆ ಸೊಕ್ಕಿವುರಿದಿರಲ ॥
ನೋಡುನೋಡೆನಲನಿಲ ನುಡಿದನು
ದಾಡೆಗುಟ್ಟಿದರೆಮ್ಮ ನಾ ಕಪಿ
ಸೂಡಿಬಾಲದಲಟ್ಟಿ ನೀವೋಡಿದಿರಿಯೆನ್ನಳವೇ ॥ ೫ ॥

ಆಗಲವಕೇನಾಯ್ತು ಮಾಣಲಿ
ಹೋಗಲಿ ಗತೋದಕಕೆ ಸೇತುವೆ
ಬೇಗ ನೋಡಾ ಕಪಿಯ ಕೊಂದೆನ್ನಳಲ ಹಿಂಗಿಸುವೆ ॥
ಹೋಗುಹೋಗಿಂದ್ರಾರಿಯೆಂದರೆ
ನೀಗಿದಿನಿತೇ ಸಾಕು ಸೇನೆಯು
ಹೋಗಲುರಿವನ ಘಸಣಿಯೆ ಬೇಡ ನಮಗೆಂದ ॥ ೬ ॥

ಅಹದು ಮತ್ತೇನೆಲವೊ ಹೆದರಿದೆ
ಬಹಳ ಸಾಹಸಿಯಹುದು ದಿಟ ದಿಟ
ಅಹಹ ಕೋಡಗಕೆಮ್ಮ ಹೆಮ್ಮಗನಂಜಿದನು ಭಳಿರೇ ॥
ರಹಣ ತುಂಬಿದ ಬಂಡಿಯೊಳಗಾ
ಕುಹಕಿ ಕೊಂದರೆ ಲಘುವೆ ನೋಡಲು
ಗಹನವೇ ತನಗೆಂದು ರಾವಣನಳಲು ನಗೆ ನಕ್ಕ ॥ ೭ ॥

ಊಣೆಯವೆ ನಾ ಮಮತೆಗೆಂದೆನು
ಮಾಣಲಾರದೆ ಪುರದೊಳಿರೆ ನಿ
ಮ್ಮಾಣೆ ಕಟ್ಟುವೆ ತಂದುಕೊಡುವೆನು ಕಪಿಯನೆನುತಿರಲು ॥
ನಾಣುಗೆಟ್ಟುದು ಮುಂದೆ ಬಪ್ಪುವ
ಕಾಣಬಾರದು ಹಿಂದೆ ಕಂಡರೆ
ಗೇಣನೊಯ್ದರೆ ಮೊಳನು ಹರಿದಂತಾಯ್ತು ನಮಗೆಂದ ॥ ೮ ॥

ಬಲ್ಲುದಾಗಲಿಯೆನುತ ದಾನವ
ಮಲ್ಲನಿಂದ್ರಾರಾತಿ ರಥವನು
ನಿಲ್ಲದೇರಿದ ಸಕಲ ಕೈದುವ ತುಂಬಿ ಬೇಗದಲಿ ॥
ಬಿಲ್ಲ ಜೀವಡೆಗೈದು ದೆಸೆದೆಸೆ
ಗೆಲ್ಲ ನೋಡುತ ಹಿಂದೆ ಹತ್ತಿದ
ಕೊಲ್ಲು ಕೆಡಹೆನುತಖಿಳದಳಸಹಿತಭ್ರಮಾರ್ಗದಲಿ ॥ ೯ ॥

ಉಗುಳುಗಳು ಲಂಕೆಯನು ಬೆನ್ನಲಿ
ಬಗಿವೆ ಕರುಳನು ಹೋಗಲೀವೆನೆ
ಹಗೆಯು ಭೇದಿಗ ನಿಲ್ಲುನಿಲ್ಲೆನುತರಿದಿಶಾಪಟನು ॥
ನೆಗೆದನುರವಣೆಯಿಂದ ಕಾದ
ಲ್ಕಗಿದು ಮುತ್ತಿತು ಸೇನೆಯುಮುಮಾ
ಬಗೆದು ತೋಳನ ಹಿಂಡು ಸಿಂಹನ ಮುತ್ತುವಂದದಲಿ ॥ ೧೦ ॥

ಬಿಡುವ ಸರಳಿನಲಿಡುವ ಶಕ್ತಿಯು
ನುಡಿವ ಮೊದಲೇ ಝಾಡಿವ ಖಡ್ಗದ
ಹೊಡೆವ ಭೇರಿಯು ಕುಲುಲುಗುಟ್ಟುವ ವೀರರಬ್ಬರದ ॥
ತೊಡಚಿ ಬವರವ ಹಿಡಿವ ತವಕದಿ
ದಡಿಗೆರೆಣ್ದೆಸೆಗಡಸಿ ಮುತ್ತಿತು
ಬಿಡದೆ ನೋಡಿದ ಹನುಮ ಹಾರುತ್ತೆಂದ ಖಳನೊಡನೆ ॥ ೧೧ ॥

ಎಲವೊ ಕಟ್ಟಿಸೆನೆಂಬ ಮೋಳವೆ
ತಳುವಲವಧಿ ಸಮೀಪ ನಿನ್ನೀ
ಬಲಕೆ ಬಾಲವು ಕಾಲಮೃತ್ಯುಗಳೆರಡು ಹಿಂಗಾಲು ॥
ಖಳರ ಮಾಂಸವನುಂಡು ತಿಂದೀ
ಜಲಚರಂಗಳ ಕುಲವು ದಣಿಯಲಿ
ಹಳಚಿ ಕಾದೈ ನಿನಗೆ ಬಾಲವನಿತ್ತೆ ನಾನೆಂದ ॥ ೧೨ ॥

ಒದ್ದನಿಕ್ಕೆಲದವರ ಬಾಲದ
ಲುದ್ದಿಬಿಟ್ಟನು ಹಿಂದೆ ಕವಿದರ
ತಿದ್ದಿಬಿಟ್ಟನು ಹರಿಬಕಂಡನು ಮುಂದೆ ಕಟ್ಟುವರ ॥
ಬಿದ್ದನಿತ್ತನು ಮಾರಿ ಮಸಣಿಗೆ
ಬುದ್ಧಿನಾಶ ಸುರೇಂದ್ರವೈರಿಯು
ಹದ್ದುಗೆಟ್ಟನು ಕಟ್ಟಿ ಬಾಲದೊಳಬ್ಧಿಯೊಳಗಿಟ್ಟ ॥ ೧೩ ॥

ಕಟ್ಟಿ ಮುನ್ನವೆ ಕಪಿಯನುರಿಯೊಳ
ಗಿಟ್ಟನಿಂದ್ರಾರಾತಿಯೊಗಳು
ಕಟ್ಟಿ ನೀರೊಳಗಿಟ್ಟನಾತನ ವೀರ ಹನುಮಂತ ॥
ದುಷ್ಟ ರಾವಣನಾಡಿದಾಟ
ಕ್ಕಿಷ್ಟ ಹಿರಿದಲ್ಲೆನುತ ಹೊಗಳಿದ
ವಿಷ್ಟಪೇಶ್ವರರಾಯ್ತು ಬಳಲಿಕೆಯೊರಿತೆಂದನಲು ॥ ೧೪ ॥

ತೋದ ಮೈಯಲಿ ದನುಜ ಲಂಕೆಗೆ
ಹೋದನತ್ತಲು ಹಸಿದು ತಿರುಗಿಯೆ
ಹೋದ ಮಾರಿಯು ಕರೆದು ಕಚ್ಚಿಸಿಕೊಂಡ ಮಸಿಮುಸುಡ ॥
ತೀದ ಬವರದ ಓಲಗಕೆ ಬರ
ಲಾ ದಶಾನನ ಮಗನ ಕಂಡತಿ
ಖೇದಗೊಂಡನು ನೀಗಿ ಬಂದ್ಯೆ ಬಲವ ನೀನೆಂದ ॥ ೧೫ ॥

ಇತ್ತ ಬರೆಖರೆ ಸಕಲ ಕಪಿಬಲ
ವೊತ್ತ ಹನುಮನನಿದಿರುಗೊಂಡುದು
ಹೊತ್ತ ಹರುಷದೊಳುಬ್ಬಿ ತೊಲಗಿದ ಜೀವ ಬಂದಂತೆ ॥
ಒತ್ತಿ ತಕ್ಕವಿಸಿದನು ಜಾಂಬವ
ನುತ್ತಮನೆ ಹದನೇನು ಹೇಳೆನೆ
ಚಿತ್ತಜಾತನ ಮಾತೆಯಿರವನು ಹನುಮ ವಿವರಿಸಿದ ॥ ೧೬ ॥

ಎಲವೊ ಹೊಗೆಯನು ಕಂಡೆವಸುರರ
ಹೊಳಲನುರುಹದೆ ಮಾಣೆಯೆಂದರೆ
ಖಳರು ಕಪಿಚೇಷ್ಟೆಗಳನೀಕ್ಷಿಪೆವೆನುತ ಬಾಲದಲಿ ॥
ಹಳೆಯ ಸೀರೆಯ ಸುತ್ತಿ ಸುಟ್ಟರೆ
ಕೆಲದ ಕಿಡಿಗಳು ಬಿದ್ದು ಲಂಕೆಯ
ಹೊಳಲ ಮನೆಯೊಂದೆರಡು ಬೆಂದುವು ಬೀಡ ಹೊರಗೆಂದ ॥ ೧೭ ॥

ಸಹಸಿ ತಾನುರೆ ಸಹಸಿಯಂಜನು
ಮಹಿಮ ಮಝು ಹನುಮಂತಯೆನುತವೆ
ಬಹಳ ಕಪಿಬಲ ಬಂದು ಸೇರಿತು ಫಲಿತ ಮಧುವನವ ॥
ಅಹಹ ತನಿವಣ್ಣುಗಳ ಕಂಡು
ತ್ಸಹದಿ ಸೂರೆಯಕೊಳ್ಳಲಾರದೆ
ವಿಹಿರನೇದನನಂಜಿಕೆಗೆ ಹನಮಂಗೆ ಹಲುಬಿದರು ॥ ೧೮ ॥

ಎಲೆ ಪುರಂದರ ತನುತನೂದ್ಭವ
ಬಳಲಿದೆವು ಪರಿವಾರವೆಮಗೀ
ಫಲಿತ ವನವನು ಸೂರೆಗೊಡುವರೆ ಉಳಿವೆವಾವೆನಲು ॥
ಕೊಲಿಸಿದರೆ ಸುಗ್ರೀವ ಕಾವ
ಗ್ಗಳಿಕೆಯುಳ್ಳುದರಿಂಪ ನಾವೀ
ಹಳೆಯ ಕರಡಿಗೆ ಹಲ್ಲುದೆರೆದೆವು ಬಳಲಿ ಬಾಯಾರಿ ॥ ೧೯ ॥

ಕೇಳುವನೊ ನಾವೆಂದ ಮಾತನು
ಕೇಳನೋ ನಾವರಿಯೆವೊಂದನು
ಹೇಳದಾದನು ಬೇಕುಬೇಡೆಂಬೊಂದು ಸೊಲ್ಲುಗಳ ॥
ಆಳುಗೆಲಸದೊಳೆಮ್ಮ ನೂಕುವು
ದೂಳಿಗವ ನಾವಾಂತು ಸಾವೊಡೆ
ಗಾಳುವನು ಹಾತೊರೆಯಲಾತನಲೇನು ಭೃತ್ಯರಿಗೆ ॥ ೨೦ ॥

ಸುಮ್ಮನಿದ್ದನು ಜಾಂಬವನು ತಾ
ನಮ್ಮನಂಗದನೆನಲಿ ಮಾರುತಿ
ಯೊಮ್ಮೆಮುಟ್ಟಲಿ ಬಂದರೊಳ್ಳಿತು ಸೂರೆಗೊಳುವುದಕೆ ॥
ಘಮ್ಮನಗುಸೆಯ ಮುರಿದು ಹೊಕ್ಕುದು
ನಮ್ಮನುಳಿಸಿದ ಹನುಮ ಬಾಳೆಂ
ದೊಮ್ಮೆ ಹಣ್ಣನು ಸವಿದುಗೈದರು ವನದ ಹುಯ್ಯಲನು ॥ ೨೧ ॥

ಎಲೆಲೆ ತರುವಳಿಗಳಿರ ಕೊಬ್ಬಿಯೆ
ಫಲವ ಸೂರೆಯಕೊಳಲು ಬಂದಿರೆ
ತೊಲಗಿ ಫಡ ಸುಗ್ರೀವನಾಣೆಯೆನಲ್ಕೆ ಲೆಕ್ಕಿಸದೆ ॥
ಬಲುಹಿನಿಂದವೆ ಸೂರೆಗೊಳುತಿರೆ
ಲುಳಿಯಡೊಣ್ಣೆಯಲಟ್ಟಿ ಸದೆದನು
ಮುಳಿದು ಸಿಂಗನ ಬಲವ ಜಂಬುಕನಟ್ಟುವಂದದಲಿ ॥ ೨೨ ॥

ವನವ ಕಾದಿಹ ಸುಭಟ ದಧಿಮುಖ
ವನಚರಂಗಳನಟ್ಟಿಸದೆದನು
ಯಿನಿತಲಾ ತನಿವಣ್ಣ ನಿಮಗಾಗಾವು ಸಲಹಿದೆವೆ ॥
ಇನಿತು ಸಾಹಸವಾರಿಗಪ್ಪುದು
ಹನುಮ ತರುವರಿತನಕೆ ಮೊದಲಿಗ
ನೆನುತ ಸೇನೆಯ ನೂಕಿ ಭಾಗಿಲನಿಕ್ಕಿ ಕೈಕೊಂಡ ॥ ೨೩ ॥

ಮುರಿದ ಕಾಲ್ಗಳ ಹರಿದ ಬಾಲದ
ಲೊರಲಿ ಮುರಿಯೋ ಹನುಮಯೆನುತಿರೆ
ಮುರಿದುಬಹರನು ಕಂಡು ಹರಿದನು ಹಿಡಿದು ದಧಿಮುಖನ ॥
ಧರೆಗೆ ಮುಸುಡನು ತೀದನವುವಾ
ಸರಿತವಾದುದು ಗಲ್ಲ ನೆತ್ತಿಗೆ
ತರುಬಿ ಸದೆವಂತಾಯ್ತು ಎನ್ನೊಳು ಛಲವೆ ನಿನಗೆಂದ ॥ ೨೪ ॥

ದೂರು ನಿನ್ನೊಡೆಯಂಗೆ ಹುಯ್ಯಲ
ಹೋರು ನೀನೆನುತವನ ನೂಕಿದ
ಮೂರು ಭುವನಕ್ಕುರುವ ದಧಿಮುಖನೆಂಬ ಕಪಿಭಟನ ॥
ಸೂರೆಗೊಟ್ಟನು ವನವ ಹೊಗುಹೊಗು
ಮಾರುಗೊಟ್ಟುದು ಭೀತಿ ಬೇಡೆನೆ
ಹಾರಿ ಹರಿಹರಿದಡರಿ ಮುತ್ತಿತು ಮತ್ತೆ ಮರ್ಕಟರು ॥ ೨೫ ॥

ದೋರೆವಣ್ಣರೆಗಚ್ಚಿ ಬಿಡುವರು
ಹೀರುವರು ತನಿವಣ್ಣ ಕೆನ್ನೆಯು
ಗೋರೆಗಳ ಹಿಂಗೈಯಲೊತ್ತುತ ಮನದ ಹೆಕ್ಕಳದಿ ॥
ಮಾರುತಿಯು ಹರಸುತ್ತ ಕಾಯ್ಗಳ
ಕಾರಿ ಬೆರಳಲಿ ತೋಡಿ ಮೂಸುತ
ವೀರ ಮರ್ಕಟ ಸೇನೆ ದಣಿದುದು ಹನುಮ ಬಾಳೆನುತ ॥ ೨೬ ॥

ಹತ್ತುವರು ತುದಿಗೊಮ್ಮೆ ಜೋಲುವ
ರೆತ್ತಿ ಗೊಂಚಲನಲುಗಿ ತಿಂಬರು
ಇತ್ತೆರದ ಬದಿಹಿಗ್ಗೆ ಬಳಲಿಕೆಯಾರಿತೆಲ್ಲರಿಗೆ ॥
ಹೊತ್ತ ಸೊಪ್ಪಿನಲೈದೆ ದಧಿಮುಖ
ಇತ್ತ ಹುಯ್ಯಲನೆಂದ ರವಿಜಗೆ
ಚಿತ್ತವಿಸು ಹನುಮಂತ ಸೂರೆಯುಗೊಂಡ ಮಧುವನವ ॥ ೨೭ ॥

ಕಾಣೆನೀ ಪರಿ ಸೊಕ್ಕಿದರ ನಿ
ಮ್ಮಾಣೆಯೆಂದರೆ ಮೀರಿ ಹೊಯ್ದನು
ಹೂಣೆಹೊಕ್ಕುದು ವನವು ತಳಪಟವಾಯ್ತು ಕಪಿಸೇನೆ ॥
ಕೇಣಿಕೊಂಡುದು ಎನಲು ಹೋ ಹೋ
ಮಾಣು ದೇವರ ಕಾಂಬೆವೆಂದಾ
ಜಾಣನಹ ಸುಗ್ರೀವ ಬಂದನು ರಾಘವನ ಹೊರೆಗೆ ॥ ೨೮ ॥

ಹೊತ್ತ ಹರುಷದಲವನು ವಿಹಿತ ರ
ಘೋತ್ತಮನ ಪದಕೆರಗಿ ರಾಘವ
ಚಿತ್ತವಿಸು ಹನುಮಂತ ದೇವಿಯ ಕಂಡು ಬಂದನೆನೆ ॥
ಮಿಥ್ಯವೆಂದೆನಲರಸ ದಿಟ ದಿಟ
ವಿತ್ತ ಪಯಣವಿದೆನಲು ರವಿಜನು
ಸತ್ಯವೇ ಲೇಸಾಯ್ತು ಕೇಳ್ದೆವು ಹಾ ಮಹಾದೇವ ॥ ೨೯ ॥

ಆರು ಹೇಳಿದರಿವನ ಮುಸುಡ ನ
ದಾರು ತೀದರು ಹನುಮನೆಲ್ಲಿಹ
ಸಾರಿ ಬಂದೀವನವ ಸೂರೆಯನಿತ್ತನೆನೆ ಕೇಳ್ದ ॥
ವೀರ ಹನುವನು ಮೊಗವ ನಿಜಕರ
ವಾರಿಜದಲೊರಸಿದರೆ ದಧಿಮುಖ
ಮಾರಸನ್ನಿಭನಾದ ಬಿನ್ನವಿಸೇನು ಹದನೆಂದ ॥ ೩೦ ॥

ಕಲಹಮೂಲನ ದೇವಿಯರಸಲು
ಕಳುಹಲೇನಹುದವನಲರಸಾ
ಬಲವು ಸಹಿತವೆ ಕಿರಿದುದೂರಕೆ ಹೋಗಿ ಮರಳೀಗ ॥
ಕಳಿತ ವನವನು ಸೂರೆಗೊಂಡನು
ಹೊಲಬನರಿಯನು ನಿಮ್ಮ ಸೀತೆಯ
ನೆಲೆಯನೆಂದೆನೆ ರವಿಜ ಮಾರುತಿ ತಪ್ಪನೆನುತಿರ್ದ ॥ ೩೧ ॥

ಪೊಡವಿಯಲಿ ತುಷದಲ್ಲಿ ನಯವನು
ಬಿಡದೆ ದುರ್ಜನರಲ್ಲಿ ಲೇಸನು
ಸುಡುವ ಮಿಡುಗುರಿಯಲ್ಲಿ ತಂಪನು ಗುಣವನಸತಿಯಲಿ ॥
ಪೊಡವಿಪತಿಯಲಿ ನಂಟನಧಮರ
ನಡುವೆ ಮಾನ್ಯರ ಕೃಪಣರಲಿ ಹೊಂ
ಗೊಡುವ ಮಾತುಗಳುಂಟೆ ದಧಿಮುಖ ಬಲ್ಲನೇ ನಿಜವ ॥ ೩೨ ॥

ಮನದ ಸಿದ್ಧಿ ನಿಮಿತ್ತ ಗಳಿಸಿದ
ಧನ ವಿನಾಶವನೆಣಿಸದವನಂ
ತಿನತನೂಭವ ವನವಿನಾಶವ ಕೇಳಿ ಸೈರಿಸಿದ ॥
ಅನಿಲಜನ ಅಂಗವನು ತೈಲದಿ
ದಿನದಿನಂಪ್ರತಿ ಲೇಪಿಸುತ್ತಿರೆ
ತನುವ ಹೆಡಸಾವರಿಸೆ ದಧಿಮುಖ ಬಲ್ಲನೇ ಅವನ ॥ ೩೩ ॥

ಕೇಳಲಾಯ್ತುಬ್ಬರವು ಬರೆ ಬರೆ
ಬಾಲಗುಡಿಗಳ ಘಂಟೆ ಘಣರವ
ವಾಲಿಸುತ್ತಿರೆ ಹನುಮನಾ ದಶಕೋಟಿ ಪಡೆ ಸಹಿತ ॥
ಹೂಳಿದಾ ಹರುಷವನು ಕೈಯುಲಿ
ಮೇಲೆ ನೆಗಹುವ ತೆರದಿ ನಮಿಸು
ತ್ತೇಳುತೇಳುತ ಕಂಡೆ ಸೀತೆಯನೆನುತ ನುತಿಸಿದನು ॥ ೩೪ ॥

ರಾಮ ಮೇಘಶ್ಯಾಮನುರುಗುಣ
ಧಾಮ ಲೋಕಕ್ಷೇಮ ಸೀತಾ
ರಾಮ ನುತಸುಪ್ರೇಮ ರವಿಕುಲಸೋಮ ನಿಸ್ಸೀಮ ॥
ರಾಮ ಕೌಶಿಕ ಹೋಮ ಮಂಗಳ
ನಾಮ ಭುವನೋದ್ದಾಮ ಭಕ್ತ
ಪ್ರೇಮ ಪುಣ್ಯಸ್ತೋಮ ರಿಪುಕುಲ ಧೂಮ ಶರಣೆಂದ ॥ ೩೫ ॥

ಕಂಡೆ ದೇವಿಯ ದೇವವಂದಿತ
ಕಂಡೆ ಸೀತೆಯ ಭುವನ ಮಾತೆಯ
ಕಂಡೆನೆನ್ನಯ ಮಾತೆಯನು ರಾವಣನ ಲಂಕೆಯಲಿ ॥
ಕಂಡೆ ಚೂಡಾಮಣಿಯನಿತ್ತಳು
ಪುಂಡರೀಕದಳಾಕ್ಷಿಯೆನುತದ
ಕೊಂಡು ರಾಘವಗಿತ್ತು ಕುರುಹನು ಚಿತ್ತವಿಸುಯೆಂದ ॥ ೩೬ ॥

ಜನಪ ಚೂಡಾಮಣಿಯ ಕಾಣುತ
ಮನದಿ ಗಕ್ಕನೆ ಕರಗಿ ಚಿಂತಿಸಿ
ತನು ಬಿರಿದು ಬಿಸುಸುಯಿದು ಹೇಳೈ ಹನುಮ ಸತಿಯಿರವ ॥
ಎನಲು ದೇವರು ನಿಮ್ಮ ನೆನಹಿಂ
ಜನಕಜಾತೆಯ ಜೀವವಿದ್ದುದು
ಜನಪ ಹೇಳುವೆನೇನ ನಿಮ್ಮಗಲಿಕೆಯ ಶೋಕವನು ॥ ೩೭ ॥

ಮಳೆಯ ಚಾತಕಿ ಕಮಲವರ್ಕನ
ಜಲಧಿ ಚಂದ್ರನ ವನ ವಸಂತನ
ನೆಳಸಿ ಬಯಸುವವೋಲು ನಿಮ್ಮನು ಕಾಂಬ ತವಕದಲಿ ॥
ಕಳೆಗಳಡಗಿಯೆ ಕಂದಿ ಕುಂದಿಯೆ
ನಳಿನಮುಖಿ ಬಡವಾಗಿ ನಿಮ್ಮನು
ಹಲುಬುತಿಪ್ಪಳುಯಿರುಳುಹಗಲನವರತ ಬಾಯ್ಬಿಡುತ ॥ ೩೮ ॥

ಜಲವ ತೊಲಗಿದ ಮತ್ಸ್ಯನಂದದಿ
ಹಳೆಯ ಚಿತ್ರದವೋಲು ಬಿಸಿಲೊಳ
ಗೆಳೆಯ ಸಸಿ ಬಳಲಿದ್ದ ಸರಿಯಲಿ ಮೋಡದಿನನಂತೆ ॥
ಅಳಲುತಿಪ್ಪಳು ಬಳಲುತಿಪ್ಪಳು
ಇಳಿವ ಕಂಬನಿಯಿಂದ ತೋದಿಹ
ಮಲಿನವಸ್ತ್ರದಿ ಬಿಟ್ಟಕೇಶದಲಿನ್ನು ಸೈರಿಸಳು ॥ ೩೯ ॥

ನಡುವೆಯಿಪ್ಪತ್ತೇಳು ದಿನಗಳು
ಮಡುವಿನುದಕಕ್ಕಾಗಿ ಹೋಯಿತು
ಕಡಲ ದಾಂಟಿದ ಹನುಮ ಲಂಕೆಯ ನುಂಗುವಳ ಕೊಂದ ॥
ಒಡತಿಗುಂಗುರವಿತ್ತನಕ್ಷನ
ಮಡುಹಿ ವನವನು ಮುರಿದು ಲಂಕೆಯ
ಕಡೆಗೆ ಸುಟ್ಟನುಯೆಂದನಂಗದ ನಿಂದು ಕೈಮುಗಿದು ॥ ೪೦ ॥

ಅಂದು ರಘುಪತಿ ಪಾವನಿಗೆ ಮೆ
ಚ್ಚೆಂದು ಕೊಡುವರೆ ಭುವನ ಸಾಲದು
ಯಿಂದು ಮಾಡಿದ ಸ್ವಾಮಿಕಾರ್ಯಕೆ ಕಂದ ಬಳಲಿದೆಲ ॥
ಒಂದು ವರವನು ಕೊಡುವೆ ಬೇಡೆನೆ
ಮುಂದೆ ಬೇಡುವೆನಿರಲಿ ನಿಮ್ಮಲಿ
ತಂದೆ ನಡೆವುದು ದಂಡು ಲಂಕೆಗೆ ಬೇಗ ನೀವೆಂದ ॥ ೪೧ ॥

ಹಂದೆಯನು ಬಲುವೀರನೆಂದತಿ
ಚಂದನೆಂದು ಕುರೂಪದವನನು
ಬಂದಯನ್ನನು ರತುನ ಮಾಣಿಕ ತಿಲಕ ಸಿರಿಯೆಂದು ॥
ತಂದೆ ಮಕ್ಕಳ ಹೊಗಳಿ ಲಾಲಿಸೆ
ಮುಂದಣವರಿದ ಮೆಚ್ಚುವರೆ ದಿಟ
ತಂದೆ ನಗಿಸದಿರಿಳೆಯ ನಿನ್ನಯ ಘನತೆಗೇನರಿದು ॥ ೪೨ ॥

ಒತ್ತಿ ತಕ್ಕಯಿಸಿದನು ಹನುಮನ
ಮಸ್ತಕದ ಮೇಲಿಟ್ಟನಭಯದ
ಹಸ್ತವನು ಹನಮಯ್ಯ ಬಾಯೆನ್ನಯ್ಯ ಬಾಯೆನುತ ॥
ಮೊತ್ತದಸುರರ ಹಾಹೆದೊಡರನು
ಉತ್ತಮದ ಹಾರವನು ಹನುಮಂ
ಗಿತ್ತು ಭೃತ್ಯರದೇವ ಸುಖಿಯಾಗೆಂದು ಹರಸಿದನು ॥ ೪೩ ॥

ಹೇಳಿದನು ರವಿಜಂಗೆ ರಘುಪತಿ
ಪಾಳೆಯುವನೆತ್ತಿಸಲು ತಂತ
ಮ್ಮಾಳು ಸಹಿತವೆ ಕರಡಿ ಮುಸುಗಳು ನೆರೆದು ಬೊಬ್ಬಿಡಲು ॥
ಘೀಳಿಡಲು ಕಮಠಾಂಕ ಫಣಿ ಕೊರ
ಳೋಳಿ ಕುಸಿದುದು ಪಡೆಯ ಭಾರಕೆ
ಧೂಳಿ ಮುಸಗಿತಜಾಂಡ ಪದಘಟ್ಟಣೆಗೆ ಧರೆ ಬಿರಿಯೆ ॥ ೪೪ ॥

ಹರಿಯುವಾಳೆಯ ಪಯಣ ಸಮಯಕೆ
ಮರುತಜಾಂಗದ ಕೇಳ್ದು ನುಡಿದರು
ಚರಣಗತಿಯಲಿ ನೀವು ನಡೆದರೆ ಭೃತ್ಯರಾವೇಕೆ ॥
ಅರಸನೆನಲಂಗದನ ಲಕ್ಷ್ಮಣ
ಮರುತಪುತ್ರನ ರಾಮನೇರಿದ
ತೆರಳಿದನು ರಘುನಾಥ ನೀಲನು ಪಥವ ಬೆಸುತಿರೆ ॥ ೪೫ ॥

ತೆಂಕದಿಕ್ಕಿಗೆ ನಡೆದುದಾ ಚಲ
ದಂಕ ರಾಮನ ಸೇನೆ ವಹಿಲದಿ
ಲಂಕೆ ಕಾಣಲು ಬಂದುದಬ್ಧಿಯ ತೀರದಲಿ ಕಟಕ ॥
ಬೊಂಕನಾ ಗೂಡಾರ ಗುಡಿಗಳ
ನಂಕದಾಳ್ಗಳು ರಚಿಸೆ ಬಿಟ್ಟುದು
ಪಂಕಜಾಕ್ಷನ ಬೀಡು ರಾಘವನೋಲಗವ ನಿತ್ತ ॥ ೪೬ ॥

ನೆರೆದ ಕಪಿಕುಲ ದೇವಸಂಕುಲ
ವರ ಸುರುದ್ರನು ಜಾಂಬವಂತನು
ಸರಸಿಜಾಸನ ಹನುಮ ಮಾರ್ಗಣ ಲಂಕೆ ತ್ರಿಪುರವೆನೆ ॥
ಕೆರಳಿ ಕಾಲವ ಹಾರುತಿಪ್ಪಾ
ಹೆರನವೋಲಿರುತಾಗ ರಘುಪತಿ
ಶರಣುಜನಸುರಧೇನು ಮಂಗಳವಿತ್ತನೆಲ್ಲರಿಗೆ ॥ ೪೭ ॥

ವನಿತೆಯೊಳು ಕಮಲಾರಿಯಿದ್ದನು
ಕನಕ ಮನ್ಮಥನೆಡೆಯೊಳಿದ್ದನು
ಧನುವಿನೊಳಗಿನತನುಜನಿದ್ದನು ಭಗಣ ಚಕ್ರದಲಿ ॥
ಇನನು ಪೂರ್ವಾರ್ಧವನು ಕಳದಿರೆ
ಜನಪ ರಾಘವ ಸಕಲ ಸೇನಾ
ವನಧಿಯೊಳು ವನಧೀತಟಾಕದಲಿರ್ದ ಸುಖದಿಂದ ॥ ೪೮ ॥

ಬಂದು ಮಾರುತಿ ಹದನ ಹೇಳಿದ
ಸಿಂಧು ತೀರವನರಸನೈದಿದ
ಸಂಧಿ ಮುಗಿದುದು ರಾಮಣೀಯಕ ರಾಮ ಕಥೆಯೊಳಗೆ ॥
ಬಂಧವೆಳೇಳಾಯ್ತು ಕವಿತಾ
ಬಂಧುರಕೆ ನೆರೆವಂತೆ ಸುಜನರ
ಬಂಧು ರಚಿಸಿದನೊಲಿದು ವಾಲ್ಮೀಕಿ ಮುನಿರಾಯ ॥ ೪೯ ॥

## ೧೪ನೇ ಸಂಧಿ

ಪಲ್ಲ ॥ ಓಡುತಿಪ್ಪರನಟ್ಟುವಂದದಿ
ಮಾಡಿದನು ದಶಕಂಠ ಸುಕೃತವ
ನೂಡಿ ಸುಖವನು ದೂಡಿಬಿಟ್ಟನು ತಮ್ಮ ವಿಭಿಷಣನ ॥

ಪದ್ಯ ॥ ಅತ್ತ ಲಂಕಾಧಿಪನು ಖತಿಯಲಿ
ಮೃತ್ಯು ಮೈಮುರಿವಂತೆ ದೆಸೆ ದೆಸೆ
ಗತ್ತಲಿತ್ತಲು ನೋಡಿ ಘರ್ಜಿಸಿ ಝಡಿದು ಝಂಕಿಸುತ ॥
ತೆತ್ತಿಗರು ನೀವಾಗಿ ಅನಲನು
ತುತ್ತುಗೊಂಬುದ ನೋಳ್ಪನೈಸೆಯೆ
ನುತ್ತ ರಾವಣನೀಕ್ಷಿಸಿದ ಕಡು ನೊಂದು ಸುರಪತಿಯ ॥ ೧ ॥

ಅಸುರ ನೋಡಿದಡರಿತು ಸುರಪತಿ
ಬೆಸಸಿದಡೆ ಬಲುಮೇಘವಾಕ್ಷಣ
ವೊಸೆದು ಬಹಳದ ಮಳೆಯ ಸುರಿಯಲು ಘೋರನುರಿ ಸಂದೆ ॥
ವಸುಧೆ ಬಿಸಿಯಾರಿತ್ತು ದೈತ್ಯರಿ
ಗೊಸೆದು ಕಾಣಿಕೆಯಿತ್ತರಮರರು
ಹೊಸ ದುಕೂಲ ವಿಭೂಷಣಂಗಳನಂಜಿ ತಮತಮಗೆ ॥ ೨ ॥

ಮತ್ತೆ ರಚಿಸಿದನಾ ಮಯಾಸುರ
ಹತ್ತುತಲೆಯವನಾಜ್ಞೆಯಿಂದವೆ
ಮುತ್ತು ಮಾಣಿಕವೆಸೆವ ಲಂಕೆಯ ಚಿತ್ರಗತಿಗಳಲಿ ॥
ಮುತ್ತಿನಾರತಿ ಕಲಶ ಕನ್ನಡಿ
ವಿಸ್ತರದಿ ಮೆರೆದಿಪ್ಪ ಪುರವ ನ
ಗುತ್ತ ರಾವಣ ಹೊಗಲು ಹುಟ್ಟಿತು ಕೇಡಿನುತ್ಪಾತ ॥ ೩ ॥

ಪುರದಿ ಜೇನಿಡೆ ರತ್ನಗಂಬದಿ
ಸುರಿಯೆ ನೆತ್ತರು ತುರಗ ಬಾಲದಿ
ಉರಿ ಚಡಾಳಿಸೆ ಹಳಚಿದವು ದಿವ್ಯಾಯುಧಾನೀಕ ॥
ಅರಮನೆಯ ಶಿಖರದಲಿ ಕೌಶಿಕ
ನೆರೆದು ಕೂಗಲು ಕಾಗೆ ಗೂಡಿಗೆ
ಹರಿದು ಬಂದರಮನೆಯ ಹೊಕ್ಕವು ಕ್ರೋಢ ಶತಕಗಳು ॥ ೪ ॥

ನೆಲನು ಬಾಯ್ಬಿಡೆ ಹಗಲು ತಾರಗೆ
ಪೊಳೆಯೆ ಬೆವತುವು ದಿವ್ಯಲಿಂಗಗ
ಳಳುಕಿ ಪರ್ವತದಂತೆ ಬಿದ್ದುದು ಪೀಠ ಹೊಗೆಮಸಗಿ ॥
ಖಳನು ಬೇಡಿದನೀವ ಕುಂಭಿನಿ
ಅಳಲಿ ಬೆದರಲು ಗುಡುಗು ಬಿಡದಲೆ
ಮೊಳಗೆ ಹುತ್ತಿಡಲೊರಳೆ ಮಾಳದ ಬೆಕ್ಕುವೊರಲುತಿರೆ ॥ ೫ ॥

ಖಳನು ತನ್ನೀರೈದು ತಲೆಗಳ
ನೆಳಲು ಕಾಣದೆ ಚಿಂತೆಯಿಂದಿರೆ
ಖಳನ ಕೇಡಿನ ಕನಸಕಂಡಳು ತಾಯಿ ಕೈಕೇಸಿ ॥
ಅಳಲಿ ಕರೆಸಿಯೆ ಕಿರಿಯ ತನಯಂ
ಗಳುತ ಹೇಳಿದಳಿರುಳು ದೈತ್ಯನ
ಲಲನೆ ಕಿವಿಯೋಲೆಗಳು ಕಳಚಿದ ಕಂಡೆನೆಲೆ ಮಗನೇ ॥ ೬ ॥

ಆ ವಿಭೀಷಣ ಕೇಳಿ ಚಿಂತಿಸಿ
ನಾವು ಮಾಡುವುದೇನು ಶಿವ ಶಿವ
ಸಾವು ಬಪ್ಪುದನರಿಯನಣ್ಣನು ಸತಿಗೆ ಮರುಳಾಗಿ ॥
ವೋ ವೋ ಕಪಿಗಳ ಭಾರ ಸಹಿತವೆ
ದೇವನಾ ತಡಿಗೈದಿದನು ಗಡ
ಏವೆನಮ್ಮನು ಮುಟ್ಟಿಬುದ್ಧಿಯ ಹೇಳು ನೀ ಹೋಗಿ ॥ ೭ ॥

ಹೇಳಿ ಸಾಮದಿ ಬಿಡಿಸು ಸೀತೆಯ
ಕೇಳದಿದ್ದರೆ ಬಳಿಕುಪಾಯವ
ನಾಳಿಕೊಂಬೆವುಯೆನೆ ಹಸಾದವ ಪಡೆದು ಹಾಯ್ಕಿ ನಡೆತರಲು ॥
ಸಾಲು ಸಂದಣಿ ನೆಲನನುಗ್ಗಡಿ
ಪಾಳು ನಾಹೋಯೆನಲು ರಕ್ಕಸ
ಜಾಲ ಬೆನ್ನಲಿ ಡಬ್ಬಿಸಿದ ಕೈದುಗಳಲೈದಿದನು ॥ ೮ ॥

ಎನ್ನ ಸಿರಿ ಬಾರೈ ವಿಭೀಷಣ
ಎನ್ನ ಮದಮುರಿಯಾನೆ ಬಾ ಸಂ
ಪನ್ನ ಸದುಗುಣಿ ಬಾರ ಸೀತಿಯ ನಿಪುಣ ಸೀ ಬಾರ ॥
ಮನ್ನಣೆಯ ಮಾಣಿಕ್ಯ ಬಾ ಈ
ಹೊನ್ನ ಸಿಂಹಾಸನವು ನೋಡಲು
ನಿನ್ನದೈಸಲೆಯೆನುತ ಕೆಲಸಾರ್ದವನನಪ್ಪಿದನು ॥ ೯ ॥

ಅನುಜ ಲೇಸನು ತಾರದುಳಿಯನು
ಯೆನುತಲರ್ತಿಯಲೇನು ಬಂದ್ಯೆ
ಮನೆಗೆ ಸೀತೆಯ ತಿಳುಹಿ ತಂದರೆ ನಿನ್ನ ತನುಜೆಯರು ॥
ಮನುಜನುಳಿವಿನ ಮಂತ್ರ ಸಾರವ
ನೆನೆಯದಿರು ಝಡಿತೆಯಲಿ ಹೇಳಿಂ
ದೆನೆಗೆ ಸುಖವನು ಸೂಚಿಸುತ್ತಿರೆ ನಿನ್ನ ಬರವೆಂದ ॥ ೧೦ ॥

ಪರಿಮಿತವನುಸುರೆನಲು ದಶಗಳ
ಸರಿದ ಪಟ್ಟದ ರಾಣಿ ಸಹಿತವೆ
ಇರುಳು ತಮ್ಮನ ಮನೆಗೆ ಮಂತ್ರಾಲೋಚನೆಗೆ ಹೋಗಲು ॥
ಹಿರಿಯವನೆ ಬಿನ್ನವಿಪೆ ನಭಯವ
ಕರುಣಿಸೆಂದರೆ ಹೇಳು ಹೇಳೆನೆ
ಕರೆದು ಕಳುಹಿದಳವ್ವೆ ಹರಿದುತ್ಪಾತಗಳ ಕಂಡು ॥ ೧೧ ॥

ನಾಕರಿಪು ನೀ ನಡೆದುದೇ ಪಥ
ಬೇಕು ಬೇಡೆಂಬವರ ಕಾಣೆನು
ಈಕೆಯೊಬ್ಬಳೆ ಬ್ರಹ್ಮಸೃಷ್ಟಿಗೆ ರೂಪುವುಳ್ಳವಳೇ ॥
ನಾಕೆರಡು ಕಣೆಯದಲಿ ಹೇಳಿದೊ
ಡಾಕೆ ನಿನ್ನನುವೊಲ್ಲಳಿನ್ನಾ
ಶೋಕಮೂರ್ತಿಯಮಂಗಲೆಯ ಪುರದಿಂದ ಹೊರವಡಿಸು ॥ ೧೨ ॥

ಪರಸತಿಯ ಸಂಯೋಗ ಮೊದಲೇ
ನರಕ ಸಾಧನ ಮೇಲೆ ರಾಕ್ಷಸ
ನರರಿಗೆಂತೈ ಸರಸ ಮೋಳವು ನೇಹ ಘಟಿಸುವುದು ॥
ನರನು ಬಲ್ಲಿದನಾಕೆಯೊಲ್ಲಳು
ನೆರೆಯಕೊಳ್ಳದು ಶಾಪ ಬಲುಹಿಂ
ತಿರಲು ಹೊರವಡಿಸಳುವ ಸತಿಯನು ಪುರವು ಹಾಳಹುದು ॥ ೧೩ ॥

ನೀತಿವಿದ ನೀನೇಕೆ ಮರುಳಹೆ
ಸೀತೆಯಂತಸ್ತವನು ಬಲ್ಲೆನು
ಭೂತಳೇಶನ ಪದವ ಕಾಂಬನ್ನವರ ಡೊಂಬಿಯಿದು ॥
ಮಾತನವಧರಿಸೆನ್ನ ಮಕ್ಕಳು
ಕೂತು ಹೇಳಲು ಬಸುರ ಬಡಿವಳು
ಪ್ರೀತಿಯಿಲ್ಲೆಲೆಯಣ್ಣ ಪರಸತಿ ಜೇಟ ಮರಣಗತಿ ॥ ೧೪ ॥

ವೀರ ಶುಂಭನಿಶುಂಭರಾಸುರ
ನಾರಿಗೋಸುಗ ಕಾದಿ ಸಾಯರೆ
ಜಾರತನದಲಿ ಸುರಪ ಧರಿಸನೆ ನಾವಿರಾಲಿಗಳ ॥
ವೀರ ಭಸ್ಮಾಸುರನು ಕೆಡನೆ ಸು
ರಾರಿ ಸುಧೆಯನು ನೀಗಿ ಕಳೆಯನೆ
ನಾರಿ ಸಾರ್ದರ ಮಾರಿ ನರಕದ ದಾರಿ ಲಯಕಾರಿ ॥ ೧೫ ॥

ತರಣಿಕುಲಪತಿ ಬಂದುಬಿಟ್ಟನು
ಶರಧಿಯಾ ತಡಿಯಲ್ಲಿ ನೆರೆದಿಹ
ತರುಚರೇಶ್ವರ ಭಟರ ವೀರತೆ ಬಿರಿಸು ತಿಳಿಯೆನಲು ॥
ಮರುಳೆ ರಕ್ಕಸರಂಜುವರೆ ಘಡ
ನರರಿಗೆತ್ತಣ ಹೇಡಿಗರವಿದು
ಬೆರಸಿ ನಿನ್ನನು ಹಿಡಿಯಿತೆಂದನು ನಕ್ಕ ಗಹಗಹಿಸಿ ॥ ೧೬ ॥

ನರನೆ ದಿಟವಾ ರಾಘವೇಶ್ವರ
ಹರನ ಬಿಲ್ಲನು ಮುರಿದು ತಾಟಕಿ
ಯುರವ ಬಗಿದನು ಕೋಟಿ ದೈತ್ಯರು ನಹಿತ ಚಿಕ್ಕಂದು ॥
ಸುರರ ಗೆಲಿದಿಹೆ ನೀನು ನಿನ್ನನು
ಸರಕುಮಾಡನು ವೀರಬಾಲಿಯ
ಹರಣಗೊಂಡನು ರಾಮ ಮನುಜನೆ ಬಿಡು ಮಹಾಸತಿಯ ॥ ೧೭ ॥

ಒಡೆದು ಬಸುರನು ಕಿಚ್ಚನೊಟ್ಟಿದೆ
ಕಡಿದು ತಲೆಗಳ ಬೇಳ್ದೆ ಮಂತ್ರವ
ನೊಡನೆ ತಲೆಗಳು ಹೇಳೆ ಕರುಳಿನ ಚರುವ ಬೇಳಿದೆನು ॥
ಮಿಡಿದು ಕೈದಂಡೆಯ ಕಪಾಲವ
ನುಡಿಸಿ ನರಗಳ ತಂತ್ರಿಯಿಂದವೆ
ಮೃಡನ ಮೆಚ್ಚಿಸಿ ಚಂದ್ರಹಾಸವ ಪಡೆದುದನು ಮರೆದಾ ॥ ೧೮ ॥

ಆಡಬೇಡದ ಬಲ್ಲೆ ವರವನು
ಹಾಡಿ ಬೇಡಿದೊಡಿಲ್ಲಿ ಹಾಯದು
ಕೋಡ ಕೊರೆವನು ರಘುಜ ತತ್ತರದರಿವನಾಂತವರ ॥
ನೂಡಿ ಬಾಲದಿ ಸುಟ್ಟಿತೊಂದೇ
ಕೋಡಗವು ಪುರವಿದನು ಕಂಡಿ
ನ್ನಾಡಬಾರದು ಪರಸತಿಗೆ ಮರುಳಾದೆ ನೀನೆಂದ ॥ ೧೯ ॥

ಮರುಳು ಮರ್ಕಟನೂರ ಸುಟ್ಟರೆ
ಹಿರಿದು ವೀರವೆಯೆನಲು ಮಾಣಲಿ
ಧುರದಿ ನಿನ್ನನು ಕಾರ್ತವೀರ್ಯನು ಹಿಂದೆ ಸೆರೆಯಿಡಲು ॥
ಸರಸಿಜಾಸನ ಹಲವು ಕಾಲಕೆ
ಕರುಣದಿಂದವೆ ಬಂದು ಭೂಪನ
ಹರಸಿ ಮೊಮ್ಮನ ಬಿಡಲು ಬೇಹುದು ನಮಗೆ ನೀನೆಂದ ॥ ೨೦ ॥

ಎನಲು ಬಿಡನೇ ಕಾರ್ತವೀರ್ಯನು
ನೆನಹದೇನಕಟಕಟ ಆತನ
ತನುವ ತತ್ತರದರಿದ ಕೊಡಲಿಯು ರಾಮನವ ಪಿಡಿದ ॥
ಧನುವ ಕೊಂಡನು ರಾಮ ಮನುಜನೆ
ಜನಕಜೆಯ ನೀ ಕೊಟ್ಟು ಕಂಡರೆ
ಇನಕುಲೇಶ್ವರ ಕಾವ ನಮ್ಮನು ಸತಿಗೆ ಸಾಯದಿರು ॥ ೨೧

ಹರಿಗೆ ಕಪಟವನೆಸಗಿ ಕಿವಿ ಮೂ
ಗರಿದುಹೋಯಿತು ನಿನ್ನ ತಂಗಿಗೆ
ಮರಣವಾಯಿತು ಪಾಪ ಮಾರೀಚಂಗೆ ಸತಿವಿಡಿದು ॥
ಅರಿ ಮಧುವ ನೆರೆದಲ್ಲಿ ನಂಜನು
ಬೆರೆಸಲೇತಕೆ ಪಾಪಕೆಳಸಲು
ವರವು ಸರಿವುದು ಮಾಡಲಳಿವುಂಟಣ್ಣ ಬಿಡು ಸತಿಯ ॥ ೨೨

ಮರಣಕಂಗೈಸದಿರು ಹೆಚ್ಚಿನ
ಸಿರಿಯ ನೀಗದಿರೆಲವೊ ಬಹುಮುಖ
ಪುರಿದು ಬಾಯಲಿ ಮಣ್ಣಹೊಯ್ಯದಿರಣ್ಣ ನುಡಿಗೇಳು ॥
ಪರಸತಿಯ ಬೇಟದಲಿ ತಲೆಗಳ
ನರಿಸಿಕೊಳ್ಳದಿರೆಲವೊ ಮತ್ತಯ
ಸರಸಿಜಾಸನ ನಮ್ಮ ಹಿರಿಯರ ಹೆಸರ ಕೆಡಿಸದಿರು ॥ ೨೩

ಇನಿತು ನೀತಿಯ ಕೇಳಿ ಮನದಲಿ
ನೆನೆಯನಕಟಾ ಪಾಪಿ ರಕ್ಕಸ
ನೆನಿತು ಮೂರ್ಖನೊ ಶಿವ ಮಹಾದೇವೆನಿತು ತಾಮಸನೊ ॥
ಜನನಿಗೆನಗತ್ತಿಗೆಗೆ ನಿನ್ನಯ
ತನುಜರಿಗೆ ಮತವಲ್ಲ ಬಲ್ಲೆನು
ಮುನಿಯದಿರು ರಾಮಂಗೆ ಮಲೆತರೆ ಮರಣವಹುದೆಂದ ॥ ೨೪ ॥

ಗಡಹುತಿಹೆ ರಾಘವನು ಹಲಬರ
ಕೆಡಹಿದನುಯೆಂದೆಲವೊ ಸೀತೆಯ
ಮುಡಿಯ ಹಿಡಿದೆಳತಂದೆನವನಂದೆತ್ತಲೋಡಿದನೊ ॥
ಬಡ ಗೊರವ ನೀನಾಗಿ ತಿರಿವು
ತ್ತೊಡೆಯನಿಲ್ಲದ ಸಮಯವರಿತಾ
ಹಿಡಿದು ತಹ ನಾಚಿಕೆಯು ಮೂಜಗವರಿತುದಂತಿರಲಿ ॥ ೨೫ ॥

ಸಿರಿಗೆ ಮೋಹಿತನಾಗಿ ಲಕ್ಷ್ಮಣ
ಬರೆದ ಗೆರೆಯನು ದಾಂಟಲಾರದೆ
ತರುಣಿ ಭಿಕ್ಷಾಂದೇಹಿಯೆಂದರೆ ದೇವಿ ಕರುಣಿಸುತ ॥
ಹಿರಿಯರೆಂದೇ ಬಗೆದು ನೀಡಲು
ಸರಸಿಜಾಕ್ಷಿಯ ಕದ್ದುತಂದಾ
ಬಿರಿದು ಬೇಡೆಡಗಾಲನುಸುಳಿದೆ ಲಜ್ಜೆ ನಿನಗುಂಟೆ ॥ ೨೬ ॥

ಎಲವೊ ನಿನ್ನಂತೊಬ್ಬ ಶ್ರುತಿಗಳ
ನೆಳೆವ ತಮನೆಂಬವನ ಸೀಳಿದ
ಜಲಧಿ ಘಟ ಕಡೆಗೋಲು ಮಂದರವಾಗೆ ಸುಧೆಗಾಗಿ ॥
ಸುಳಿದು ಕಡೆವಾಗದ್ರಿಯಾಳ್ದರೆ
ತಳೆದು ಕೂರುಮನಾಗಿ ಧರಿಸಿಯೆ
ಕೆಲಸ ಸಫಲವ ಮಾಡಿ ಅಮೃತವ ನೆರೆದನಮರರಿಗೆ ॥ ೨೭ ॥

ರೂಢಿಯನು ಕದ್ದೊಯ್ದ ದನುಜನ
ದಾಡೆಯಿಂದಲಿ ಸೀಳಿಯವನಿಯ
ಕೂಡೆ ನೆಗಹಿದ ಸೀಕ್ರೆಯುರಸನುದಾರ ವಾರಾಹ ॥
ಗಾಢ ಭುಜನಪ್ರತಿ ಹಿರಣ್ಯಕ
ಕೇಡುಗಾಲಕೆ ಮಗನ ಕೊಲಲಿರೆ
ಗೂಢ ನಖದಲಿ ಸೀಳ್ದ ನರಹರಿಯಾಗಿ ದಾನವನ ॥ ೨೮ ॥

ಅವನಲಾ ಬಲುವೀರನಾತನ
ನಿವನಲಾ ಕೊಂದವನು ತಪ್ಪದು
ನಮಗೆ ಸರಿಯೆನಲಾತ ನಾಯನೆ ನಖದ ಮೊನೆಯುಲೆನೆ ॥
ಅವನು ಸರಿ ನಿನಗಲ್ಲ ಲಕ್ಷ್ಮೀ
ಯುವತಿ ತೊಡೆಯಿಂದಗಲದಿಪ್ಪಳು
ಜವನು ಕಂಡವ ಬಿದ್ದರೇನಹುದೇದ್ದರೆನಹುದು ॥ ೨೯ ॥

ಮುನಿಗೆ ವಾಮನನಾಗಿ ಜನಿಸಿದ
ದನುಜ ಭೂಮಿಯನೆಳೆದುಕೊಂಡನು
ಕನಲಿ ತರಿದನು ಕಾರ್ತವೀರ್ಯಾದ್ಯಖಿಳ ಭೂಭುಜರ ॥
ಎನಿತು ನಿನ್ನಾಯುಷ್ಯ ರೋಮಶ
ಮುನಿಗೆ ನೂರು ಭವಂಗಳಾದರೆ
ಮನುಜಗೊಂದೇ ನಿಮಿಷ ಹೋರದಿರಣ್ಣ ಬಿಡು ಸತಿಯು ॥ ೩೦ ॥

ಅವನು ನಮ್ಮೊ ಬಲವನೆಲ್ಲವ
ಸವರಿ ತನ್ನಯ ಮಡದಿಯೆನಿಸುವ
ಅವನಿಜಾತೆಯು ಸೆರೆಯು ಬಿಡಿಸದೆ ಮಾಣ ಕೇಳುವುದು ॥
ಅವನ ಸತಿ ನಿನಗಲ್ಲ ಲಕ್ಷ್ಮೀ
ಧವನು ಪಾಸಟಿಯಲ್ಲ ಬವರವು
ಅವನೊಡನೆ ಲೇಸಲ್ಲ ಸತಿಯನು ಬಿಟ್ಟು ಕಳುಹೆಂದ ॥ ೩೧ ॥

ಹರನು ಬೇಡಿದೊಡೀವನೆಂದರೆ
ಮರುಳುಗೊಳ್ಳದಿರಣ್ಣ ರಾಮನ
ಪರಮಪಾವನ ಮಂತ್ರ ಪಾರ್ವತಿ ದೇವಿಗನವರತ ॥
ಕೊರಳುಗಡಿದರೆ ಮೂಡುತಿಹುದೆಂ
ದಿರದಿರೈ ಹರಿಬಾಣ ತಲೆಗಳ
ನರಿಯು ಹಕ್ಕಲ ಹಾದಿ ನಿನಗಹುದಕಟ ತಿಳಿಯೆಂದ ॥ ೩೨ ॥

ಓದಿ ಕೇಕಯನೆಂಬವನು ಮರು
ಳಾದ ಗಾದೆಯು ಮಾಡದೆಲವೋ
ವೇದ ಶಾಸ್ತ್ರವನೋದಿ ಪರಸತಿಗಕಟ ಮರುಳಾಗಿ ॥
ಆ ದಶಾನನ ಕಡೆಗೆ ಶಿವ ಶಿವ
ಹಾದರದಲಸುವಳಿದನೆಂಬರು
ಮೇದಿನಿಗೆ ನಗೆಗೆಡೆಯ ಮಾಡದಿರಣ್ಣ ಬೇಡುವೆನು ॥ ೩೩ ॥

ಎಲವೊ ಬೊಗಳದೆ ಸುಮ್ಮನಿರು ನೀ
ಹಲವು ಮಾತೇನಿನ್ನು ಸೈರಿಸೆ
ಗಳಹುತನವೆನಗಾಗದೀಗಲೆ ಬಾಯ ಸೀಳಿಸುವೆ ॥
ಹೊಳಲು ಬೇವಂದಿವನ ಮಂದಿರ
ವುಳಿದುದಂದೇ ಅರಿತೆ ನಿನ್ನಯ
ಹುಳುಕನೆಲವೋ ನಿನ್ನ ರಾಮನ ಕೊಂಡು ಬಾಯೆಂಬೆ ॥ ೩೪ ॥

ನುಡಿದು ಕಡ್ಡಿಯ ಹಿಡಿದು ಸೀಕುಲ
ಗೊಡಲಿಗಾವೆನೆ ಚಂದ್ರಹಾಸವ
ಝಡಿದು ಖಳ ಮುಂದಲೆಗೆ ಹಾಯ್ದರೆ ಕರದ ಚಂದ್ರಾಸ ॥
ಹಿಡಿಹಿಡಿಯೆ ಹಾರಿತ್ತು ರಾವಣ
ನಡಸಿ ತುಳಿದಡಗಲಿಪ ಮಾನ್ಯರ
ಬಡಿದು ಸದೆದರೆ ಗೋಳುಗುಟ್ಟಿತು ದನುಜನಾಸ್ಥಾನ ॥ ೩೫ ॥

ಹೊಡೆದೆಳೆದು ಕೊಲುತಿರಲು ತಮ್ಮನ
ಝಡಿಯುವರೆ ಗಡ ಮಂತ್ರವಲ್ಲಿದು
ಬಿಡಿಯೆನುತ್ತಡಹಾಯ್ದು ಬಿಡಿಸಿದಳವನ ಹಿರಿಯ ಸತಿ ॥
ಕಡೆಗೆ ಭಾಗ್ಯವ ನೂಕುವಂದದಿ
ಹಿಡಿದು ನೂಕಲು ಸುರಿವ ಕಂಬನಿ
ಗಡಲೊಳಾಳುತ ಬಂದು ತಾಯಿಗೆ ನಮಿಸಿ ಮೊರೆಯಿಟ್ಟ ॥ ೩೬ ॥

ಬಳಲಿ ಬಿರಿವೆದೆ ತೆಕ್ಕೆವಳ್ಳಿಯ
ಲಲಘುಮತಿ ಬಿನ್ನವಿಸಲಾರದೆ
ಅಳಲುತಿರೆ ಪರಿವಾರ ಹೇಳಿತು ನಡೆದ ಕಥನವನು ॥
ಎಲೆಲೆ ಸೊಕ್ಕಿದ ಪಾಪಿ ದೈತ್ಯನ
ಬಳಿಗೆ ಮಗನನು ಕಳುಹಿಕೊಂಡೆನು
ಅಳಲಲೇಕವಿಚಾರ ತನ್ನದೆನುತ್ತ ಮರುಗಿದಳು ॥ ೩೭ ॥

ಹೇಳಿದೆನು ಬಿಡಹೇಳಿ ಸೀತೆಯ
ಕೇಳ ತಾಸೀ ನಾಡೊಳಿದ್ದರೆ
ಸೀಳಿ ಹೂಳುವೆ ನಿನ್ನ ರಾಮನ ಕಾಣು ಹೋಗೆಂದ ॥
ಖೂಳ ಕೊಲುವಡೆಗೊಮ್ಮೆ ಬದುಕಿದೆ
ಬೀಳುಗೊಂಡುದು ಚಂದ್ರಹಾಸವು
ಕೇಳವನ ಪುರುವಾಳು ಸೇರದು ನನಗೆ ಗತಿಯೇನು ॥ ೩೮ ॥

ಮೂರು ಕಡೆಯಲಿ ಕೊಲಲು ನೆಗಹಲು
ಹಾರಿತಾ ಚಂದ್ರಾಸವತ್ತಲೆ
ನಾರಿ ಸೀತೆಗೆ ನನಗೆ ಹಿಂದೆ ಜಟಾಯುವೆಂಬವಗೆ ॥
ಮೂರು ಜಾವವು ಸಂದುದಿರುಳಿನೆ
ಬೇರೆ ಬುದ್ಧಿಯ ಕಾಣೆ ರಾಮನು
ತೋರಿದಂತಿರು ಮಗನೆ ಅಂಜಲಿಯೊಡ್ಡಿ ಬದುಕುವುದು ॥ ೩೯ ॥

ಹಗೆಯ ತಮ್ಮನು ಬಂದನೀತನ
ಬಿಗಿವುದೆಂಬನೊ ಮೇಣು ತಾಮರೆ
ಮೊಗಲು ಬಂದನ ಕಾವೆನೆಂಬನೊ ನೆರೆದ ಭಟರೆನಲು ॥
ಹೊಗುವಡನಿಲಜ ಸಲುಗೆವಂತನು
ಮಗನೆ ಸೇರುವುದವನ ಹೊಗಳಿದು
ಬಗೆವೊಡಮೃತಾಬ್ಧಿಯಲಿ ಬಿದ್ದವನಳಿವನೇ ಹೋಗು ॥ ೪೦ ॥

ನೆಲವನಿತ್ತಾ ಋಣವು ಹರಿಯನು
ಬಲಿಯ ಬಾಗಿಲ ಕಾಯಲಿರಿಸಿತು
ಕಳೆಯಲಾರನೆ ನಿನ್ನ ಋಣವನು ತನುವನೊಪ್ಪಿಸಲು ॥
ಹಲವು ಕಪ್ಪಡಿಗಳು ನಿಶಾಂತವ
ಕಳೆಯೆ ದೇಗುಲದೆಡೆಗೆ ಹರಿಯುವೆ
ತಿಳಿದುದೆನಗೀ ಮಾಯೆ ಮಗನವನಲ್ಲ ಬದುಕುವುದು ॥ ೪೧ ॥

ಹಲವು ಯಾಗವ ಮಾಡಿ ಬಹು ವಿಧ
ಫಲವ ಕಾಂಕ್ಷಿಸಿ ಮೌನಮಂತ್ರದ
ಬಲೆಗೆ ಸಿಕ್ಕುತ ತರ್ಕಮಾರ್ಗದಿ ಸತ್ತು ಬೇಸತ್ತು ॥
ಸುಲಭ ದೈವವನೊಲಿಸಲಾರದೆ
ಬಳಲುತಿದೆ ಮುನಿಜಾಲ ಮುಕುತಿಯ
ನೆಲೆಯ ಕೊಡದೇ ನಾಮವಾತನ ಹೊದ್ದಿ ಬದುಕುವುದು ॥ ೪೨ ॥

ಪುರುಷರರ್ಥಿಯು ಮೇಲು ತನ್ನಯ
ಹೊರೆಯ ತನ್ನಂತಿರ್ಪ ಸಚಿವರ
ವೆರಸಿ ಉತ್ತಮ ರತುನವೈದನು ಕೊಂಡು ಪುರದಿಂದ ॥
ಉರಿಯ ಮನೆಯೊಳಗಿಪ್ಪ ರತ್ನವ
ಹರಕೆಗುರಿಯೊಗಿಪ್ಪ ಪಶುವನು
ಭರದಿ ತೆಗೆವಂತಾಯ್ತು ತಾಯಿಗೆ ನಮಿಸಿ ಹೊರವಂಟ ॥ ೪೩ ॥

ದಿನಪನುದಯಾಭ್ಯುದಯವಾಗಲು
ಜನಕಜಾಪತಿಯುಪ್ಪವಡಿಸಿದ
ವಿದಿತ ಸಂಧ್ಯಾವಿಧಿ ಮಹೇಶ್ವರ ಪೂಜೆಗೈವುತಿರೆ ॥
ದನುಜನೊಂದು ವಿಮಾನದಿಂದವೆ
ವನಧಿಯಾತಡಿಗೈದಿ ನೆರೆದಿಹ
ವನಚಗಂಗಳು ರತ್ನ ದೀಧಿತಿ ಕಂಡು ಬೆರಗಾಯ್ತು ॥ ೪೪ ॥

ತೊಡಿಗೆ ತುಳಸೀ ದಂಡೆ ಕೊರಳಲಿ
ಬೆಡಗು ಬಾಯಲಿ ರಾಮ ನಾಮವ
ನುಡಿವುತೈತರೆ ಕಂಡು ಹಾಯ್ದರು ತರಳ ಮರ್ಕಟರು ॥
ಹಿಡಿಹಿಡಿಯೊ ರಕ್ಕಸನ ಬಿಡದಿರು
ಕೆಡೆಹೊ ಕಡಿ ಕಡಿ ಹೇರಿಗನನೆಂ
ದಡಸಿ ಮುತ್ತಿತು ನಾಕುಕಡೆಯಲಿ ಮಾಣಿ ಮರ್ಕಟರು ॥ ೪೫ ॥

ಹರಿ ಮುಕುಂದ ಮುರಾರಿ ಲಕ್ಷ್ಮೀ
ಧರ ನೃಕೇಸರಿ ವಿಶ್ವತೋಮುಖ
ಉರಗಶಯನ ವಿಕುಂಠ ವಿಶ್ವಂಭರ ಜನಾರ್ದನನೆ ॥
ಧರಣಿಧರಗೋವಿಂದ ಕರುಣಾ
ಕರ ಮುಕುಂದ ಮುನಿಪ್ರಿಯಾರ್ಚಿತ
ಶರಣು ಶರಣೆನುತಿರಲು ವಿಸ್ಮಯವಾಯ್ತು ಕಪಿ ಕುಲಕೆ ॥ ೪೬ ॥

ಹರಿಯೆ ಕರುಣಿಸು ಶರಣು ಭಕ್ತರ
ಹರಿಯೆ ಕರುಣಿಸು ಭೃತ್ಯವರ್ಗೋ
ದ್ಧರಿಯೆ ಕರುಣಿಸು ನಿನ್ನ ನೆನೆವರ ನೆನಹು ಘನ ನಿನಗೆ ॥
ತರುಚರರು ಕೊಲುತೈದರೆನ್ನನು
ತರಣಿಕುಲ ಪೊರೆಯೋ ಎನುತ್ತಿರೆ
ಹಿರಿದು ಶಂಕಿಸಿ ಕೇಳಿದರು ಹೊಲಬುಂಟೆ ನಿನಗೆಂದು ॥ ೪೭ ॥

ಹನುಮನಾಳುಗಳಾವು ಕೊಲ್ಲದಿ
ರೆನಲು ಕೇಳುವೆವೆಂದು ಕೆಲರೆನೆ
ಹನುಮನೆಲ್ಲಿವನೆಲ್ಲಿ ಕಪಟವು ಕೊಲ್ಲು ತಿವಿಯೆನಲು ॥
ಹನುಮನೆಡೆಗೊಯ್ದೆನ್ನ ಕೊಲುವುದು
ಯೆನಲು ಮಾರುತಿಯೆಡೆಗೆ ಹರಿದರು
ಹನುಮ ಬಿನ್ನಹ ದನುಜರುಂಟೇ ನಿಮ್ಮ ಕೆಳಗೆನಲು ॥ ೪೮ ॥

ಹನುಮ ಶಂಕಿಸಿ ತಿಳಿಯಲರಿಯದೆ
ಮನದಿ ನೋಡುವೆನೆನುತ ಬಂದನು
ದನುಜ ಬಹುರಾಹುಗಳ ನಡುವಣ ಶಶಿಯವೋಲಿರಲು ॥
ನೆನೆವ ಕಂಬನಿಯಿಂದ ವಿಭಿಷಣ
ಹನುಮನಂಘ್ರಿಗೆ ನಮಿಸಿ ಹೊರಳಲು
ವಿನಯದಲಿ ಹಿಡಿದೆತ್ತಿ ತಕ್ಕಯಿಸಿದನು ಬೇಗದಲಿ ॥ ೪೯ ॥

ಮನುಮಥಾಂತಕ ತನುಜ ಚಿನ್ಮಯ
ವನಜನಾಭ ಶ್ರೀಪದಾಂಬುಜ
ವಿನುತನತಸುರಧೇನು ಧೇನುಕಮಥನ ಪ್ರಥುಲಹಿತ ॥
ಕನಕಕುಂಡಲ ದನುಜಮಂಡಲ
ವನದವಾನಲ ಸುಪ್ರಭಾನಿಲ
ತನಯನನುನಯ ವಿನಯ ಪರಿಪರಿ ಪಾಹಿಮಾಮನಿಶ ॥ ೫೦ ॥

ನೀನಿದೆತ್ತಲು ಕೊಲಿಸಿಕೊಂಬಾ
ಮಾನಭಂಗವಿದೆತ್ತ ನೊಂದೈ
ಯೇನು ಕಾರಣ ಬಂದೆಯನೆ ಕೈಮುಗಿದು ವಿಭಿಷಣನು ॥
ಜಾನಕಿಯ ಬಿಡಹೇಳಲೆನ್ನನು
ಕಾನನಾಂತಕೆ ದನುಜ ನೂಕಿದ
ಭಾನುಕುಲ ಪರಿಯಂತವರಿಯೆನು ನೀನೆ ಗತಿಯೆಂದ ॥ ೫೧ ॥

ಏನುದೊಡ್ಡಿತು ದನುಜ ಹೇಳುವೆ
ನಾನು ನೆರೆದೀ ಕಪಿಭಟಾವಳಿ
ಯಾನರೇಂದ್ರನ ಭೃತ್ಯಭೃತ್ಯನ ಭೃತ್ಯಕಿಂಕರನು ॥
ನೀನು ಬಂದುದು ಮೇಳವೇ ದಿಟ
ದಾನವೇಂದ್ರನಿಗನುಜನಲ್ಲಾ
ನೀನು ಬಣಗೇ ರಾಮಚಂದ್ರನ ಕಾಣಿಸುವೆನೆಂದ ॥ ೫೨ ॥

ಪಾವನಿಯ ನುಡಿಗೇಳಿ ವಿಭಿಷಣ
ರಾವಣಂಗಿವ ತಮ್ಮನೆಂದರೆ
ಕಾವನೋ ಕೊಲಿಸುವನೊ ಮೇಣೆನೆ ಹನುಮನಿಂತೆಂದ ॥
ಕಾವನಾ ಕರುಣಾಳು ಮರೆವೊಗೆ
ದೇವನಾಗಲಿ ದನುಜನಾಗಲಿ
ದೇವನೋಲಗ ಸಮಯುವರಿತಾಂ ಬಹೆನು ನಿಲ್ಲೆಂದ ॥ ೫೩ ॥

ಕೆರಳದಿರಿ ಕಪಿಭಟರುಗಳೀತನು
ಹಿರಿದು ನಮ್ಮವ ಜರೆಯಬೇಡೆನೆ
ಮರುತನಂದನನಾಳು ಕಾಯ್ದಿರೆ ಹನುಮ ಬೇಗದಲಿ ॥
ನೆರೆದ ರಾಮನ ಸಭೆಯ ಸಡಗರ
ವರರೆ ಬಣ್ಣಿಸಲೀರದಾರಿಗು
ಹರಿದು ಬಂದನು ಹರಿಯ ಚರಣಕ್ಕೆರಗಿ ಹೊರಳಿದನು ॥ ೫೪ ॥

ಏಳಣುವ ಏಳೆನ್ನ ಕಂದಾ
ಏಳು ಮನದಾಳಾಪ ಚೆಲುವಾ
ಯ್ತಾಳಿಗೊಳ್ಳೆನು ಮಗನೆ ನಿನ್ನಾಣೆನಲು ಕೈಮುಗಿದು ॥
ಖೂಳತನದಲಿ ನಿಮ್ಮಡಿಯ ನಾ
ಕೇಳದಪರಾಧವನು ಮಾಡಿರೆ
ಪಾಲಿಸಭಿಮತ ದೀನ ರಾವಣನನುಜನು ತಂಪೆ ॥ ೫೫ ॥

ಅವನ ಕಾವುದಕೇನು ಸಂಶಯ
ವವನ ಹಿರಿಯನು ಬಂದು ಸೀತಾ
ಯುವತಿಯನು ಕೊಟ್ಟೆಮ್ಮ ಕಂಡರೆ ಕಾವೆವಾವನ ॥
ಪವನ ಸಂಭವ ನೀನು ತಂದಿ
ಪ್ಪವನ ನಾ ತಲೆಗಾಯದುಳಿವೆನೆ
ರವಿಕುಲಾನ್ವಯದೊಳಗೆ ಶರಣೆನೆ ಕಾಯದವರುಂಟೆ ॥ ೫೬ ॥

ಜಾನಕೀಶ್ವರ ತಮ್ಮ ಹೇಳೆನೆ
ದಾನವರ ಹುಳುಗಳಿಗೆ ಮಂತ್ರವೆ
ಆನತರ ಕಾಯ್ದಿರುವುದಾಂತರನರಸು ನೀತಿಯಿದು ॥
ಏನು ಮಾಡುವನವನು ಮುನಿದಡ
ದೇನ ಮಾಡ ಸಮರ್ಥ ತಿಳಿದರೆ
ನೀನಿರಲು ಹಗೆಗೆಣೆಯರುಂಟೇ ಹನುಮ ಬಾಹಿರನೆ ॥ ೫೭ ॥

ಹನುಮ ಕಾಣಿಸು ಕಾವೆನೆಂದರೆ
ಮನದಲುಬ್ಬುತ್ತಣುವ ಹರಿದಾ
ದನುಜಗೆಂದನು ಹೆದರದಿರು ಹರಿ ಕಾವ ನಿನ್ನವನು ॥
ಚಿನುಮಯನ ಕಾಣಿಸುವೆ ಬಾಯೆಂ
ದೆನುತ ಕರೆತಂದವನ ಹರಿಪದ
ವನಜದಲಿ ಕೆಡಹಿದನು ಮರೆಹೋಗೆನುತ ಕೆಲಸಾರ್ದ ॥ ೫೮ ॥

ಹರಿಕುಲಪ್ರಭು ಶರಣು ಕರುಣಿಸು
ಹರಿತವರ್ಣನೆ ಶರಣು ಕರುಣಿಸು
ಹರಿಕುಲಾರ್ಣವ ಶರಣು ಕರುಣಿಸನಾಥನಾದೆನಲಾ ॥
ದುರಿತ ಸಂಹರಿ ಶರಣು ಕರುಣಿಸು
ಖರವಿದಾರಣ ಶರಣು ಕರುಣಿಸು
ಪುರಜಿತಪ್ರಿಯ ಶರಣು ಕರುಣಿಸೆನುತ್ತ ಹೊರಳಿದನು ॥ ೫೯ ॥

ದಿನಪನಂತಿಹ ರತುನವೈದನು
ದನುಜ ಕಾಣಿಕೆಯಿತ್ತು ಶರಣೆನೆ
ಮನವ ಹದುಳಿಸಿಕೊಂಡು ಬಿನ್ನವಿಸಂಜ ಬೇಡೆನಲು ॥
ಜನಪ ಬಿನ್ನಹ ರಾವಣಂಗಾ
ನನುಜನತಿಶಯ ಮೋಹವುಳ್ಳವ
ಜನಕಜೆಯ ಬಿಡ ಹೇಳ್ದೆ ನಾನಾ ಪರಿಯ ಬುದ್ಧಿಗಳ ॥ ೬೦ ॥

ಶ್ರೀಲತಾಂಗಿಯನಿತ್ತು ಕಂಡರೆ
ಪಾಲಿಸುವನೆರೆ ನಿನ್ನನೆಂದರೆ
ಕೇಳದಿರೆ ಹರಿ ನಮ್ಮ ಕೊಲುವನುಯೆಂಪಡವ ಕೆರಳಿ ॥
ಬಾಳಲೆರಗಿದ ನಿನ್ನ ರಾಮನ
ಕಾಳಗಕೆ ತಾಯೆಂದನಿದ್ದರೆ
ಸೀಳಿ ಹೊಳುವೆನೆಂದು ನೂಕಲು ಬಂದೆ ನಾನೆನಲು ॥ ೬೧ ॥

ಇಂದು ಸೀತೆಯ ಬಿಡೆನುಯೆಂದರೆ
ಬಂದೆನೆಂಬೆಯೆ ದನುಜ ರಾವಣ
ತಂದಡಂದೇ ಬಾರೆ ಯಾಕೆನೆ ದೇವ ಚಿತ್ತೈಸು ॥
ಹಿಂದಿರಿಸಿಕೊಂಬವರ ಕಾಣದೆ
ತಂದೆ ಬಾರೆನುಯೆನಲು ಕೇಳಿದ
ನೊಂದು ಬಸುರಲಿ ಬಂದನಹಿತನೆ ಹಿತನೆ ಹೇಳೆಂದು ॥ ೬೨ ॥

ಶಿರದಲುದಿಸಿದ ರೋಗ ಕೊಲುತಿರೆ
ಹೊರೆಯುದೇ ವನದೊಳಗಣೌಷಧ
ಗರಳ ಶರಧಿಯಲುದಿಸೆ ಸುಧೆಗದ ಬೆರಸಿದರೆ ಸುರರು ॥
ತರುಚರರ ಪುದುವಾಳು ಲೇಸೇ
ಸಿರಿಯನೊಲ್ಲದೆ ತಿರಿಯಃ ಬಯಸಿದೆ
ಮರುಳೆ ಹೋಗುಡಲಿತ್ತು ಲಂಕೆಗೆ ಕಳುಹು ಹನುಮಂತ ॥ ೬೩ ॥

ಈತ ಬಂದುದು ನಮಗೆ ಹಿತವೇ
ಓತು ನಡೆವಾ ಸತಿಯು ಹೇಳಿದ
ಮಾತು ಕೇಳುವ ಮಗನ ಮಿತ್ರನ ಪೊರೆವ ತಂದೆಗಳ
ಭ್ರಾತೃಗಳ ಅತಿಹಿತವೆಯಪ್ಪಾ
ಮಾತೆಯನು ಪಡೆಯಲ್ಕೆ ತೀರದು
ಭೂತಳದೊಳಿನಿತುಂಟು ನೀನಿರು ಹೋಗಿ ಸುಖದಿಂದ ॥ ೬೪ ॥

ತಾಪಗೊಳಿಸದಿರೆನ್ನನಕಟಾ
ಪಾಪಿ ಜನ್ಮದಲೊಗೆದು ಮತ್ತಾ
ಪಾಪಿಯೊಡನಿರಲಾರೆನಮೃತವ ಕಂಡು ಮತ್ತೆನಗೆ ॥
ಶ್ರೀಪತಿಯೆ ವಿಷದಿಚ್ಛೆಯುಂಟೇ
ಭೂಪ ಮನವನು ನೋಡ ಬೇಡೆನೆ
ಪಾಪಿ ದಶಶಿರನತ್ತ ಮನವಿಲ್ಲೆಂದು ಹರಿಯರಿದ ॥ ೬೫ ॥

ಹನುಮನೆಂದನು ಸ್ವಾಮಿ ಕಾರ್ಯಕೆ
ದನುಜರಳವಿಯಲಾನು ಸಿಲುಕಲು
ಯೆನಗೆ ಕರ ಹಿತನಾಗಿ ದೂತರ ಕೊಲುವರೇಯೆಂದು ॥
ದನುಜ ಕೊಲುವಡೆ ನನ್ನ ಕಾರ್ಯ್ದನು
ಜನಪ ನೀನೇ ಬಲ್ಲೆ ಎಂದೆನ
ಲಿನಕುಲೇಶ್ವರ ಪಾಲಿಸುವೆನೆನೆ ಸುರರುಘೋಯೆನಲು ॥ ೬೬ ॥

ಶರಧಿಯುದಕದಲರಸ ಮಾಡಿದ
ಹರಸಿ ನಿಜ ಪಟ್ಟಾಭಿಷೇಕವ
ನೆರೆದ ಸಭೆಯಲಿ ಸಾರಿ ಮಂಗಳ ಘೋಷವೆಸೆವುತಿರೆ ॥
ನೆರೆದ ಸುರ ನರರಾಯೆನುತ್ತಿರೆ
ಶಿರದಲಭಯದ ಹಸ್ತವಿಟ್ಟಾ
ಸಿರಿಮನೋಹರ ಮೂರ್ತಿಯಿತ್ತನು ಪರಮ ಸಂಪದವ ॥ ೬೭ ॥

ದನುಜ ಮಾಡಿದ ಪುಣ್ಯವೆಂತುಟೊ
ತನುವ ಬಳಲಿಸಿ ಧ್ಯಾನ ಮೌನದಿ
ಮುನಿಗಳರಸುವ ಶ್ರುತಿಶಿರೋಮಣಿ ಹರಿಯ ಕರುಣದಲಿ ॥
ಜನನ ಮರಣವ ಗೆಲಿದುಯಿಹಪರ
ದನುಪಮಾಮಲ ಸುಖವ ಪಡೆದನು
ಹನುಮನಂಗದರಂತೆ ಸಲುಗೆಯನಿತ್ತು ಪಾಲಿಸಿದ ॥ ೬೮ ॥

ಪಟ್ಟದಲಿ ಪ್ರತ್ಯೂಷವಾಯಿತು
ಕಷ್ಟ ಪರ್ವಿಕವೆನುತ ನರಹರಿ
ಕಟ್ಟಿ ಪಟ್ಟವ ಪಾಲಿಸಿದ ಸುಗ್ರೀವ ವಿಭಿಷಣರ ॥
ಇಷ್ಟನೆಂಬುದರೊಳಗೆ ಪದ ಚೌ
ಷಷ್ಟಿ ಪಂಚೋತ್ತರ ಸಮಾಹಿತ
ನೆಟ್ಟನಿಲ್ಲಿಗೆ ಸಂಧಿ ಮುಗಿದುದು ಸಂಜೆ ರಂಜಿಸಿತು ॥ ೬೯ ॥

---

## ೧೫ನೇ ಸಂಧಿ

ಪಲ್ಲ ॥ ಹಿಡಿದುಬಿಟ್ಟನು ದನುಜ ದೂತರ
ಕಡಲ ಮಾರ್ಗವ ಬೇಡಿ ನೋಡಿದ
ಕಡೆಗೆ ಬಾಣವ ಹೂಡಿ ವರುಣನ ಗರ್ವವನು ಮುರಿದ ॥

ಪದ ॥ ಸತ್ಯನಿಧಿ ವಿಭಿಷಣಗೆ ರಾಜ್ಯವ
ನಿತ್ತು ಪಾಲಿಸಲತ್ತ ರಾವಣ
ಗೆತ್ತಿದದ್ಭುತ ಕೋಪ ಶಮಿಸಲು ತಮ್ಮನನು ನೆನೆದ ॥
ಒತ್ತಿ ಬುದ್ಧಿಯ ಪೇಳ್ದಡಲಗನು
ಕಿತ್ತು ನಾ ಮರುಳಾದೆನಕಟವ
ನೆತ್ತ ಪೋದನೊ ಕೊಲುಗು ಹಗೆ ಪೈಶೂನ್ಯನೆಂದೆನುತ ॥ ೧ ॥

ಕರೆಸಿ ಶುಕಸಾರಣರಿಗೆಂದನು
ಕೆರಳಿ ನೊಕಿದೆ ಮರುಳು ತಮ್ಮನ
ಅರಿಯು ಹೊಕ್ಕನೊ ಹರಣವಳಿದನೊಯೆಂಬುದನು ನೀವು ॥
ಅರಸಿ ಕಾಣುತ ಬೇಗ ಬಹುದೆನೆ
ಹರಿತ ವರ್ಣದ ಗಿಳಿಗಳಾದರು
ಮರುತ ವೇಗದಿ ಕಡಲ ದಾಂಟಿಯೆ ಬಂದರೀ ತಡಿಗೆ ॥ ೨ ॥

ಪಡೆಯು ಸದಳವನೇನನೆಂಬೆನು
ಪಡುವ ಮೂಡಣ ದೆಸೆಯು ಮುಟ್ಟಲು
ಗಿಡುಗಳೆ ಮುಸಗಳಾಯಿತೊ ಧರೆಯು ಬೆಸಲಾಯ್ತೊ ॥
ವೊಡವಿತುಂಬಿದ ಕರಡಿಗಳ ಸುರ
ರೊಡೆಯು ಸುರಿದನೊ ಒಬ್ಬರೊಬ್ಬರ
ಬಿಡದೆ ನೆರಹಲು ಬ್ರಹ್ಮಕಲ್ಪವು ಸಾಲದಯ್ಯಯ್ಯ ॥ ೩ ॥

ಅಸುರ ದೂತರ ಕಂಡು ಬೆರಗಿನ
ಬೆಸದೊಳಿರೆ ಸೊಗಡರಿತು ವಿಭಿಷಣ
ದೆಸೆಯ ನೋಡುತ ಕಂಡು ನಸುನಗುತೆಂದ ರಘುಪತಿಗೆ ॥
ವಸುಧೆಪತಿ ನೋಡೊಂದು ಹೊಸತನು
ಅಸುರರಧಿಪತಿ ಬೇಹ ಕಳುಹಿದ
ನೆಸೆವ ಮಾಯದ ಗಿಳಿಯ ನೋಡೆನೆ ಕಂಡ ರಘುರಾಯ ॥ ೪ ॥

ಎರಡು ಗಿಳಿಗಳು ಗಗನದಲಿ ಬರೆ
ನೆರೆದ ವಾನರರೆಲ್ಲ ಕಂಡುದು
ಅರಸ ಮೊಗವನು ನೋಡಲಂಗದನರಿತು ಪುಟನೆಗೆದ ॥
ಬೆರಸಿ ಹಿಡಿದರೆ ಕಪಟವಡಗಿತು
ಕರಿಯ ಬಣ್ಣದ ಗುರುಜುದಲೆಗಳ
ಕರದ ಕತ್ತಿಯ ಖಳರ ಕುಕ್ಕುರಿಸಿದನು ಕುಸುಬಿದನು ॥ ೫ ॥

ಝುಡಿದು ಸೆಳೆದನು ಬಾಲದಲಿ ಹೆಡ
ಮುಡಿಯ ಬಿಗಿದನು ಕೋರೆ ದಾಡೆಗ
ಳೊಡನೆ ಮೂಡಲು ಮಂದಿ ಮುತ್ತಿತು ಕೊಲ್ಲಿ ತಿವಿಯೆನುತ ॥
ಒಡಲು ಜರ್ಜರಿಯಾಗಲೊದೆವು
ತ್ತಡಸಿ ಕಿಬ್ಬದಿಗಳನು ತಿವಿವುತ
ಹಿಡಿದು ಮುಂದಲೆಯೆಳೆದು ತಂದರು ರಾಯನೋಲಗಕೆ ॥ ೬ ॥

ನಡುಗಿ ಭೀತಿಯಲಳ್ಳೆದೆಕ್ಕುತ
ನುಡಿಯಲಾರದೆ ಮರನವೋಲಿರೆ
ಜಡೆಯ ಜಂಗಮ ಮೂರ್ತಿಯಭಯುವ ನೀಯಲಾ ಖಳರು ॥
ನುಡಿದರಾ ತಮ್ಮಾಳ್ದನಾಳ್ದಗೆ
ಕಡುಹುಗಳ ಬಿಂಕವನು ಬೀರುತ
ಝುಡಿಯಲಾಗದು ತಮ್ಮನೆನುತಡಿಗೆರಗಿ ಕೈಮುಗಿದು ॥ ೭ ॥

ಬಿಡಿಸು ಬಿಗುಹನು ಹೆಡಕ ಮೋಹಿದ
ದಡಿಯು ತೆಗೆಸುತೆ ಮರ್ಕಟಂಗಳ
ಬಡಿಹ ಪ್ರಾಣಿಸು ದೇವ ದೇವರ ದೇವ ದಾತಾರ ॥
ನುಡಿಸಿ ಕೇಳುವುದೆಮ್ಮ ಬಲುಹನು
ಕಡೆಗೆ ನೀನೊಲಿದಂತೆ ಮಾಡೆನೆ
ಒಡೆಯ ಮೊಗವನು ನೋಡಲಂಗದನರಿತು ಸಡಿಲಿಸಿದ ॥ ೮ ॥

ಅರಗಿನೊಡಲುಗಳಿಂದ ಹೆಚ್ಚಿ
ದ್ದರಿಯ ಶರಧಿಯು ಮೀಸಬಹುದೇ
ನರರು ವಾನರರಿಂಗೆ ರಕ್ಕಸರಜಗಜಾಂತರವು ॥
ಅರಿಭಯಂಕರನಳಿಯು ತಲೆಗಳು
ಹರಿಯೆ ಮನುಜರಿಗಳಿವು ತೋಳುಗ
ಳೆರಡುನಿಮಗಿಪ್ಪತ್ತು ರಾವಣಗೆಂದರಾಚರರು ॥ ೯ ॥

ಕೃತ್ತಿವಾಸನ ಗಿರಿಯನೆತ್ತಿದ
ಮತ್ತೆ ಗೆಲಿದನು ದಿಗಧಿಪತಿಗಳ
ಮೃತ್ಯು ಮಾರಿಯುರೆಮ್ಮ ರಾಯನ ಮನೆಯ ತೊತ್ತಿಗರು ॥
ಹೊತ್ತು ಬಿಟ್ಟೆಯ ನಡೆವರಮುಗರು
ಹತ್ತು ತಲೆಯಿಪ್ಪತ್ತು ಕೈಗಳು
ಸುತ್ತ ವಾರಿಧಿಯುಗಳು ಗಂಡರಗಂಡ ರಾವಣನು ॥ ೧೦ ॥

ಎಲವೊ ನಿಮ್ಮೊಡೆಯಂಗೆ ತಲೆಗಳು
ಹಲವು ಕವಲೇಕಾಯ್ತು ಹೇಳೆನೆ
ಜಲಜಮುಖಿ ಕೈಕೇಸಿ ಮುನಿ ಪೌಲಸ್ತ್ಯನೊಲಿಸಲಿಕೆ ॥
ಬಳಲಿ ತಪದಲಿ ಹತ್ತು ಋತುಗಳು
ಕಳೆಯೆ ಸಫಲವ ಮಾಡಲಾ ಮುನಿ
ಯೊಲಿದು ತತ್ಸಂಖ್ಯಾಕ ಶಿರಗಳ ಮಗನ ಕರುಣಿಸಿದ ॥ ೧೧ ॥

ಅವನಿಯುಳಿಯನೆ ಕೇಳು ರಾವಣ
ನವನ ತಮ್ಮನು ಕುಂಭಕರ್ಣನು
ಇವನು ಮೂರನೆಯಾತನಾಡಿಗ ನಿಮ್ಮ ಸಾರ್ದವನು ॥
ಸವರಲೊಡನೊಡನೊಗೆವ ತಲೆಗಳು
ಶಿವನ ಮೆಚ್ಚಿಸಿ ಬಿಡದೆ ವರುಷವ
ನವನು ಪಡೆದನು ಸಾರ್ಧಕೋಟಿ ತ್ರಿತಯದಾಯುಷವ ॥ ೧೨ ॥

ಅರಿದೊಡುದಿಸುವ ತೋಳು ತಲೆಗಳು
ವರುಷವನು ಸಪ್ತಾರ್ಥಕೋಟಿಯು
ಹರನಲಾಯುಷ್ಯವನು ಪಡೆದೈತರುತ ಬಟ್ಟೆಯಲಿ ॥
ಸುರ ಮುನೀಶ್ವರ ಕವಲುನುಡಿಯಲು
ಮರಳಿದನು ಮತ್ತರ್ಥಕೋಟಿಯು
ವರಿಸೆ ಹಿಂದಣ ವರವು ಜಾರಿತು ಹಾರಿತಾ ಖಳನ ॥ ೧೩ ॥

ತನ್ನ ಹಳೆ ನಂಟೆಂದ ಬೊಮ್ಮನ
ಮನ್ನಣೆಯಲಿರುತಿಪ್ಪನೆಂದರೆ
ಕನ್ನೆಯನು ಮುಖಕಂಜಿ ಬಿಡುವನೆ ನಿಮ್ಮ ಖತಿಗಾಗಿ ॥
ಇನ್ನು ಉಳಿದರ ಹೆಸರದೇತಕೆ
ನನ್ನಿ ಹೇಳಿದೆವಕಟ ಸಾಯುದ
ಮುನ್ನ ತೆರಳೆಲೆ ದೇವ ಮನುಜರು ಕಾದಿ ಗೆಲಲರಿದು ॥ ೧೪ ॥

ಹರ ವಿಭೂತಿಯನಿತ್ತು ಹರಸುವ
ಹರಿಗನಂತನ ಹಾಸೆ ಶೋಭಿತ
ಸುರರಿಗುಣ ಹೊತ್ತಿಲ್ಲನಾರತ ಸರಕ ಕಟ್ಟುವುದು ॥
ಶರಧಿ ಕಣ ಕಾಲುದಕವೆಮಗಿದು
ಮರುಳು ಮರ್ಕಟ ಮಂಕುಗಳ ನೀ
ನೆರಹಿ ನೀರೊಳಗದ್ದಿ ಹೋಹುದು ಮಂತ್ರವಲ್ಲೆಂಬೆ ॥ ೧೫ ॥

ಬಡ ವನೌಕಸ ಪಡೆಯು ನೆಚ್ಚಿಯೆ
ಕೆಡದಯೋಧಿಗೆ ತೆರಳು ಸಂಪ್ರತಿ
ಪೊಡವಿಜೆಯು ಹಂಬಲನು ಬಿಡು ಮರುಳಾಟ ನಿನಗಾಯ್ತು ॥
ಒಡಲು ಉಳಿದರೆ ಮಿಕ್ಕ ಸತಿಯರ
ಪಡೆಯ ಬಹುದೀ ಮರ್ಕಟಂಗಳ
ಕೆಡಹಿ ಹೋಗದಿರೈಯ್ಯ ಹಣ್ಣನು ಮೆದ್ದು ಸುಖದಿರಲಿ ॥ ೧೬ ॥

ಹೊಸತಿರುಹೆಗಳ ಹುತ್ತೊ ದೈತ್ಯರ
ವಿಸರ ಕಪಿಗಳನೇಕೆ ನೆರಹಿದೆ
ಅಸುರರಿಪ್ಪೆಯ ಹುಳುಗಳೀ ದಿಟ ಮುಸುಗಳಿಂಗಿಲ್ಲಿ ॥
ದಶಶಿರನನಿವರಿಂದ ಗೆಲುವರೆ
ವಸುಧೆವಲ್ಲಭ ಮರುಳುಗೊಂಡೈ
ಮಸೆದು ಶರಳನು ಸುರಿದೊಡಾನುವಡರಿದು ಖಳನೊಡನೆ ॥ ೧೭ ॥

ವೋ ವೊ ಬರಸಿಡಿಲೆರಗೆ ಕೊಡೆಗಳು
ಕಾವವೇ ಸುಗ್ರೀವ ಕಡುಗಲಿ
ದೇವರಿಂದಿದಿರಿಸಿದ ಸತ್ವವ ಮೆರೆದನಣ್ಣನಲಿ ॥
ಆವ ವೀರನು ಜಾಂಬವಂತನು
ಸಾವು ಸಂಗಡಿಸಿತ್ತು ನಿಮಗಿದ
ನಾವು ಹೇಳಿದೆವಿಂದು ನೆನೆ ಬಳಿಕಕಟ ಸಾಯದಿರು ॥ ೧೮ ॥

ಮಡದಿಗೋಸುಗ ಕೂರ್ತು ತಮ್ಮನ
ಕೆಡಹಿ ಹೋಗದಿರರಸ ದಶಶಿರ
ನೊಡನೆ ಹಳಚಲು ಕುರುಡುಗುದುರೆಯ ಗಾದೆ ನಿನಗಹುದು ॥
ಮಿಡುಕನುಳ್ಳವನೊಬ್ಬ ನಿಮ್ಮಲಿ
ಪಡೆಗೆ ಬಲ್ಲಿದ ವೀರ ಹನುಮನು
ಒಡೆಯ ನಿಮಗುಂಟುಳಿದ ಗಾವಳಿಗಳನು ನೆಚ್ಚದಿರು ॥ ೧೯ ॥

ಮೇಲಣಲೆ ಕಠಾರಿ ಸುಭಟರ
ಬಾಲ ಗುಡಿಗೂಡಾರ ಸಮರಕೆ
ಕಾಲುಕೈಗಳೆ ಕೈದು ಬಿಲುಗಣೆ ಕೋಲು ಕಲ್ಲುಗಳು ॥
ಕಾಳಗದ ಸಂವರಣೆ ಘನವಿದ
ಹೇಳುವವರಿಗೆ ಲಜ್ಜೆಯಿಲ್ಲವೆ
ಸೋಲದೇಗುವನಕಟ ರಾವಣನಿವರ ಕಾಳಗಕೆ ॥ ೨೦ ॥

ಉಂಡು ಉಡುಗೊರೆಗೊಂಡು ಜೀವಿತ
ಗೊಂಡು ಹಳಮೆಯ ನೆನೆದು ತತ್ತರ
ದಂಡುಮಾಡುವಡರಿದು ನೂರರಳೊಬ್ಬ ರಣದೊಳಗೆ ॥
ಉಂಡುಡಲು ಕೊಂಡಿಲ್ಲ ನಿಮ್ಮಲಿ
ಕೊಂಡ ಜೀವಿತವಿಲ್ಲ ಸಾಯಲು
ಕಂಡರರಿಯದೆ ಕಪಿಗಳಳಲಿಗಲಹರೆ ನಿಮಗರಸ ॥ ೨೧ ॥

ತ್ರಿಣಯನುರಿಗಣ್ಣಾಲಿಯೊಳಗನು
ಕೆಣಕಿ ಹಗೆಗೊಂಡಂತೆ ಮರ್ಕಟ
ಗಣದ ನಡುವಿದ್ದೆಮ್ಮನೆನುತಿರಲಸನಾಜ್ಞೆಯಲಿ ॥
ಹಣುಗಿ ನಾವಿರೆ ನಿಮಗೆ ಮೇಳವೆ
ಬಣಗು ರಾವಣನೆಂಬ ನಾಯನು
ರಣಕೆ ತಾ ಹೋಗೆಂದು ಕಪಿಸಭೆ ಗಲಭೆ ಮಸಗಿದುದು ॥ ೨೨ ॥

ಬಣಗುಗಳ ಬಗುಳಾಟ ನಿಮ್ಮಯ
ಮನಕೆ ಖತಿಯಿಲ್ಲೆಮಗೆ ಕೂಡದು
ಯಿನಿತು ಸಾಕಿನ್ನಾವ ಸದರವು ಬೇಡವೆಂದುಲಿಯೆ ॥
ದನುಜ ಶಿಷ್ಟರು ಚುಚ್ಚಿ ನುಡಿದರೆ
ಎನಗೆ ಖತಿಯಿಲ್ಲುಚಿತವೈಸಲೆ
ಯೆನುತ ರಾಘವನಂಗಚಿತ್ತವನಿತ್ತು ಬೀಳ್ಕೊಟ್ಟ ॥ ೨೩ ॥

ಕೇಳೆಲವೊ ಬಹುಭಾಷಿ ರಕ್ಕಸ
ಖೂಳತನಗಳ ಮಾಣ್ದು ಕಂಡರೆ
ಪಾಲಿಸುವ ಹರಿ ಇಲ್ಲದಿದ್ದರೆ ಹಲವು ಕವಲೊಡೆದ ॥
ಪೋಳಿದಲೆಗಳ ಕಡಿದು ವನಪೇ
ತಾಳಿಗಳಿಗುಣಲಿಕ್ಕದುಳಿಯನು
ಹೇಳಿ ನೀವೀ ಹದನ ರಾವಣಗೆಂದ ಸೌಮಿತ್ರಿ ॥ ೨೪ ॥

ಮರಳಿ ಲಂಕೆಯ ಹೊಕ್ಕು ದೈತ್ಯನ
ನೆರೆದ ಸಭೆಯನು ನಮಿಸಿ ನಿಲಲಾ
ತುರದಿ ರಾವಣ ಹೇಳಿ ಸುದ್ದಿಯನೆನಲು ಬೆಸಗೊಳಲು ॥
ಅರಸ ಬಿನ್ನಹ ನಿಮ್ಮ ತಮ್ಮಗೆ
ತರಣಿಕುಲಪತಿ ರಾಜ್ಯವಿತ್ತರ
ಸುರರುಘೇಯೆನೆ ಕೇಳಿ ಹೋದೆವು ಶರಧಿಯಾತಡಿಗೆ ॥ ೨೫ ॥

ಮೇರುಮಂದರದಂತೆ ಬೆಳೆದಿಹ
ವೀರರಿಪ್ಪತ್ತೇಳು ಕೋಟಿಯ
ನಾರು ಗಣಿಸುವರವರ ಕೆಳಗಣ ಕರಡಿ ಕಪಿ ಮುಸುವ ॥
ವೀರರೊಬ್ಬೊಬ್ಬರ ಸುಪಂಥವ
ರಾರು ನೋಡುವರಾಲಿಸುವರೈ
ವೀರ ರಾಘವನಂಬು ದನುಜರ ಮಿದುಳ ಬಯಸುವುದು ॥ ೨೬ ॥

ಮೂಡಿಗೆಯಲೀಡಿರಿವ ಬಾಣವ
ನೋಡಿ ನಂಬಿಸುತಿಪ್ಪ ರಾಘವ
ನಾಡಿಸುವ ಮರಿ ಕೋಡಗಂಗಳ ನಾವು ನಿಮಿಷಾರ್ಧ ॥
ನೋಡುತಿರೆ ಹಿರಿಯಣ್ಣೆಗಲ್ಲನು
ಆಡುವರು ಕೆಲರೆತ್ತಿ ಗಿರಿಗಳ
ಬೇಡ ಕದನದ ಘಸಣಿ ಸೀತೆಯ ಕೊಡಲು ಹರಿ ಕಾವ ॥ ೨೭ ॥

ಹಿಂದೆ ಲಂಕೆಯ ಸುಟ್ಟ ಕೋಡಗ
ಬಂದ ಕಪಿಭಟರೊಳಗೆ ತುಚ್ಛವು
ಹಿಂದಣಾಯುಸಗಂಡು ಕಾದಲು ಲಜ್ಜೆ ನಿನಗಿಲ್ಲ ॥
ಮುಂದುವರಿದೆಮ್ಮಿಬ್ಬರನು ಹಿಡಿ
ತಂದು ಕಟ್ಟಿದನೊಬ್ಬನಂಗದ
ಮಂದಿ ಕೊಲುತಿರೆ ಸುದ್ದಿ ಕೇಳಿದು ಕೊಲೆಯ ಮಾಣಿಸಿದ ॥ ೨೮ ॥

ಸಂದೆಹಂಗಳು ಬೇಡ ರಾವಣ
ಯಿಂದುಮುಖಿಯನು ಕೊಡದಿರೆಲ್ಲರ
ಕೊಂದುಕೂಗುವ ರಾಮನೆಂದರೆ ಕೆರಳಿ ದಶಕಂಠ ॥
ಹಂದೆಗಳ ಸಭೆಯಿಂದ ನೂಕೆನ
ಲಂದು ನೂಕಿದರವರ ನೆರಹಿದ
ಮಂದಿಯನು ಸಮರಂಗ ಧೀಶರ ತುರಗೆ ಕರಿ ರಥವ ॥ ೨೯ ॥

ಇತ್ತಖಿಲ ದಿವೌಕಸಸ್ತುತ
ಸತ್ಯನಿಧಿ ರಘುಕುಲಜನೋಲಗ
ವಿತ್ತು ತಮ್ಮನ ನೆಮ್ಮಿ ಲಕ್ಷ್ಮೀರಮಣನೊಪ್ಪುತಿರೆ ॥
ಹೊತ್ತನರಿಯದೆ ಹೊಳೆವ ಹೊನಲಿನ
ಮುತ್ತಿನಾಗರವೆನಿಪ ಶರಧಿಯು
ಲತ್ತಲಿತ್ತಲು ವೀಚಿಮಾಲಾಕುಲವು ರಂಜಿಸಿತು ॥ ೩೦ ॥

ಧಾಳಿ ಲಂಕೆಗೆ ನಡೆವುಪಾಯುವ
ಹೇಳಿ ಜಾಂಬವನೆನಲು ಸಭೆಯಲಿ
ಕೇಳು ಮಾಪತಿ ಸಾಮದಿಂದಾಗದಿರಲೊಮ್ಮಿಂಗೆ ॥
ಹಾಳುವಡುವುದು ಪಥವ ಬೇಡುವ
ಕೇಳದಿದ್ದಡೆ ನಮಗೆ ಗಣ್ಯವೆ
ಕಾಳುಮೂಳನ ಹರಣಗೊಂಬುದು ಬಳಿಕದೇನೆಂದ ॥ ೩೧ ॥

ಸಾಮ ಮೀರಲು ಭೇದ ಭೇದದ
ಸೀಮೆ ತಪ್ಪಲು ದಾನ ದಂಡವು
ರಾಮ ನಿಮಗೆನಲುಂಟೆ ನಾವೀ ರಾಜನೀತಿಗಳ ॥
ಸಾಮದಲಿ ಬೇಡುವುದುಯೆನಲು
ದ್ಧಾಮ ಕಪಿಗಳುಘೇಯೆನುತ್ತಿರ
ಲಾ ಮಹಾ ಕರುಣಾಳು ತಪ್ಪದೆನುತ್ತ ನಿಂತಿರ್ದ ॥ ೩೨ ॥

ಖಳವಿದಾರಣ ನಿತ್ಯಕರ್ಮವ
ಸಲಿಸಿ ಧರ್ಬೆಯ ಹಾಸಿ ನೆಲನಲಿ
ಕುಳಿತು ಕೈಗಳ ಮುಗಿದು ಭಜಿಸಿದ ವರುಣ ಮಂತ್ರವನು ॥
ಎಲೆಲೆ ಜಗದಾಧಾರ ಬಟ್ಟೆಯ
ನೊಲಿದು ಕರುಣಿಸುಯೆನುತ ಬೇಡಲು
ಸುಲಭ ದೇವರದೇವ ವರುಣನ ಮನವ ನೋಡಿದನು ॥ ೩೩ ॥

ಸುರಮುನೀಶ್ವರವಂದ್ಯನೆತ್ತಲು
ಕರವ ಮುಗಿವುದಿದೆತ್ತ ವರುಣಗೆ
ಸಿರಿಯನಂತನ ಹಾಸವೆತ್ತಲು ದರ್ಭೆವಸೆಯೆತ್ತ ॥
ಸುರರ ಯಾಗದಲುಂಬುದೆತ್ತಲು
ಶರಧಿಯಿದಿರುಪವಾಸವೆತ್ತಲು
ಕರುಣಿ ರಾಘವ ಸತ್ಯಸಿಧಿಯೆಂದಭವ ಮೆಚ್ಚುತಿರೆ ॥ ೩೪ ॥

ಸಲೆ ಚತುರ್ದಶಭುವನವೆಲ್ಲವ
ನೊಳಗುಗೊಂಡ ಮಹತ್ವವೆತ್ತಲು
ಹಲವು ಶರಧಿ ದ್ವೀಪ ಸಹಿತವೆ ದಾಡೆಯಗ್ರದಲಿ ॥
ನೆಲನನೆತ್ತಿದ ವಿಭವವೆತ್ತಲು
ಜಲಧಿಯೊಂದನು ದಾಂಟಲರಿಯದೆ
ಸುಲಭತೆಗೆ ನಮೊಯೆನುತಲಿರ್ದುದು ಯೋಗಿ ಜನನಿವಹ ॥ ೩೫ ॥

ಶರಧಿಗುಂಘವನರಿಯಲಿಳಿದನೊ
ತರಣಿ ಸಂಧಿಗೆ ವರುಣನಲ್ಲಿಗೆ
ತೆರಳಿದನೊ ಕಪ್ಪಾದನೋ ರಘುಕುಲನ ಬಳಲಿಕೆಗೆ ॥
ಹರಿಯ ಮಮತೆಯಲುಮ್ಮಳಿಸಿದನೊ
ಕಿರಣ ಹರಿದವೊ ದಿನಪನಹಹಾ
ಕಿರಣ ಕೆಂಪಳಿದಭ್ರವಾಯ್ತೆನೆ ತಾರೆಯುದಿಸಿದುವು ॥ ೩೬ ॥

ಬಡ ಸಖಿಯ ಬಲುಹಿಂದ ಬಲ್ಲಿದ
ನೊಡನೆ ಗರ್ವಿಸೆ ಕೇಡು ತಪ್ಪದು
ಕಡಲು ಶಶಿಯುದಯಕ್ಕೆ ಹೆಚ್ಚಿತ್ತಧಿಕ ವಿಭವದಲಿ
ಕಡೆಗೆ ಸಂಪತ್ತೆಂಬುದಸ್ಥಿರ
ಬಡತನಂಗಳು ಸಹಜವೆಂಬುದು
ಕಡಲೊಳಾಳ್ದುದು ತೇಜವಡಗಿ ಮೃಗಾಂಕ ಬಡವಾದ ॥ ೩೭ ॥

ಪದುಮಮಿತ್ರನ ಉದಯ ಹರಿಗ
ಭ್ಯುದಯದಂತಿರೆ ರಾಮನಿದ್ದಿಸ
ದುದಯದಿಂದುಪವಾಸವಟ್ಟನು ಮೂರು ದಿನ ತನಕ ॥
ಮದಮುಖಗೆ ನೀತಿಗಳು ಪಥ್ಯವೆ
ಉದಧಿ ಗರ್ವದೊಲುಬ್ಬಿ ಕೊಬ್ಬಿದ
ಹದನ ಹೇಳುವೆನೇನ ತೆರೆಗಳ ಗುಳುಗುಳು ಧ್ವನಿಯ ॥ ३೮ ॥

ಶುಭ್ರ ಮುಕ್ತಾಫಲವ ಬೀರು
ತ್ತ್ರಭ್ರವನು ಚುಂಬಿಸಿ ತರಂಗವು
ಶುಭ್ರನಿಳಯನ ಮಕುಟ ರತ್ನದ ಕಾಂತಿ ಥಳಥಳಿಸೆ ॥
ವಿಭ್ರಮಾಡಂಬರವ ಬೀರಿದ
ಶುಭ್ರ ಕೇಳಿವಿಲಾಸ ಗರ್ವದಿ
ಬಭ್ರುವಿಡಿದವ ತೋರಿದನಹಂಕಾರ ಸಂಭ್ರಮವ ॥ ३೯ ॥

ಗುರುಹಿರಿಯರೆಂಬವರ ಕಾಂಬನೆ
ಸಿರಿಗಳಿಂದವೆ ಸೊಕ್ಕಿದಾತನು
ಉರಿಗು ನಿಧಿಯಿಪ್ಪೆಡೆ ಸಮುದ್ರನು ಸೊಕ್ಕದೇಗುವನು ॥
ಹರಿಯನರಿಯದೆ ಕೆಟ್ಟನಕಟಾ
ವರುಣನೆಂದಮರಾಳಿ ಮರುಗಲು
ತರುಚರರನನುವಾಗಿ ಬರಹೇಳೆಂದ ಸುಗ್ರೀವ ॥ ४೦ ॥

ಕೇಳು ರಘುಪತಿ ಬಿನ್ನಹವನೀ
ಖೂಳ ಕೈಮುಗಿದೆನಲು ಬಗೆವನೆ
ಧಾಳಿಮಾಡುವೆ ವರುಣಲೋಕವ ಹಾಳು ಮಾಡುವೆನು ॥
ಗೋಳಿಡಲು ನಾ ಕಟ್ಟಿ ತಹೆ ನೀ
ಕಾಳುಮೂಳನ ಬೇಡಲೇತ
ಕ್ಕೇಳು ರಾಘವ ದೈನ್ಯವಡದಿರುಯೆಂದ ಸುಗ್ರೀವ ॥ ४೧ ॥

ನಡೆದು ಬಂದುದೊ ನೀಲ ಗಿರಿಯೆನೆ
ನುಡಿದ ನೀಲನು ಕೊಡಿಸು ನೇಮವ
ಹಿಡಿದು ಬಲುಹಿಂ ಕಡಲಕುಡಿಸುವೆ ಬಾಡಬಾಗ್ನಿಯನು ॥
ಬಡ ವಡಬ ತಾ ಕುಡಿಯಲಾರನು
ಹಿಡಿದು ಹೆಮ್ಮುಗಿಲಿಂದ ಕುಡಿಸುವೆ
ಪಡೆಯ ನಡೆಸುವೆ ತಾಯಿ ಮಳಲೊಳಗೆಂದು ನಳ ನುಡಿದ ॥ ४೨ ॥

ಒಡೆದು ಬೊಮ್ಮನಜಾಂಡವೊಂದೆಡೆ
ಕಡಲ ಮೊಗೆಮೊಗೆದಲ್ಲಿ ತುಂಬುವೆ
ಪಡೆಯ ನಡೆಸುವೆನೆಂದು ದಾರುಕ ಭಾಷೆಯನು ಕೊಡಲು ॥
ಒಡನೆ ಕೇಸರಿಯೆಂಬ ಕಪಿಭಟ
ನುಡಿದನಬ್ಧಿಯ ಮೊಗೆದು ಆಚೆಯ
ಕಡಲ ತುಂಬುವೆ ನೇಮಗೊಡಬೇಕೆಂದು ಕೈಮುಗಿದ ॥ ೪೩ ॥

ಕಾಲನೂರುವೆನಿಲ್ಲಿ ಬೆಳೆದೀ
ತೋಳನಾಚೆಯ ತಡಿಯಲೂರುವೆ
ಬಾಲದಲಿ ಕೈವಳ್ಳಿ ಕೊಡುವೆನುಯೆಂದ ದಧಿಮುಖನು ॥
ಹೊಳುವೆನುಯಿದ್ದಡಕೆ ಶರಧಿಯ
ಹೇಳುಯೆಂದನು ಗಂಧಮಾದನ
ಹೊಳಲೇತಕೆ ಹೊಕ್ಕು ಬೆಳೆವೆನು ಎಂದನಂಗದನು ॥ ೪೪ ॥

ಸೇತುವನು ಬಾಲದಲಿ ಕಟ್ಟುವೆ
ಭೀತಿಯಿಲ್ಲದೆ ಪಡೆಯ ನಡೆಸುವೆ
ಮಾತ ಕೇಳುವುದೆಮ್ಮ ವೃದ್ಧರನೆಂದ ಜಾಂಬವನು ॥
ಮಾತನರಿಯೆನು ನೆರೆದ ಕಪಿಪಡೆ
ಪ್ರೀತು ಕುಡಿದರೆ ನೆರೆಯದಬ್ಧಿಯು
ಭೂತಳೇಶ್ವರ ಹಲ್ಲುದೆರೆದರೆಯುದಿರೆಂದ ವಿಭಿಷಣನು ॥ ೪೫ ॥

ಅರಸ ಜಂಬುದ್ವೀಪವೆಂಬುದ
ಶರಧಿಯಾ ತಡಿಗೊಯ್ದು ತೋರಲೊ
ತಿರುಗಿ ಲಂಕೆಯ ಕಿತ್ತು ತರಲೋ ಶರಧಿಯೊತಡಿಗೆ ॥
ಎರಡು ಕಣೆಯವಿದಲ್ಲದಿದ್ದರೆ
ಗಿರಿಚಯಂಗಳ ತಂದು ಹೊಳಲೊ
ಖರೆಯುದಲಿ ಬೆಸಸೇನಮಾಡಲಿಯೆಂದ ಹನುಮಂತ ॥ ೪೬ ॥

ತಿರುಕುಳಿಯ ಭಜಿಸಿದರೆ ಒಲಿವನೆ
ಸರಳ ಮೊನೆಯಲಿ ಮಾತನಾಡುವೆ
ಸಿರಿಯ ಕೊಬ್ಬಿಂದೀತ ತರುವಲಿ ಬಲುಹ ತೋರಿದನು ॥
ತಿರಿಯ ಬಂದೆವೆ ನಾವು ವರುಣನ
ಕೊರಳ ಕೊರೆವೆವು ದೈನ್ಯವಡದಿರು
ಸರಳ ಪಂಜರಗಟ್ಟಿ ನಡೆಸುವೆನೆಂದ ಸೌಮಿತ್ರಿ ॥ ೪೭ ॥

ಎಂದ ತಮ್ಮನನಪ್ಪಿ ನರಹರಿ
ಯೆಂದ ನಮ್ಮನ್ವಯದ ಹಿರಿಯರ
ದೊಂದು ತುರಗವ ಕದ್ದು ಸುರಪತಿ ಕಪಿಲನೆಡೆಗೊಯ್ಯೆ ॥
ಅಂದು ಸಗರರು ಹಯವನರಸುತ
ಬಂದಗಳಲೊಂದೊಂದು ಯೋಜನ
ಕುಂದಿ ಸಾಗರವಾಯ್ತು ಗಸ್ತ್ಯನಿಗೊಂದು ಗುಟುಕಾಯ್ತು ॥ ೪೮ ॥

ಪ್ರಿಯವ ನುಡಿದರೆ ದೈನ್ಯನೆಂಬರು
ನಯದಿ ಬರಲಸಮರ್ಥನೆಂಬರು
ಜಯಿಸಲೊಲ್ಲದೆಯಿರಲು ನುಡಿವರು ಹೇಡಿಯೆಂದವನ ॥
ನಯದಿ ಬರಲಪರಾಧಿಯೆಂಬರು
ನಿಯತ ದುರ್ಜನರಿಂಗೆ ತಾನದು
ಲಯವ ಕಂಡರೆ ಮಣಿವುದಲ್ಲವೆ ಮಹಿಯ ಮೂಢಜನ ॥ ೪೯ ॥

ಆಡಬಯಸದ ಮುನಿಯನಾರತ
ಬೇಡುತಿಪ್ಪವರಿಂಗೆ ತಾನೆ
ದ್ದಾಡುವರಸಿಗೆ ಕೇಳದೆಂಬಗೆ ಮಾತು ಹಿರಿದಾದ ॥
ಜೋಡೆಗಿದಿರೆದ್ದೆನ್ನಲುಂಟೇ
ಕಾಡುತಿರೆ ಬಲು ವ್ಯಾಧಿ ನಂಟರ
ಬೇಡುವನಶ್ಲಾಘ್ಯನಲ್ಲದೆ ಮಾನ್ಯನಲ್ಲೆಂದ ॥ ೫೦ ॥

ಮನೆಯ ಜಾಮಾತೃವಿಗೆ ನಿಚ್ಚವು
ವನಿತೆಯಿಚ್ಛೆಯಲಿಪ್ಪ ಮನುಜಗೆ
ಮುನಿಸು ಹಿರಿದಾದಬಲ ನಂಟಗೆ ತನ್ನ ತಾ ಸ್ತುತಿಸಿ ॥
ಘನವೆನಿಪ್ಪಗೆ ಕೇಳದೆಯೆ ತಿಥಿ
ದಿನವ ಹೇಳುವ ಹರಕು ಜೋಯಿಸ
ಗನುದಿನವು ಗಳಹುವ ಪಾಪಿಗುಂಟೇ ಮಾನ್ಯ ಹೇಳೆಂದ ॥ ೫೧ ॥

ಹಿರಿಯರಗಳಿದ ಕೆರೆಯ ಕೆಡಿಸಲು
ನೆರೆಯದೆಂದಾನಿದ್ದೆ ನೀತನು
ಸಿರಿಯ ತೋರಿದನ್ಯೈಸೆ ತಪ್ಪೇನ್ಯೈಸೆ ತಪ್ಪೇನು ॥
ಸರಳುಚಾಪವ ನೀಡು ಲಕ್ಷ್ಮಣ
ಉರುಹಿ ಕಳೆವೆನು ನೋಡುನೋಡೆನು
ತರಸ ಬಿಲುಗವಸಣಿಗೆಗಳೆದನು ತಿರುವನೇರಿಸಿದ ॥ ೫೨ ॥

ಧನುವೊ ಶಾಕಿನಿಯರಿಗೆ ತಣಿವೋ
ವನದ ವೇತಾಳರಿಗೆ ರಕ್ತವ
ನನುದಿನವು ಬಿಡದೆರೆವ ನಂಟನೊ ಖಳರ ಕಂಟಕನೊ ॥
ಬಿನುಗು ಭೂತದ ತೆತ್ತಿಗನೊ ಡಾ
ಕಿನಿಯರಿಗೆ ಭೋಜನವನಿಕ್ಕುವ
ಕನಕಘಂಟೆಯ ಮೇಘವರ್ಣದ ಧನುವ ಜೇವಡೆದ ॥ ೫೩ ॥

ಹರನ ಕಣ್ಗಿಚ್ಚಿಂದ ಹುಟ್ಟಿತೊ
ತರಣಿಯಲಿ ಬಲು ಸಾಣೆಯಾಯಿತೊ
ವರ ನೃಕೇಸರಿ ಬಂದು ಕಂಬದಿ ಮೂಡಿತೋ ಮೇಣು ॥
ಭರದಿ ಭೈರವ ಮಸೆದನೋ
ಉರಿಯನುಗುಳುವ ಪಾವಕಾಸ್ತ್ರವ
ಅರಸ ತೊಡಲುಬ್ಬಸವು ಹುಟ್ಟಿತು ವಿಷನಿಕೇತರಿಗೆ ॥ ೫೪ ॥

ಬಲವಿಹೀನದ ಖಳಗೆ ಬಲ್ಲಿದ
ನೊಲವು ತೀರಿದಡುರಿಯದುಳಿವನೆ
ಜಲಧಿಯೊಳು ಬಡಬಾಗ್ನಿ ಜಿಗಿಯಿತು ಭುಗಿಲುಭುಗಿಲೆನುತ ॥
ದಿಳಿಲು ದಿಳಿದಿಳಿ ಛಿಳಿಲು ಗುಳುಗಳು
ಧಳಸು ಧಳಧಳ ಭೋರುಭೋರೆಂ
ದೆಲೆಲೆ ಧಗಧಗ ಚಿಟಿಲು ಚಿಟಿಲೆಂದೊಟ್ಟಿ ಹಾರುತಿರೆ ॥ ೫೫ ॥

ಮೊನು ಬೆಂದುವು ಶಾಕಿನೀಯರ
ಬೋನ ಬೆಸಳಿಗೆಯಾದ ವರುಣನ
ದೇನ ಹೇಳುವೆನೆಂದು ಶಂಕರ ಹೊಗಳಿ ಮೆಚ್ಚುತಿರೆ ॥
ನಾನು ಸುಟ್ಟೆನು ತ್ರಿಪುರವೆಂಬುದ
ದೀನಮದನಂಗೆನಗದುಳ್ಳುದು
ಜಾನಕೀಪತಿ ನೀರನುರುಹಿದ ಛಾಪು ಬಿಲ್ಲಾಳೇ ॥ ೫೬ ॥

ನೀರುರಗ ನೀರಾನೆ ತುರಗವು
ನೀರು ಮಾನಿಸ ನೀರುವಕ್ಕಿಯು
ನೀರ ಕಮಠವು ಹೊಟ್ಟೆಹಾರಿತದೇನ ಬಣ್ಣಿಸುವೆ ॥
ಭೋರು ಭೋರೆನುತುಕ್ಕಿ ಬಹಳದ
ನೀರು ಬರತುದು ಹೋಯ್ತು ಹೊಯ್ತಿ
ನ್ನಾರು ಕಾವರು ರಾಮನಂಬಿನ ಮೊನೆಗೆ ಗುರಿಯಾಯ್ತು ॥ ೫೭ ॥

ಕೆರಳಲೆಂಬತಾಯ್ತು ಧನುವಿಗೆ
ತಿರುವ ತೊಡಿಸಲರವತ್ತು ಯೋಜನ
ಶರಧಿ ಕುಂದಿತು ಸರಳ ತೆಗೆದರೆ ಉಳಿಯೆ ನಾಲ್ವತ್ತು ॥
ನಿರುತವಿಪ್ಪತ್ತಾಯ್ತು ಹೂಡಿದ
ಡರರೆ ತೆಗೆದರೆ ನೀರು ಬರತುದು
ಹರ ಹರಾ ಕಡಲಾರಿತೇನೆಂಬೆನು ಮಹಾದ್ಭುತವ ॥ ೫೮ ॥

ಕಳವಳಸಿ ಕಂಗೆಟ್ಟ ವರುಣನು
ಹಲವ ಹಂಬಲಿಸುತ್ತಲಿರಲಾ
ಜಲಜಲೋಚನೆ ಗಂಗೆ ಬುದ್ಧಿಯ ಹೇಳ್ದಳಾತಂಗೆ ॥
ಒಳಗೆ ಗರ್ವವ ಮಾಡಿ ಸೊಕ್ಕಿರೆ
ಫಲವ ಕಂಡಾಯ್ತಿನ್ನು ಕೆಡದಿರು
ಖಳವಿದಾರಣ ಕಾವ ಮರೆವೊಗೆ ಹೋಹ ನಡೆ ಬೇಗ ॥ ೫೯ ॥

ಪೊಡವಿಪತಿ ಕರುಣಾಳುವಲ್ಲಾ
ಬಿಡದೆ ಬಾಣವ ಹಾರುತ್ತೈದನೆ
ವೊಡನೆ ಮರೆಹೊಗೆ ಕಾವನೆಂದುವಾಯ್ನಂಗಳನು ॥
ಪಿಡಿದು ವರನದಿ ಪೆಂಡಿರೊಡನವ
ನಡೆದು ಬಂದನು ಕಾಣಿಕೆಯನಾ
ಪೊಡವಿಪತಿಯುದ್ದಕ್ಕೆ ಸುರಿದನು ರತುನ ರಾಶಿಗಳ ॥ ೬೦ ॥

ಹರಿಯೆ ಭವಸಂಹರಿಯೆ ಹೆಮ್ಮೃದ
ದುರಿಯೆ ರಕ್ಕಸರರಿಯೆ ರಾವಣ
ನರಿಯೆ ಕರ್ಮಕೆ ಮುರಿಯೆ ಹರಿಯೆ ನರಹರಿಯೆ ॥
ಹರಿಯೆ ಭುವನೋದ್ಧರಿಯೆ ಕರುಣದ
ಗಿರಿಯೆ ಭಕ್ತರ ಸಿರಿಯೆ ಜಗಕ
ಚ್ಚರಿಯೆ ಮಾಯಾಚರಿಯೆ ಮತ್ತೊಂದರಿಯೆ ನೀನುಳಿಸೈ ॥ ೬೧ ॥

ಉಸಿರು ದೇಹವನಿರಿವೊಡಾದರೆ
ಸಸಿಯು ಮೆಲುವಡೆ ಬಯಲು ಬಡಿವಡೆ
ಶಿಶುವ ಮುಳಿದಾತಾಯಿ ಕೊಲುವಡೆ ಶಿಖಿ ಜಗತ್ರಯುವ ॥
ಒಸೆದು ಸುಡುವಡೆ ಜಗದ ಮೇಲಾ
ಗಸವು ಬಿದ್ದಡೆ ದೇವ ನೀ ಮುನಿ
ದೆಸೆವಡಹುದಿಲ್ಲೆಂಬನಾವನು ಮಾಣು ಮುನಿಸೆಂದ ॥ ೬೨ ॥

ಅರಿಯದಿವನತಿ ಗರ್ವ ಮದದಲಿ
ಬೆರೆತು ಕೆಟ್ಟನು ದೇವ ನಿಮ್ಮನು
ಮರೆದ ಫಲವನು ಕಂಡ ನೀ ಕರುಣಾಳು ವಲ್ಲಭನೆ ॥
ಹಿರಿದು ಮಾತೇಕಿನ್ನು ತಳುವೈ
ಇರುವೆಗಾಯುಧವೇಕೆ ಕರುಣಿಸು
ಮರೆಯಬೇಕು ಶತಾಪರಾಧವನೆಂದಳಾ ಗಂಗೆ ॥ ೬೩ ॥

ಪರಿಪರಿಯ ಪುಷ್ಪಗಳ ಕೆಲವರು
ಪರಿಪರಿಯ ವಸ್ತ್ರಗಳ ಕೆಲವರು
ಪರಿಪರಿಯ ಭೂಷಣಗಳನುಲೇಪನ ಸುಗಂಧಗಳ ॥
ಹರಿಯಣಂಗಳನಿರಿಸೆ ವರುಣನ
ಶಿರಕೆ ಸುತ್ತಿದನೊಲಿದು ಹೂವಿನ
ಸರವಿಯನು ಕರುಣದಲಿ ಬೇಡಲು ಪ್ರಾಣದಾನವನು ॥ ೬೪ ॥

ಸಿರಿಯುತನು ನಿಮ್ಮರಸ ದೇಸಿಗ
ನರರು ನಮ್ಮನು ಲೆಕ್ಕಗೊಳ್ಳನು
ಅರಸು ಬಣಗಿನ ಮಾತ ಬಗೆವನೆ ಖಳನ ತೆತ್ತಿಗನು ॥
ಗರುವಿ ಕರ ಸುಖಿ ಹೃದಯಿ ನಮ್ಮನು
ಸರಕುಮಾಡನು-ಯೆನಲು ಹರಿ ನಿ
ಮ್ಮರಸಿಯಗಲಿಕೆಯನುವ ಮರೆದಿಂದೆಮ್ಮೆ ಪಾಲಿಪುದು ॥ ೬೫ ॥

ನುಡಿಯಲಮ್ಮದೆ ಭೀತಿಯಿಂದವೆ
ನಡುಗುತಿಹ ವರುಣಂಗೆ ಹೇಳಿದ
ತಡವಮಾಡದೆ ಕೊಡಿಸು ಬಟ್ಟೆಯನಂಬಿಗಾಹುತಿಯ ॥
ಬಿಡದೆ ಸಲಹೆಲೆ ದೇವ ಕೊಲುವಡೆ
ತಡೆವರಾರಂತಿರಲಿ ಬಾಣವ
ಬಿಡು ನಿಶಾಚರದೇಶದತ್ತಲು ಕೃಪೆಯ ಮಾಡೆಂದ ॥ ೬೬ ॥

ಉತ್ತರಾಶಯಕಿಹುದು ದೇವರು
ಚಿತ್ತವಿಸು ಧ್ರುಮಕೂಲ್ಯವೆನಿಪ್ಪ
ಉತ್ತಮದ ಸುಕ್ಷೇತ್ರವಲ್ಲಿಹುದಖಿಳ ದಸ್ಯುಗಳು ॥
ಕಿತ್ತು ತೊಡಚಿದಮೋಘ ಬಾಣವ
ನತ್ತ ಬಿಡು ತಲೆಗಾವುದೆಂದನು
ಸತ್ಯನಿಧಿ ನಿನಗಾವ ಹೆಸರುಂಟೆನ್ನ ಕೊಲಲೆಂದ ॥ ೬೭ ॥

ಸರಳಿಗಾಹುತಿಯಾಯ್ತು ನಿನ್ನಯ
ಹರಣವುಳಿಯಿತು ಪಥವ ನೀಡೆನೆ
ಗಿರಿತರುವ್ರಜವೇನನಿಟ್ಟರು ತಳಿವೆ ಬೆನ್ನೊಳಗೆ ॥
ವರವು ನಳನೆಂಬಾತಗುಂಟವ
ಶರಧಿಯನು ನೆರೆಗಟ್ಟುಗೆಂದರೆ
ಸರಳನೆಚ್ಚನು ರಾಮನಾ ಧ್ರುಮಕೂಲ್ಯವಿದ್ದೆಡೆಗೆ ॥ ೬೮ ॥

ವರುಣಗಭಯುವನಿತ್ತು ಕಳುಹಿದ
ಮರಳಿ ವರುಣಾಸ್ತ್ರದಲಿ ತುಂಬಿದ
ಶರಧಿ ತುಂತುರ್ವನಿಯು ಚೆದರಿತು ತೆರೆಯು ತೆಕ್ಕೆಯಲಿ ॥
ಉರಿದ ಜಲಚರವೆಲ್ಲ ಜೀವಿಸೆ
ಕರುಣಿ ರಾಘವ ಸತ್ಯನಿಧಿಯೆಂ
ದಿರದೆ ಶ್ರುತಿನಿಕುರುಂಬ ಹೊಗಳಿತು ಕಮಲನಾಭನನು ॥ ೬೯ ॥

ಆವನೋದುವನಿದನು ಭಕ್ತಿಯು
ಲಾವ ಕೇಳುವನಿದನೇಕ ಬುದ್ಧಿಯು
ಲಾವನರ್ಚಿಪ ಸೋತು ಮೆರೆಸುವನವನ ಪಾಲಿಪನು ॥
ಆವನಿದ ಬಣ್ಣಿಪನು ಮುದದಲಿ
ಆವ ಕೊಂಡಾಡುವನು ಸಭೆಯಲಿ
ಮಾನಧೂವಲ್ಲಭನು ಕಾವನು ಕರುಣದಿಂದವನ ॥ ೭೦ ॥

ದೇವ ರಾಘವ ದನುಜ ದೂತರ
ನೋವಿ ಕಳುಹಿಸಿ ಬಟ್ಟೆಗೊಡದಿರೆ
ಪಾವಕಾಸ್ತ್ರದಿ ನೀರನುರುಹಿದ ವರುಣನನು ಕಾಯ್ದ ॥
ಭಾವಿಸಲು ನವರಸವ ನಡಿಗಡಿ
ಗೀವುತಿಹ ರಾಮಾಯಣಾಖ್ಯದಿ
ತೀವಿದೆಪ್ಪತ್ತೊಂದು ಪದನದಿ ಮುಗಿದುದೀ ಸಂಧಿ ॥ ೭೧ ॥

## ೧೬ನೇ ಸಂಧಿ

ಪಲ್ಲ || ದುಷ್ಟಜನ ಸಂಗದಲಿ ಸಜ್ಜನ
ಕೆಟ್ಟನೆಂಬುದು ಶರಧಿಗಾದುದು
ಕಟ್ಟೆಯಾದುದು ಕಡೆಗೆ ವರುಣನ ವಾಸವಯ್ಯಯ್ಯ ||

ಪದ || ಬೆಟ್ಟದಿಂದವೆ ನೀರ ನಿಧಿಯನು
ಕಟ್ಟಬಲ್ಲಿರಯೆನಲು ದೇವರು
ಮುಟ್ಟಿ ನಿಮ್ಮಭಟರುಗಳ ತ್ರೈಜಗ ಕಾಣಬೇಕೆಂದು ||
ನೆಟ್ಟನುಸುರದೆಯಿದ್ದೆ ನಿಮಗದು
ಇಷ್ಟವಾದೊಡೆ ನೇಮವೀವುದು
ಕಟ್ಟಿ ತೋರುವೆ ಕಡಲನೆಂದನು ನಳನು ನರಹರಿಗೆ || ೧ ||

ತರಣಿಕುಲಪತಿಯೊಲವಿನಿಂದಲಿ
ತರುಚರೇಶ್ವರ ನಳನ ಕರೆದೀ
ಗಿರಿಗಳಿಂದವೆ ಕಡಲ ಕಟ್ಟುತ ವಿಜಯಿಯಾಗೆಂದು ||
ಶಿರದಲಭಯವನಿಟ್ಟು ನಿಜಕರ
ಸರಸಿಜದಿ ಮೈದಡವಿ ಕಪಿಗಳಿ
ಗರಸ ನೇಮವ ಕೊಟ್ಟು ಲಂಕೆಗೆ ಬೇಗೆಯನು ಬಿಟ್ಟ || ೨ ||

ಒಡೆಯನಾಜ್ಞೆಯ ಧರಿಸಿ ಶಿರದಲಿ
ಮುಡಿದು ತುಳಸೀ ದಳವ ರಾಘವ
ನಡಿಯ ಮನದಲಿ ನೆನೆದು ನೆಗೆದನು ತೆಂಕತಡಿ ತನಕ ||
ತಡಿಯನರ್ಚಿಸಿ ಪಡೆಗೆ ಕೈಮುಗಿ
ದಡಿಗಡಿಗೆ ಬೊಬ್ಬಿರಿದು ನಳ ಕಪಿ
ಪಡೆಗೆ ಕೈವೀಸಿದನು ಬೆಟ್ಟವ ಬೇಗ ತರಲೆನುತ || ೩ ||

ಆರುತಾ ಕಪಿಸೇನೆ ದೆಸೆಗಳ
ಸೇರಿ ಬೆಟ್ಟವ ಕೀಳುತಿರ್ದುದು
ಸಾರಿಯರೆಗಳ ನಡಕುತಿದ್ದುದು ನಳನ ಸನ್ನಿಧಿಗೆ ||
ಮಾರಿಯಾದರೊ ಗಿರಿಕುಲಕ್ಕೆ ಕು
ಠಾರರಾದರೊ ವಿಧಿಯಿದಿರ್ಗೊಳಿ
ಬೇರು ಸಹ ತರುತಿರ್ದರಧಟರದೇನ ಬಣ್ಣಿಸುವೆ || ೪ ||

ದೆಸೆದೆಸೆಗೆ ಹರಿಹರಿದು ಕಪಿಗಳು
ವಸುಧೆಯೊಳಗಣ ನಗವ ತರುತಿರೆ
ಮುಸುಗಣಾಧಿಪ ಬಂದ ದಾರುಕನೆಂಬ ಕಪಿವೀರ ॥
ಹಸಿದ ಮದಕರಿಯೊಡಲು ಹೂವಿನ
ವಿಸರದಲಿ ತುಂಬುವುದೆಯೆನುತವೆ
ಅಸಮ ಸಾಹಸಿ ನಗುತ ನೋಡಿದ ಶರಧಿಯಿದ್ದಡವ ॥ ೫ ॥

ಬೆಳಸಿ ನಿಜ ಬಾಲವನು ಶರಧಿಯ
ವಲಯದಿತ್ತಡಿಗಳನು ಸೂತ್ರಿಸಿ
ಅಳೆದನಗ್ಗದ ವೀರರೆಲ್ಲರು ಕಂಡು ಬೆರಗಾಗೆ ॥
ವಲಿಮುಖನು ಹರಿದೈದು ಬಾಲದ
ಲೆಳೆದು ಕಿತ್ತನು ಹೊತ್ತು ತಂದನು
ಜಲಧಿ ಮಧ್ಯದಲಿಕ್ಕಲಗ್ಗದ ಮೀನು ನುಂಗಿದುದು ॥ ೬ ॥

ಕಂಡು ಬೆರಗಾದನು ಮಹೇಶ್ವರ
ಖಂಡ ಪರಶುವೆ ಬಲ್ಲನೆನುತು
ದ್ದಂಡನದರಿಮ್ಮಡಿಯ ಹೆಗ್ಗಿರಿಯೊಂದ ಕಿತ್ತೆತ್ತಿ ॥
ಡೆಂಡಣಿಸಿ ಬಲುಹಿಂದ ಕಪಿಭಟ
ಮಂಡೆಯಲಿ ಹೊತ್ತೆತ್ತಿ ತಂದನು
ಗಂಡುಗಲಿ ಹಾಯ್ಕಿದರೆ ಮುಳುಗಿತು ತಳದ ಪರಿಯಂತ ॥ ೭ ॥

ಹರಿಯನುಗ್ರಹ ಮತ್ತೆ ತಂದೆಯ
ವರವು ನಿಜದಲಿ ವೀರ ನಳಗಿರೆ
ತರುಚರೇಶ್ವರರೊಳಗೆ ಮತ್ಸರ ಪಣ್ಯ ಕೊನೆಯಾಯ್ತು ॥
ಹುರುಳುಗೆಡದಲೆ ಕಪಿ ಸಮೂಹಕೆ
ಗುರುವಲಾ ನಳನೆಂದು ಕಪಿಗಳು
ಗಿರಿಚಯಂಗಳ ತಂದುಕೊಟ್ಟುದು ನಳನ ಸನ್ನಿಧಿಗೆ ॥ ೮ ॥

ಕುಲಿಶಧರ ಮರ್ಕಟರ ವೇಷವ
ತಳೆದು ಕೀಳುವನದ್ರಿಗಳನೆನೆ
ಎಲೆಲೆ ಕುಲಗಿರಿಗಳನು ಹಿಡಿದಲ್ಲಾಡಿ ನೋಡಿದರು ॥
ಮುಳಿದು ಗಿರಿಗಳನದ್ರಿಶೃಂಗವ
ಬಲು ಮರಂಗಳ ಕಲ್ಲು ಗುಂಡನು
ಕಳಚುಗೀ ಬ್ರಹ್ಮಾಂಡವೆನೆ ತರುತಿರ್ದರತಿಬಲರು ॥ ೯ ॥

ಹಳಚಿ ಹೆಗ್ಗಿರಿ ಹೋಳುತಿರಲದ
ಕಳುಕಿ ಧರೆ ಬಾಯ್ಬಿಟ್ಟಡಜನಾ
ಕುಲಿಶಪಾಣಿಗೆ ಪೇಳಿ ಪಕ್ಷವನಿಂದ್ರ ಕಡಿದಾಗ ॥
ಉಳಿದ ಕೆಲವೆಡೆಯೆಡೆಯು ಗಿರಿಗಳ
ಹಳೆಯು ಹರಿಬಕೆ ಕಪಿ ಸ್ವರೂಪವ
ತಳೆದು ಕಿತ್ತುದಧಿಯಲಿ ಮುಳುಗಿಪನೆಂಬ ತೆರನಾಯ್ತು ॥ ೧೦ ॥

ಒಟ್ಟುವರು ಪರ್ವತದ ರಾಶಿಯು
ಕಟ್ಟಿದನು ಕೈಯಿಂದ ಚರಣದಿ
ಮೆಟ್ಟಿ ಕೀಲಿಸಿ ತರಲಿ ಬೆಟ್ಟವ ತರಲಿ ಬೇಗೆನುತ ॥
ವಿಷ್ಟಪೇಶ್ವರರೆಲ್ಲ ಕಪಿ ಜಗ
ಜಟ್ಟಿ ಭಲರೇ ಪೂತುರೆನೆ ಸಮ
ಗಟ್ಟಿ ಮಾಡುತ ನಡೆದು ನಡೆಸಿದ ಮುಂದೆ ಸೇತುವನು ॥ ೧೧ ॥

ಮಿಳಿಯು ಬಾಲದಲೆಳಸಿಕೊಂಡವು
ಕುಲವಬಿಟ್ಟಗಲಿದುವು ನಗಕುಲ
ಬಳಿಯಲೈದಿದವೆತ್ತ ತೆಗೆದತ್ತತ್ತ ಮುಖವಾಗಿ ॥
ಕುಲವಿಹೀನದ ನಾರಿಯಂದದ
ಲುಲಿಯೆ ಬಗೆಗಳಿಗೆಯ್ದಿ ಬಂದುವು
ಕುಲವಿನಾಶಿಯುಯೆಡೆಗೆ ಸಗ್ಗದ ಪಿತೃಗಳಂದದಲಿ ॥ ೧೨ ॥

ಭರದಲಾ ಹದಿನಾಲ್ಕು ಬೆಟ್ಟವ
ತರುಚರೇಶ್ವರನೊಬ್ಬ ಬಲುಹಿಂ
ಧರಣಿ ಕಂಪಿಸೆ ಕಿತ್ತುತಂದನು ಬಾಲದಗ್ರದಲಿ ॥
ಚರಣನಾಲ್ಕೆತ್ತುಗಳ ಹೋಲಲು
ಗಿರಿಯ ಬೆನ್ನಲಿ ತಾಳಿ ಬಂಡಿಯ
ಭರದಿಯೆಳೆವಾ ನಳನು ಬಂಡಿಯು ಬೋವನಯ್ತಂದ ॥ ೧೩ ॥

ಲೋಕವಾ ಹದಿನಾಲ್ಕು ತಂದನೊ
ಲೋಕವೀಪರಿ ತನಗೆಯೆಂದನೊ
ಲೋಕದೊಡೆಯನ ಭೃತ್ಯನಘಟನದಾವ ಬಣ್ಣಿಸುವ ॥
ಸಾಕು ಸಾಕಹುದಹುದೆನುತ್ತ ಪಿ
ನಾಕಧರ ತಲೆದೂಗುತಿರ್ದನು
ಆಕೆವಾಳನೆ ಹಿಡಿಯೆನಲ್ಕವನಾಂತನೆಡಗೈಯ್ಯ ॥ ೧೪ ॥

ಖೋಡಿಗೊಂಡನು ಕಂಡು ಶತಬಲಿ
ನೋಡಿ ಮಾರುತಿ ನಾಚುತೆಂವನು
ನೋಡು ನೋಡೀ ನಳನ ಗರ್ವವನೆಂದು ಮನದೊಳಗೆ ॥
ಬೇಡ ಸಾಕೆಂದೆನಿಸಿಕೊಂಡವೆ
ಹೇಡಿಯುಹನೇ ವೀರನೀತಂ
ಗಾಡಲೇತಕೆ ತಂದು ಬಿಸುಡುವೆ ಬೆರಳಲಾನುವನೊ ॥ ೧೫ ॥

ಶಿರದಲೈದನು ಹೆಗಲಲೆಂಟನು
ಎರಡನಂಗೈಯಲ್ಲಿ ಧರಿಸಿದ
ಭರದಿ ಕಕ್ಷದಲೆರಡ ದಂಡೆಯ ಸಂಧಿಯೊಳಗೊಂದ ॥
ಉರದಲೋಂದೀರೈದ ಬಾಲದಿ
ಚರಣದಿಂದೊಂದೊಂದು ಬೆಟ್ಟವ
ಮರುತಸುತ ಬತ್ತೀಸ ಗಿರಿಗಳ ಹೊತ್ತು ಹರಿತಂದ ॥ ೧೬ ॥

ಎಲೆಲೆ ನಳ ನಳ ಗಿರಿಯ ಹಿಡಿ ಹಿಡಿ
ತಳುವಮಾಡದೆ ಬೇಗ ಹಿಡಿಯೆನೆ
ಚಲನಸಂಭವ ಕನಲುಗೆಂದವನೆರಡು ಕೈಗಳಲಿ ॥
ನಳನೊ ಖಳವನದಧಟ ಕಾಲಾ
ನಲನೊ ಮುಳಿದವರಿಂಗೆ ದಾವಾ
ನಲನೊ ಅಮಮಾ ಗಿರಿಯನಾಂತನು ಸುರರುಘೋಯೆನಲು ॥ ೧೭ ॥

ಕಳಸ ತಂದನೊ ಖಳನ ಹಲ್ಲನು
ಕಳಚಿ ತಂದನೊ ಭಟರ ಭಾಗ್ಯವ
ಕಳೆಸ ತಂದನೊ ರಾಮನಭ್ಯುದಯಕ್ಕೆ ಮಂಗಳವ ॥
ಬೆಳಸ ತಂದನೊ ಗಿರಿಕುಲಂಗಳ
ತೊಳಿಸ ತಂದನೊ ದಿವಿಜರಿಪುವಿನ
ಮುಳಿಸ ತಂದನೊ ಭಲರೆ ಭಾಪುರೆ ವೀರ ಹನುಮಂತ ॥ ೧೮ ॥

ಅಗಲ ಯೋಜನ ಹತ್ತರಳತೆಯ
ಮುಗಿದನೈ ಮೂವತ್ತು ನೀಳವ
ಬಿಗಿದನದ್ರಿಗಳಿಂದ ನಳನಾ ದಿನದ ಕಡೆಗೆನಲು ॥
ಹಗೆಯ ದುರ್ಗವು ಕಾಣ ಬಂದುದು
ಗಗನ ತೆರಪಾಯ್ತಾರುಯಿಲ್ಲದೆ
ಮುಗಿಯೆ ಪದ್ಮಿನಿ ನಗಲು ಕುಮುದಿನಿಯಗಲಿ ಚಕ್ರಯುಗ ॥ ೧೯ ॥

ಎಲವೊ ರಾವಣ ಕೇಳು ರಾಮಂ
ಗಿಳೆಯ ಮಗಳನು ಕೊಟ್ಟು ಕಾಂಬುದು
ಮುಳಿದಡಸುರಾಂತಕನು ಬಪ್ಪುದು ಮಾರಿ ನಿನಗೆಂದು ॥
ಖಳಗೆ ಬುದ್ಧಿಯ ಹೇಳಲಬ್ಧಿಯ
ನಿಳಿದನೋ ರವಿಯಲ್ಲಿತನ್ನಯ
ಕಳೆವರೆದ ಬಹಳೋಷ್ಣವಡಗಲು ಕಡಲ ಮುಳುಗಿದನೊ ॥ ೨೦ ॥

ಕಡಲ ಹೂಳುವ ವನದ ಕಪಿಗಳು
ತೊಡಗಿದವು ಗಡ ವನಧಿ ಕಟ್ಟುವ
ಬೆಡಗು ಹುಸಿಯೋ ದಿಟವೊ ನೋಡುವೆನೆನುತಲಂಬರದಿ ॥
ಉಡುಗಣಂಗಳ ಸಹಿತ ವಿಭವದಿ
ಉಡುಗಣಾಧೀಶ್ವರನು ಮೂಡಿದ
ಪೊಡವಿಪತಿ ನಿತ್ಯವನು ಸಲಿಸಿದನುಂಡು ಪವಡಿಸಿದ ॥ ೨೧ ॥

ತನ್ನ ಸಿಂಹಾಸನದಲಬ್ಜನು
ಮನ್ನಣೆಯ ಕೇಳುತ್ತ ಕನಲಿದ
ನಿನ್ನ ನೋಡುವೆನಿಲ್ಲಿ ನಿಂದರೆ ಬಳಿಕ ತಾರೇಶ ॥
ತನ್ನೆಡೆಯ ಮೇಲಿದ್ದನೆನುತವೆ
ಹೊನ್ನ ರಥವೋಡಿಸುತ ಭರದಲಿ
ಚೆನ್ನ ಗಾಲಿಯನೊಂದ ಮೆರೆದೈತಂದ ದಿನನಾಥ ॥ ೨೨ ॥

ಉರಿಯನುಗುಳುತ ಕೋಪದಿಂದವೆ
ಕಿರಣಪತಿ ತಂಬೆಳಕ ನುಂಗಲು
ಆರರೆ ಮೂವತ್ತೆರಡು ಗಳಿಗೆಗೆ ಮೂಡಲಿಗೆ ಬಂದ ॥
ಇರುಳರಸ ನೋಡಿದನು ಪ್ರಖರದ
ಕಿರಣದಿಂದುರಿವುತ್ತ ಬಪ್ಪನ
ಸರಿಸ ಸಲ್ಲದೆನುತ್ತ ನಡುಗಡಳೊಳಗೆ ಶಶಿ ಬಿದ್ದ ॥ ೨೩ ॥

ರಾಮನುಪ್ಪವಡಿಸಿದ ಮೊಗದೊಳೆ
ದಾ ಮಹೇಶ್ವರ ಪೂಜೆಮಾಡಿದ
ಕಾಮರೂಪದ ಕಪಿಗಳೈದಿತು ಪರ್ವತವ ತರಲು ॥
ವ್ಯೋಮ ಚುಂಬಿಪ ನಗವ ಖಂಡಿಸಿ
ತಾ ಮೆರೆದ ತಲೆವರೆಯ ಹೇರಿಗ
ಭೀಮ ಬಾಲದ ಅಗ್ಗ ಬಿರುದಿನ ನಳನ ಸೇರಿದವು ॥ ೨೪ ॥

ಬಿಡದೆ ಮೂರು ದಿನಕ್ಕೆ ನಳನಾ
ಕಡಲ ಕಟ್ಟಿದ ತೆಂಕ ತಡಿಗೆನೆ
ಬಡ ವಲೀಮುಖರಕ್ಕರಿಂದಾ ತಡಿಗೆ ಹರಿತಂದು ॥
ನುಡಿದ ಸಾಕ್ಷೈ ಸಾಕು ತರದಿರಿ
ಕಡಲು ಕಟ್ಟಿತು ಬೇಡ ಬೇಡೆನೆ
ಹಿಡಿದ ಗಿರಿಗಳನಲ್ಲಿಗಲ್ಲಿಗೆ ಬಿಸುಟು ಬರುತಿರಲು ॥ ೨೫ ॥

ಹಣಿದ ಗಿರಿಗಳ ಗಡಣ ಮುಂದಕೆ
ರಣದಿ ಮಣಿದರ ರುಂಡ ಮುಂಡವು
ಮಣಿಯುದವದಿರ ಹೆಡಕುಗುಟ್ಟಲು ಕಪಿಗಳಿಂಗೆನಲು ॥
ಬಣಗುಗಳ ಮರುಳಾಟವಲ್ಲಿದು
ಗಣಿಸಲಗಣಿತ ರಾಮಬೆಂಬಳಿ
ಯೆಣಿಸಡಳತೆಯ ಕೊಳೆಬಾಲವು ಸೇತು ಬಂಧನಕೆ ॥ ೨೬ ॥

ಕಟ್ಟಿಯೋ ಹರಿ ಸೇನೆ ನಡೆವಾ
ಬಟ್ಟಿಯೋ ರಾಘವನ ವೀರದ
ಪಟ್ಟಿಯೋ ಎನಲೊಪ್ಪುತಿದ್ದುದು ಜನದ ಕಣುಮುನಕೆ ॥
ಬಿಟ್ಟಿಯೋ ಸಾಗರನು ನಡೆಸುವ
ಸಿಟ್ಟಿಯೋ ಕುಲಗಿರಿಯ ವಂಶದ
ಕಟ್ಟಿದೆಯ ಪಕ್ಷವನು ಹೋಲಿತು ಸೇತು ಖಳಕೇತು ॥ ೨೭ ॥

ಕಟ್ಟಲಿತ್ತಲು ಕಡಲ ಕಪಿಗಳು
ಕಟ್ಟಲತ್ತಲು ಗುಡಿಯನಸುರರು
ಕಟ್ಟಲಿತ್ತಲು ಸುರಕನಸುರರು ರಘುಕುಲೋತ್ತಮನ ॥
ಪಟ್ಟದಾನೆಗಳಪ್ಪ ಕಪಿಗಳು
ಕಟ್ಟಿದರು ಸಿಂಧುವನು ವಿಭಿಷಣ
ಬಟ್ಟಿದೆಗೆದರೆ ಲಂಕೆ ನೆರೆ ಸಕಳಂಕೆಯಾಯ್ತೆಂದು ॥ ೨೮ ॥

ಕಡಲ ಕಟ್ಟಿದುವರಸಯೆಂದೆನೆ
ಪೊಡವಿಪತಿಯುಡಲಿತ್ತ ಬಳಿಕಾ
ಪಡೆಯ ಪಯಣದ ಭೇರಿ ಹೊಡೆದುದು ರವಿಜನಾಜ್ಞೆಯಲಿ ॥
ನಡೆವುತಿರೆ ಪಡೆ ಕೋಟಿ ಕೋಟಿಯು
ನಡುವೆಯಿಟ್ಟಿಡೆ ನಳ ದರಿದ್ರನ
ಒಡವೆ ಹೋಯಿತೆ ಕಟ್ಟದಾದನುಯೆಂದು ಕೆಲರೆನಲು ॥ ೨೯ ॥

ದಾಟಿದುದು ಹವಣಿಲ್ಲ ಮುಂದಕೆ
ದಾಟುವರ ಹವಣಿಲ್ಲ ಹಿಂದಕೆ
ದಾಟುತಿದ್ದರಯೆಣಿಕೆ ಅರಿಯೆನು ಶಿವ ಮಹಾದೇವ ॥
ಕೋಟಿ ಮುತ್ತಿಗೆಯಾಯ್ತೊ ಖಳರಿಗೆ
ಕೋಟಲೆಯ ಮುತ್ತಿಗೆಯೊ ಹೇಳೆನೆ
ಕೋಟಿ ಕಪಿಗಳು ವಾರ್ಧಿಮಧ್ಯದ ಭ್ಯೆತ್ರದಂತಾಯ್ತು ॥ ೩೦ ॥

ನೋಡಿ ದೇವಾಂತಕ ನರಾಂತಕ
ನೋಡಿರೈ ಕೌತುಕವ ಕಡಲನು
ಕೋಡಗಂಗಳು ಕಟ್ಟಿ ಲಂಕೆಗೆ ಧಾಳಿ ಮಾಡುವುದ ॥
ಕೇಡು ಬಂದುದು ಖಳರ ವಂಶಕೆ
ಮೂಡು ಬಡಗಲು ತೆಂಕು ಪಡುವಲು
ಕೂಡೆ ಬಲು ನಾಯಕರು ಕಡೆಯುಗುಸೆಗಳಸಿಕ್ಕಿನಲು ॥ ೩೧ ॥

ಕೆಲದಿ ಸಾಹೋ ಎನಲು ಮಾರುತಿ
ತೊಲಗು ತೊಲಗೆನಲಂಗದಾದ್ಯರು
ಬಳಿಯ ಲಕ್ಷ್ಮಣ ರವಿಜ ಪಾಯುವಧಾರು ಹೋಯೆನಲು ॥
ಖಳರು ಪ್ರಾಣವ ಕೊಟ್ಟ ಪರಿಯಲಿ
ಬಲದ ಕೈಗೊಟ್ಟಿರಲು ವಿಭಿಷಣ
ಖಳರು ಕಳವಳಿಸುತ್ತ ಧೃತಿಗೆಡೆ ರಾಮ ನಡೆತಂದ ॥ ೩೨ ॥

ಕಡೆಯ ಮೂಡಣ ಕೋಟೆಯೊಪ್ಪಿರೆ
ನಡೆದು ಬಂದನು ರಾಘವೇಶ್ವರ
ಒಡೆಯರಿಲ್ಲಿಹರಾರು ಹೇಳೆನಲೆಂದ ವಿಭಿಷಣನು ॥
ಒಡೆಯನಿಪ್ಪ ಪ್ರಹಸ್ತ ರಕ್ಕಸ
ನೊಡನೆ ನಾಯಕರಯುತ ವಿಹುದೆನೆ
ಬಿಡಿಸಿದನು ಹರಿಯಲ್ಲಿ ನೀಲನ ಕೋಟಿ ಪಡೆಸಹಿತ ॥ ೩೩ ॥

ಬಂದು ತೆಂಕಣ ದಾರವಟ್ಟದಿ
ನಿಂದು ಕೋಟೆಯ ನೋಡಿ ಹೊಗಳು
ತ್ತೆಂದನಿಲ್ಲಿಹರಾರು ಹೇಳೆನೆ ಧೂಮ ಧೂಮ್ರಾಕ್ಷ ॥
ಬಂದು ನಿಯುತದ ಸೇನೆ ಸಹಿತವೆ
ಒಂದು ಕೋಟಿಯನಲ್ಲಿ ಬಿಡಿಸಿದ
ನಿಂದಿರಾಪತಿ ಯುವ್ವರಾಜ್ಯದ ರಾಯನಂಗದನ ॥ ೩೪ ॥

ವರುಣದಿಕ್ಕಿಗೆ ಬಂದನಾ ಹರಿ
ನಿರುತವಿಲ್ಲಿಹರಾರು ಹೇಳೆನೆ
ಸುರದಿಶಾಪಟನಿಂದ್ರಜಿತುವಿಹನಯುತ ಮೂರರಲಿ ॥
ಅರಸ ಚಿತ್ತೈಸೆನೆ ವಿಭೀಷಣ
ಮರುತ ತನಯುಸನಲ್ಲಿ ಬಿಡಿಸಿದ
ತರುಚರಾಧಿಪರೊಂದು ಕೋಟಿಯ ಕಾಹ ಹೇಳಿದನು ॥ ೩೫ ॥

ಲೋಕಪತಿ ತಾ ಬಿಟ್ಟು ಬಡಗಲು
ಸಾಕು ಸಾಕಾಯ್ತಿಲ್ಲ ಖಳರಿಗೆ
ನೂಕು ನೂಕಾಯ್ತೇನ ಹೇಳುವೆನುಬ್ಬಸದ ಪರಿಯು ॥
ಲೋಕದವರೇ ಕಪಿಗಳಕಟಾ
ನಾಕು ಕಡೆಯಲಿ ಸುತ್ತುಕಟ್ಟಿತು
ಮೂಕ ಮಿಂಡನು ಕಂಡು ಸತಿಯನು ಕನಲಿದಂತಾಯ್ತು ॥ ೩೬ ॥

ಅಪದೆಸೆಯ ಕಾಲಕ್ಕೆ ದೈವದ
ಕೃಪೆಗೆ ಬಾಹಿರನಾಗಿ ಕೆಡುವನು
ಚಪಲವಾನರರೆಂಬುದದು ಹುಸಿ ಚಪಲನಾ ಖಳನು ॥
ಕಪಿಗಳೀಪರಿ ನೆರೆವುದುಂಟೇ
ಕಪಿಗಳಬ್ಧಿಯ ಬಿಗಿವುದುಂಟೇ
ಅಪರಿಮಿತವಾಯ್ತಿಂದು ಲಂಕಗೆ ಕೇಡುಗಾಲವೆನೆ ॥ ೩೭ ॥

ಮಲ್ಲನೆಲ್ಲವ ಬಲ್ಲ ಸೀತೆಯ
ಕಳ್ಳನೊಂದೇ ಹೊಲ್ಲ ಬುದ್ಧಿಯ
ಕೊಳ್ಳನಂತತಿ ಖುಲ್ಲ ದನುಜೆಯ ನಲ್ಲ ಹೆಗ್ಗಲ್ಲ ॥
ಕೊಲ್ಲ ಹಂದೆಯನೊಲ್ಲ ಕರ್ಮವ
ಸಲ್ಲ ನಿರಯಕೆ ತಳ್ಳಿದಲೆಯುವ
ನಲ್ಲದಿಲ್ಲಗ್ಗಳಿಯ ವೀರನು ಭಾಪು ಸಿರಿವಂತ ॥ ೩೮ ॥

ಯಂತ್ರ ಬೇತಾಳಗಳ ವೊತ್ತವು
ಯಂತ್ರ ಗಿಡುಗಗಳೊಂದು ದೆಸೆಯಲಿ
ಯಂತ್ರದುಕ್ಕಿನ ಗಾಣದೋಳಿಯ ಹುರಿದ ಮಳಲುಗಳು ॥
ಯಂತ್ರದೊಡ್ಡೀಸಂಗಳೊಂದೆಡೆ
ಯಂತ್ರ ಸಿಂಹವು ಸಿಡಿಲಪೊಟ್ಟಣ
ಯಂತ್ರ ಹೆಬ್ಬುಲಿ ಶೂಲಡೆಂಕಣಿಗಳನು ಹೂಡಿದರು ॥ ೩೯ ॥

ಕಡುಜುರಿನ ತೊನೆವಸಿಯು ಕೊಡೆಗಳ
ಸಿಡಿಲ ಬಡಿಗೆಯು ಕಡಿಕು ಯಂತ್ರದ
ಬಿಡದ ಕುರುಜೆಯು ಹಿಂಡು ತುದಿಯಲಿ ತುಂಬೆ ಎಡೆಬಿಡದೆ ॥
ಅಡಿಗೆ ಜೀರ್ಕೊಳವಿಗಳು ನಂಜಿನ
ಮಡುಹು ಹೆಬ್ಬುಲಿ ಕರಗಸಂಗಳು
ಆಡಿಯನೂರಿದರೊಡನೆ ನುಂಗುವ ಮೋಸ ಕೂಪಗಳು ॥ ೬೦ ॥

ಹಳೆಯ ಹೆಬ್ಬಾವುಗಳ ಹೇಳಿಗೆ
ಹೊಳೆವ ಸಿಂಧ ಪತಾಕೆ ಹಳವಿಗೆ
ಹಲವು ಹಾವಿನ ಬಾವಿ ಬತ್ತಲೆ ಬಸುರ ಮಾರಿಯರು ॥
ಎಲೆಲೆ ಹರನುರಿಗಣ್ಣಿನಂತಿರೆ
ಖಳನು ವಿಜೃಂಭದಲಿ ದುರ್ಗವ
ಬಲಿದುಕೊಂಡಿರೆ ಲಕ್ಷ್ಮೀವಲ್ಲಭ ನೋಡಿ ನಗುತಿರ್ದ ॥ ೬೧ ॥

ಅಂಕದತಿಬಲರೆನಿಪ ಕಪಿಗಳು
ಶಂಕೆಯಿಲ್ಲದೆ ಕಡಲ ಕಟ್ಟಿತು
ಲಂಕೆ ಮುತ್ತಿಗೆಯಾಯ್ತು ದಿನಪತಿ ಕಡಲ ಮುಳುಗಿದನು ॥
ಬಿಂಕದಲಿ ಪದಬಂಧವಾರೇ
ಳಂಕವಡೆಯಲು ಸಂಧಿ ಮುಗಿದುದು
ಪಂಕಜಪ್ರಿಯ ಕುಲದ ರಾಘವನಿರ್ದ ಮುದದಿಂದ ॥ ೬೨ ॥

## ೧೭ನೇ ಸಂಧಿ

ಪಲ್ಲ ॥ ದಡಿಗ ದಶಶಿರ ಕಮಲನಾಭನ
ಪಡೆಯ ನೋಡಲು ಕಂಡು ಬೊಬ್ಬಿಡೆ
ಕೊಡೆಯ ಕಡಿದನು ರಾಮಚಂದ್ರನು ದೇವತತಿ ಹೊಗಳೆ ॥

ಪದ ॥ ಉದಿತ ಮಂಗಳ ಘೋಷ ಪುಣ್ಯ
ಪ್ರದವು ಪಾಠಕ ವಂದಿಮಾಗಧ
ರೊದಗಿದುತ್ಸವದೊಳಗೆ ರಾವಣನುಪ್ಪವಡಿಸಿದನು ॥
ವಿದಿತ ಮುಖಮಜ್ಜನವ ಸಲಿಸಿರೆ
ವಿಧಿಸಿ ಶೃಂಗಾರವನು ಮಾಡಿರೆ
ಮುದದಲೋಲಗವೀಯೆ ಚಾರರು ಬಂದು ಹೇಳಿದರು ॥ ೧ ॥

ಚಿತ್ತವಿಸು ದಶಕಂಠ ಕಪಿಗಳು
ಹತ್ತು ಯೋಜನದಗಲ ಸೇತುವ
ಹೊತ್ತು ಶಿಲೆಗಳನಡಸಿ ಕಟ್ಟಿದರರಸನಾಜ್ಞೆಯಲಿ ॥
ಎತ್ತಿಬಂದೀ ತಡಿಯ ಲಂಕೆಯ
ಮುತ್ತಿದನು ನಾಲ್ದೆಸೆಯ ರಾಘವ
ತೆತ್ತು ಬದುಕಿದ ವರುಣ ಕಪ್ಪವ ರಾಮನಧಟಿಂಗೆ ॥ ೨ ॥

ಕೇಳಿಯಚ್ಚರಿವಡುತ ಮೂಗಿನ
ಮೇಲೆ ಬೆರಳಿಟ್ಟೊಲೆದು ತಲೆಗಳ
ಹೇಳು ಹೇಳೇನೇನು ದಿಟವೇ ಕಡಲ ಕಟ್ಟಿದರೇ ॥
ಕೇಳಬಹುದೇನೇನು ಕಪಿಗಳ
ಧಾಳಿ ಲಂಕೆಗೆ ಬಿಟ್ಟಿತೆನಗಾ
ಭಾಳಲೋಚನಿತ್ತ ವರ ಸರಿಯಾದುದಕಟೆಂದ ॥ ೩ ॥

ಮಾನವರು ಖಳರಿಂಗೆ ಮಲೆತುದ
ನಾನು ಕಾಣೆನು ಹಲವು ಕಾಲಕೆ
ಕಾನ ಕೋಡಗ ನೆರೆದು ಕಡಲನು ಹಿಂದೆ ಕಟ್ಟಿದುದ ॥
ಹಾನಿ ತಪ್ಪದು ಹೋಗು ಶುಕ ನೀ
ಮಾನವೇಂದ್ರನ ಬಲವ ತಿಳಿದು ನಿ
ದಾನವನು ತನಗರುಪು ಬೇಗದಲೆನಲು ಹೊರವಂಟ ॥ ೪ ॥

ಕಪಟದಿಂದವೆ ತಿಳಿಯ ಬೇಹುದು
ರಿಪುಗಳೊಳಗನು ಬಲುಹು ತೀರದು
ಕಪಿಯ ರೂಪದಿ ಹೊಕ್ಕು ನೋಡುವೆನೆನುತ ಖಳನೆಯ್ದಿ ॥
ತಪನಕುಲಜನ ಪಡೆಯ ಬೆರಸಲು
ಕಪಟವೆಲ್ಲಿಗೆ ಸಲುವುದೆಂದೆನೆ
ಗುಪಿತವೇಷಿಯನರಿತು ವಿಭಿಷಣ ಹರಿಗೆ ಸೂಚಿಸಿದ ॥ ೫ ॥

ಕೆಲದಲಿದನರಿತನಿಲನಂದನ
ಖಳನ ಹಿಡಿದರೆ ಮಾಯೆಯಡಗಿತು
ಸೆಳೆದು ಬಾಲದಿ ಕಟ್ಟಿ ತಂದನು ರಾಯನೋಲಗಕೆ ॥
ಎಲವೊ ಕಪಟದಿ ಬಂದೆಯೇಕೆನೆ
ಖಳನು ಸುಭಟರ ತಿಳಿದು ಬಾರೆಂ
ದುಲಿದು ಕಳುಹಲು ಬಂದೆ ಚಿತ್ತೈಸೆಂದನಾ ಶುಕನು ॥ ೬ ॥

ಮಡುವಿನುದಕದ ನೆಲೆಯ ದಂಡದಿ
ನುಡಿಯ ಗುಂಫನ ಮರ್ಮ ವಚನದಿ
ಪಡೆಯ ಚಿತ್ತವನರಸು ಮನ್ನಿಸುತಿಪ್ಪ ಮಂತ್ರಿಯಲಿ ॥
ಕಡೆಗೆ ದುರ್ಗವ ಚಾರ ಮುಖದಲಿ
ಬಿಡದೆ ತಿಳಿವರು ನೀತಿವಂತರು
ಒಡೆಯರವಧರಿಸುವುದು ನೀತಿಯನೆಂದ ಸುಗ್ರೀವ ॥ ೭ ॥

ದನುಜರಿವರತಿ ಕುಟಿಲವಂತರು
ವನಚರೇಂದ್ರರ ಬಲವ ತಿಳಿವರು
ದನುಜಪತಿಗರುಪುವರು ಸೈನ್ಯವಿಭೇದ ಮರ್ಮವನು ॥
ದನುಜ ತಾನತಿ ಚದುರನಹಹಾ
ವನಚರಂಗಳು ನಾವು ಹೆಡ್ಡರು
ದನುಜ ಹೇರಿಗನಿವನ ಕೊಲಬೇಕೆಂದ ಹನುಮಂತ ॥ ೮ ॥

ಮರುಳೆಲೈ ಹನುಮಂತ ದಾನವ
ನರಿತು ಮಾಡುವುದೇನು ಮರ್ಮವ
ನೊರೆದು ಮಾಡುವದೇನು ಸಿತ್ತರೆ ಕೊಲುವೆ ಸಮರದಲಿ ॥
ಒರೆದು ನೋಡಲಿ ಮರ್ಮಭೇದವ
ಕರೆದು ನೋಡಲಿ ಬಲು ಕಪೀಂದ್ರರ
ಸರಕುಮಾಡೆನು ತೋರು ವಿಭಿಷಣ ಪಡೆಯ ಪಟುಭಟರ ॥ ೯ ॥

ಎಲವೊ ರಿಪುಕುಲ ಕಾಲಭೈರವ
ಜಲಜಲೋಚನನೀತ ಲಕ್ಷ್ಮಣ
ಖಳದಿಶಾಪಟಮಲ್ಲ ಕಪಿವರನೀತ ಸುಗ್ರೀವ ॥
ಮುಲಿವ ದನುಜಮದಾಂಧ ರುದ್ರನು
ಹೊಳಲ ಸುಟ್ಟವನೀತ ಪವನಜ
ಬಲುಹಿನಂಗದ ನೀಲ ನಳ ಜಾಂಬವರ ತೋರಿದನು ॥ ೧೦ ॥

ಹಬ್ಬವನು ಖಳರಿಂಗೆ ಹಣ್ಣುವ
ರೊಬ್ಬರೊಬ್ಬರೆ ಸಾಕು ನಿತ್ತರೆ
ನಿಬ್ಬರದಿ ನೆರೆದಿರ್ದವರನಾರಾರ ತೋರಿಸಲಿ ॥
ಕೊಬ್ಬಿ ಬಂದರೆ ಕೋಡ ಕೊರೆವರು
ಜಬ್ಬುದುಳಿಯರು ಸೆಣಸಲೆಂದನು
ಒಬ್ಬರುಳಿಯದೆ ಸುಭಟರೆಲ್ಲರ ನೋಡು ನೀನೆಂದ ॥ ೧೧ ॥

ಕೇಳು ಶುಕ ನಮಗರಿದೆ ದೈತ್ಯನ
ಸೀಳಿ ಬಿಸುಡುವೆನಾಂತಡೀಕ್ಷಣ
ಹೇಳಲೇನದ ಹೇಸುವುದು ಮನ ಬೊಮ್ಮ ಹತಿಗಾಗಿ ॥
ಬಾಲಕಿಯು ಕೊಟ್ಟಿಮ್ಮ ಕಂಡರೆ
ಪಾಲಿಸುವೆ ಹರ ಮೆಚ್ಚಿ ನೆಣಸಲು
ಬಾಳಲರಿವೆನು ತಲೆಯನೆಂದುಡಲಿತ್ತು ಕಳುಹಿದನು ॥ ೧೨ ॥

ದನುಜ ಸಭೆಯನು ಹೊಕ್ಕನಾ ಶುಕ
ವನಧಿ ಕಟ್ಟಿತು ಸತ್ಯ ನೆರೆದಿಹ
ವನಚರಂಗಳ ಸೆಣಸಲಭವಂಗರಿದು ರಾಘವನ ॥
ವನಿತೆಯೊಪ್ಪಿಸು ಬದುಕಲೊಲುವಡೆ
ಕನಸು ಕದನದ ಮಾತು ಕಂಡರೆ
ಅನುಪಮದ ಸುಖವೀವೆನೆಂದನು ಕೇಳು ದಶಕಂಠ ॥ ೧೩ ॥

ಆಯಿತಾಯಿತು ಸೊರಹು ಬಲ್ಲೆನು
ಬಾಯಕಟ್ಟೀ ನಾಯನೆಲವೋ
ಕಾಯಲೇನಸಮರ್ಥನೇ ಘಡ ಮನುಜನೆನ್ನುವನು ॥
ಬಾಯಬಡಿಕನ ನೂಕೆನುತ ವಿ
ಡಾಯುದಲಿ ಹೊರವಂಟ ರಕ್ಕಸ
ರಾಯ ಪುಷ್ಪಕವೇರಿ ನಭದಲಿ ನೋಡಲೈತಂದ ॥ ೧೪ ॥

ಕಡುಗಲಿಯು ಪಡೆಬಿಟ್ಟುದಮುಮಾ
ಕಡೆಯು ಕಾಣದೆ ಹಲವು ಕಣ್ಣಲಿ
ಪಡಿಗ ರಾವಣ ನೋಡಿ ಮೂಗೇಣಿಟ್ಟು ಬೆರಗಾದ ॥
ಗಿಡು ಮರಂಗಳೆ ಕಪಿಗಳಾದುವೊ
ಪೊಡವಿ ಮುಸುಗಳನೀದುದೋ
ಗಡಣದಲೆಯುವನಳಲು ನಗೆಯುನು ನಕ್ಕ ಗಹಗಹಿಸಿ ॥ ೧೫ ॥

ನೋಡಿರೈ ಪರಿವಾರ ಮನುಜನ
ಬೀಡು ಕರ ಸೋಜಿಗವು ದಿಟ ಬಡ
ಕೋಡಗಂಗಳು ಹಲ್ಲುಗಿರಿವಾ ಸಂಭ್ರಮಂಗಳನು ॥
ಸೋಡಿ ಹೊಗಳಲು ಲಜ್ಜೆಯಿಲ್ಲವೆ
ಹೇಡಿಗಳನೇನೆಂಬೆನಿದ ಕೊಂ
ಡಾಡಬೇಡವೆ ತುರಗ ಕರಿ ರಥ ನೆರೆದ ಸುಭಟರನು ॥ ೧೬ ॥

ಮಕ್ಕಳಾಟಿಕೆ ಕೋಲ ತೋರಲು
ತೆಕ್ಕುವುದೆ ತೆರಳುವುದೆ ಮದಗಜ
ಮರ್ಕಟಂಗಳ ಮರುಳು ಮಾನವನೇಕೆ ನೆರಹಿದನೊ ॥
ದಿಕ್ಕುಗೆಟ್ಟವನೇನು ಮಾಡನು
ರಕ್ಕಸರನಿವರಿಂದ ಗೆಲುವನೆ
ಕಕ್ಕುಲಿತೆ ಕೋಡಗಗಳೆಲ್ಲವು ನೆರೆಯು ಪಡೆಯುಹುದೆ ॥ ೧೭ ॥

ದುರುಳ ರಾವಣ ಕರೆದು ಹೇಳಿದ
ಹೊರಗೆ ಶುಕಸಾರಣರನೆಲವೋ
ನೆರೆದ ಕಪಿಗಳ ಕಂಡೆ ರಾಘವನಾರು ತೋರೆನಲು ॥
ಅರಸ ಬಿನ್ನಪ ದಳದ ಮಧ್ಯದಿ
ಕರ ವಿಚಿತ್ರದ ರತುನಪೀಠದಿ
ಹರಿಣ ಚರ್ಮದ ಮೇಲೆ ಕುಳಿತಿರ್ದಾತ ರಾಘವನು ॥ ೧೮ ॥

ಮೆರೆವ ಮುತ್ತಿನ ಹಾರವಿಕ್ಕಿಹ
ತರಣಿಜನ ನೆಮ್ಮಿಹ ಚರಣವನು
ಮರುತನಂದನನೊತ್ತುತಿಹ ನಮ್ಮಯ ವಿಭೀಷಣನು ॥
ಕರವ ಮುಗಿದಿದಿರಾಗಿ ನಿಂದಿಹ
ಹರಿಣ ಬಾಲದ ಚಮರವೀಸುತ
ಹರಿಕುಲೇಶ್ವರ ನೀಲ ಮುಂದಿಹನಾತ ರಘುನಾಥ ॥ ೧೯ ॥

ಕಣೆಯು ತಿದ್ದುತ ಗರಿಯು ಕಟ್ಟುತ
ಹಿಣಿಲನೊರೆಸುತ ಮೊನೆಯ ಮಸೆವುತ
ಸೆಣಸನರಸುತ ತಿಗುವತಿದ್ದುತ ಹೆದೆಯನಳವಡಿಪ ॥
ರಣಕೆ ಸುಭಟರ ಹೊಣಕೆಮಾಡುವ
ತ್ರಿಣಯು ಪುರವನು ನೋಡಿ ಕಾಲವ
ನೆಣಿಪ ತೆರದಲಿ ನೋಡುತಿಹ ರಣಧೀರ ಸೌಮಿತ್ರಿ ॥ ೨೦ ॥

ಹರಜಟಾಜೂಟದಲಿ ಗಂಗೆಯ
ಧರಿಸುವದರಿಂ ಮುನ್ನ ಬಲ್ಲನು
ಗರುಡನಿಲ್ಲದೆ ನಡೆವ ಹರಿಯನು ಕಂಡು ತಾ ಬಲ್ಲ ॥
ಗರಳವನು ಕೊರಳಲ್ಲಿ ಶಂಕರ
ಧರಿಸುವಂದಿವ ಭರದ ಯವ್ವನಿ
ಹರಿಯ ಬಲದಲಿ ಹಿರಿಯ ಮಂತ್ರಿಯು ನೋಡು ಜಾಂಬವನು ॥ ೨೧ ॥

ನೋಡೆ ಕಣ್ಣಿವೆ ಸೀವುದುರ್ಮ ಮಾ
ತಾಡೆ ನಾಲಗೆಯುರಿಗರಸ ನೀ
ನೋಡಬೇಡಾ ರಾಮ ಬಾಣದ ಶಿಖಿಗಳತಿ ಬಿರಿಸು ॥
ಬೇಡ ಕದನದ ಘಸಣಿ ಸೀತೆಯ
ನೀಡೆ ಹರಿ ಕೃಪೆಮಾಡದುಳಿಯನು
ಕೇಡು ದನುಜರ ನೆಚ್ಚಿ ಕೆಡಬೇಡೆಂದನಾ ಶುಕನು ॥ ೨೨ ॥

ನೂಕಿವರ ನಮ್ಮೊಡನೆ ಉಂಬರು
ಕಾಕುಗೆಡುವರು ಪರರ ಗುಣಗಳ
ಸಾಕು ಕೇಳಿದೆನಾಯ್ತು ಬಳಲಿದೆ ಹೋಗು ಹೋಗೆನುತ ॥
ಭೀಕರವ ಮಾಡುವೆನು ಬೊಬ್ಬಿರಿ
ದಾಕೆವಾಳರ ಗಂಡುಗೆಡಿಸುವೆ
ನೀ ಕಪಿಗಳಥಟೀನು ರಾಮನ ಬಿಲ್ಲ ಬಿಡಿಸುವೆನು ॥ ೨೩ ॥

ದಡಿಗ ರಾವಣ ಹತ್ತು ಮುಖದಲಿ
ಬಿಡದೆ ಬೊಬ್ಬಿಡಲಮರರೋಡಿತು
ಹಿಡಿದ ದಂಡವ ಬಿಸುಟನಂತಕನಾಲಿಗಳು ತಿರುಗಿ ॥
ನಡುಗಿ ಕಂಗಳನಿಂದ್ರ ಮುಚ್ಚಿದ
ಮೃಡನು ಮೆಚ್ಚಿದ ಬೊಮ್ಮ ಬೆಚ್ಚಿದ
ಪೊಡವಿವಲ್ಲಭ ಮೇಲೆ ನೋಡಿನೇನಿದೇನೆನುತ ॥ ೨೪ ॥

ಒಡೆಯರವಧರಿಸುವುದು ರಾವಣ
ಪಡೆಯನೋಡಲು ಬಂದು ಚೀರಿದ
ಕಡುಹ ತೋರಲು ಸಕಲ ಬಲಸಹ ಪುಷ್ಪಕವನೇರಿ ॥
ಮೃಡ ಕುಬೇರಂಗಿತ್ತಡಾತನ
ಹೊಡೆದು ರಾವಣ ತಂದನನಿಬರಿ
ಗೆಡೆಯ ಕೊಡುತಿಹ ವರ ವಿಮಾನವು ಮತ್ತೆ ಚಿತ್ತೈಸು ॥ ೨೫ ॥

ಒಂದು ಕಾವಿನಲೆಸೆವ ಕೊಡೆ ನೂ
ರೊಂದು ನೆಲೆಯು ವಿಚಿತ್ರ ಸತ್ತಿಗೆ
ಕುಂದಣದ ಮಣಿಖಚಿತ ಕಳಸವು ಶತಕವೊಪ್ಪಿದುವು ॥
ಚಂದದಳತೆಯನೇನ ಹೇಳುವೆ
ನಂದಿವಾಹನನಿತ್ತ ಕಾಣಿಕೆ
ಯಂದು ದೇವಾಚಾರ್ಯನಿಂದೀತಂಗೆ ಸೇರಿದುದು ॥ ೨೬ ॥

ಆತ ರಾವಣನವನ ಮುಂದಿ
ರ್ದಾತ ಮಂತ್ರಿತನೂಜನೆಡದಲಿ
ಮಾತನಾಡುವನಿಂದ್ರದಲ್ಲಣ ಬಲದಲತಿಕಾಯ ॥
ಭೂತನಾಥನ ಗಿರಿಯನೆತ್ತಿದ
ನೋತು ಬಿಟ್ಟಯ ನಡೆವರಮರರು
ನೀತಿಶೂನ್ಯನ ನೋಡಿ ನಗುತಿಪ್ಪಾತ ಮಾರಿಮುಖ ॥ ೨೭ ॥

ನೆಳಲು ಯೋಜನವೈದು ಸಾವಿರ
ದಳತೆಯಲಿ ಕತ್ತಲೆಯ ಮಾಡಿದ
ಹೊಲಬುಗೆಡುತಿದೆ ಸೇನೆ ತರಣಿಯ ಮರೆಸಿತಂಬರದಿ ॥
ಎಲೆ ಮಹಾದೇವೆನುತ ಕೌತುಕ
ತಳೆದು ಹಗಲಿರುಳಾಯ್ತು ಭಳಿರೆಂ
ದಲಘುಮಹಿಮನು ನೋಡಿ ವಿಸ್ಮಯಗೊಂಡು ನಗುತಿರ್ದ ॥ ೨೮ ॥

ಕೆಳಗೆ ನಾವಿರೆ ದನುಜ ಹಾರುತ
ನೆಳಲ ಮಾಡಿದನೆಮಗೆ ಬಹುಮುಖ
ನೊಲಿದು ಕೂಗಿದ ಮರನ ಕೋಡಗಿಯಂತೆ ಮೇಲಿದ್ದು ॥
ತಳಕೆ ಚಾಪವ ನೀಡು ಲಕ್ಷ್ಮಣ
ಖಳಗೆ ನಾವಿಹ ಕುರುಹ ತೋರುವ
ಹಲವು ನಾಲಗೆಯಲ್ಲಿ ಕೂಗಲಿಯೆಂದ ರಘುರಾಯ ॥ ೨೯ ॥

ವೀರ ಕೋದಂಡವನು ನೀಡಿದ
ಡಾರಿತಿತ್ತಲು ಕಪಿ ಭಟಾವಳಿ
ನಾರಿಯನು ಸರಳಿಂಗೆ ತೊಡಿಸಿದ ತೀವಿ ಜೇವಡೆದ ॥
ದೂರ ಪಥದಲಿ ಸುಲಭ ವಿದ್ಯಕೆ
ಜಾರನನುಗೊಳಬೇಡ ಖಳನನು
ಚಾರಿವರಿಯೆಂದರಸ ಪರಿವೇಷ್ಟಿತವ ಮಂತ್ರಿಸಿದ ॥ ೩೦ ॥

ಇವನ ಕರ ಕೊಂಡಾಡಲೇತಕೆ
ಸವರಿ ಬಿಡುವುದು ಕವಲುದಲೆಗಳ
ನವನಿವಲ್ಲಭಯೆಂದು ಮರ್ಕಟರೆನಲು ನಸುನಗುತ ॥
ಅವರೊಡನೆ ದನುಜಾರಿಯೆಂದನು
ಭವರ ಮುಖದಲಿ ಕೊಲುವೆನಿಂದೀ
ವಿವರಗೇಡಿಯ ಭಂಗವಡಿಸುವೆನೆನುತ ತೆಗೆದೆಚ್ಚ ॥ ೩೧ ॥

ಚಚ್ಚರದಿ ಸುಗ್ರೀವನಾ ಹರಿ
ಯೆಚ್ಚ ಬಾಣದ ಕೂಡೆ ಹಾರಿದ
ನೊಚ್ಚತದಿ ಕೊಡೆ ಕಡಿದು ಭೋರೆಂದವನಿಗುರುಳುತಿರೆ ॥
ನಿಚ್ಚಟದಿ ಬರ ಸಿಡಿಲಿನಂದದಿ
ಚಚ್ಚಿ ತಲೆಗಳ ಹೊಡೆದು ಮುಕುಟವ
ನೊಚ್ಚಿ ತಂದನು ಭಳಿರೆ ವೀರರ ದೇವ ಹರಿಯೆಡೆಗೆ ॥ ೩೨ ॥

ಸಿಡಿಲು ಹೊಡೆದಂತಸುರ ಸಭೆ ಕಂ
ಗೆಡಲು ಮೆರೆದುದು ಬೋಳುದಲೆಗಳು
ಕಡಿದ ಕೊಡೆಗಳ ಕಾವು ಮೆರೆದುದು ದಂಟುಕೋಲಂತೆ ॥
ದಡಿಗ ಬಡ ಸನ್ಯಾಸಿಯಂದದಿ
ನುಡಿಯಲಮ್ಮದೆ ಮೂಗವಟ್ಟನು
ನಡುಗುತಿರಲಮರಾರಿ ವ್ಯೆಝುಮ್ಮಿಟ್ಟು ಬಿಸುಸುಯ್ದು ॥ ೩೩ ॥

ಒಡೆಯನಭಿಮತವರಿತು ಹೋಗುತ
ತಡವು ಮಾಡದೆ ಮೀರಿ ಕಾರ್ಯವ
ಕೆಡಿಸದಂದದಿ ಮಾಡಿ ಮರಳಿದು ಬಂದು ಕೈಮುಗಿದು ॥
ನಡೆದ ಕಥನವನೆಲ್ಲ ಸೂಚಿಸೆ
ಬಿಡದೆ ಬೆಂಬಳಿಯಿಪ್ಪ ಭೃತ್ಯನ
ಪಡಿಯ ಹೋಲಿತು ಮರಳಿ ಬಂದುದು ಭಾಣ ಹರಿಯೆಡೆಗೆ ॥ ೩೪ ॥

ಒಡನೆ ಆ ಮಂತ್ರಾಸ್ತ್ರ ನಕ್ಕುದು
ಬಿಡದೆ ನೀ ಮುಂಬರಿದು ಮಾಡಿದ
ಕಡುಹದೇನೆನೆ ಖಳನ ಕೊಡೆಗಳ ಕಡಿದು ಬಂದೆನೆನೆ ॥
ಬಿಡುಬಿಡೌ ಪೌರುಷವ ತೆಗೆ ತೆಗೆ
ಕಡಿಯುವೇ ಕ್ರಿಮಿಕೀಟಕಂಗಳು
ಕೊಡೆಯನೆಂದರೆ ನಾಚಿ ತಲೆಗುತ್ತಿದುದು ಶರಧಿಯಲಿ ॥ ೩೫ ॥

ನೋಡ ಬಂದನೊ ಗೌರವದಿ ಬಲು
ಗೇಡ ತಂದನೊ ಹತ್ತು ಮಕುಟವ
ನೀಡ ತಂದನೊ ಹರಿಯು ಚರಣ ಸರೋಜಯುಗಳಕ್ಕೆ ॥
ಆಡಬಂದನೊ ಹಗರಣಂಗಳ
ಮಾಡಬಂದನೊ ಕುಲಕಕೀರ್ತಿಯ
ನೋಡು ದೈತ್ಯನ ಹಲವು ಬೋಳುಗಳೆಸೆದುವಯ್ಯಯ್ಯ ॥ ೩೬ ॥

ತ್ರ್ಯಂಬಕನ ಹೋಲುವನು ರಾಘವ
ನೆಂಬರದು ಹುಸಿಯಲ್ಲ ಬಿಡಲೊಂ
ದಂಬು ಛತ್ರವ ಕಡಿದು ಬಿಸುಟುದು ಭಾಪು ಬಿಲ್ಲಾಳೆ ॥
ಡೊಂಬಿಯಲ್ಲಿದು ನೋಡೆ ಬಯಲಾ
ಡಂಬರವು ತಾನಲ್ಲ ರಘುಪತಿ
ಯಂಬು ಕರ ಬಿರಿನೆಂದು ರಾವಣ ಹಗೆಯ ಹೊಗಳಿದನು ॥ ೩೭ ॥

ಹೇಡಿ ರಾವಣ ಬಳಿಕ ತನ್ನೊಡ
ನಾಡಿಗಳ ಸಹಿತತ್ತ ಲಂಕೆಯ
ಬೀಡ ಹೊಕ್ಕನು ದುಗುಡ ಭರದಲಿ ಕೊರಳು ಕುಸಿವಂತೆ ॥
ನೋಡನೊಬ್ಬರ ನುಡಿಸಿದರೆ ಮಾ
ತಾಡ ಚಿತ್ತಗ್ಲಾನಿ ಬಲಿದುದು
ಮೋಡ ಮುಸುಕಿದ ತರಣಿ ಪತಿಯಳಿದಿರ್ಪ ಸತಿಯಂತೆ ॥ ೩೮ ॥

ಜಲಜಲೋಚನೆಯೊಲ್ಲದಾ ಸುಖ
ಸುಲಿಸಿಕೊಂಡಾ ಚಿಂತೆ ರಾಮನ
ಬಲುಹ ನೆನೆನೆನೆದಳಲಿ ರಾವಣ ಮನದಲುಮ್ಮಳಿಸಿ ॥
ಹಲವ ಹಂಬಲಿಸುತ್ತಲಿರ್ದನು
ಜಲಜಬಾಂಧವ ಬಿಸಿಲ ತೇಜವ
ಗಳಿಸಿ ತರಲಸ್ತಾದ್ರಿಗೈದಲು ಸಂಜೆ ರಂಜಿಸಿತು ॥ ೩೯ ॥

ಬಿಸುಸುಯಿದು ಬೇಸತ್ತು ರಾವಣ
ಮುಸುಕಿ ಮೂಗೇಣಿಟ್ಟು ಚಿಂತಿಸು
ತಸುರಜಾತಿಗೆ ಕಪಟವೊಂದೇ ನೆನೆದ ಮಂತ್ರವನು ॥
ಹಸನವಲ್ಲವಳರಸ ಬಂದರೆ
ಬಿಸಜವದನೆಯನೊಳಗುಮಾಡುವೆ
ವಸುಮತೀಶನ ಶಿರವ ತೋರಿಸಿ ನಂಬಿಸುವೆನೆಂದ ॥ ೪೦ ॥

ಕರೆದು ವಿದ್ಯುಜ್ಜಿಹ್ವನೆಂಬನಿ
ಗೊರೆದು ರಾಮನ ಶಿರವ ನಿರ್ಮಿಸಿ
ತುರಿತದಲಿ ತಹುದೆಂದು ನೇಮಿಸೆ ಮಾಯ ಕೋವಿದನು ॥
ಆರರೆ ರಾಮನ ಶಿರವ ಸವೆದನು
ಸರಳು ಚಾಪವ ಮಾಡಿ ರಕ್ಕಸ
ರರಸನಿದಿರಲಿ ತಂದು ತೋರಲು ಹರ್ಷಮುಖನಾದ ॥ ೪೧ ॥

ಹಿಂದೆ ನಿಲಿಸಿದನವನ ತಾ ಮುದ
ದಿಂದಶೋಕಾವನಕೆ ತೆರಳಿದ
ದುಂದುಭಿಯ ಮೊಳಗುತ್ತ ದನುಜರು ನೆಲನನುಗ್ಗಡಿಸೆ ॥
ಇಂದುಮುಖಿ ಕಡು ಬೆದರಿ ಹರ ಶರ
ಣೆಂದು ಮನದಲಿ ಭಜಿಸುತಿರೆ ಖಳ
ಬಂದು ಸಿಂಹಾಸನವನಿಕ್ಕಿಸಿ ಮುಂದೆ ಕುಳ್ಳಿರ್ದ ॥ ೪೨ ॥

ಹಡಪಿಗರು ನಾಲ್ಕಾರು ಬಾಯಲಿ
ಮಡಿಸಿ ವೀಳೆಯದೆಲೆಯ ನೀಡಲು
ಹಿಡಿದು ಚಾಮರ ಡಾಳಿಸುತ್ತಿರಲಬಲೆಯರು ಹಿಂದೆ ॥
ದಡಿಗ ಸೊಬಗನು ಮೆರೆದು ಶೂಲಕೆ
ನಡೆವ ತಸ್ಕರನಂತೆ ಸೀತೆಯ
ನುಡಿಸಲಾರದೆ ಸೊರಹುತಿರ್ದನು ತನ್ನ ಪೌರುಷವ ॥ ೪೩ ॥

ಮುನ್ನವೇ ನಾ ನಿನ್ನ ಬಯಸಿದೆ
ಇನ್ನು ನೀನೇ ಒಲಿದು ಬೇಡುತ
ಯೆನ್ನ ಬಯಸುವ ಕಾಲವಾಯಿತು ದೈವಗತಿಯಿಂದ ॥
ಮುನ್ನ ರಾಮನ ಹೊಗಳಿ ದಣಿವಂ
ತಿನ್ನು ಹೊಗಳುವೆ ಯಾರ ಹೇಳಾ
ಎನ್ನನೊಲ್ಲದೆಯಿದ್ದೆ ನಿನಗಾನಲ್ಲದಾರೆಂದ ॥ ೪೪ ॥

ಕೇಳು ರಕ್ಕಸರೊಡನೆ ಬವರವ
ತಾಳಲಾರನು ರಾಮನೆಂದರೆ
ಕೇಳಿ ಹಿಂದಣ ಬಲುಹದೇನಾಯ್ತಿಂದು ರಣದೊಳಗೆ ॥
ಕಾಳಗವು ಸೋಜಿಗವು ಕಪಿಬಲ
ತೂಳಿತೂಳ್ದವು ದನುಜನಾಯಕ
ರಾಳಿಗೊಂಡರು ಚಾರಿವರಿದರು ಸಿಂಗಣೀಕರನು ॥ ೪೫ ॥

ಸೀತೆ ಕೇಳೌ ನಾನು ಹೇಳುವ
ಮಾತು ದಿಟ ಹುಸಿಯಲ್ಲ ರಾಘವ
ನಾತು ಕಾದಿದ ಖಂಡದಿಂಡೆಯವಾಯ್ತು ರಣಭೂಮಿ ॥
ಸೋತ ಲಕ್ಷ್ಮಣ ಬಿದ್ದ ತರಣಿಜ
ಪಾತಕರು ಮಾಯದಲಿ ಗೆಲಿದರು
ಭೂತಳೇಶನ ತಲೆಯ ತಂದರು ಕಾರ್ಯಗೇಡಿಗಳು ॥ ೪೬ ॥

ಹಿಡಿದು ನಾ ಬಿಡಬಗೆದ ರಾಮನ
ಕೆಡಿಸಿ ಕಳೆದರು ಪಾಪಿ ದೈತ್ಯರು
ಹಿಡಿದುಬಿಡುವರ ಗಂಡನೆಂಬೀ ಬಿರುದ ಕೆಡಿಸಿದರು ॥
ನುಡಿದು ಫಲವೇನಿನ್ನು ಹೋಗಲಿ
ಬಿಡು ಬಿಡಾ ರಾಘವನ ಹಂಬಲ
ಮಡದಿಯಾಗೆನಗಿನ್ನು ನಿರ್ಭಯವಾಯ್ತು ನಿನಗೆಂದ ॥ ೪೭ ॥

ನುಡಿಯ ಕೇಳಿನು ಸರಮೆ ಖಳ ಕಾ
ಳ್ಗಿಡೆಯಲಮ್ಮನು ತನ್ನ ಮನದಲಿ
ಕೆಡಹಲವಗಿನ್ನಾವ ಸದರವೊ ರಾಘವೇಶ್ವರನ ॥
ಬಿಡದೆ ಸೊರಹದೆ ಹೋಗಲೀ ಬಾ
ಯ್ಬಡಿಕನೆಂದರೆ ನಗುತ ರಾವಣ
ಪೊಡವಿಜೆಗೆ ಪರಿಣಾಮವಾಗಲಿ ತಲೆಯ ತಾಯೆಂದ ॥ ೪೮ ॥

ತೋಳ ಪೂಜಿಸುತಿಹರು ಕೆಲಬರು
ಭಾಳಲರ್ಚಿಸುತಿಹರು ಕೆಲಬರು
ಮೇಳವೋಳದಿ ಹರೆಯ ಹೊಡೆಸುತ ಬಹಳ ಸಂಭ್ರಮದಿ ॥
ಹಾಲ ನೋಡುತ ಹರುಷಗೊಂಡಾ
ಕೋಲ ಮರೆದ ಬಿಡಾಲನಂದದಿ
ನಾಲುದಲೆಯುವನಿರಲು ವಿದ್ಯುಜ್ಜಿಹ್ವ ನಡೆತಂದ ॥ ೪೯ ॥

ಮಾಲೆಗೊಂಡೊಗುತಿಪ್ಪ ನೆತ್ತರ
ಹೀಲಿಗಣ್ಣರೆದೆರೆದ ವದನವು
ಹೋಲಿಕೆಯೊಳೆಳ್ಳನಿತು ತಪ್ಪದವೋಲು ರಚಿಸಿದುವ ॥
ನಾಲು ಘಂಟೆಯು ಬಿಲ್ಲು ರುಂಡದ
ಭಾಳದಲಿ ಕತ್ತುರಿಯು ತಿಲಕವು
ಹೇಳಲರಿಯೆನು ತಂದು ಮಾಯಾ ಶಿರವನಿಳುಹಿದನು ॥ ೫೦ ॥

ಅಳಿದು ಹೋಯಿತು ಬಲು ಕಪೀಂದ್ರರು
ಕೆಲರು ನಮ್ಮೊಳು ಹೊಕ್ಕು ಬದುಕಿತು
ಕೆಲರು ಶರಧಿಯು ಬಿದ್ದು ಸತ್ತಿತು ಮತ್ಸ್ಯನಿಂಕೆಲರು ॥
ಕೆಲರು ಗಿಡುಗಳ ಮರೆಯಲಡಗಿತು
ಕೆಲರು ಗುಹೆಗಳ ಹೊಕ್ಕು ಜುಣುಗಿತು
ಕೆಲರು ಹನುಮಾದಿಗಳು ಕಾದಿತು ದಾನವರ ಕೂಡೆ ॥ ೫೧ ॥

ಆರಿದ ಮುಂಡವ ನೋಡು ರಾಮನ
ಕರದ ಚಾಪವಿದಹುದೆ ದಿಟ್ಟಿಸು
ಹಿರಿದು ಸಂಶಯುಬಿಟ್ಟುದೇ ಪರಿಣಾಮ ನಿನಗಾಯ್ತು ॥
ಮರುಳು ಮನುಜಗೆ ಹಲುಬಿ ದುಃಖವ
ಕರೆದು ಕಚ್ಚಿಸಿಕೊಂಡೆ ಹೋಗಲಿ
ಸಿರಿಯುನನುಭವಿಸಾನು ಬಡವನೆ ಒಲಿದುದನು ಬೇಡು ॥ ೫೨ ॥

ಸಾಸಿಗನು ಮೇಲಿಂದ್ರಜಾಲವ
ಬೀಸಿದನು ಸಲೆ ಕಣ್ಣಕಟ್ಟದ
ನಾ ಸರೋಜಾನನೆಗೆ ದಿಟವೆಂಬಂತೆ ಮೋಹಿದನು ॥
ಘಾಸಿಯಾದಳು ದುಃಖದಲಿ ರಮೆ
ಸೂಸುವಶ್ರುಗಳಿಂದ ನೆನೆದಳು
ಆಶೆ ಬೀತುದು ಬಾಯಿ ಬರತುದು ರಮಣ ಹಾಯೆನುತ ॥ ೫೩ ॥

ಎತ್ತ ಹೋಯಿತು ಧನುವ ಗೆಲಿದಾ
ಸತ್ವವಕಟಾ ಕೂರ್ತು ಕೌಶಿಕ
ನಿತ್ತ ಮಂತ್ರಾಸ್ತ್ರಂಗಳಕಟೆಂದೆತ್ತಲಡಗಿದುವು ॥
ಅತ್ತೆ ಕೈಕೆಯು ಬಯಕೆ ಸೇರಿತೆ
ಕುತ್ತಿಕೊಂಬರೆ ಕಾಣೆನಲಗನು
ಹೆತ್ತ ಕೌಸಲೆಗಾಯ್ತಲಾ ನಿರಶನ ವ್ರತವು ॥ ೫೪ ॥

ಎಲ್ಲಿದೆಲ್ಲಿಗೆ ತಂದುದೀ ವಿಧಿ
ಎಲ್ಲಿಗೆಲ್ಲಿಗೆ ಭಂಗಪಡಿಸಿತು
ಎಲ್ಲಿ ಜನಕಂಗಾನು ಹುಟ್ಟಿದೆಯೆಲ್ಲಿ ಸೆರೆಯಾದೆ ॥
ಎಲ್ಲಿ ಬಾರದು ಸಾವು ಶಿವ ಶಿವ
ಒಲ್ಲೆನೆಂದರೆ ಹೋಗದಕಟಾ
ಬಲ್ಲೆನೇ ನಾನೇನ ಮಾಡಿವೆ ಪೂರ್ವಜನ್ಮದಲಿ ॥ ೫೫ ॥

ಅರೆದೆರೆದು ಕೂಜಿಸುವ ಕಂಗಳ
ಕುರುಳು ಸೊಪ್ಪಾದಧರವೊಣಗಿದ
ಹರಿದ ಕಾಂತಿಯುಲಿಡಿದ ದಂತದ ಕೃತ್ರಿಮದ ಶಿರವ ॥
ಧರಣಿಸುತೆ ದಿಟವೆಂದು ಬಗೆದಳು
ಹಿರಿದು ಶೋಕಾಕುಲಿತೆಯಾದಳು
ಹರಿಯ ಬಳಿಗಸುವ್ಯೈದಿತೆನೆ ಮೂರ್ಛೆಯಲಿ ಹೊರಳಿದಳು ॥ ೫೬ ॥

ತೆರಳಿದನು ತ್ರೈಲೋಕಕಂಟಕ
ಪುರವ ಬಲಿದಿರೆ ಹೇಳುತಿರ್ದನು
ಹರಣವನು ಬಿಡಬಗೆದಳಿತ್ತಳು ದೇವಿ ತಾಪದಲಿ ॥
ಸರಮೆ ಕಿವಿಯಲಿ ಮೆಲ್ಲನೆಂದಳು
ನಿರುತ ನಂಬದಿರವ್ವ ಮಾಯವಿ
ದರಸನುಂಗುರ ಮುಟ್ಟಿ ಬಯಲೆನೆ ಜೀವ ಪಸರಿಸಿತು ॥ ೫೭ ॥

ಜನನಿ ಕಂಗಳದೆರೆದು ನೋಡುತ
ಮನದಲೊಂದನು ನಂಬಲಾರದೆ
ದನುಜ ಮಾಯವೊ ದಿಟವೊ ನೋಡುವೆನೆನುತ ಮುದ್ರಿಕೆಯ ॥
ನೆನೆದು ಮುಟ್ಟಿಸೆ ಮಾಯೆ ಹರಿದುದು
ಧನು ಶರಂಗಳು ಎತ್ತಲಡಗಿತೊ
ಕನಸ ಕಂಡಂತಾಗಲೆಳೆನಗೆ ಮೊಗದೊಳೆಸೆವುತಿರೆ ॥ ೫೮ ॥

ಖಳ ಕಟಕಿಯೊಳಗಾಗಿ ತನ್ನಂ
ತಳಲಿದವರಾರುಂಟುಯೆನುತಲಿ
ಲಲನೆ ಕಟ್ಟುಮ್ಮಳವ ತಾಳ್ದಳು ಹರಿಯ ವಿರಹದಲಿ ॥
ಹಲವು ಪರಿಯಲಿ ಸರಮೆ ಸೀತೆಯ
ತಿಳುಹಿ ಮನವನು ಸಂತವಿಟ್ಟಳು
ಹಳಿಯ ಸೂರಿಯ ಬಂದ ಹೊಸ ಪರಿಯಾಯ್ತು ಮೂಡಲಿಗೆ ॥ ೫೯ ॥

ಜನಪ ರಾಘವ ಕೊಡೆಯ ಕಡಿಯಲು
ದನುಜ ಮಾಯಾ ಶಿರದಿ ದೇವಿಯ
ಮನವ ನೋಯಿಸೆ ದನುಜೆ ತಿಳುಹಲು ಮಾಯೆ ಬಯಲಾಯ್ತು ॥
ಜನನಿ ರಾಮನ ನೆನೆಯೆ ಪದನವು
ದಿನಪರೈವಡಿಯಾಯ್ತು ಮೂಡಲು
ದಿನಪನುದಿಸಲು ಸಂಧಿ ಮುಗಿದುದು ದನುಜ ಮನಗುಂದೆ ॥ ೬೦ ॥

---

## ೧೮ನೇ ಸಂಧಿ

ಪಲ್ಲ ॥ ಹಾಲುಸಕ್ಕರೆಯುಣಲು ತದ್ಗುಣ
ಶೀಲಿಸುವುದೇ ಫಣಿಯ ಮುಖದಲಿ
ಹೇಳಲಂಗದ ಕೇಳಿ ಕಿವಿಗೊಡಹಿದನು ದಶಕಂಠ ॥

ಪದ ॥ ತುಂಬಿದೋಲಗದೊಳಗೆ ಕೇಸರಿ
ಯೆಂಬ ಚಾರನನರಸ ಕೇಳಿದ
ಹಂಬಲಿಸಿದಳೆ ಸೀತೆ ಮಾಯಾಶಿರದ ಜಂಜಡಕೆ ॥
ಡಿಂಬ ಮಾತ್ರದಿ ನಿಮ್ಮ ಚರಣದ
ಹಂಬಲಿಂದಸುವಿರಲು ಸರಮಾ
ಯೆಂಬ ರಕ್ಕಸಿ ತಿಳುಹಲುಂಗುರ ಮುಟ್ಟಿ ಬಯಲಾಯ್ತು ॥ ೧ ॥

ಆಗಲದಕೇನಸುರ ಕೋಡಗಿ
ಯಾಗಿ ಕುಣಿದನು ಸಹಜವೈಸಲೆ
ಏಗುವಳು ಭೂಜಾತೆ ದನುಜರಗನ್ನಗತಕದಲಿ ॥
ಬೇಗೆಯೊಳಗಣ ಬಾಳೆಯಾದಳು
ಹೋಗಲದಕಿನ್ನೇನು ತಳುವದೆ
ಬೇಗ ಶಿಷ್ಟರನಟ್ಟಿ ಸಾರಿಸಬೇಕು ನಾವೆಂದ ॥ ೨ ॥

ಎಲೆ ವಿಭೀಷಣ ಕೇಳು ಸಂಧಿಗೆ
ಕಳುಹಿನೋಡುವೆ ನಾಮುದಿಂದವೆ
ಖಳನು ಸೀತೆಯನಿತ್ತು ಕಂಡರೆ ಕಾವೆನಾವನ ॥
ಕಲಹವನು ಬಯಸಿದರೆ ಒಳ್ಳಿತು
ಬಳಿಕ ತಪ್ಪದೆ ನಾವು ಕೊಲುವೆವು
ಇಳೆಯು ಮೆಚ್ಚಿಸಿ ಸಾರಿ ಕೊಂದರೆ ದೋಷವಿಲ್ಲೆಂದ ॥ ೩ ॥

ಆರ ಕಳುಹುವ ಸಂಧಿಗಾ ಅಮ
ರಾರಿಯೋಲಗದೊಳಗೆ ಹೊಕ್ಕತಿ
ಧೀರನಾಗಿಯೆ ನುಡಿಯಬೇಹುದು ಶತ್ರು ಮಧ್ಯದಲಿ ॥
ವೀರ ಜಾಂಬವ ಹೇಳು ನೀನೆನೆ
ತಾರೆಯಾತ್ಮಜ ಸ್ವಾಮಿಭಕ್ತನು
ಕಾರ್ಯಸಾಧಕನಹುದು ಕಳುಹುವುದಂಗದನನೆಂದ ॥ ೪ ॥

ಮಾತಿನಲಿ ಮತಿವಂತನೆನಿಸಿಹ
ನೀತಿಯಲಿ ಕರ ನಿಪುಣನಾಗಿಹ
ನೂತನಾಕಾರದಲಿ ರಂಜಿಸಿ ಮಮತೆಗಳ ನುಡಿವ ॥
ನೀತಿ ಶಾಸ್ತ್ರವ ಬಲ್ಲ ರಣದಲಿ
ಕಾತರಿಸದಿರುತಿಪ್ಪ ನೃಪ
ದೂತನೆನಿಸುವನವನಲಿಹುದೈರಾಜನೀತಿಗಳು ॥ ೫ ॥

ನೆರೆದ ಕಪಿಸಭೆಯೊಳಗೆ ನರಹರಿ
ಕರೆದನಂಗದನೊಲುವನಾಗಿರೆ
ಹರಸಿ ರಕ್ಷೆಯು ಕಟ್ಟಿ ಕರುಣದಿ ಬುದ್ಧಿಗಲಿಸಿದನು ॥
ಅರಿಯ ಸಭೆಯನು ಹೊಗುವಡಂಜದೆ
ಹಿರಿದು ಬಿರಿಸಿಂದವನು ನುಡಿದರೆ
ಕೆರಳದಿರು ನುಡಿ ನುಡಿಗೆ ತಕ್ಕುದ ಹೇಳು ನೀನೆಂದ ॥ ೬ ॥

ಕಾದೆನೆನಲವ ಕಾದೆನೆಂದೆನು
ಕಾದಕರೆಯಲು ಕಾದೆನೆಂದೆನು
ಕಾದೆನೆಂದರೆ ಬಳಿಕ ಕಾದುವುದುಚಿತವಲ್ಲೆಮಗೆ ॥
ಕಾದಲರಿಸುವೆನವನ ಜವದಲಿ
ಕಾದೆನೆನಲಿಹಪರದ ಸುಖಗಳ
ಸಾಧಿಸುವನವಗರಿಪು ನೀನೀ ಹದನ ಹೋಗೆಂದ ॥ ೭ ॥

ಕಟಕಿಯೆರಡಕ್ಕೆಂಟೆನೆಂಬುದು
ಕಟಕಿಯನು ನೀನೆನ್ನಲಾಖಳ
ದಿಟವ ನುಡಿದರೆ ನುಡಿವುದೊಂದನು ಸತ್ಯ ವಚನವನು ॥
ಅಟಮಟಿಗ ದನುಜಂಗೆ ಸಚಿವರು
ಸಟೆಯು ಸಾಗರವೆಂಬ ಕಥೆಯನು
ನಟಿಸಿ ದೈತ್ಯನ ಮನವ ತಿಳಿವುದು ಹದಿರು ಚದುರಿನಲಿ ॥ ೮ ॥

ಆಗಲೆನುತಡಿಗೆರಗಿ ಬೀಳ್ಕೊಂ
ಡಾ ಗುಣಾಧಿಕ ಕಂಕಣದ ಕೈ
ದೂಗಿ ಸಂತಸದಿಂದ ನಡೆದೇಕಾಂಗ ಬಲ್ಲಾಳು ॥
ಹೋಗುತಿಪ್ಪಘಟಿಂಗೆ ಹರಿ ತಲೆ
ದೂಗುತಿದ್ದನು ಕಂಡು ಲಂಕೆಯ
ಬಾಗಿಲನು ಕಳೆದೊಳಗೆ ಹೊಕ್ಕನು ಸುಭಟನಂಗದನು ॥ ೯ ॥

ಕಾವ ದನುಜರು ಕಂಡು ಹೆದರುತ
ಜೀವದಾಸೆಗೆ ಉಸುರಲಮ್ಮದೆ
ಭಾವದಲಿ ನೆರೆ ಸುಮ್ಮನಿದ್ದರು ಸುಭಟನಂಗದನು ॥
ಆವ ವಿಭವವೊ ಹೇಳಲರಿದಾ
ರಾವಣನ ಪುರದೊಪ್ಪದಂಗವ
ದೇವಬಲ್ಲನೆನುತ್ತ ವಿಸ್ಮಯಗೊಂಡು ಬರುತಿರ್ದ ॥ ೧೦ ॥

ಕುರಿಯ ಹಿಂಡಿನ ನಡುವೆ ಬರ ಸಿಡಿ
ಲೆರಗಿದಂತಿರೆ ಕಾವ ದನುಜರ
ಜರೆದು ಜಕ್ಕುಲಿಸುತ್ತ ಮುರುಕಿಸಿದವರ ಸದೆವುತ್ತ ॥
ಉರುವ ಸುಂಟರಗಾಳಿ ವಹಿಲದಿ
ಕರಿಯ ಮೇಘವನಟ್ಟುವಂದದಿ
ತರುಬಿ ದೈತ್ಯರ ಚಾರಿವರಿದೆಯ್ತಂದನಂಗದನು ॥ ೧೧ ॥

ಹಿಂದೆ ಇರುಳಿನಲೊಂದು ಕೋಡಗ
ಬಂದು ಲಂಕೆಯ ಸುಟ್ಟು ದನುಜರ
ಕೊಂದು ವನವನು ಮುರಿದು ಹೋಯಿತು ಮತ್ತೆ ಹೊಸ ಮಾರಿ ॥
ಇಂದು ಬರುತಿದೆವೊಂದು ಕೋಡಗ
ಬಂದ ಬರವದು ಬಿರಿಸು ಖಳರಿಗೆ
ಕುಂದು ಕೇಡನು ಹಣ್ಣದುಳಿಯದುಯೆಂದು ಜನ ಮರುಗೆ ॥ ೧೨ ॥

ಅಷ್ಟದಿಕ್ಪಾಲಕರು ದನುಜಗೆ
ಬಿಟ್ಟಗೈವುದ ಕಂಡನಂಗದ
ಭ್ರಷ್ಟ ರಾವಣ ಕೆಟ್ಟನಕಟಾ ಸತಿಗೆ ಮರುಳಾಗಿ ॥
ಇಷ್ಟು ವಿಭವವದಾರಿಗುಂಟೈ
ಅಷ್ಟಭೋಗೈಶ್ವೈರ್ಯದಾಗರ
ಕೆಟ್ಟ ನುಡಿಯಲು ಬಹುದೆ ಸರಿಯಿಲ್ಲವಗೆ ಜಗದೊಳಗೆ ॥ ೧೩ ॥

ಶರಧಿ ಕಾಲುವೆ ಲಂಕೆ ದುರ್ಗವು
ಸುರರು ಬಂಟರು ಹರನು ನಂಟನು
ಹಿರಿಯತನದಲಿ ವಿಧಿಯ ಮೊಮ್ಮನು ಶಾಸ್ತ್ರದಲಿ ನಿಪುಣ ॥
ಸರಸಿಜಾಸನ ವರವ ಕೊಡುವನು
ಹರಿಗೆ ಪಾಸಟಿಯಿವನ ಭಾಗ್ಯವೆ
ಎರಡು ದಿನ ಬದುಕಿದರೆ ಸಾಲದೆ ಜನ್ಮ ಸಫಲತೆಗೆ ॥ ೧೪ ॥

ಈ ಪರಿಯ ಬಲುಹಾರಿಗಿಪ್ಪುದು
ಭೂಪುರೇ ಸಿರಿವಂತ ರಾವಣ
ಶ್ರೀಪುರಂಧ್ರಿಯಬಂಧಿವಿಡಿಯಲು ಬಹುದೆ ಉಳಿದರಿಗೆ ॥
ಆ ಪುರಂದರನಿವನ ಮನೆಯಲಿ
ತಾಪಗೊಳುತಿಹ ರಿಪುಭಯಂಕರ
ಪಾಪಿ ಕೆಡಿಸಿದನಕಟ ರಾಮಗೆ ಮುನಿದು ಸಂಪದವ ॥ ೧೫ ॥

ಬೊಮ್ಮ ಹೊತ್ತಲ್ಲಧ್ಯಯನಕಿದು
ಸುಮ್ಮನಿರು ನೀ ಹೊರಗೆ ಸುರ ಗುರು
ವೊಮ್ಮೆ ಕಿರಿದನಿ ಗಳಹೆ ಸುರಸಭೆಯಲ್ಲ ಸೊರಹುವರೆ ॥
ನಿಮ್ಮ ವೀಣೆಯ ನಿಲಿಸಿ ನಾರದ
ಒಮ್ಮೆ ಸಂಸ್ತುತಿ ಸಾಕು ತುಂಬುರು
ಎಮ್ಮ ಲಂಕೇಶ್ವರಗೆ ಮನಪರಿಣಾಮವಿಲ್ಲೆಂದ ॥ ೧೬ ॥

ಕೂಡೆ ಸಭೆ ಗದಗಪ್ಪುಗೊಳುತಿರೆ
ಹೇಡಿಗಳು ಹರಣವನು ಬಚ್ಚಿಡೆ
ನೋಡಿ ಖಳರೆದೆಯಳುಕೆ ಮನದಲಿ ಬೆಚ್ಚಿ ರಾವಣನು ॥
ನೋಡುತಿರ್ದನು ಜೋರಗಂಡಿಲಿ
ದಾಡೆಗುಟ್ಟಿದ ಬಾಗಿಲವರಿಗೆ
ರೂಢಿವಲ್ಲಭನಾಳು ಬಂದನು ಸುಭಟನಂಗದನು ॥ ೧೭ ॥

ಮುಂದೆ ರಾವಣನಿದ್ದ ಸಭೆಯೊಳು
ಚಂದದಲಿ ಬಿಲ್ಲುದ್ದ ಪೀಠದಿ
ಕುಂದಣದಿ ರತುನದಲಿ ಮೆರೆದಿಹ ಗದ್ದುಗೆಯನೇರಿ ॥
ಮುಂದೆ ರಾವಣನಿರಲು ತಾ ಕೆಳ
ಗಿಂದು ಕುಳಿತಿಹುದುಚಿತವಲ್ಲೆನು
ತೆಂದು ಬಾಲವಸುತ್ತಿ ಕುಳಿತನು ದೊರೆಗೆ ಸರಿಯಾಗಿ ॥ ೧೮ ॥

ಕುಳಿತ ಸಭೆಯಲಿ ಬೆರಗು ಬಲಿದಿರೆ
ಉಲುಕದಿಹ ಪುತ್ಥಳಿಗಳಂತಿರೆ
ಬೆಳೆಸಿ ಬಾಲವ ಸುತ್ತಿ ಗದ್ದುಗೆ ಮಾಡಿ ಕುಳ್ಳಿರ್ದ ॥
ಕಳವಳಕ್ಕೆಡೆಯಾಗಿ ದೈತ್ಯನ
ಕೆಲದಲಿದ್ದುದು ಮಂತ್ರಿ ಮಕ್ಕಳು
ಬಳಗ ಹಲುಮೊರೆವುತ್ತ ಗುಜುಗುಜುಗುಟ್ಟುತಿರಲಂದು ॥ ೧೯ ॥

ಅಡಗಿ ಜುಣುಗಿದನೇಕೆ ರಾವಣ
ಕಡೆಗೆ ಕಾದದೆ ಜಾನಕಿಯ ತಾ
ಬಿಡನೆ ಕೇಳುವ ಖರೆಯ ಸಂಧಿಗೆ ಬಂದೆನಿಂದಾನು ॥
ಪೊಡವಿವಲ್ಲಭ ಕಾದಲೊಲ್ಲದೆ
ಬಡವನಾಗಿಯೆ ಸಂಧಿಗೊಲಿದನು
ಮೃಡನ ಮೆಚ್ಚಿಸೆ ಧರ್ಮದಲಿ ತಲೆಗಡಿವ ರಾವಣನ ॥ ೨೦ ॥

ಜವನ ಪರಿ ಕಂಧರವ ತಿರುಹು
ತ್ತವನಿಸುತೆಯನು ಕದ್ದು ತಂದವ
ನಿವನೆ ದನುಜನ ಹಿರಿಯ ಮಗನವನಾವ ಬರಹೇಳು ॥
ನಿವಗದೇತಕೆ ಮೌನ ಬಲಿದುದು
ಸವಣ ಗಣಿಕೆಯ ಕಂಡ ಪರಿಯೆನು
ತವನಿವಲ್ಲಭನಾಳು ಕುಡಿ ಬಾಲವನು ಡಾಳಿಸಿದ ॥ ೨೧ ॥

ಹುಲಿಯ ಮಗನಿವ ಕೆಣಕಬಾರದು
ತಿಳಿವೆ ಸಾಮದಲೆನುತ ದಶಶಿರ
ಜಲಜಮುಖಿ ಸುಖದಲಿಪ್ಪಳೆ ಕ್ಷೇಮಿಯೇ ಬಾಲಿ ॥
ಹಲವು ಕಾಲಕೆ ಕೇಳ್ದೆವೈ ನಾ
ವಲಘುಮತಿ ತಾ ಮನುಜನಂಬಿನ
ಲಳಿದನೆಂಬೀ ವಾರ್ತೆ ಹರಿದುದು ದಿಟವೊ ಹೇಳೆಂದ ॥ ೨೨ ॥

ಕೆಡಹಿದನು ತಾಟಕಿಯ ಮೊದಲಲಿ
ಜಡೆಯುಜೀಯ್ಯನ ಯಜ್ಞಗಾಯ್ದನು
ಪೊಡವಿಪತಿಗಳ ಬೇರುಗೊಲೆಯನು ಕೊಂಡ ಮುನಿಪತಿಯ ॥
ಹಿಡಿದ ಚಾಪವ ಕೊಂಡರಣ್ಯದಿ
ಕಡಿದ ಖರದೂಷಣರ ನಿನ್ನನು
ಕಡಲಲದ್ದಿದ ಪಿತನ ಕೊಂದನು ರಾಘವೇಶ್ವರನು ॥ ೨೩ ॥

ಆರು ರಾಘವನೆನಲು ಕೇಳಿಲೆ
ಜಾರ ನೀ ದಿಟ ಮರೆದೆ ಮತ್ತೇ
ನಾರಿದಾ ಸರಳೊಂದರಿಂದವೆ ಕೊಡೆಯು ಕಡಿವಾಗ ॥
ಓರಣದಿ ಮುಕುಟವನು ಕಿತ್ತನು
ಧೀರ ಸುಗ್ರೀವಾಂಕನೆಲೆ ಬಡ
ಹೋರಿ ನೀನೆಂತರಿವೆ ರಾಮನನೆಂದನಂಗದನು ॥ ೨೪ ॥

ಏನು ಕಾರಣ ಬಂದೆ ನೀನೆನ
ಲೇನುಯಿಲ್ಲೆನಗೆನಲು ಶರಧಿಯ
ಜಾನಕೀಪತಿ ಕಟ್ಟಿಸಿದ ಗಡ ಹಾಳುವಟ್ಟೆ ಗಡ ॥
ಕಾನ ಮರಿ ಕೋಡಗಗಳಾಡುತ
ಏನೊ ಕಟ್ಟಿದುವರಿಯೆ ನಾನದ
ಜಾನಕೀಪತಿಯರಿವ ದಿಟವೇ ಕಡಲ ಕಟ್ಟಿದುದು ॥ ೨೫ ॥

ಎಲವೊ ರಾವಣ ಕೇಳು ರಾಮನ
ಬಲಡೊಳೊಂದತಿ ವಾದ ಹುಟ್ಟಿತು
ಖಳನ ಕೊರಳೊಂದರಲಿ ತಲೆ ಹತ್ತೆಂದು ಕೆಲರೆನಲು ॥
ಕೆಲರದಲ್ಲಾ ಕೊರಳು ಹತ್ತಕೆ
ತಲೆಗಳೊಂದೊಂದೆನಲು ತಮ್ಮೊಳು
ಛಲದಿ ಪಣ್ಯವ ಹೊತ್ತು ಕಳುಹಲು ನೋಡಲಾಂಬಂದೆ ॥ ೨೬ ॥

ಎನಿತು ರಾವಣರುಂಟು ಲೋಕದ
ಲೆನಗೆ ತಿಳಿಯದು ಹೇಳು ಕೇಳುವೆ
ಬಿನುಗಗಳ ಹತ್ತೆಂಟು ರಾವಣರಾನು ಕೇಳಿದೆನು ॥
ಮುನಿದು ಶೈವಜ್ವರನ ಕೆಣಕುತೆ
ಕನಕ ಸತ್ತಿಗೆಯಿತ್ತು ಶರಣೆಂ
ದೆನಲು ಕೃಪೆಯಿಂದೊಬ್ಬ ದೈತ್ಯನ ಕಾಯ್ದನಜವಾಲ ॥ ೨೭ ॥

ಮುನ್ನ ಮೊವಾಗೊಬ್ಬ ರಾವಣ
ಯೆನ್ನ ತಂದೆಯು ಸೆಣಸಲಾತನು
ತನ್ನ ಕಂಕುಳೊಳವುಚಿ ತಂದಾನಿಪ್ಪ ತೊಟ್ಟಿಲಿಗೆ ॥
ಹೊನ್ನ ಮಿಳಿಯಲಿ ಕಟ್ಟಲೊದರಿದ
ರೆನ್ನ ಕೈಯುಗುರಿಂದ ಹೊಡೆಸಿರೆ
ಕೆನ್ನೆಗಳು ಕಲೆಯಾದ ರಾವಣ ನೀನಲಾಯೆಂದ ॥ ೨೮

ದಂಡುಮಾಡುತ ಕಾರ್ತವೀರ್ಯಾನ
ಹಿಂಡುದೋಳೊಳು ಸಿಲುಕಿ ಸೆರೆಯಲಿ
ಗಂಡುಗೆಟ್ಟರೆ ಬೊಮ್ಮ ಬಿಡಿಸಿದನೊಬ್ಬ ರಾವಣನ ॥
ಖಂಡ ಪರಶುವಿನದ್ರಿಯಡಿಯಲಿ
ಮಂಡೆ ಕೈಗಳು ಸಿಕ್ಕಿ ಒರಲಲು
ಕಂಡು ಕರುಣದಿ ಕಾಯ್ದ ರಾವಣನವನು ನೀನಲ್ಲ ॥ ೨೯ ।

ನಂದಿಗಮನನ ಧನುವಿನಡಿಯಲಿ
ಹಿಂದೆ ಹೊರಳಿದನೊಬ್ಬ ರಾವಣ
ನಂದು ಖಗನೆಡಗಾಲ ನುಸುಳಿದನೊಬ್ಬ ರಾವಣನು ॥
ಹಿಂದೆ ವೈರೋಚಿನಿಯ ಸೆರೆಯಲಿ
ಗೊಂದಣದ ತೊತ್ತಿಯರು ನಗುತವೆ
ವೊಂದು ತುತ್ತಿಂಗೊಮ್ಮೆ ಕುಣಿಸಿದರೊಬ್ಬ ರಾವಣನ ॥ ೩೦ ॥

ಹಿಂದೆ ಲಂಕೆಯು ಸುಟ್ಟ ಕೋಡಗ
ಯಿಂದು ಬಾರದದೆತ್ತ ಹೋಯ್ತನೆ
ಇಂದ್ರಜಿತುವಲಿ ತಾನು ಕಟ್ಟಿಸಿಕೊಂಡಿತೆಂದಲ್ಲ ॥
ಮಂದಿ ಬಯ್ದುದು ಹೊಯ್ದು ನೂಕಿದ
ಡಂದೆ ಲಜ್ಜೆಯಲೋಡಿ ಹೋದುದು
ಇಂದು ನಾಳೆಯು ಕಾಣೆನಾ ಕಪಿಯೆತ್ತ ಹೋಯ್ತೆಂದ ॥ ೩೧ ॥

ನೆಟ್ಟನಸುರರದೆಲ್ಲ ಹುಸಿಕರು
ಮುಟ್ಟಿ ನಾಡಿಯ ನೋಡುತಿಪ್ಪರು
ದಿಟ್ಟ ರಾಘವನರಿಯ ನೋಡಾ ಮರುಳು ಮರ್ಕಟರು ॥
ಸುಟ್ಟತೆಂಬರು ಲಂಕೆಯನು ಕರಿ
ಗಟ್ಟತೆಂಬರು ಗಡ್ಡ ಮೀಸೆಯು
ಸುಟ್ಟ ಮೀಸೆಯ ಕಾಣೆ ರಾವಣ ನಿನ್ನ ಮೋರೆಯಲಿ ॥ ೩೨ ॥

ಒಡೆಯುರಾರೀ ಲಂಕೆಗೆಂದರೆ
ಒಡೆಯ ವಿಭಿಷಣ ರಾಯನೆಂದೆನೆ
ಗಡಹದಿರು ನೀನ್ಯಾಕೆ ಬಂದಪೆ ನನ್ನ ಸಭೆಗೆನಲು ॥
ಘಡ ಹೊರಸೆ ರಾಘವನ ರಾಣಿಯ
ಬಿಡೆಲೊ ಭಾಗ್ಯವ ನೀಗಿ ಕೆಡದಿರು
ಬಿಡದೆ ಹಳೆನಂಟೆಂದ ಬುದ್ಧಿಯ ಹೇಳಲಾಂ ಬಂದೆ ॥ ೩೩ ॥

ಹರನ ಚಾಪವ ಮುರಿದು ಗೆಲಿದನ
ವರ ಸುಬಾಹುವ ತಾಳ ಮರಗಳ
ತರಿದನಬ್ಧಿಯ ಬಿಗಿದ ರಾಮನ ನೆಣಸು ಬೇಡೆನಲು ॥
ಧರಣಿಯಬ್ಧಿಯ ಧರಿಸಿದಹಿಪತಿ
ಕರದ ಕಂಕಣವಾದ ಶೂಲಿಯ
ಗಿರಿಯನೆತ್ತಿದೆನದರಲೇನಿಹುದೆಂದ ದಶಕಂಠ ॥ ೩೪ ॥

ಹರಿಯ ಬಾಣವು ತಾಟಕಾ ತನು
ಸರಸಿಯಲಿ ನೆರೆ ಮಿಂದು ಕಿವಿ ಮೂ
ಗರಿದು ಪ್ರಾಣಾಯಾಮ ಮಾಡಿತು ತ್ರಿಶಿರ ದೂಷಣರ ॥
ಖರನ ತಲೆಗಳ ಬೇಳಿದುದು ಬಲಿ
ಹರಣವಿಕ್ಕಿತು ಕನಕ ಮೃಗವನು
ಹರಿದು ಹಸಿದುಣಬೇಡುತಿರ್ಪುದು ನಿನ್ನ ಮಿದುಳುಗಳ ॥ ೩೫ ॥

ಕಡುಹು ಖರೆಯವು ಕಾಣಬಾರದೆ
ಜಡೆಯ ಹೊತ್ತಡವಿಯಲಿ ತಿರುಗುತ
ಮಡದಿಯನು ಹೋಗಾಡಿ ಶರಧಿಗೆ ಹಾಳುವಟ್ಟವನ ॥
ಬಿಡದೆ ಹೊಗಳುವೆ ಹೆಕ್ಕಳಿಸಿ ಬಾ
ಯೊಡೆಯಲೊದರುವೆ ನಿಲ್ಲು ಲಂಕೆಯ
ತುಡಕುವರೆ ಕಡು ದೂರವೈ ಕಪಿ ದೂತ ಕೇಳೆಂದ ॥ ೩೬ ॥

ಧುರದಿ ಗೆಲ್ಲದೆ ಮಾಣೆ ನೀನದು
ಖರೆಯ ರಘುಕುಲ ರಾಮಚಂದ್ರನ
ಸೊರಹುವಡೆಯೆಲುವಿಲ್ಲ ನಾಲಗೆಗೇನು ಬಿನ್ನಣವು ॥
ಇರಳು ಕಪಟದ ಗೊರವನಾಗಿಯೆ
ತಿರಿಯೆ ವೇಷಿತನಾಗಿ ಲಕ್ಷ್ಮಣ
ಬರೆದ ಗೆರೆಯನು ದಾಂಟದಾತನು ಕಾದದಿರನೆಂದ ॥ ೩೭ ॥

ಅಹಿತರಾವಲ್ಲಂಗದಾ ನಿನ
ಗಹಿತ ರಾಘವ ತಿಳಿದು ನೋಡಾ
ಕುಹಕ ಬುದ್ಧಿಯಲಸುರ ಬೀಡಿಗೆ ನಿನ್ನ ಕಳುಹಲಿಕೆ ॥
ಅಹುದು ಭಲರೇಯೆಂಬರುಳಿದರೆ
ಅಹಹ ತಪ್ಪಾಯ್ತೆಂಬರಳಿದರೆ
ಚಹಡತನಗಳನರಿಯೆ ಏಗುವೆ ನೀನು ಹಸುಳೆಯೆಲಾ ॥ ೩೮ ॥

ನಂಬಬಹುದೇ ದಾಯವಾದಿಗ
ಳೆಂಬ ಪಾಪಿಗಳೇನಮಾಡರು
ತಿಂಬವನೆ ಕೊಲುವಲ್ಲಿ ಕರುಣೆಗಳುಂಟೆ ಭಾವಿಸಲು ॥
ನಂಬುಗೆಯ ನೀಡುವೆನು ರಾಮನ
ತಂಬುಲಕೆ ಕೈಯ್ಯಾನುವರೆ ಸುಡು
ಶಂಭು ನಗನೇ ನಿನ್ನ ತಂದೆಯ ಹೆಸರ ಕೆಡಿಸಿದೆಲ ॥ ೩೯ ॥

ಹಣ್ಣು ಹಗಿನವ ತಿಂದು ಕೊಬ್ಬಿ
ದ್ದಣ್ಣಗಳಿಗಾನಿನ್ನು ತಕ್ಕುದ
ಹಣ್ಣದುಳಿಯೆನು ಮರುಳು ನರನಲಿ ನೀನು ಕೆಡಬೇಡ ॥
ಅಣ್ಣ ಬಾಲಿಯ ಕೊಲಿಸಿದಾತನು
ಚಿಣ್ಣನೆಂದವ ಹೇಸಿ ಬಿಡುವನೆ
ಬಣ್ಣದಾಸೆಗೆ ಬದುಕು ಮಾರಿದ ಗಣಿಕೆಯಂತಹುದು ॥ ೪೦ ॥

ಎದ್ದು ಹೋದ ವಿಭೀಷಣನು ಮು
ನ್ನಿದ್ದ ಮನೆಯನು ಕೊಡುವೆ ಬಲದಲಿ
ಗದ್ದುಗೆಯನಿಕ್ಕಿಸುವೆ ಸೇನಾಪತ್ಯ ಪಟ್ಟದಲಿ ॥
ಇದ್ದು ಬಾಲಿಯ ಹಗೆಯ ನೆರವಹ
ವಿದ್ಯವನು ನೀ ಕಲಿವುದವರಿಗೆ
ಮದ್ದನರೆವರೆ ನಾನು ನೆರವಹೆ ಹೋಗಬೇಡೆಂದ ॥ ೪೧ ॥

ಹಲವು ಮಾತೇಕೊಳ್ಳಿತಾಯಿತು
ಕಳುಹಿ ಕರೆಸದ ಮುನ್ನ ನೀನೇ
ಒಲಿದು ಬಂದತಿ ಲೇಸುಮಾಡಿವೆ ದೊರೆಯ ಮಗನಲ್ಲ ॥
ಕಲಿಗೆ ಪಟ್ಟವನೀಗ ಕಟ್ಟುವೆ
ನೆಲವೊ ಭೇರಿಯ ಹೊಡೆಸೊ ಗುಡಿಗಳ
ಚಳಕದಲಿ ಕಟ್ಟುತ್ತ ಸಿಂಗರಗೈಯ್ಯೊ ಪಟ್ಟಣವ ॥ ೪೨ ॥

ಬಲದ ಗದ್ದುಗೆ ಮೊದಲ ಕಾಣಿಕೆ
ಒಲವಿನಾನೆಯು ತೇರು ಕುದುರೆಯು
ಸಲಿಸಿ ಮಂತ್ರಿಯು ಮಾಡಬೇಹುದು ಕರೆಸೊ ಜೋಯಿಸರ ॥
ನಳಿನಮುಖಿಯರು ಮುತ್ತಿನಾರತಿ
ಗಳಲದಿಗೊರ್ಳಲಿ ಹೇಳುಯೆನುತಿರ
ಲೆಲವೊ ಸ್ವಾಮಿದ್ರೋಹಿತಾನಲ್ಲೆಂದನಂಗದನು ॥ ೪೩ ॥

ಹಲವು ತಲೆ ಯಾವಾವ ಮುಸುಡಿಗೆ
ತಿಳಿಯು ಬುದ್ಧಿಯು ಹೇಳುತಿಪ್ಪುದೊ
ಬಲು ಕುಮಂತ್ರವ ನೆನೆದೆ ರಕ್ಕಸ ಜಾತಿಗಿದು ಸಹಜ ॥
ಒಲುವ ಮಾತಂತಿರಲಿ ನೀನಾ
ನಳಿನಮುಖಿಯನು ಕೊಟ್ಟು ಕಾಂಬುದು
ಗಳಹಿ ರಾವಣ ಕುಹಕ ಬುದ್ಧಿಗಳೇನು ಹಿತವಲ್ಲ ॥ ೪೪ ॥

ಸೈರಿಸಿದೆ ನೀ ಹೋಗು ಸಾಯುವೆ
ಸಾರಿ ಬಂದರೆ ಖಳರು ಕೊಲುಗೆನೆ
ಮಾರಿ ಬಹುದೆಲೆ ನೀನಿರದೆ ಸರಿಯೆನ್ನ ಸಭೆಯಿಂದ ॥
ಧೀರನಹ ಗಡ ನಿನ್ನರಾಘವ
ಭಾರಿಯಾಳೆಂದೆಂಬೆ ಮತ್ತೇ
ನಾಗಿಗೀಯಾರಣ್ಯ ರೋದನವೆಂದನಮರಾರಿ ॥ ೪೫ ॥

ಆಗದೇ ಸಂಧಾನ ಭಾಗ್ಯವ
ನೀಗಿದ್ಯೆ ನೀನಕಟ[illegible]ಹೆಡಕನು
ತಾಗಿದಲ್ಲದೆ ನಿನಗೆ ಸೇರವು ಉಚಿತ ಬೋಧೆಗಳು ॥
ಬೇಗ ಸೀತೆಯು ಕೊಟ್ಟು ಕಂಡರೆ
ರಾಘವೇಶ್ವರ ಕಾವ ಕೆಡದಿರು
ಮೇಘನಾದಾದಿಗಳ ನೆಚ್ಚದಿರೆಂದನಂಗದನು ॥ ೪೬ ॥

ಹಿತವನಾಗಿಯೆ ಬಂದು ನೀ ಪರಿ
ಮಿತದಿ ಹೇಳಿದಡಾನು ಕೇಳುವೆ
ಖತಿಯು ಹುಟ್ಟಿಸಿ ನೆರೆದ ಸಭೆಯಲಿ ಗಳಹೆ ಸೈರಿಸೆನು ॥
ಸುತನು ನೀನೆಂದಿದ್ದೆನಾ ಸುರ
ಜಿತನು ಕಂಡರೆ ನಿನ್ನನುಳುಹನು
ಮತಿವಿನಾಶಿಯೆ ಹೋಗು ಸಾಯದಿರೆಂದ ದಶಕಂಠ ॥ ೪೭ ॥

ಹುಡುಗ ನಾಚಿಕೆಯಿಲ್ಲ ನಿನ್ನನು
ಸುಡಲಿ ಹಗೆಯರ ಬಂಟನಾಗಿಯೆ
ಗಡಹುತಿಹೆ ನೀ ಮಾನ್ಯವಂತರವೋಲು ಬೋಸರಿಪೆ ॥
ಬಿಡದೆ ನಡೆ ನಡೆ ಹೇಳು ರಾಮಗೆ
ಪೊಡವಿಜೆಗೆ ಬಳುವಳಿಯು ಹೆಂಡಿರ
ಕೊಡಲಿ ಬದುಕುವಡಲ್ಲದಿದ್ದರೆ ಖಳರು ಕೊಲುಗೆಂದ ॥ ೪೮ ॥

ಕಡುಹಿಯೋ ನೀಬಳ್ಳುಗರೆಯುಲು
ಪಡಿಗ ಹಾಲಿನ ಸವಿಯು ನೋಡುವೆ
ಬಡಿಗೆಗಾಣದೆ ಹೆಡಕ ಮೋಹಿಪ ರಾಮು ಬಾಣವಿರೆ ॥
ಪೊಡವಿಜೆಯು ಬಿಡದೆಕ್ಕಸಕ್ಕವ
ಗಡಹಿ ಕುಲವನು ಕೂಗಿ ಕೆಡದಿರು
ಒಡೆಯು ನೇಮುವನೀಯುನೇಗುವೆನೆಂದನಂಗದನು ॥ ೪೯ ॥

ನಿನಗೊಡೆಯು ರಾಘವನ ತಾ ಹೋ
ಗನುವರಾಂತಕೆ ಬಳಿಕ ಸನಿಯನು
ಮೊನೆಯುಲಾಂ ತೋರುವೆನು ಹೊಸತನು ಶಾಕಿನೀ ಜನಕೆ ॥
ಜನವು ನಗುವುದು ಬಂದ ದೂತನ
ಮುನಿದು ಕೊಂದಡಕೀರ್ತಿ ಶಾಶ್ವತ
ಬಿನುಗುಗೋಡಗ ನಾರು ನುಡಿದರೆ ಬಾಯ ಸೀಳಿಸುವೆ ॥ ೫೦ ॥

ಕೆಲದಿ ಸನ್ನೆಯ ಮಾಡಲೆದ್ದನು
ಖಳನ ಹೆಮ್ಮಗನಿಂದ್ರುದಲ್ಲಣ
ನೆಲವೊ ಮುಂಗೈಯೊಡ್ಡು ನೋಡುವ ನಿನ್ನ ಭುಜಬಲವ ॥
ಬಲುಹ ನೋಡವರೆಲ್ಲ ಹಿಡಿಯುಲಿ
ಬಲದೊಳೊಬ್ಬರುವುಳಿಯುದಂತೆನೆ
ಕಲಿಯು ಅಂಗೋಪಾಂಗವೆಲ್ಲವ ಮುತ್ತಿ ಮುಸುಕಿದರು ॥ ೫೧ ॥

ಮಡವ ಬೆರಳನು ಜಾನು ಜಂಘೆಯ
ತೊಡೆಯನುರವನು ಬಾಲ ಬಸುರನು
ನಡುವ ಕೊರಳನು ಹೆಡಕು ಚಂಡಿಕೆ ಮೂಗು ಕಿವಿಗಳನು ॥
ತೊಡಚಿ ಕೈಗಳ ಸಕಲ ದನುಜರು
ಹಿಡಿದು ಜೋಲಲು ನೆಗೆದು ಹಾರುತ
ಕೊಡಹಿ ಬಡಿದನು ಬಾಲಧಿಂದವ ಬಡಿಗೆಗೋಲಂತೆ ॥ ೫೨ ॥

ಅಟ್ಟಿ ಬರುತಿಹ ಖಳರ ತಲೆಗಳ
ಕುಟ್ಟಿ ಮುರಿದನು ಮುಂದೆ ದಾರಿಯು
ಕಟ್ಟಿದವದಿರನೊದೆದು ಬಿಸುಟನು ಸುಭಟನಂಗದನು ॥
ಪಟ್ಟಣವ ಹೊರವಂಟು ಕಪಿ ಜಗ
ಜಟ್ಟಿ ಬರುತಿರಲತ್ತ ದುನಜಘ
ರಟ್ಟಿ ದೂರದಿ ಕಂಡು ನಸು ನಗುತಿರ್ದ ಮನದೊಳಗೆ ॥ ೫೩ ॥

ಇಂದುಮುಖಿಯನು ಬಿಡೆನುಯೆಂದರೆ
ಕೊಂದನೆಡಬಲದಂಕದಸುರರ
ವೊಂದನರ್ಥವ ಮಾಡಿ ಹುಯ್ಯಲ ತಂದೆನೆಲೆ ತಂದೆ ॥
ಸಂಧಿ ಮುರಿದುದು ಖಳರ ತಲೆಗಳ
ಸಂದು ಮುರಿದುದು ರಾವಣನ ಬಲು
ಹಿಂದುವುರಿದುದು ಹೋಗದುತ್ತರವೆನ್ನಲಾತಂಗೆ ॥ ೫೪ ॥

ಸಂಧಿ ಸೇರಿದರೆಮ್ಮ ಪೌರುಷ
ವಿಂದು ವ್ಯರ್ಥವು ಕೆಣಕಿ ಕದನವ
ತಂದು ನೀ ಕರ ಲೇಸುಮಾಡಿದೆ ರಣಧರಿತ್ರಿಯಲಿ ॥
ಮುಂದೆ ಕೈಹಾರದಲಿ ದನುಜರ
ಕೊಂದು ಕೂಗುವ ಹಬ್ಬವಾಯಿತು
ಯೆಂದು ನಲಿನಲಿದಾಡುತಿರ್ದುದು ಮಾಣಿ ಮರ್ಕಟರು ॥ ೫೫ ॥

ಉಚಿತವಿಲ್ಲಿಗೆ ಸಂಧಿ ಪದನವು
ರಚಿತವೈವತ್ತಾರು ರಾವಣ
ನುಚಿತವಚನವ ಕೇಳದಿರೆ ಕಪಿರಾಯನಂಗದನು ॥
ನಿಚಯ ದೈತ್ಯರನೊರಸೆ ಮತ್ತಾ
ಪ್ರಚುರಗುಣನಿಧಿಯೆಡೆಗೆ ಬಂದರೆ
ಉಚಿತದಾನಿಗಳರಸನುಡುಗೊರೆಯಿತ್ತು ಮನ್ನಿಸಿದ ॥ ೫೬ ॥

## ೧೯ನೇ ಸಂಧಿ

ಪಲ್ಲ ॥ ದುರುಳ ರಾವಣಿಯುರುಗ ಪಾಶದಿ
ಹರಿಯ ಪಡೆಯನು ಕಟ್ಟಿದಡೆ ಖಗ
ವರನ ದೆಸೆಯಲಿ ವಿಜಯರಾಘವ ಗೆಲಿದನಯ್ಯಯ್ಯ ॥

ಪದ ॥ ಹಿಂದೆ ಇರುಳಿನಲೊಂದು ಕೋಡಗ
ಬಂದು ಪುರವನು ಸುಟ್ಟು ಹೋಯಿತು
ಇಂದು ಸಂಧಿಯ ನೆವದಲಂಗದನಸುರ ನಾಯಕರ ॥
ಕೊಂದು ಕೂಗಿದ ಮರಳಿ ಮರಳಿಯು
ಬಂದು ಕೊಲುತಿವೆಯೆಣಿಸೆ ಹರಿಬಿ
ಲ್ಲೆಂದು ರಾವಣ ಕೈಯ ಗಲ್ಲದಲಿಟ್ಟು ಚಿಂತಿಸಿದ ॥ ೧ ॥

ಸೀತೆಯೊಲ್ಲದ ಚಿಂತೆ ರಾಮನ
ಭೀತಿ ಕಪಿಗಳು ಬಯ್ವ ಮೂದಲೆ
ಭೂತ ಹೊಡೆದಂತಾಗಿ ಜಾಣಳಿದೊಣಗಿದಾಸ್ಯದಲಿ ॥
ಮಾತು ಕಟ್ಟಿತು ಮರುಗಿ ಬಿಸುಸುಯಿ
ದೀತಕೀ ಬದುಕೆಂಬ ತೆರನಲಿ
ರೀತಿ ತಪ್ಪಿ ದಶಾಸ್ಯನಿದ್ದನು ದುಗುಡ ಭಾರದಲಿ ॥ ೨ ॥

ಹಲ್ಲುಮುರಿದಹಿಯಂತೆ ಕಣನಲಿ
ಬಿಲ್ಲುಗೆಟ್ಟವನಂತೆ ಹೆಬ್ಬುಲಿ
ತಳ್ಳಿವಲೆ ಬಿದ್ದಂತೆ ಸಿಂಗನ ಕಾಲು ಮುರಿದಂತೆ ॥
ಭಲ್ಲುಕರ ಘರ್ಜನೆಗೆ ಕಲ್ಲೆದೆ
ತಲ್ಲಣಿಸುತಿರೆ ಭಂಗಭಾಜನ
ಬಳ್ಳಿದಲೆಯನ ತರಳನಾಗಲೆ ಬಂದನಿಂದ್ರಾರಿ ॥ ೩ ॥

ಪರುಷ ಮನೆಯೊಳಗಿರೆ ಸುವರ್ಣದ
ನೆರವ ಬೇಡುವರುಂಟೆ ನಿನಗೀ
ನೆರೆದ ಪಟುಭಟರಿದ್ದು ಕಾದುವ ಮನದ ಭರವಿದ್ದು ॥
ಹಿರಿದು ಚಿಂತಿಸಲೇಕೆ ಬಿಟ್ಟೆಯ
ಸುರರು ನಡೆವಡೆ ತೆರಹ ಕಾಣೆನು
ಸರಕು ಕಟ್ಟಿಹುದಮರಲೋಕದಲೆನ್ನ ಭಯದಿಂದ ॥ ೪ ॥

ಸ್ತ್ರೀಣನಾದಗೆ ಕೇಡು ಬಪ್ಪುದ
ಮಾಣದಾತಗೆ ದುರುಳತನಗಳು
ಕಾಣದಾತಗೆ ಭಾಗ್ಯ ಸಂಕ್ಷಯವಪ್ಪುದೇನರಿದು ॥
ಮಾಣಲದಕೇನದರ ಫಲವನು
ಕಾಣಬಹುದೆಲೆ ಮುಂದೆ ರಿಪುಗಳ
ಗೋಣನರಿವೆನು ಚಾರಿವರಿವೆನು ಸಿಂಗಲೀಕರನು ॥ ೫ ॥

ನುಡಿಯಲಾಗದು ಸುಭಟ ಸಂಧಿಯು
ನುಡಿವಡವಮಾನ್ಯಂಗಳಜ್ಞಾತೆ
ಗೊಡವೆ ತಪ್ಪಿತು ಹೋಗಲಿನ್ನೆನಗದರ ತೊಡಕೇಕೆ ॥
ಪೊಡವಿಜೆಯ ಬಿಡೆನೆಂಬ ಚಿತ್ತದ
ಕಡುಹು ಖರೆಯುವೆ ಎನಗೆ ನೇಮವ
ಕೊಡಿಸು ಮನುಜನ ಪಡೆಯ ಸಾವಿಗೆ ಸಂಚಕಾರಸನು ॥ ೬ ॥

ಚತುರತನದಲಿ ನುಡಿದ ನುಡಿಗಳ
ಸತಿಗೆ ಮರುಳಾದವನು ನೋಡದೆ
ಹಿತರು ನೀನೆನಗಲ್ಲದಾರುಂಟೆಂದು ರಾವಣನು ॥
ಸುತನ ಬರಸೆಳೆದಪ್ಪಿ ವೀರರ
ರತುನ ಬಾರೆಲೆ ಕಂದ ನೀ ರಘು
ಪತಿಯ ಗೆಲ್ಲೆಂದೆನುತ ನೇಮದ ವೀಳೆಯವನಿತ್ತ ॥ ೭ ॥

ಜನಪ ರಾಮಗೆ ಬಪ್ಪ ಬೇಸರ
ದಿನದವಲ್ಲಭ ಕಾಣಲಾರದೆ
ಮನದಲುಮ್ಮಳಿಸುತ್ತ ಬಿದ್ದನು ಪಶ್ಚಿಮಾಬ್ಧಿಯಲಿ ॥
ನೆನೆದ ಹಗಲಿಗೆ ಸಮರ ನೂಕದು
ತನಗೆ ಕಲಿಯೇರಾಗೆ ಇರುಳೇ
ವನಚರಂಗಳ ಕೊಲುವೆನೆಂದನುವಾದ ಇಂದ್ರಾರಿ ॥ ೮ ॥

ಉತ್ತಮದ ಕೈದುಗಳ ಮಣಿಗಳ
ಕೆತ್ತಿಸಿದ ರಥದಲ್ಲಿ ತುಂಬಿದ
ಬಿತ್ತರದ ಮಣಿದೊಡಿಗೆದೊಟ್ಟನು ಖಳ ವರೂಥಲಿ ॥
ಮತ್ತೆ ನೀಲಾಶ್ವಗಳ ಹೂಡಿದ
ತೆತ್ತಿಗರ ನೆರೆ ಕೂಡುತಿರಲಾ
ಕತ್ತಲೆಯ ಬಣ್ಣಿಸಲು ತೀರದು ಭುವನ ಮುಸುಕಿದುದು ॥ ೯ ॥

ಇಂದ್ರನೀಲದ ಮೇಲುಗಟ್ಟಿನ
ಲಂದವಿಟ್ಟಂತಿರಲು ಲೋಕವು
ಇಂದು ಬಾರದೆ ಹೋದ ಉಡುಗಣ ಪಪೆಯ ಮುಗಿಲೊಳಗೆ ॥
ಬಂದ ಕಾರಿರುಳುಗಳೆ ತನ್ನಿರು
ಳೆಂದು ತಿರುಳಲಿ ಕುರಿತವಾಯಿತು
ಬಂದು ಕೂಡಿದನಸುರ ರಕ್ಕಸ ಪಡೆಯು ಪಟುಭಟರ ॥ ೧೦ ॥

ಅಟಮಟಿಗನಿಂದ್ರಾರಿಯುಭ್ರ್ರದಿ
ಚಟುಲ ಹಯಗಳ ಚಬುಕನಿಕ್ಕಲು
ಪುಟನೆಗೆದು ಕುಣಿಕುಣಿದು ತುಳಿದುವು ದಿವವನಾಕ್ಷಣಕೆ ॥
ಕುಟಿಲ ಕುಲಗುರು ರಾಮಚಂದ್ರನ
ಕಟಕ ನಿದ್ರೆಯಲಿರಲು ಹೊಡೆಸಿದ
ಪಟಹ ಸಿಸ್ಸಳ ಭೇರಿ ಪರೆ ಬರಸಿಡಿಲಿನಂತಾಯ್ತು ॥ ೧೧ ॥

ಬೆಚ್ಚಿದುದು ಕಪಿ ಸೇನೆ ಕಿವಿಗಳ
ಮುಚ್ಚಿ ಸ್ವೈವೆರಗಾಯ್ತು ಘಂಟೆಗ
ಳೊಚ್ಚತದಿ ಢಣಲೆಂದುದಾತನ ರಥದ ಬಿರಿಸಿಂಗೆ ॥
ಬಿಚ್ಚಿ ಬಿಟ್ಟಂತಾಯ್ತು ಕಿವಿ ಧ
ಟ್ಟುಚ್ಚಿಹೋಯಿತು ಘೋರ ರಭಸಕೆ
ಹೆಚ್ಚಿ ಪಿತ್ತವು ತಲೆಯನೇರಿದವೋಲು ತಿರುಗಿದರು ॥ ೧೨ ॥

ತೆರಳು ತೆರಳೆಲೆ ರವಿಜ ದಧಿಮುಖ
ಮರಳು ಮರಳಂಗದನೆ ಶತಬಲಿ
ಕರುಣಿಸಿದೆ ನೀಹೋಗು ಜಾಂಬವ ಮುದುಕ ಸಾಯದಿರು ॥
ಸರಿದು ಬದುಕೋ ಗಂಧಮಾದನ
ಹುರುಳುಗೆಡದಿರು ಹನುಮ ನೀನಾ
ನರನ ತೆತ್ತಿಗನಾಗಿ ಸಾಯದಿರೆಂದು ಬೊಬ್ಬಿರಿದ ॥ ೧೩ ॥

ದಡಿಗ ಬಿಲು ಜೇವಡೆದು ಬಾಣವ
ತೊಡಚಿ ಸುರಿದನು ಗಂಧಮಾದನ
ಪಡೆಗೆ ರವಿಸುತನೆಡೆಗೆ ಮೋಹಿದನರ್ಧಚಂದ್ರಗಳ ॥
ಬಿಡುತ ಮೈಂದನ ಬಲವ ಸವರಿದ
ಕಡಿದು ಹರಹಿದ ಹೆಸರ ಕಪಿಗಳ
ಕೆಡೆದು ಮೂದಲಿಸಿದನು ಗಗನದಲಿದ್ದು ಸುರವೈರಿ ॥ ೧೪ ॥

ಹೊರಳುವರಸಿಗೆ ಹರೆವ ನಾಯಕ
ದೊರಕಿದಂತಯ್ಯಯ್ಯ ನೋಡಿರೊ
ನರಗೆ ವಾನರ ಸೇನೆ ಕೂಡಿತು ಮೋಟ ಕುಂಟರಿಗೆ ||
ವರವ ಕೊಡುತಿಹ ಗಾದೆ ಕಪಿಗಳ
ನೆರವಿ ಸಾಯುಸಗೊಂಡು ಬಳಲಿದೆ
ಮರಳಿ ಹೋಹುದು ಲೇಸು ಕೊಲ್ಲುವನಿಂದ್ರಜಿತುವೆಂದ || ೧೫ ||

ತೂಳಿದನು ಮೃತ್ಯುವಿನ ಮುಕ್ಕಳ
ಬೋಳೆಯುಂಬಿನಲಟ್ಟಿ ಸವೆದನು
ಹೂಳಿಹೋಯಿತು ನಳನ ಪಡೆ ನಾರಾಚ ಸೋನೆಯುಲಿ ||
ಹೇಳಲರಿಯೆನು ಹೆಸರನೆಪ್ಪ
ತ್ತೇಳು ಕೋಟಿಯ ಭಟರ ದೇಹವ
ಕೀಲಿಸಿದ ಹೊಸ ಮಸೆಯ ಸರಳಿಂಪಸುರ ಕಡು ಮುಳಿದು || ೧೬ ||

ಬಿಟ್ಟ ಸರಳಿನ ತೊಡಚಿದಂಬಿನ
ಮಿಟ್ಟೆ ಮುಕ್ಕವಲಂಬು ಮುಮ್ಮೊನೆ
ಗಟ್ಟೆ ಧಾರೆಯನರ್ಧಚಂದ್ರದ ಸೂಚಿಮುಖಗಳನು ||
ನೆಟ್ಟನವ ಬಿರುವರಿಯು ಸುರಿದರೆ
ಕೆಟ್ಟೆವೆಂದೊರಲಿತ್ತು ಕಪಿಬಲ
ಹೆಟ್ಟಿದನು ಸುರವೈರಿ ಕಪಿಗಳ ಮಾರಿ ಇಂದ್ರಾರಿ || || ೧೭ ||

ಕೆಲರು ಕೈಗಳನೊಡ್ಡಿ ಹಣುಗುತ
ಕೆಲರು ಹಾರುತ ಹಲ್ಲುಗಿರಿವುತ
ಕೆಲರು ಬಡವರ ಹಿಡಿದು ಮೇಲಕೆ ನೆಗಹಿ ಮರೆವಿಡಿದು ||
ಕೆಲರು ಕಳವಳಿಸುತ್ತ ನರಳುತ
ಕೆಲರು ಶಿಶುಗಳ ಬಸುರಲಿಡುತವೆ
ಕೊಲೆಗೆ ಭಾಜನವಾಯ್ತು ಕಪಿಗಳು ಇರುಳು ಕಂಗೆಟ್ಟು || ೧೮ ||

ಶರಶರವ ಬೆಸಲಾಯ್ತೊ ಎಸುತಿಹ
ಸರಳು ಸರಳನು ಕಾರುತಿದ್ದವೊ
ಸರಳುಗಳು ಪಡಿಸರಳ ಸುರಿದುವೊ ತಿಳಿಯಲರಿದಾಯ್ತು ||
ಎರಡು ಕೈಯಿಂದಿನಿತು ಬಾಣವ
ಸುರಿಯಬಲ್ಲನೊ ದೈತ್ಯನದು ಹುಸಿ
ಅರಿದರಿದು ಬಿಲುವಿದ್ಯವಿದನಿನ್ನಾರು ಕಲಿಸಿದರೊ || ೧೯ ||

ಸರಳ ಸುರಿಯಲು ಕಪಿಗಳುರುಳಲು
ಹರಣ ಹರಿಯಲು ಬಸರು ಬಿರಿಯಲು
ಬಿರಿದು ಉರಿಯಲು ಬಿಂಕ ಮುರಿಯಲು ಮಂತ್ರಸುರುಳಾಗಿ ॥
ಅರಿಗಳುರುಳಲು ಕಣ್ಣುಮರಳಲು
ಹುರುಳು ಹುದುಗಲು ಧೈರ್ಯ ಜರುಗಲು
ಇರದೆ ರಕ್ತದ ಕಡಲು ಹರಿಯಲು ಸೇನೆ ಕಂಗೆಡಲು ॥ ೨೦ ॥

ಚಪಳ ಗಣಿಕೆಗೆ ದಿಟ್ಟ ವಿಪ್ರನ
ಜಪತಪಂಗಳ ಎಣಿಕೆಯುಂಟೇ
ಕಪಟದಲಿ ಕೊಲುವಂಗೆ ಬಡವರ ಮೇಲೆ ಕೃಪೆಯುಂಟೆ ॥
ನೃಪರು ಕೆಟ್ಟರೆ ಮಾನ್ಯವುಂಟೇ
ಶಪಥವುಂಟೇ ದ್ಯೂತವರ್ತಿಗೆ
ಸುಪಥದಲಿ ನಡೆವಂಗೆ ರಕ್ಕಸಜನ್ಮವೆಂತಹದು ॥ ೨೧ ॥

ಎಲವೊ ರಾಘವ ಕೇಳು ನಿನ್ನಲಿ
ಕಲಿತನಂಗಳ ಬಲುಹು ಕೇಳಿಹೆ
ಎಲೆಯ ಮರೆಯಿಂದೆಚ್ಚು ಬಾಲಿಯ ಕೊಂದೆ ಹುಳುಗಡಿದ ॥
ಹಳೆಯ ಬಿಲ್ಲನು ಮುರಿದು ಹೆಂಗುಸ
ಗೆಲಿದೆ ಕಾಗೆಯ ಕಣ್ಣ ಕುಕ್ಕಿದೆ
ಛಲವ ಮೆರೆವುದಕಿಲ್ಲ ಹಾಯದು ಹಿಂದಣಂತೆಂದ ॥ ೨೨ ॥

ನಪೆದೆನ್ನೈ ಕಪಿಗಳನು ನೀನೀ
ಕದನದಲಿ ಮರಳಿನ್ನು ಸಾಯಪೆ
ತ್ರಿದಶರೆಲ್ಲರ ಹಿಂಡಿ ಹಳಿದೆನು ಮನುಜರೆನಗಿದಿರೆ ॥
ಮೊದಲು ಬಲ್ಲಿತು ಲಾಭ ನಿನಗೀ
ಕದನದಲಿ ಗೆಲುವಿಲ್ಲ ಸೀತಾ
ಸುದತಿಯಾಸೆಯ ಬಿಟ್ಟು ಹೆಂಡಿರ ಮತ್ತೆ ಗಳಿಸೆಂದ ॥ ೨೩ ॥

ಇನ್ನೆವರ ನಾವರಿಯದಿದ್ದೆವು
ಕನ್ನೆಗಳ್ಳನ ತನುಜನೆಂಬುದ
ಭಿನ್ನವಿಲ್ಲದ ತಂದೆ ಮಕ್ಕಳ ಕಲಿತ ಕರ ಲೇಸು ॥
ಇನ್ನು ನೋಡುವೆನೆಲವೊ ರಕ್ಕಸ
ಬನ್ನಬಡಿಸದೆಬಿಟ್ಟೆನಾದರೆ
ಚುನ್ನವಾಡಲು ಬಹುದು ನೀನೆಂದರಸನನುವಾದ ॥ ೨೪ ॥

ಸದಳ ಕಪಿಗಳು ಬಿದ್ದುದ್ದೈ ಶಿವ
ಕದನವೀ ಪರಿಯುಂಟೆ ನಡುವಿರು
ಒದರಿ ಕಪಿಗಳು ನೊಂದುದಕಟಕಟೆಂದು ಬಿಸುಸುಯ್ದು ॥
ಇದು ಘನವೆ ನಮಗಿನ್ನು ಲಕ್ಷ್ಮಣ
ಕದನ ಸೋಲುವುದೊಮ್ಮೆ ಗೆಲುವುದು
ವಿದಿತ ನಮಗಾಗಿವರು ನೊಂದಳಲೇಕ ಹಿರಿದಾಗಿ ॥ ೨೫ ॥

ಎಲವೊ ನೀನೀ ಚಾಟುತನದಲಿ
ಸುಲಭನಹೆ ನಿಜ ವಿದ್ಯವಲ್ಲಾ
ಕಳನೊಳಾಂತರನಿರಿದಡೊಪ್ಪುವುದದುವೆ ಶೂರತನ ॥
ಬಲುಹುವುಳ್ಳವ ಮೋಸ ಮರೆಯಲಿ
ಕೊಲುವನೇ ಫಡ ಹಂದೆ ನೀನೆಂ
ದಲಘುಸಾಹಸಿ ರಾಮ ಕೋದಂಡವನು ತುಡುಕಿದನು ॥ ೨೬ ॥

ಕೆರಳಿ ಕೋದಂಡದಲಿ ರಘುಪತಿ
ತರಣಿ ಬಾಣವ ಹೂಡಿ ತೆಗೆದಿಸೆ
ಹರಿದು ತಿಮಿರವ ನುಂಗಿ ಬೆಳಕಿಗೆ ಬೆಳಕು ಪಸರಿಸಿತು ॥
ದುರುಳ ದೈತ್ಯನನಂತರಿಕ್ಷದಿ
ನೆರೆದ ಕಪಿಪಡೆ ಕಂಡು ಘೀಳಿಡೆ
ಮರುತನಂದನ ಹಾರಿ ಮಕುಟವ ಕಿತ್ತ ಮಣಿ ಸುರಿಯೆ ॥ ೨೭ ॥

ವೀರರಂಗವ ಬಿಟ್ಟು ನೀನೀ
ಚೋರರಂಗವ ಕಲಿತೆ ಹೊಸತೇ
ನಾರಿಗಳ್ಳನು ತಂದೆ ನೀ ಧುರಗಳ್ಳ ಹಸನಾಯ್ತು ॥
ಆರಿಗುಂಟೀ ವಿದ್ಯ ದಿಟ ದಿಟ
ಸೇರಿದುದು ನಿನಗಹಹ ತೆಗೆ ತೆಗೆ
ಸಾರು ಫಡ ಫಡಯೆನುತ ಮಂಡೆಗೆ ಹಾಯ್ದು ಹೆಣಕಿದನು ॥ ೨೮ ॥

ವೀರತಿಕೆಯುಳ್ಳವನು ನೆರವನು
ಹಾರುವನೆ ಹಗೆಯೊತ್ತಿದಾಗಳೆ
ಪೌರುಷಂಗಳ ತೋರದುಳಿವನೆ ವಿಗ್ರಹಂಗಳಲಿ ॥
ಮಾರುತಿಯು ರಾವಣಿಯು ನಭದಲಿ
ಹೋರುತಿದ್ದರು ಶೂಲಿ ಮೆಚ್ಚಲು
ಧಾರಿಣಿಗೆ ಕಪಿಯೆಳೆವ ದೈತ್ಯನು ಮೇಲು ಮುಂಡೆಳೆವ ॥ ೨೯ ॥

ಆ ಹನುಮ ರಕ್ಕಸರು ಕಾದಲು
ರಾಹು ಶಶಿಗಳು ಗಗನ ಮಾರ್ಗದ
ಲಾಹವಂಗಳ ಹಿಡಿದು ಹೋರುವವೋಲು ರಥದೊಳಗೆ ॥
ಸಾಹಸಿಗಳಯ್ಯಯ್ಯ ದೇಹದ
ಮೋಹವಿಲ್ಲದೆ ತಿವಿಯುತಿದ್ದರು
ಬಾಹುಸತ್ವದಿ ಹನುಮ ಹೊಡೆವರೆ ಬಿದ್ದನಿಂದ್ರಾರಿ ॥ ೩೦ ॥

ದಡಿಗ ಡೆಂಡಣಿಸುತ್ತ ಭೂಮಿಗೆ
ಕೆಡೆದು ನೆತ್ತರುಕಾರಿ ಹೊರಳಿದ
ಹುಡಿಯು ಕೆಡಹುತ ಸುತ್ತ ನೋಡಿದ ಪ್ರಾಣಭೀತಿಯಲಿ ॥
ಪಡೆಯ ನೋವಿಂದಡಗಿತೆಂದರು
ಮೃಡನು ಹನುಮನ ಹರಸೆ ಮುಕುಟವ
ಪೊಡವಿವಲ್ಲಭಗಿತ್ತು ಮಣಿದನು ನಲಿದನಾ ಹನುಮ ॥ ೩೧ ॥

ಅವಸರದಲಾಪವನೆ ನಂಟನು
ಬವರದೊಳಗಾದವನೆ ಬಂಟನು
ಭುವನದಲಿ ಹನುಮಂತ ದೇವಗೆ ಸರಿಯದಾರೆನುತ ॥
ಅವನಿಪತಿ ಕಡು ಮೆಚ್ಚುತಿದ್ದನು
ರವಿಜ ಹೊಗಳಿದ ಮೈಂದ ಪೊಗಳಿದ
ಪವನಸಂಭವ ಹೊಯ್ದು ಹೊಯ್ಗಳ ನೆನೆದನಿಂದ್ರಾರಿ ॥ ೩೨ ॥

ಮಂಡೆಯೊಡೆದಾ ದನುಜ ಬಹುತರ
ಗಂಡುಗೆಟ್ಟನು ವೀರವಳಿದುದು
ತೊಂಡತನಗಳು ಹೋಗಿ ಕೈಕಾಲೊಡೆದು ನಾಚುತ್ತ ॥
ಕೊಂಡವಗಳಿದು ಹೋಮವಿಕ್ಕುವೆ
ಕೊಂಡುಬಹೆನಿವರಿಂಗೆ ಮಾರಿಯ
ದಿಂಡುಗೆಡಹುವೆನೆನುತ ತೆರಳಿದ ಕುಂಭಿನಿಯ ಬಿಲಕೆ ॥ ೩೩ ॥

ಹಿರಿದು ಭಂಗದ ಬದುಕು ಸುಡಲೀ
ಪುರವ ಹೊಗುವರೆ ಲಜ್ಜೆಯಿಲ್ಲಾ
ತರುಚರಂಗಳ ಗೆಲಿದಡಲ್ಲದೆ ಮರಳೆ ತಾನೆಂದು ॥
ಇರುಳು ಬಂದನು ಖಳ ಭಯಂಕರ
ತರವೆನಿಪ್ಪೆಡೆಗಾಗಿ ಕೆಲದಲಿ
ಮರುಳು ಕಾಯ್ದಿರೆ ಮುಂದೆ ಮಾಡುವ ಹರಕೆಗಳ ಕಂಡ ॥ ೩೪ ॥

ಹಳೆಯ ವೇತಾಳಕರು ಹೆಬ್ಬುಲಿ
ಹಲವು ಜಟ್ಟಿಗ ಮಾಣಿ ಭದ್ರರು
ಬಲು ಭುಜಂಗಳ ತೊಡಿಗೆಯೊಪ್ಪುವ ರೌದ್ರಮುಖರಿರಲು ॥
ತಲೆಯನರಿದು ನಿವಾಳಿಯೆತ್ತುವ
ಬಲಿದು ಶೂಲವನೇರಿ ಕೂಗುವ
ಒಲಿದು ಕೆಂಡದ ನೀರ ಮೊವುದ ಕಂಡನಿಂದ್ರಾರಿ ॥ ೩೫ ॥

ಉರಿವ ಹುಯ್ಯಲನೊಲುವ ದೇವಿಗೆ
ಹಿರಿಯ ಕಂದನ ಕೊಡುವ ಹರಕೆಯು
ಸುರದಿಶಾಪಟ ಕಂಡು ಮೆಚ್ಚುತ ಬಗಿದ ನಡು ಬಸುರ ॥
ಉರಿಗೆ ತೆಗೆದೊಟ್ಟಿದನು ಸಮಿಧೆಯು
ಬೆರಳು ಬದಿಯೆಲುವಿಂಧನಂಗಳ
ನರದ ದರ್ಭೆಯ ರುಧಿರದಾಜ್ಯದಲಿಂದ್ರಜಿತು ಬೇಳ್ದ ॥ ೩೬ ॥

ಜತ್ತುಕದ ಮಾರಣದ ಹೋಮದಿ
ಹೊತ್ತಿ ದಳ್ಳುರಿನಭವನಡರಿತು
ತುತ್ತನೊಗಡಿದನನಲ ಕಾರ್ಬೊಗೆ ಕಮರು ದುರ್ಗಂಧ ॥
ಹತ್ತು ದಿಕ್ಕನು ತೀವಿತಮಮಾ
ಕಿತ್ತನಲಗನು ತಲೆಯನರಿಯಲು
ಚಿತ್ತದನುವರಿತಾ ನಿಕುಂಭಿನಿ ನಿಜವ ತೋರಿದಳು ॥ ೩೭ ॥

ಹೋಹೊ ನಿಲು ನಿಲು ಮಗನೆ ನೀನತಿ
ಸಾಹಸಂಗಳ ಮಾಡದಿರೆಲವೊ
ಬೇಹ ವರವನು ಬೇಡಿಕೊಳ್ಳೆನಲೆರಗಿ ಕೈಮುಗಿದು ॥
ದೇಹಿಯೆಂದೆನು ನಾಗಪಾಶವ
ಮೋಹಿ ಕೊಡು ಕೋದಂಡ ಕವಚವ
ದ್ರೋಹಿ ಕಪಿಗಳ ಪಡೆಯ ಗೆಲಲಿನ್ನುಳಿದ ವರ ಬೇಡ ॥ ೩೮ ॥

ಒಂದು ಬಾರಿಗೆ ಕೊಟ್ಟೆನೆಲವೋ
ಕಂದ ಧನು ಪಾಶವನು ಕವಚವ
ಮುಂದೆ ನೀನೀ ಪರಿಯ ವರವನು ಬೇಡಬೇಡೆಂದು ॥
ಅಂದವಿಟ್ಟಳು ದೈತ್ಯ ತನಯಗೆ
ಬಂದ ಪಥದಲದೃಶ್ಯೆಯಾದಳು
ಇಂದ್ರಜಿತು ಹೋಮದಲಿ ಪೂರ್ಣಾಹುತಿಯ ಬೇಳಿದನು ॥ ೩೯ ॥

ಕಡಿದು ಬೇಳಿದ ಖಂಡ ನರಗಳು
ಒಡಲು ದೇವಿಯ ಕರುಣದಿಂದವೆ
ಒಡನೆ ಮುನ್ನಿನ ಪರಿಯಲಾದುದು ದೈತ್ಯ ಬೊಬ್ಬಿರಿದ ॥
ಕಡಿಕನೇರಿದ ರಥವ ನಭದಲಿ
ಅಡಸಿಬಂದನು ಮರಳಿ ಹೂಣಿಗ
ರೊಡನೆ ಮೂದಲಿಸಿದನು ಪಾಶವ ಪಡೆದ ಗರ್ವದಲಿ ॥ ೪೦ ॥

ಅನುವರಕೆ ಸೌಮಿತ್ರಿ ರಘುಪತಿ
ಧನುವ ಪಿಡಿವುದು ಮರ್ಕಟಂಗಳೆ
ನೆನೆದು ನೋಡುವುದೇನು ಸಾರಿದೆ ಹೋಗಿ ತಲೆಗಾವೆ ॥
ವನಿತೆಗೋಸುಗ ಮನುಜ ಸಾವನು
ಬಿನುಗು ಕೋಡಗಿಗಳಿರ ನೀವೀ
ತನಿಗೆ ತೊತ್ತಿಗರಾಗಿ ಸಾಯದಿರೆಂದು ಬೊಬ್ಬಿರಿದ ॥ ೪೧ ॥

ಇಂದು ಮೃತ್ಯುವಿಗಾಯಿತವುತಣ
ಇಂದು ಮಸಣಿಯು ಮನಕೆ ದಣಿವಾ
ಯ್ತಿಂದು ಮಾರಿಗೆ ಹಬ್ಬವಾಯಿತು ಕಪಿಗಳಡಗುಗಳ ॥
ತಿಂದು ಭೂತ ಪ್ರೇತ ದಣಿಯಲಿ
ಕೊಂದಡಲ್ಲದೆ ಮರಳೆನೆಲವೋ
ಹಿಂದಣಂತಲ್ಲೀಗ ತೋರುವೆನೆನ್ನ ಕೈಗುಣವ ॥ ೪೨ ॥

ವೀರರೀಪರಿ ಸುಮ್ಮನಿಹರೇ
ತೋರಿಸಿರಿ ಕೈಲಾಗು ವೇಗವ
ತೋರುವುದು ಮಂತ್ರಾಸ್ತ್ರವುಳ್ಳಡೆ ಮರೆದೆನೆನ್ನದಿರಿ ॥
ನಾರಿಗೋಸುಗ ನಾಯಿ ನರಿಗಾ
ಹಾರವಾಗದೆ ಮರಳಿ ಹಿಂದಕೆ
ನಾರಿ ಕೊಲ್ಲುವೆ ದೋಷವಿಲ್ಲೆನಗೆಂದನಿಂದ್ರಾರಿ ॥ ೪೩ ॥

ಹೋದ ಮಾರಿಗೆ ಮರಳಿ ಹೇಳಿಕೆ
ಯಾದ ತೆರದಲಿ ದನುಜ ಘರ್ಜಿಸಿ
ಮೂದಲಿಸುತಿರೆ ಕೇಳಿ ಕಳವಳಗೊಂಡು ಧೃತಿಗೆಟ್ಟು ॥
ಈ ದುರಾತ್ಮಕನೆಮ್ಮ ಹರಣವ
ಸೇದಿದಲ್ಲದೆ ಬಿಡನು ಪಾಪಿಯು
ಬಾಧೆ ಘನವೆಂದೊರಲಿ ಮರುಗಿತು ಮರ್ಕಟ ವ್ರಾತ ॥ ೪೪ ॥

ಫಡಫಡೆಲವೊ ಹನುಮ ನಮ್ಮನು
ಹೊಡೆದು ಕೆಡಹಿದ ಗೆಲವಿನಿಂದವೆ
ಅಡಗಿ ಜುಣುಗಲು ಬಿಡೆನು ನಾ ಕೈದೋರು ಮೈದೋರು ॥
ಕಡುಹ ತೋರುವುದೆಂದು ರಕ್ಕಸ
ತೊಡಚಿ ನಾಗಾಸ್ತ್ರವನು ಬಿಟ್ಟನು
ಹೆಡೆಗಳೀರೈದೇಳು ನಾಲ್ಕಾರೈದು ಪೂರೆಸೆಯ ॥ ೪೫ ॥

ಹಾವುಗಳೊ ಬಡ ಕಪಿಗಳಿಲ್ಲರ
ಸಾವುಗಳೊ ರಘುಕುಲನ ಚಿತ್ತದ
ನೋವುಗಳೊ ರಿಪುವೀರ ಸುರಿದನು ಸರ್ಪ ಸಂತತಿಯ ॥
ಏವೆನೆಂದರು ಸುರರು ಶೂಲಿಯು
ಹಾವಡೆಂದುಮ್ಮಳಿಸೆ ವಿಭಿಷಣ
ರಾವಣಿಯ ಸಮರಂಗ ಕಂಗೆಡಿಸಿತ್ತು ಕಪಿ ಬಲವ ॥ ೪೬ ॥

ಕಟ್ಟಿದನು ಸೇನಾ ಸಮುದ್ರವ
ಕಟ್ಟಿದವರನು ಮೂದಲಿಸಿದನು
ಪಟ್ಟಣವ ಹರಿಹರಿದು ಮುತ್ತುವ ಸುಡುವ ಹಿಗ್ಗಿಲ್ಲ ॥
ನೆಟ್ಟ ಬಾಣವನಂತ ಹಾವಿನ
ಕಟ್ಟನಿಂದವೆ ರಾಮ ಸಿಲುಕಿದ
ದಿಟ್ಟ ನಟ್ಟನಡುವಿರುಳಿಟ್ಟ ಮಾಯಾ ಪಾಶಕೊಳಗಾಗಿ ॥ ೪೭ ॥

ನಾಮ ಕಾಯದೆ ಪಾಪಿ ವಿಪ್ರನ
ನಾಮ ಕಾಯದೆ ವನ ಗಜೇಂದ್ರನ
ನಾಮ ಕನಕಾಸುರನ ಕಂದನ ಕಾಯದೇ ಹಿಂದೆ ॥
ರಾಮ ಕಟ್ಟಿಸಿಕೊಂಡ ರಾಮನ
ಸಾಮಿಗಳು ಕಟ್ಟಿಲ್ಲದುಳಿದರು
ಕ್ಷೇಮದಲಿ ಹನುಮಂತ ಜಾಂಬವ ವಿಭಿಷಣಾದಿಗಳು ॥ ೪೮ ॥

ಅರಸಿನಾಪತ್ತಿನಲಿ ಭೃತ್ಯನ
ಕರೆಸಿಕೊಂಬನೊ ಮರೆದು ನಿಂಬನೊ
ಹರಿ ವಿಮೋಹಿತನಾಗಲರಿತಾ ವರ ಸುದರ್ಶನವು ॥
ಉರಿಯನುಗುಳುತ ಹರಿದು ಬಂದುದು
ಹರಿಯಸುತ್ತಲು ತಿರುಗುತಿರ್ದುದು
ಸುರ ದಿಶಾಪಟ ರಥವನಿಳಿಪೆಯ್ತಂದ ಕಣದೊಳಗೆ ॥ ೪೯ ॥

ಪೊಡವಿ ಪತಿಯುನದೊಯ್ದು ತಂಡೆಗೆ
ಕೊಡುವೆನೆಂದವ ಹತ್ತಿ ಬರುತಿರೆ
ಕಿಡಿಗಳುದುರುವ ಸಿಡಿಲ ಜಂಕೆಯ ತೇಜದೊಬ್ಬುಳಿಯು ॥
ಮೃಡನ ಭಾಳದ ಕಿಚ್ಚಿನಂದದಿ
ಬಿಡದೆ ತಿರುಗುವ ಚಕ್ರದುಬ್ಬೆಗೆ
ಸಿಡೆದು ಕಂಗಳ ಮುಚ್ಚುತೋಡಿದ ಹೆದರಿ ಹಮ್ಮೈಸಿ ॥ ೫೦ ।

ತೆರಳಿದನು ಇಂದ್ರಾರಿಯತ್ತಲು
ಸುರಮುನೀಶ್ವರ ಬಂದನಿತ್ತಲು
ಉರಗಬಂಧನವಾದ ಕಪಿಗಳ ಕಂಡು ಚಿಂತಿಸಿದ ॥
ಹರಿಯು ಹೊರೆಗೆಯ್ತಂದು ಪದದಲಿ
ಶಿರವ ಬಾಗಿದ ನಿದ್ರನಿದಿರಲಿ
ಮೊರೆವ ವಲ್ಲಕಿಸಹಿತ ನಾಮಾಮೃತವ ಬೀರಿದನು ॥ ೫೧ ।

ಹರಿಯುನೆಚ್ಚರಿಸಿದರೆ ದೈತ್ಯನ
ಹರಿಬ ಕಾಂಬನು ಬಳಿಕ ರಾಘವ
ಮರೆದು ಮಲಗಿರೆ ಪಾಶ ಪರಿಯದು ಮುನಿಪ ಹಾಯೆನಲು ॥
ಹಿರಿಯರಿವರ್‍ಯಾರೆಂದು ಮನದೊಳ
ಗರಸ ಚಿಂತಿಸಿದನು ವಿಭೀಷಣ
ಕರೆದು ಕುಳ್ಳಿರ ಹೇಳು ಬಿಜಯಂಗೈದಿರೇಕೆಂದು । ೫೨ ॥

ಹಗೆಯು ಶರಕೊಳಗಾಗಿ ನರಹರಿ
ಜಗಕೆ ಮಾಯಾಬಲವ ತೋರಿದ
ನಿಗಮದೂರಗೆ ಬಂಧವೆಲ್ಲಿಯುದಾರು ಕಟ್ಟುವರು ॥
ಸುಗುಣಮೂರ್ತಿಯ ಭಕ್ತಿ ಗುಣದಲಿ
ಜಗದಲೊಬ್ಬ ಬಲೀಂದ್ರ ಕಟ್ಟಿದ
ನಗಿಸಿದನು ಹರಿ ಯೋಗಿಗಳ ನೋಡೆಂದ ನಾರದನು ॥ ೫೩ ॥

ಹರಿಹರಬ್ರಹ್ಮಾದಿ ದೇವರ
ಸರಕುಮಾಡಳು ಮಾಯೆ ಶಿವ ಶಿವ
ಹರಿಗೆ ಬಂಧನವಾಯ್ತು ಮಿಕ್ಕಿನ ನರರ ಪಾಡೇನು ॥
ಸುರವಿದಾರಣ ಕಟ್ಟೆ ಹೋದರೆ
ಅರಸ ನೀನಜ್ಞಾನಿಯುಪ್ಪುದೆ
ಉರಗ ಕೋಲಾಹಲನ ಗರುಡನ ನೆನವುದೀಗೆಂದ ॥ ೫೪ ॥

ಹೇಳವ ಮಾವಿನಹಣ್ಣ ಮನದೊಳ
ಗೆಳಸಿ ಬಯಸಲು ಕೈಗೆ ಬಹುದೇ
ಚೆಲುವ ಕಾಮಿನಿಪೊಲಿಯದಿದ್ದಡೆ ಬಯಸಿದರೆ ಬಹಳೆ ॥
ಎಲೆ ಮುನೀಶ್ವರ ನಾನು ನೆನೆದರೆ
ಒಲವಿನಿಂದ ಸುಪರ್ಣ ಬಹನೇ
ಸಲದು ಮನದಂಗವಣೆ ಲೋಕವ ನಗಿಸಬೇಡೆಂದ ॥ ೫೫ ॥

ನೆನೆದು ನೋಡುವುದೆನಲು ರಾಘವ
ಮುನಿಯ ನುಡಿ ಗುರುತರವಲಾ ಬಡ
ವನಚರಂಗಳ ಭಾಗ್ಯ ನೆನೆವುದು ಕೊರತೆಯಿಲ್ಲೆನಲು ॥
ನೆನೆವೆನೈ ನಗಲಾಗದೆಂದನು
ಮನದ ಬಯಕೆಗೆ ಬಡತನಂಗಳೆ
ಅನುವನರಿದೈತರಲಿ ಪನ್ನಗವೈರಿಯೆಂದೆನಲು ॥ ೫೬ ॥

ಅರಸ ತಾರ್ಕ್ಷ್ಯನ ನೆನೆಯಲಾಕ್ಷಣ
ಉರಿಯ ಮರಿ ಕಡು ಹಸಿದು ಕರ್ಪುರ
ಗಿರಿಯನರಸುವವೋಲು ಬಾಯಪ್ಪಳಿಸಿ ಬಲುವೊರೆದು ॥
ಹರಿದು ಬರುತಿರೆ ಉರಗ ಹರಿದುವು
ಸರಿದುವಡಗಿದುವೋಡಿಹೋದುವು
ಅರಿಗಿನಾಗರಕುರಿಯ ಬಿಟ್ಟಂದದಲಿ ಬಯಲಾಯ್ತು ॥ ೫೭ ॥

ಕನಕಗಿರಿ ಪಕ್ಕಗಳ ಧರಿಸಿದು
ದೆನಲು ಭಾಸುರ ಕಾಂತಿ ಕವಿದುದು
ದಿನಪನುದಯಿಸಿದಂತೆ ತೋರಲು ಗರುಡನೆರಗಿದನು ॥
ದನುಜನುಣಿಸಿದ ಹಲವು ಕಾಲ
ಕ್ಕೆನಗೆ ಸಂತುಷ್ಟಿಯನು ಮಾಡಿದ
ನೆನುತ ಸಂತಸದಿಂದ ಸುಖ ಪಾರಣೆಯ ಮಾಡಿದನು ॥ ೫೮ ॥

ದುಷ್ಟ ಮೋಸದೊಳಿರಿದನೆಂಬರು
ಕಷ್ಟವೇ ತನಗಾಯಿತಸುರಗೆ
ಕಟ್ಟುಬಯಲಾಯ್ತುಹಿಕುಲಾರಿಯ ಕಾಣುತೆಲ್ಲರಿಗೆ ॥
ನೆಟ್ಟನಸುರಂಗಾ ನಿಕುಂಭಿನಿ
ಕೊಟ್ಟ ವರವನು ಪಾಲಿಸಲು ಪರ
ಮೋಷ್ಠಿ ತಾನೊಳಗಾದನಲ್ಲದೆ ಹರಿಗೆ ಕಟ್ಟುಂಟೇ ॥ ೫೯ ॥

ವಂದನೀಯರು ಮುನಿಗಳಿತ್ತಲು
ಬಂದಿರೇತಕ್ಕಿರುಳು ಸೇವೆನೆ
ತಂದೆಯಲ್ಲಾ ನೀನು ಲೋಕಕೆ ಧರ್ಮಪಾಲಕನು ॥
ಬಂದ ಧಾವತಿ ಕಂಡು ನಾನೀ
ಬಂಧನವ ಬಿಡಿಸಲ್ಕೆ ಬಂದೆನು
ಎಂದು ನಾರದ ಬೀಳುಗೊಂಡನು ನೇಮಪೇಯೆನುತ ॥ ೬೦ ॥

ಹಿರಿದು ಲೇಸನು ಮಾಡಿದ್ಯೆ ನೀ
ಪರಮಸುಖಿಯಾಗೆಂದು ರಾಘವ
ಗರುಡದೇವನ ಕರೆದು ಮನ್ನಿಸಿ ಬೀಳುಗೊಡುತಿರಲು ॥
ತರಣಿಕುಲಜನ ವಾರ್ತೆ ಕೇಳುತ
ಹಿರಿದು ಸಂತಸದಿಂದ ಬಂದನು
ಭರದಿ ಪೂರ್ವದಿಶಾದ್ರಿ ಶಿಖರದಿ ತಮವ ನುಂಗುತ್ತ ॥ ೬೧ ॥

ಹರಿಯ ಮುಖದಲಿ ಹರುಷವುದಿಸಿತು
ಹರಿದು ಹಬ್ಬಿತು ಸುರರ ಪರನದಿ
ಪರಮ ಸಂತಸವಾಯ್ತು ಧರೆಗಾನಂದಮಯವಾಯ್ತು ॥
ಸುರಸತಿಯರಾಡಿತ್ತು ಪಾಡಿತು
ಸುರರ ದುಂದುಭಿಮೊಳಗುತಿತ್ತಲು
ನೆರೆದ ಮರ್ಕಟ ಸೇನೆಯಾರಿತು ಸುಖದ ಸುಗ್ರೀಯಲಿ ॥ ೬೨ ॥

ಧರ್ಮಶೀಲರಿಗಳಿವದೆತ್ತಣ
ಧರ್ಮವರ್ತಿಗಳದೆಲ್ಲ ಮಾಡಿದ
ಕರ್ಮ ನಿಷ್ಫಲವೆಂಬ ನೀತಿಯದಿಲ್ಲಿ ಕಂಡುದಲ ॥
ಸುಮ್ಮನಸುರರು ಮೋಸದಲಿ ಕವಿ
ದೊಮ್ಮೆ ಕಟ್ಟಲು ಕಪಿಗಳಳಿದರೆ
ಎಮ್ಮ ರಾಘವಗಾರು ಸರಿಯೆನುತಿರ್ದುದಮರಗಣ ॥ ೬೩ ॥

ಅಸುರಕುಲ ಕಡೆಗಾಲ ಭೈರವ
ವಸುಮತೀಶ್ವರ ಸುಜನಬಾಂಧವ
ವಿಷದ ಪಾಶವ ಗೆಲಿದ ರಾಮಾಯಣದ ಕಥೆಯೊಳಗೆ ॥
ಒಸೆದು ಕೇಳುವ ರಸಿಕರಿಗೆ ನವ
ರಸ ತರಂಗಿಣಿಯೆನಲು ರಚಿಸಿದ
ವಸುಧೆಯಲಿ ವಾಲ್ಮೀಕಿ ಮುನಿಕುಲತಿಲಕನೊಲವಿಂದ ॥ ೬೪ ॥

ಹಿಂಗಿತಿಲ್ಲಿಗೆ ಸಂಧಿ ತತ್ಪದ
ನಂಗಳರುವತ್ತೆರಡು ಸಮನಿಸೆ
ಭಂಗವಟ್ಟಿ ಸುರೇಂದ್ರ ಕಟ್ಟಿದ ನಾಗ ಪಾಶವನು ॥
ನುಂಗಿದನು ಸೌಪರ್ಣ ತೆರಳಿದ
ಸಿಂಗದಳಪತಿ ಇತ್ತ ರಾಘವ
ಮಂಗಳಾತ್ಮಕನಾಗಿ ಶರಣರನೊಲಿದು ಪಾಲಿಸಿದ ॥ ೬೫ ॥

---

## ೨೦ನೇ ಸಂಧಿ

॥ ದೇವರಿಪುಗಳು ಸರಳ ಯುದ್ಧದಿ
ತೀವಿ ಕಾದಲು ಕಪಿಗಳಳವಿಗೆ
ರಾವಣನ ಸುತರು ಸಚಿವರು ಸಾವನಪ್ಪಿದರು ॥

॥ ದಡಿಗನಿತ್ತಲು ಪುರವ ಹೊಗುವಾ
ಸಡಗರಂಗಳನೇನ ಬಣ್ಣಿಪೆ
ಗುಡಿಯಕಟ್ಟಿಸಿ ಕಳಸಕನ್ನಡಿಯಿಂದಿದಿರ್ಗೊಳಲು ॥
ಹೊಡೆಸಿ ಭೇರಿಯ ವೀರ ಪಾಠಕ
ರೊಡನೆ ರಾವಣನಿದಿರುಗೊಂಡನು
ಹಿಡಿದು ತಕ್ಕಿಸಿಕೊಂಡು ಮಗನೇ ಬಳಲಿದ್ಯೆಯ್ಯಯ್ಯ ॥ ೧ ॥

ಒಡವರಿಗೆ ಗೆಲಲರಿದು ರಾಮನ
ಪಡೆಯ ಗೆಲುವರೆ ನಿನಗೆ ತೀರಿತು
ಮೃಡನ ಸಮಬಲದವರ ಕಟ್ಟಿದೆ ಸುಖವಮಾಡಿದೆಲ ॥
ಒಡಲ ಯೌವನಗೇಡಿ ಮಕ್ಕಳ
ಹಡೆದು ಫಲವೇಂ ನಿನ್ನ ಕಂದಾ
ಪಡೆದು ನಾಂ ಸುಖಿಯಾದೆನೆಂದುಡಲಿತ್ತ ಹೆಕ್ಕಳಿಸಿ ॥ ೨ ॥

ತಲೆಗಳನು ತೂಗುತ್ತ ಮಗನನು
ಹಲವು ಬಾಯಲಿ ಹೊಗಳಿ ದಣಿದನು
ಖಳನು ಹೆಚ್ಚಿದ ಹರುಷದಿಂದುಪ್ಪರಿಗೆಯೇರಿರಲು ॥
ಪ್ರಳಯಕಾಲದವೋಲು ಕಪಿ ಪಡೆ
ಕುಲುಲುಗುಟ್ಟುತ ಕವಿದು ಮುತ್ತಿದ
ರೊಳಗಣಗುಸೆಯ ಮುರಿದು ಸುಟ್ಟರು ಕೇರಿಕೇರಿಗಳ ॥ ೩ ॥

ಮುಸುಕಿ ಹೋಯಿತು ಲಂಕೆ ಕಪಿಗಳ
ವಿಸರದಿಂದಯ್ಯಯ್ಯ ಹರಿಹರಿ
ದಸುರಭಟರನು ಸಿಂಗಲೀಕರು ಸೀಳಿಬಿಡುತಿರಲು ॥
ಮುಸುಗಣದ ಮುತ್ತಿಗೆಗೆ ಖಳ ಬೆ
ಕ್ಕಸನೆ ಬೆರಗಾಗುತ್ತ ಸುಯ್ದನು
ಸಸಿನೆ ರಾಗದಿ ಮಗನ ಮರುಳಾವರಿಸೆತೆನುತೆಂದ ॥ ೪ ॥

ಹಸನವಾಯಿತು ಕಷ್ಟ ನಮಗಿದು
ಹಸನವಾಯಿತು ಮಗನ ನಡವಳಿ
ಹಸನವುರಿಯಿತು ಮಗನೆ ಕೆಡಿಸಿದೆ ರಾಜಕಾರಿಯವ ॥
ಹುಸಿವವನು ಮಗನಲ್ಲ ಕಪಿಗಳ
ವಿಸರ ಕಟ್ಟಿತು ಸತ್ಯ ಲಂಕೆಯ
ಮುಸುಕುತಿದೆ ಮಿಗೆ ಕಾಣಬಾರದೆ ಕಟ್ಟಿದುದನೆಂದ ॥ ೫ ॥

ಕಟ್ಟಿದುದು ಹುಸಿಯಲ್ಲ ಸೇನೆಯ
ಕಟ್ಟುಗಳನಾ ಹಳೆಯ ಹದ್ದಿನ
ಇಷ್ಟತನದಲಿ ಗೆಲಿದರದಕಿನ್ನೇನಮಾಡುವನು ॥
ಮೆಟ್ಟಿ ಕೊಲ್ಲವೆ ಹಗೆಯ ಜೀವವ
ಬಿಟ್ಟು ಬಂದರೆ ಬದುಕದುಳಿವರೆ
ಕುಟ್ಟಿ ಸೀಳುವೆ ನೇಮಗೊಡು ತನಗೆಂದ ಧೂಮ್ರಾಕ್ಷ ॥ ೬ ॥

ಧೂಮನೆನಿಸಿದೆ ಹಿಂದೆ ಮತ್ತಾ
ಧೂಮಕೇತುವೆನಿಪ್ಪೆ ರಣದಲಿ
ರಾಮಸೇನೆಯ ಹೊಕ್ಕು ಸಲೆ ನಿರ್ನಾಮ ಮಾಡುವೆನು ॥
ಧೂಮಮಾಡಿದನೆನಿಸದಿರ್ದಡೆ
ನಾಮವನು ನಾ ಕಳೆಸಿಕೊಂಬೆನು
ನಾಮಶೂನ್ಯರ ಮಾಡಿಬಿಡುವೆನು ರಾಮಸೇನೆಯನು ॥ ೭ ॥

ಅವಧರಿಸು ನಾಕಂಪನಾದರೆ
ಬವರದಲಿ ರಘುನಾಥಸೇನಾ
ನಿವಹವನು ಕಂಪಿಸುವೆನೇಕಾಂಗದಲಿ ವೈರಿಗಳ ||
ಸವರಿ ತಲೆಗಳ ಕೊಂಡು ಬರದಿರೆ
ನಿವಗೆ ನಾ ಮಗನಲ್ಲ ತನಗಾ
ಹವಕೆ ನೇಮವನಿತ್ತು ಕಳುಹುವುದೆಂದನಾಕಂಪ || ೮ ||

ಹಲವು ಮಾತೇಕೆಮ್ಮ ಕಳುಹೈ
ಹಳಚಿ ಕಾದುವೆವಾವು ರಣದಲಿ
ಗೆಲಿದರದುವೇ ನಮ್ಮ ಪುಣ್ಯವು ಮರ್ಕಟರ ಬಲವ ||
ಕೊಲುವೆನಲ್ಲದರಳಿವೆ ನಡುವಣ
ಗಳಹತನಗಳನರಿಯೆನೆಂದನು
ಸಲೆ ಪ್ರಹಸ್ತನು ದೈತ್ಯನಿದಿರಲಿ ನಿಂದಕೈಮುಗಿದು || ೯ ||

ಕೊಟ್ಟನೇಮವನವರ ಮಾತಿಗೆ
ಕೊಟ್ಟನೋ ದಾನವರ ಹಂಬಲ
ಬಿಟ್ಟನೋಯೆನಲೆರಗಿ ಮೂವಗು ದೈತ್ಯರೊಂದಾಗಿ ||
ಪಟ್ಟಣವ ಹೊರವಂಟು ಕಪಿಗಳ
ಮೆಟ್ಟಿ ತುಳಿವುತ ಬಡಿಗೆಯಿಂದವೆ
ಅಟ್ಟಿ ಸದೆದರು ಪುರವ ಮುತ್ತಿದ್ದವರ ಹೊರವಡಿಸಿ || ೧೦ ||

ಭೇರಿ ನಿಸ್ಸಳ ಪಟಹ ಡಿಂಡಿಮ
ವೀರವರೆ ವರ ಢಕ್ಕೆ ತಿತ್ತಿರಿ
ಚಾರು ಚಂಬಕ ಮುರಜ ಕಿನ್ನರಿ ಕಹಳೆ ಚೀರಿಡಲು ||
ವೀರಗಚ್ಚೆಯು ಖಳರು ಹೊರವಡೆ
ತೇರು ಕರಿಘಟೆ ಕುಣಿವ ಕುದುರೆಯು
ವೀರ ಠಕ್ಕೆಯು ತೊಡರುಪೆಂಡೆಯುರಸುರ ಪಡೆ ಕವಿಯೆ || ೧೧ ||

ಕೆಲರು ಕೋಲನು ಕೆಲರು ಕತ್ತಿಯು
ಕೆಲರು ಸಿಂಹನ ಹುಲಿಯು ಕೆಲಬರು
ಕೆಲರು ಜಂಬುಕ ಸಾರಮೇಯುನ ತಗರು ಕೋಣಗಳ ||
ಕೆಲರು ಕರಡಿಯು ಮೃಗನ ಗವಯನ
ಬಲುಹ ತೋರುವರೇರಿ ರಕ್ಕಸ
ಬಲವು ಬರುತಿರಲರಸ ಕೇಳಿದನಾ ವಿಭೀಷಣನ || ೧೨ ||

ಒದರಿ ಹೋರುವ ಸೇನೆ ಬೆನ್ನಲಿ
ಸದೆವುತಟ್ಟುವರೆಂಟು ಪದ್ಮವು
ಗದರಿ ಪಡಿಬಲವಾಗಿ ಬರುತಿಹ ಸೇನೆಯಗಣಿತವು ॥
ಕದನದಲಿ ಧೂಮ್ರಾಕ್ಷಕಂಪರು
ಗದೆಯ ಹಿಡಿದರೆ ಧೂಮನಿವರನು
ಸದೆವನನಿಲಜ ತೀರದುಳಿದರಿಗೆಂಪ ವಿಭಿಷಣನು ॥ ೧೩ ॥

ಚೂಣಿ ಹಳಚಿತ್ತು ಭಯ ದಳದಲಿ
ರೇಣು ಮುಸುಕಿತು ದಿಕ್ಕು ದೆಸೆಗಳ
ಕಾಣೆನಂಬರ ತುಂಬಿ ಮುತ್ತಿತ್ತರ್ಕ ಮಂಡಲವ ॥
ಪ್ರಾಣದಾಸೆಯನುಳಿದು ಕಾದಿತು
ಶೋಣವರ್ಣವನಬ್ಧಿ ತಳೆದುದು
ಹೂಣಿಸುತ ತಿವಿದಾಡೆ ತಮ್ಮೊಳಗೆರಡು ಬಲದಲ್ಲಿ ॥ ೧೪ ॥

ಕೆಲರು ಹೆಗ್ಗಲ್ಲುಗಳ ಕರೆದರು
ಕೆಲರು ಮರಮಟ್ಟುಗಳ ಸುರಿದರು
ಕೆಲರು ಪರ್ವತ ಕಲ್ಲುಗುಂಡನು ಕೆರಳಿ ಸುರಿವುತಿರೆ ॥
ಖಳರು ಕಕ್ಕಡೆ ಪರಶು ಕೊಂತದಿ
ಹೊಳೆವಡಾಯುಧ ಶೂಲ ಶರದಲಿ
ಹಳಚಿ ಕಾದಿತು ಕೇಡ ಪಡೆದುದು ದನುಜ ಪಾಯದಳ ॥ ೧೫ ॥

ನೋಡಿ ಮರುಗುವರಲ್ಲಿ ಕೆಲಬರು
ಕೂಡಿ ನಗುತವೆ ನಲಿದು ಕೆಲಬರು
ಆಡುವರು ಹಿರಿದಲ್ಲ ದನುಜರ ಮಾಟಕಿದು ಘನವೆ ॥
ನೋಡಿರೈ ಸೋಜಿಗದ ಮಾರಿಯ
ಕೋಡಗಕೆ ಭಯವುಂಟೆ ಶಿವ ಶಿವ
ಕೇಡುಗಾಲವು ಲಂಕೆಗೆಂದುದು ಸುಯ್ದು ಪೌರಜನ ॥ ೧೬ ॥

ಕಾದುತಿಪ್ಪಾ ದನುಜರಸುಗಳ
ಮೋದುತಿದ್ದುದು ಮುಂದಣಸುರರು
ಹಾದಿಯನು ಸವರಿದರು ಯಮಪುರದತ್ತ ಪಯಣಕ್ಕೆ ॥
ತೀದುದಸುರರ ಸೇನೆಯಲಿ ಬೇ
ಕಾದ ಭಟರೊದಗಿದರು ಕಪಿಗಳ
ಬಾಧೆಗಾರದೆ ಬಿಲ್ಲ ಬಿರಿದರು ಬಿಟ್ಟರೊಡಲುಗಳ ॥ ೧೭ ॥

ಮುರಿದುದ್ಧೈ ಖಳ ಚೂಣಿ ಕದನದ
ಹೊರಿಗೆ ದೊರೆಗಳ ಮೇಲೆ ಬಿದ್ದುದು
ಅರಿದ ಮುಂಡದ ಮುರಿದ ರುಂಡದ ಕೊರೆದ ಖಂಡಗಳ ॥
ಹರಿವ ರಕ್ತದ ಇರಿದ ಕರುಳಿನ
ಬರತ ಬಾಯಿಗಳಧರ ಮಿದುಳಿನ
ಬಿರುವರಿಯ ರಕ್ತದಲಿ ರಣಧೂಳಡಗಿ ಕೆಸರೇಳೆ ॥ ೧೮ ॥

ಸೊಕ್ಕಿ ಧೂಮ್ರನು ದಾಡೆಗುಟ್ಟುತ
ಮರ್ಕಟರ ಕಡಿಖಂಡಮಾಡುತ
ದಿಕ್ಕುಗೆಟ್ಟೋಡದರುತ್ತ ಕಂಗೆಟ್ಟೋಡುತಿರೆ ಜಿಗಿದು ॥
ಮುಕ್ಕಿದನು ಕುರುಕಿದನು ಶರದಲಿ
ಚಕ್ಕನರಿದನು ಕಂಡ ಮುಖದಲಿ
ಹೊಕ್ಕು ಕಪಿಗಳು ಚಾರಿವರಿವುದ ಕಂಡನಾ ಹನುಮ ॥ ೧೯ ॥

ಮೊರೆದು ಗಿರಿಗಿರಿಗುಟ್ಟಿ ಮಾರುತಿ
ಹರಿದು ಬಂದನು ರಥವನೊದೆದನು
ಕೆರಳಿ ದನುಜನ ಹಿಡಿದು ಸರ್ರನೆ ತಿರುಹುತಪ್ಪಳಿಸಿ ॥
ಹೊರಳಿದನು ಹಮ್ಮೈಸಿ ಮೂಗಿನ
ಲರುಣವಾರಿಯ ಕಾರಿ ಧೈರ್ಯದಿ
ಮರಳಿ ಡೆಂಡಣಿಸುತ್ತ ನೋಡಿದ ತಿರುಗಿ ನಾಲ್ದೆಸೆಯ ॥ ೨೦ ॥

ಹುಡಿಯು ಕೊಡಹುತ ಹಲಗೆ ಕತ್ತಿಯ
ಪಿಡಿದು ಬೀಳುತ ಮೂದಲೆ ಬಿರಿದ
ಫಡಫಡೆಲೆ ಕಪಿ ನಿನಗೆ ಸದರವೆ ನಾವು ನೀ ಹಿಂದೆ ॥
ಸುಡಿಸಿಕೊಂಡುದ ಮರೆದು ನಮ್ಮೊಳು
ತೊಡಚಿ ಬಂದ್ಯೆ ಲಜ್ಜೆಯಿಲ್ಲದೆ
ಕಡಿದು ಬಿಸುಡದೆ ಕರುಣಿಸಿದೆನೊಮ್ಮಿಂಗೆ ಹೋಗೆಂದ ॥ ೨೧ ॥

ಆಹುದು ಮತ್ತೀನಿನಿತು ಮಾತಿನ
ಸಹಸವುಳಿದರಿಗುಂಟೆ ಎನುತಾ
ಕುಹಕಿ ದೈತ್ಯನ ಹಿಡಿದು ಮರುತಜನಿಟ್ಟನಂಬರಕೆ ॥
ಆಹಹ ಕರಣವನಿಕ್ಕಿ ನಿಮಿಷದಿ
ಬಹಳ ಕೋಪದಿ ಹೊಡೆಯೆ ಹನುಮನ
ರಹಣವಾಯಿತು ಹೊಡೆದಡಾಯುಧ ನುಚ್ಚುನೂರಾಯ್ತು ॥ ೨೨ ॥

ಮರಳಿ ಕೋದಂಡವನು ತೊಡಚಿದ
ಸರಳ ಸುರಿದಾ ಕಪಿಯು ಮುಸುಕಲು
ಮಾರುತನಂದನನೊಂದು ಹೆಮ್ಮರನಾಗ ಮುರಿತಂದು ॥
ಸುರವಿರೋಧಿಯನಪ್ಪಳಿಸಿದರೆ
ಶಿರವು ಮುಂಡದಲದ್ದಿ ಹೋಯಿತು
ಹರಣ ಹಾರಿತು ಹನುಮನುಪಟಳಕಂಜೆ ದಾನವರು ॥ ೨೩ ॥

ಅಟ್ಟಿ ಮುರಿದನು ರಥವ ರಥದಿಂ
ಕುಟ್ಟಿ ಘೀಳಿಡುವಾನೆ ಘಟೆಗಳ
ಥಟ್ಟುಗೆಡೆದನು ಕರಿತುರಂಗದ ಕುಲವ ಕೂಗಿದನು ॥
ಹಿಟ್ಟುಹಿಟ್ಟಾಯ್ತು ಸುರರಮುಮಾ
ಕೊಟ್ಟುಕಳುಹಿದರಸುವನತ್ತಲು
ನೆಟ್ಟನಂತಕನೂರು ತುಂಬಿತು ಕಾಣೆನಿನ್ನೆಡೆಯು ॥ ೨೪ ॥

ಬಿರುದ ಬಿಟ್ಟೋಡಿತ್ತು ರಾವುತ
ನೆರವಿ ಬರಿಗುದುರೆಗಳ ಕಂಡಾ
ತರುಚರಂಗಳು ಸರಸವಾಡಿತ್ತಹಹ ರಾವಣನು ॥
ಮರುಳುಗೊಂಡನು ತುರಗ ದಳವನು
ನೆರಹಿ ತಾನಿವ ನೆಚ್ಚಿಕೆಟ್ಟೆನು
ಕರಗಳಿಲ್ಲಕಟೆಂತು ಕಾದುವರೆಂದು ನಗುತಿರಲು ॥ ೨೫ ॥

ಸಾಯಸಕ್ಕೊಳಗಾಗಿ ರಕ್ಕಸ
ನಾಯಕರು ಕೆಲಕೆಲರು ಬೆರಳನು
ಬಾಯಲಿಟ್ಟರು ವಾನರಂಗಳ ಗಾಯದುಗವಣೆಗೆ ॥
ಸಾಯಬಿದ್ದರ ಬಿಟ್ಟು ಕೆಲರು ಪ
ಲಾಯನಂಗಳ ಹೂಡೆ ರಕ್ಕಸ
ರಾಯಕಂಪನು ರಥವ ಬಿಟ್ಟನು ಸೆಳೆದ ಚಾಪವನು ॥ ೨೬ ॥

ಎಚ್ಚ ಕೆಣಕಿದ ಕೆಲರ ಘರ್ಜಿಸಿ
ಬೆಚ್ಚಿಸಿದ ಕಪಿಬಲದ ಸುಭಟರ
ವೆಚ್ಚಮಾಡಿದನೇನ ಹೇಳುವೆ ದೈತ್ಯನುಬ್ಬಟೆಯು ॥
ಮುಚ್ಚುಮರೆಯೇನಸುರ ಕಪಿಗಳ
ಕೊಚ್ಚಿ ಹರಿಹಂಚುಗಳ ಮಾಡಿದ
ಕಿಚ್ಚಿನಂತಿಹ ಹನುಮ ಪೊರೆಯೋಯೆಂದು ಗೋಳಿಡಲು ॥ ೨೭ ॥

ಫಡಫಡೆನುತಾ ಖಳನ ರಥವನು
ತುಡುಕಿದರೆ ಹನುಮಂತ ದಾನವ
ಸಿಡಿದು ಗಗನಕೆ ಗದೆಯಲಪ್ಪಳಿಸಿದನು ಮಾರುತಿಯ ॥
ಕಡುಗಿ ಹುಲುನೊರಜೇರಿನಂತಾ
ಯ್ತೊಡನೆ ಬಾಲವ ಬೀಸಿ ಹಿಡಿದನು
ಕೆಡಹಿ ತಲೆಯನು ಮುರಿದು ಮುಂಡವ ಸೀಳಿ ಬೀಸಾಟಿ ॥ ೨೮ ॥

ದಾನವನ ಗೆಲಿದಾಗ ಹನುಮನ
ಜಾನಕೀಪತಿ ಮೆಚ್ಚಿ ಮನದಲಿ
ಸಾನುರಾಗದಿ ತಲೆಯ ತೂಗಲು ನಗುತ ಧೂಮ್ರಾಕ್ಷ ॥
ವಾನರನ ಕಲಿತನಕೆ ಮೆಚ್ಚಿಯೆ
ನೀನು ತಲೆಗಳ ತೂಗಬೇಕೇ
ಸೇನೆಯೊಳು ಮತ್ತಾರು ಮೆಚ್ಚುವರುಂಟು ಹೇಳೆಂದ ॥ ೨೯ ॥

ಎಂದು ಕಟಕಿಯನಾಡುತಾ ಖಳ
ನೊಂದು ಬಾಣವ ಬಿಟ್ಟಡಂತದು
ಹಿಂದುಗಳೆದರೆ ಬಾಣ ಬಿಡೆ ಮತ್ತೊಂದನತಿಗಳೆಯೆ ॥
ಮುಂದೆ ಮತ್ತೊಂದರಲಿ ಈ ಪರಿ
ಯೊಂದು ನೂರು ಸಹಸ್ರ ಸಂಖ್ಯದ
ಲಂದು ಸವರುತ್ತಿರ್ದನಕಟದನೇನ ಬಣ್ಣಿಸುವೆ ॥ ೩೦ ॥

ಮುಸುಕಿದನು ಶತಬಲಿಯು ಮೈಂದನ
ನಸುವ ಹದುಳಿಸಿಕೊಳಲು ಉಳುಹಿದ
ಮಸೆದ ಸರಳಿಂ ಗಂಧಮಾದನ ಧರೆಗೆ ಕೀಲಿಸಿದ ॥
ಕುಸುಬಿದರಿದನು ಪನಸ ಗವಯರ
ಬಸುರ ಬಾದಣಗೊರೆದ ತಿಮಿರನ
ಹೊಸತು ದನುಜರ ವೀರ ಬಿರಿಸೆನುತಬಲರೋಡಿದರು ॥ ೩೧ ॥

ಕತ್ತಲೆಯ ಹುಟ್ಟಿಸಿದ ಮಾಯೆಯ
ಸುತ್ತ ಸೂಸಿದನಿಂದ್ರಜಾಲವ
ಮತ್ತ ಗಜ ಹಯ ಕರಡಿ ಸಿಂಹಗಳಾಗಿ ಘರ್ಜಿಸಿದ ॥
ತೆತ್ತಿಸಿದನಂಬುಗಳ ಕಪಿಗಳ
ಮೊತ್ತ ದೆಸೆದೆಸೆಗೋಡತೊಡಗಿತು
ಇತ್ತಲಂಗದ ಹರಿದುಬಂದನು ಹಳಚಿದನು ಖಳನ ॥ ೩೨ ॥

ಕೂರಲಗುವಿಡಿದವನ ಕೂಡತಿ
ವೀರರಾಗಿದ್ದವರು ಕಾದಲು
ತೋರ ದೊಣ್ಣೆಯ ಘೂಯಿಲನಂಗೈಸುವರದಾರುಂಟು ॥
ತೇರುತುರಗವನೊದೆದು ಗಾಲಿಯ
ವೀರ ತಕ್ಕೆಯ ಧ್ವಜವ ಮುರಿದನು
ಹಾರಿ ದನುಜನ ಹೊಡೆದು ಕೆಡಹಿದ ಮೆಟ್ಟಿ ಸೀಳಿದನು ॥ ೩೩ ॥

ಹೋಳೆರಡ ಬೀನಾಡೆ ರಣದಲಿ
ಕಾಳಿ ಕಂಕಾಳಿಯರು ದಣಿದರು
ಬಾಲದಲಿ ಉಳಿದಿರ್ದ ಪಡೆಯನುವೊರಸಿ ಕೆಡಹಿದನು ॥
ಲೀಲೆಯಿಂದಂಗದನು ತಿರುಗಲು
ಭಾಳಲೋಚನ ಮೆಚ್ಚುತಿರೆ ಭೂ
ಪಾಲ ರಾಘವನಂಗಚಿತ್ತವನಿತ್ತು ಮನ್ನಿಸಿದ ॥ ೩೪ ॥

ಮೌನಗೊಂಡುವು ಭೇರಿ ನಿಸ್ಸಳ
ವೇನ ಹೇಳುವೆ ದನುಜರುಬ್ಬಟೆ
ಹಾನಿಯಾದುದು ಹಲವು ತೆರದಲಿ ದುಗುಡ ರಾವಣಗೆ ॥
ದೀನನವ ಸಿರಿವಂತನಾದನು
ದಾನವಾರಿಯ ಕರುಣದಿಂದವೆ
ವಾನರಂಗಳ ಭುಜಕೆ ಬಂದಳು ವೀರಸಿರಿಯೊಲಿದು ॥ ೩೫ ॥

ಕಾದಲೈದಿದ ಖಳರು ಮರಳುವ
ಹಾದಿಮುಟ್ಟಿತು ಕಪಿಗಳಳವಿಗೆ
ಹೋದಹೋದರ ಹಾಯ್ಕಿ ಕೊಂದರು ಹರ ಮಹಾದೇವ ॥
ಕಾದಿ ಭೂತವನುಣಿಸಿ ದಣಿಸುವೆ
ಕಾದಲರಿಸುವೆನರರ ತಲೆಯನು
ತೀದುದಾತನ ಮಂತ್ರಯೆನಿಸುವೆಯೆಂದು ಖಳ ಸಚಿವ ॥ ೩೬ ॥

ಇನಿತು ನೆನೆವುತ ಖಳನ ಮಂತ್ರಿಯು
ಮೊನೆಗೆ ಹೊರವಡೆ ಸೇನೆ ಸಹಿತವೆ
ಕನಕ ಸತ್ತಿಗೆ ಮುರಿದುಬಿದ್ದುದು ಸೂತನುರುಳಿದನು ॥
ಅನುವರಾಂತಕೆ ನಡೆವ ದೈತ್ಯನು
ನೆನೆದು ನೋಡದೆ ಮುಂದೆ ನೂಕಿದ
ದನುಜ ಮೋಹರವಾರದೆಂದಾ ರಾಮ ಕೇಳಿದನು ॥ ೩೭ ॥

ಕೇಳು ರಘುಪತಿ ರಥದ ಮೇಲಿಹ
ಕಾಳರಕ್ಕಸನಾ ಪ್ರಹಸ್ತನು
ಭೂಲತಾಂಗಿಯು ಕದ್ದ ಕಳ್ಳನ ಹಿರಿಯ ಮಂತ್ರಿಯುವ ॥
ಖೂಳ ರಕ್ಕಸರೆಂಟು ಪದ್ಮವು
ಮೇಳವಿಸಿ ಬರುತಿರ್ಪರೆಂದೆನೆ
ನೀಲನೆದ್ದೆನಗಿಂದು ನೇಮವ ಕೊಡಿಸಬೇಕೆಂದ ॥ ೩೮ ॥

ಗೆಲ್ಲು ಹೋಗೆಂದರಸ ನೇಮಿಸೆ
ನಿಲ್ಲದರ್ಬುದ ಸೇನೆ ಸಹಿತವೆ
ಖುಲ್ಲ ದಾನವರೊಡನೆ ಕಪಿಗಳು ಬವರವನು ಹಿಡಿಯೆ ॥
ಚೆಲ್ಲವಾಡುತ ದನುಜ ಸೇನೆಯ
ಕೊಲ್ಲುಗೊಲೆಯನು ಕೊಂದು ಕೂಗುತ
ಹಲ್ಲ ಗಿರಿಗಿರಿಗುಟ್ಟಿ ಹಣುಗುತ ಕವಿದು ಹಳಚಿದರು ॥ ೩೯ ॥

ತೊಡುವ ಸರಳಿನಲಿಡುವ ಶಕ್ತಿಯ
ಹಿಡಿವ ಪಾಶದ ಝಡಿವ ಖಡ್ಗದ
ಬಡಿವ ಕೊಂತದ ನುಡಿವ ಮೂದಲೆ ಬಿಡುವ ಮಾರ್ಗಣವ ॥
ಬಡಿವ ಭೇರಿಯ ಹೊಡೆವ ನಿಸ್ಸಳ
ನಡೆವ ತೇರಿನ ಮಡಿದ ದೈತ್ಯರ
ವೊಡೆದ ಸೀಸಕ ಮಡಿವ ಕರಿ ಹಯವೇನ ಬಣ್ಣಿಸುವೆ ॥ ೪೦ ॥

ತಲೆಗಳೊಡೆದುವು ಬಾಲಹರಿದುವು
ಎಲುಗಳುಡಿದವು ಖಂಡಖಂಡಿಸೆ
ಬಲದಬಡಿಯೆಡಗಾಲು ಮುರಿದುವು ಹಲರ ಹಲ್ಲುಗಳು ॥
ತಲೆಯನೂರಿಯೆ ಖಳರು ಬಿದ್ದರು
ಕಳವಳಕ್ಕೆಡೆಯಾಯ್ತು ಶಿವ ಶಿವ
ವಲಿಮುಖರ ದೆಸೆಗೂಡೆ ದಳಪತಿ ನೀಲ ಹರಿತಂದ ॥ ೪೧ ॥

ಮುಳಿದು ಹೆಮ್ಮರನೊಂದ ಮುರಿ ತಂ
ದೆಲೆಲೆ ಸೇನೆಯನಪ್ಪಳಿಸಿದರೆ
ಕಳಚಿಬಿದ್ದವು ತೇರುತುರಗವನೆಳೆವ ಕುಂಭಿಗಳು ॥
ತಲೆಯನೂರುತೆ ಕೆಡೆದುವಮಮಾ
ಅಲಘು ಸಾಹಸಿ ಹೊಡೆದ ಗಾಯಕೆ
ಖಳರ ಮುಂಡಗಳಾಡುತಿರ್ದುವು ಬಲವ ಬರುಗೆಯ್ದು ॥ ೪೨ ॥

ಕೆಡೆದುವಯುತ ಘಟಾಳಿ ತೇರುಗ
ಳುಡಿದುಬಿದ್ದುವು ಮೂರು ಸಾವಿರ
ಕೆಡೆದಡಜಿಗಿಚಿಯಾಯ್ತು ಹಯದಳ ಹತ್ತು ಸಾವಿರವು ॥
ಮಡಿಯೆ ಲಕ್ಷ ಪದಾತಿಯೈಯು
ಯ್ಯಡಸಿಕುಟ್ಟಿದ ಪಡೆಯ ಸವರಿದ
ನೊಡನೆ ಸವರಿದನಾ ಪ್ರಹಸ್ತನ ಮೊನೆಯ ನಾಯಕರ ॥ ೪೩ ॥

ಖಳನು ಬಾಣವ ಸುರಿಯೆ ನೀಲನು
ಅಳವುಗೆಡಿಸಿದನೊಮ್ಮೆ ಮಗುಳವ
ಚಳಕದಲಿ ತೊಡುತಿರಲು ಮುಂಗೈಯೊಡ್ಡಿ ಸರಳಿಂಗೆ ॥
ಒಳಗೆ ಹೊಕ್ಕಾ ರಥವ ಜಪ್ಪಿದ
ನೆಳೆದು ಸೂತನ ಸೀಳಿ ಸಿಂಧವ
ಬಲುಹಯಂಗಳನೊದೆದು ರಥವನು ಮಗುಚಿ ಕೆಡಹಿದನು ॥ ೪೪ ॥

ಜಿಗಿದು ಹಿಡಿದನು ದೈತ್ಯ ಮಂತ್ರಿಯ
ಬಿಗಿದ ಕವಚವ ಸೀಳಿ ಬಿಡುತವೆ
ಉಗುರಲುರವನು ಬಗಿದ ನರಹರಿಯಂತೆ ದಾನವನ ॥
ಹಗೆಯ ಕೊರಳನು ಅವನ ಖಡ್ಗದಿ
ಉಗಿದು ಕೊಯ್ದನು ಹಗೆಯ ಕೊಂದನು
ಬಗೆದಣಿಯೆ ಬಲು ಮಾರಿ ಮಸಣಿಗೆ ಉಣ್ಣಬಡಿಸಿದನು ॥ ೪೫ ॥

ನೀಲನಾಳುತನಕ್ಕೆ ನಭದಮ
ರಾಳಿ ಹೊಗಳಿತು ಭಲರೆನುತ್ತಾ
ಮೌಳಿಯನು ಬಿಗಿದಪ್ಪಿ ಉಚಿತವನಿತ್ತ ರಘುರಾಯ ॥
ಕೇಳಿದನು ದಶಕಂಠ ಚಿಂತಾ
ಲೋಲನಾಗಿರೆ ಮರುಗಿ ಬುದ್ಧಿಯ
ಹೇಳಿದನು ಸಲೆ ಮಾಲ್ಯವಂತನು ಕದನ ಬೇಡೆಂದು ॥ ೪೬ ॥

ಹಿಂದಣಧಟುಗಳಂತಿರಲಿ ನೀ
ನಂದು ಕಟ್ಟಿದ ನಾಗಪಾಶವ
ಹಿಂದುಗಳೆಯನೆ ರಾಮ ರಣದಲಿ ಲಕ್ಷಕೋಟಿಗಳ ॥
ಒಂದು ಕೋಡಗ ಮುನಿದು ಕೊಲುತಿರೆ
ಮಂದಮತಿ ನೀನಾಗಿ ಕೆಡದಿರು
ಇಂದುಮುಖಿಯನು ಕೊಟ್ಟು ಕಾಂಬುದು ಲೇಸು ದಶಕಂಠ ॥ ೪೭ ॥

ಕೇಳು ಮುತ್ತಯನೆಂದ ಮಾತನು
ಬಾಳ ಧಾರೆಯ ಮಧುವಿನಾಸೆಗೆ
ನಾಲಗೆಯ ಹೋಗಾಡಿ ಕಲಿವುದಿದಾವ ಲೇಸೆಂದ ॥
ಹೇಳಿ ಮಂಡೋದರಿಯು ರಾವಣ
ಹೇಳಿದನು ಬುದ್ಧಿಯನು ಕೇಳುವೆ
ನಾಳೆ ಕಾದುವೆನಿಂದು ನೀನಡೆ ಮನೆಗೆ ಹೋಗೆಂದ ॥ ೪೮ ॥

ಸುದತಿ ಜರೆದರೆ ನೊಂದು ತನ್ನಯ
ಸದನದತ್ತಲು ಸರಿಯೆ ಸಂತಾ
ಪದಲಿ ರಾವಣನಿರಲು ದಿನಪತಿ ಬಿದ್ದನಬ್ಧಿಯಲಿ ॥
ಪದನವೇಳೇಳಾಯ್ತು ಮುಂದಿನ
ಹದನವರಿತವರಾರು ದನುಜರ
ಸದೆದನನಿಲಜ ನೀಲನೆಂದೆನೆ ಮುಗಿದುದೀ ಸಂಧಿ ॥ ೪೯ ॥

---

## ೨೧ನೇ ಸಂಧಿ

ಪಲ್ಲ ॥ ರಣವ ನೋಡಲು ಬಂದ ರಾವಣ
ಕೆಣಕಿ ಕಪಿಗಳ ಗೆಲಿದು ರಾಮನ
ಕಣೆಗೆ ಮಕುಟವ ತೆತ್ತು ಹೊಕ್ಕನು ಮರಳಿ ಲಂಕೆಯನು ॥

ಪದ ॥ ಅಂಧಕಾರದ ನೆರವಿ ಬರೆ ದಶ
ಕಂಧರನು ರಾತ್ರಿಯೊಳು ಸ್ವಪ್ನದೊ
ಳಂಧನಾಗಿರೆ ಪೂರ್ವದಿಕ್ಕಿನೊಳರುಣ ತರಣಿಯನು ॥
ತಂದು ತೋರಲು ವಂದಿ ಮಾಗದ
ರಿಂದ ರಾವಣನುಪ್ಪವಡಿಸಿದ
ನಿಂದುಧರ ಪೂಜೆಯನು ಮಾಡಿದನಿತ್ತನೋಲಗವ ॥ ೧ ॥

ಕೊಂದರ್ಕೈ ವನಚರರು ತನಯರ
ಇಂದು ನೋಡುವೆ ಕೊಲುವ ಪರಿಯನು
ಸಂದುಸಂದನು ಕಡಿದು ಹರಹುವೆ ರಣದ ಭೈರವಿಗೆ ॥
ಬಂದು ತಾನೇ ತೇರ ಹೂಡುತೆ
ತಂದು ನಿಲಿಸಿದ ಸೂತ ನಾಯಕ
ವೃಂದ ನಡೆಯಲಿ ರಣಕೊಡನೆ ಹೊಡೆ ಭೇರಿಗಳನೆಂದ ॥ ೨ ॥

ಪ್ರಳಯಕಾಲದ ಮುಗಿಲಿನಂತಾ
ನೆಗಳ ತಿಂಥಿಣಿ ಬಿಗಿದ ಘಂಟಾ
ವಳಿಯು ರೆಂಜೆಯ ಮೆರೆವ ಸಿಂಧುರಾರುಣಚ್ಛವಿಯು ॥
ಇಳಿವ ಮದಜಲಕೆರಗೆ ಭೃಂಗಾ
ವಳಿಯು ಸಂಕುಲ ಮರಳುಗೊಳುತಿರೆ
ಹೊಳೆವ ದಾಡೆಯು ಭದ್ರದಂತಿಗಳೈದಿದುವು ರಣಕೆ ॥ ೩ ॥

ವಾರಣಂಗಳ ಮೇಲೆ ಶಸ್ತ್ರನಿ
ವಾರಣದ ವಜ್ರಾಂಗಿದೊಟ್ಟರೆ
ಮಾರಣಂಗಳೆನಿಪ್ಪ ಜೋಧರು ಎಣಿಕೆಗೆಟ್ಟವರು ॥
ಕಾರಿರುಳ ತಿರುಳಂತೆ ಮೆರೆವಮ
ರಾರಿಗಳು ಧನು ಬಾಣಹಸ್ತರು
ಮೇರೆದಪ್ಪಿದ ವಾರ್ಧಿಯಂತಿರೆ ಕವಿದರಾ ರಣಕೆ ॥ ೪ ॥

ಖುರದ ರಜದಲಿ ನಭವ ಮುಸುಕುತ
ಖರೆಯದಲಿ ದಿನಮಣಿಯು ಮೊರಲು
ಉರದ ಗೆಜ್ಜೆಯು ಚರಣ ದಂಡೆಯು ಬಾಹುಪುರಿಗಳಲಿ ॥
ಸುರರ ಮೀಸೆಯು ತುಡುಕುವಂತಾ
ಸುರದೆ ನೆಗೆವಾ ಕೊರಳಿನಗಣಿತ
ತುರಗ ಥಟ್ಟುಗಳೈದೆ ಕವಿದುವು ಚತುರ ಗತಿಗಳಲಿ ॥ ೫ ॥

ಕರಿಯ ಬೊಲ್ಲನ ಕೆನ್ನೆಯಧಟಿನ
ಮರುತ ಗಮನದ ಪಾರಿಯಾತ್ರನ
ತುರಗ ಹೂಡಿದ ಹೇಮನಿರ್ಮಿತ ಹಿರಿಯ ಟೆಕ್ಕೆಯದ ॥
ಸರಳು ಕಾರ್ಮುಕ ಪರಶು ಪಟ್ಟಿಸ
ಹೊರಳಿಗಿಡಿಗಳ ತಳಿತ ಶಸ್ತ್ರದಿ
ಭರದಿ ತುಂಬಿದ ಕೋಟಿ ರಥಗಳು ರಣಕೆ ಹೊರವಡಲು ॥ ೬ ॥

ಕರದ ತಿರುವಡೆ ಜೋಡು ಸೀಸಕ
ಸುರರ ಹಾಹೆಯು ತೊಡರು ಬಾವುಲಿ
ಸುರುಳಿ ಮೀಸೆಯ ಪೆಂಡೆಯಂಗಳ ಬೆನ್ನ ಹೊದೆಗಳಲಿ ॥
ನೆರೆದುದತಿದಲ ಪತ್ತಿ ರಾವುತ
ರರರೆ ಸಬಳಿಗ ನೆರವಿ ಕಡಿತಲೆ
ಸುರಗಿ ಕೊಂತದ ಭಟರು ನೂಕಿತು ಬಿಟ್ಟ ಸೂಠಿಯಲಿ ॥ ೭ ॥

ಇಂದುಮರ್ದನನೆಂಬ ಮುಕುಟವ
ಚಂದದಿಂದೀರೈದು ಧರಿಸಿದ
ನಂದು ಪದಕವನಿಕ್ಕಿದನು ರವಿರಂಗ ಹರಳೆಂಬ ॥
ಇಂದ್ರದಲ್ಲಣವೆನಿಪ ನೀಲಗ
ಳಿಂದ ತೋಳಿಪ್ಪತ್ತು ರಂಜಿಸ
ಲಂದು ಖಳನೆಂಬತ್ತು ಬೆರಳಿಗೆ ಮುದ್ರಿಕೆಯನಿಟ್ಟ ॥ ೮ ॥

ಪರವಧೂಲಂಪಟಗೆ ವಾಮದ
ಚರಣದಲಿ ತೊಡರೊಪ್ಪೆ ರತುನಾ
ಭರಣ ಕಾಂತಿಗೆ ಕಣ್ಣು ಕೋರೈಸಿತ್ತು ದೀಧಿತಿಯ ॥
ತರಣಿಯಂತಿಹ ಕುಂಡಲಂಗಳ
ಮರೆಯದೆಲ್ಲಾ ಕಿವಿಯೊಳಿಟ್ಟನು
ಸುರುಚಿ ಮುತ್ತಿನ ಹಾರವಿಟ್ಟನು ಕೊರಳ ಬಗಿಬಗಿದು ॥ ೯ ॥

ಇಟ್ಟ ಕತ್ತುರಿ ತಿಲಕ ಕೊರಳಳ
ವಟ್ಟ ಪದಕ ಸುವರ್ಣಸೂತ್ರದ
ಉಟ್ಟ ಮುಂಜೆರಗೆಸೆವ ಚಲ್ಲಣ ಪಳಿಯನಳವಡಿಸಿ ॥
ಕಟ್ಟಿ ಕಂಕಣ ಕಡಗ ನೂಪುರ
ವಿಟ್ಟ ದಾನವಮಲ್ಲ ಸಿಂಗರ
ವಟ್ಟ ಶೂಲಿಗೆ ನಮಿಸಿ ಖಡ್ಗವ ಪಿಡಿದು ಝಳಪಿಸಿದ ॥ ೧೦ ॥

ಲಲನೆಯರು ಸಿಂಗಾರದಾರತಿ
ಸುಳಿದರೈ ಒಲು ಬಣ್ಣ ಮುಖದಲಿ
ತಳಿತ ಸೇಸೆಯ ದನುಜರಾಯಂಗಿಕ್ಕಲಿಂತಾಯ್ತು ॥
ಹಲವು ಕಾಲದಲುಳ್ಳ ಭಾಗ್ಯವ
ಬಳಿದು ಬಿಸುಡುವ ಪರಿ ನಿವಾಳಿಸೆ
ಬಳಿಕ ಪಾಯವಧಾರು ಧಿರುರೆನೆ ರಥವನೇರಿದನು ॥ ೧೧ ॥

ಒಡೆಯಗುರು ಜಯವಾಗಲೋಸುಗ
ಹೊಡೆಸಿದರು ಕುರಿ ಕೋಣ ಕಾಟಿಯ
ಕಡಿದು ಬಿಸುಟರು ಹಲವು ಹಂದಿಯ ಹುಲಿಯ ಜಂಗುಳಿಯ ॥
ಕಡಿದ ತಲೆಯ ನಿವಾಳಿಯೆತ್ತುವ
ರುಡಿದ ಕೈಗಳ ಮೃತ್ಯುದೇವಿಗೆ
ಕೊಡುವ ಹರಕೆಯ ಕಂಡು ರಾವಣ ನೋಡಿ ಮೆಚ್ಚಿರ್ದ ॥ ೧೨ ॥

ಹೊಡೆದುವಗಣಿತ ಭೇರಿ ನಿಸ್ಸಳ
ಒಡೆದುದೋ ಬ್ರಹ್ಮಾಂಡ ಹೇಳೆನೆ
ಒಡೆಯ ಜಾಹ್ನವಿ ಕೆಲಕೆ ಗಂಗಾರಮಣ ತಲೆದೂಗೆ ॥
ಕಡಲಕಟ್ಟೆಯನೊಡೆದ ಪರಿ ಖಳ
ಪಡೆಯ ಲೆಕ್ಕಿಸಲರಿದು ಕಪಿಗಳಿ
ಗೆಡೆಯ ಕಾಣೆನಿದಾವ ಪರಿಯನಲೆಂಟು ಬಾಗಿಲಲಿ ॥ ೧೩ ॥

ಕತ್ತಲೆಯ ಕಡೆಕಡೆದು ಮಾಡಿದ
ಪುತ್ಥಳಿಗಳೋ ಕಾಳ ಕೂಟದ
ಬಿತ್ತುಗಳೊ ಹೊರವಡುವ ದೈತ್ಯರೊಯೆನಲು ಹರಿ ಕಂಡು ॥
ಹತ್ತೆ ಕರೆದು ವಿಭೀಷಣಾಂಕನ
ಮತ್ತೆ ಬರುತಿಹಭಟರದಾರೆನೆ
ಚಿತ್ತವಿಸು ರಘುನಾಥ ರಾವಣ ಬಂದ ರಣಕಾಗಿ ॥ ೧೪ ॥

ಭವನ ಶೂಲದ ಗಾಯದಿಂದವೆ
ಕವಲುದಲೆಯಾದವರು ಬಲು
ಮಾಧವನ ನಂದಕಿಯಿಂದ ಮೂಳೆಗಳಿದ್ದ ಬೆನ್ನವರು ॥
ಅವನಿಗಳ್ಳನ ಮಾಂಡಲೀಕರು
ದಿವಿಜಪತಿಯನು ಜರೆವ ದೈತ್ಯರು
ಜವನನಂಜಿಸಿ ಹಲವು ಯುಗವನು ಕಳೆದ ಭಟರಿಹರು ॥ ೧೫ ॥

ಶರಧಿಯಲಿ ಹುಟ್ಟಿರ್ದ ವಿಷದಲಿ
ಕರಿಕುದಲೆಯಾದವರು ಅಂಧಾ
ಸುರನ ಬಿಡಿಸಲು ಹರನು ಹೊಡೆದಾ ಡೋರಿದಲೆಯವರು ॥
ನರಹರಿಯ ನಖಹತಿಗೆ ಬಿಕ್ಕನೆ
ಬಿರಿದ ನೆತ್ತಿಯ ಭಟರು ಮತ್ತಾ
ಸುರಪತಿಯ ಗಜವಿರಿದ ಬಾದಣದವರು ಹಲಲಿಹರು ॥ ೧೬ ॥

ಮೃತ್ಯುವನು ಮುಕ್ಕುವರು ಮಾರಿಯ
ಹೆತ್ತು ಹೆಸರಿಟ್ಟವರು ಕಾಲನ
ಸತ್ತಿಗೆಯ ಟೊಣೆದವರು ಕಡ್ಡಿಗೆ ಬಗೆಯರಂತಕನ ॥
ಸತ್ಯಗಿತ್ಯದ ಘಸಣಿಯರಿಯರು
ಸತ್ತು ಯುಗದವರೆಂಟು ಯುಗದವ
ರೆತ್ತು ಕತ್ತೆಯ ಮಾಡಿ ದೇವರ ಹಿಂಡನಾಳ್ದವರು ॥ ೧೭ ॥

ಮೇಲೆ ನಿಮ್ಮಡಿಯಲ್ಲದಾತಗೆ
ಕಾಳಗಕ್ಕಂಗೈಸ್ಸ ತೀರದು
ಹೇಳಲಮ್ಮೆನು ಮರ್ಕಟಂಗಳಿಗಿಲ್ಲಿ ತರಹರವು ॥
ಏಳು ಮನ್ನೆಯ ಗಂಡನಾಗೆನೆ
ಗೂಳಿಯುವ ತೋರೆನಲು ರಾವಣ
ನಾಳದಾಪೆಡೆ ಹೇಳು ನೀ ಹೋಗೆಂದ ಸೌಮಿತ್ರಿ ॥ ೧೮ ॥

ಕುಲವನೋಡುವೊಡಜನ ಮೊಮ್ಮನು
ಚೆಲುವತನದಲಿ ಮದನ ಮೂರುತಿ
ಬಲುಹ ನೋಡುವೊಡೆತ್ತಿದನು ಕೈಲಾಸ ಪರ್ವತವ ॥
ಬಲವ ನೋಡುವೊಡಮರದಲ್ಲಣ
ಛಲವ ನೋಡವೊಡೀಯ ಸೀತೆಯ
ಮಲೆವರಾರಮರಾರಿ ಇದಿರಲಿ ಜಗದ ಗಂಡನಲ ॥ ೧೯ ॥

ನೆರೆದ ದನುಜರ ಕಂಡು ಬಲ್ಲೆವು
ಹಿರಿದು ಹೊಗಳಿದೆ ಸಾಕು ಬಳಲಿದೆ
ಮರುಳೆ ನೀ ಬಲುಬಣ್ಣವಿಡೆ ಖದ್ಯೋತ ರವಿಯಹುದೇ ॥
ಹುರುಳು ಬಲ್ಲೆವು ಸಾಕು ಹೋಗೆನ
ಲರಸ ನುಡಿದನು ತಮ್ಮ ಹೋ ಹೋ
ಕೆರಳುವರೆ ಖಳ ವೀರನಲ್ಲವೆ ತಪ್ಪೆ ಹೊಗಳಿದರೆ ॥ ೨೦ ॥

ಕೇಳಿ ಮೆಚ್ಚುತ ರಾಘವೇಶ್ವರ
ನೀಲನನು ರಾವಣನ ಹೃದಯದ
ಶೂಲನನು ರಕ್ಕಸರ ವಂಶದ ಕಾಲಭೈರವನ ॥
ಹೇಳಿದನು ಹನುಮಂತದೇವನ
ಮೇಲೆ ರವಿಜನ ದಧಿಮುಖಾಂಕನ
ಕಾಳಗಕೆ ಕಪಿ ಕೋಟಿ ಕೋಟಿಯನರಸ ನೇಮಿಸಿದ ॥ ೨೧ ॥

ದೇವ ಕದನ ಕೃತಾಂತ ಧಿರುರೇ
ದೇವ ಸಮರವಿರೋಧಿ ಜಯ ಜಯ
ದೇವ ಪರನಾರಿ ಪ್ರಲಂಪಟ ದನುಜಪಾಲಕನೆ ॥
ದೇವ ಲಂಕಾಧೀಶ ದಶಶಿರ
ದೇವ ಬಾಳೆಂದಸುರ ಪಾಠಕ
ರೋವಿ ಕೈವಾರಿಸಲು ಮುಂದೆಯ್ತಂದ ದಶಕಂಠ ॥ ೨೨ ॥

ಅಮರವೈರಿಯ ತೋಟಿ ಬೇಡಾ
ಸಮರರುದ್ರನ ತೋಟಿ ಬೇಡಾ
ಯಮನ ಸೋಲಿಸಿ ಮೃತ್ಯು ಗೆಲಿದನ ತೋಟಿ ಬೇಡೆಂಪ ॥
ಉಮೆಯ ಗಂಡನ ಗಿರಿಯನೆತ್ತಿದ
ಸಮತೆಯುಳ್ಳನ ತೋಟಿಬೇಡಂ
ದಮಿತನಾದದ ಕಹಳೆ ಚೀರಲು ಬಂದ ದಶಕಂಠ ॥ ೨೩ ॥

ಇವನೆ ರಾವಣನೆಂಬ ರಕ್ಕಸ
ನಿವನೆ ದಶಶಿರನೆಂಬ ವೀರನು
ಇವಗೆ ತೋಳಿಪ್ಪತ್ತು ನೋಳ್ಪಡೆ ತೊಡೆಗಳೆರಡೆಯುಲ ॥
ಶಿವ ಶಿವಾ ಸಂದೇಹವೇ ಕಾಂ
ಬವರಿಗಚ್ಚರಿಯುಹುದಲಾ ಧಿಟ
ಕಿವನ ರೂಪಿದು ಹೊಸತು ಲೋಕವೊಳೆಂದ ರಘುರಾಯ ॥ ೨೪ ॥

ಬಲಕೆ ಬಲ ಸರಿಯುಹುದು ರಕ್ಕಸ
ಬಲಕೆ ದೊರೆ ದಶಕಂಠ ರಾಮನ
ಬಲಕೆ ದೊರೆ ಸುಗ್ರೀವ ಲಂಕಾನಗರಿ ರಣಭೂಮಿ ॥
ಸಲೆ ಪರಾಜಯ ಜಯುವನೀಶ್ವರ.
ತಿಳಿವ ಧರ್ಮಕೆ ಜಯುವುಯೆನುತವೆ
ನಲಿದುದಭ್ರದಲಮರ ವೈಮಾನಿಕರ ಸಂದೋಹ ॥ ೨೫ ॥

ಕೋಟಿ ಪಡೆಯುಲಿ ಗಂಧಮಾದನ
ಕೋಟಿಯುಲಿ ನಳ ನೀಲನರ್ಕಜ
ಕೋಟಿಯುಲಿ ಜಾಂಬವನು ಶತಬಲಿ ಕೋಟಿಯುಲಿ ಪನಸ ॥
ಕೋಟಿಯುಲಿ ತಾರೇಯ ಕಂಪನು
ಕೋಟಿಯುಲಿ ದಧಿಮುಖನು ಕವಿದನು
ಕೋಟಿಯುಲಿ ಖಳಪಡೆಯು ಹಳಚಿತು ಹತ್ತುಮುಖದಲ್ಲಿ ॥ ೨೬ ॥

ಹರಿಯ ಲಗ್ಗೆಯ ಕೂಡೆ ನುಂಗಿದು
ದರಚುತಿಹ ವನಚರರ ಘರ್ಜನೆ
ಮೆರೆದುದದು ರಕ್ಕಸರ ನುಂಗುವ ಕೊಕ್ಕಸರ ಗಾದೆ ॥
ಮುರಿದು ಹೆಮ್ಮರ ಕಲ್ಲುಗುಂಡಿಂ
ದುರುವ ಹೆಗ್ಗಿರಿಯಿಂದ ಕಪಿಗಳು
ಬೆರಸಲಾ ರಣಧೂಳಿ ಮುಸುಕಿತ್ತು ಭಯ ಮೋಹರವ ॥ ೨೭ ॥

ಅಡಗಲಿಸಿ ಹೊಯ್ದಾಡೆ ದೈತ್ಯರು
ಕೆಡೆದವರ್ಬುದ ತುರಗ ದಶಶತ
ಬಿಡವೆ ಕರಿ ಹದಿನೆಂಟು ಲಕ್ಷವು ಕೋಟಿ ಕಾಲಾಳು ॥
ಕಡಿದ ಕರಿ ರಥ ಹಯವನಂತವ
ಕಡಲುಕೊಂಡುದೆನಲ್ಕೆ ಕೆಂಧೂ
ಳಡಸಿ ನಭಕುಪ್ಪರಿಸಿ ಮುರಿದುದು ಚೂಣಿ ಕಾಳಗದಿ ॥ ೨೮ ॥

ಕವಚ ಹರಿದುವು ಬಿರಿಯೆ ಸೀಸಕ
ಸವಗ ಸವೆದುವು ವೆಚ್ಚವಾಯಿತು
ಕವಲುಗೋಲೆಕ್ಕಾಡಿ ಹೋಯಿತು ಕಪಿಗಳವಯವವು ॥
ವಿವರಿಸಲು ನಾನರಿಯೆ ದೈತ್ಯರು
ಜವನ ಪುರವನು ತುಂಬಲಯ್ಯ
ಯ್ಯವಗೆ ತವಗಡೆಯಿಲ್ಲ ಕೆಟ್ಟೆವುಯೆನುತ ಖಳರುಲಿಯೆ ॥ ೨೯ ॥

ಮುರಿದುದೈ ಖಳ ಚೂಣಿ ಬಿಕ್ಕನೆ
ಬಿರಿದ ನೆತ್ತಿಯ ಮುರಿದ ಕಾಲ್ಗಳ
ಹರಿದ ತುಟಿಗಳ ಮುರಿದ ಮುಂಡೆಯ ಕೊರೆದ ಬಾದಣದ ॥
ಹರಿವ ರಕುತದ ಮೆರೆವ ಮುಂಡದ
ಬಿರುಬಿನಲಿ ಬಿರುಗಾಳಿಯುಟ್ಟಿದ
ನೆರೆದ ತರಗೆಲೆಯಂತೆ ದೈತ್ಯರು ಕಪಿಗಳುಪಟಳಕೆ ॥ ೩೦ ॥

ಕೋಟಿಗಳನಿಳಿದೋಡಿತತ್ತಲು
ನೋಟಕರು ಕಂಗೆಟ್ಟು ಕಪಿಗಳ
ಕಾಟ ಬಿರಿಸಾಯ್ತೇನ ಹೇಳುವೆನಟ್ಟ ಸದೆವುತಿರೆ ॥
ಆಟವಿಕ ರಾವಣಗೆ ಸೀತೆಯು
ಬೇಟ ಲೇಸಾಯ್ತಾಯ್ತು ಮಾರಿಯು
ಕೂಟ ಘನವಾಯ್ತೆಂದು ಮುರಿದೋಡಿತ್ತು ಖಳ ಸೇನೆ ॥ ೩೧ ॥

ತರುಚರೇಂದ್ರರು ಕವಿದು ಹಾಯ್ದರು
ಪುರದ ಹೆಬ್ಬಾಗಿಲುಗಳಿಕ್ಕಿತು
ಬಿರುಬವನು ಕೊಳಿಸಿತ್ತು ಕಂಗೆಟ್ಟೋಡೆ ನಾಯಕರು ॥
ಹರಿದು ಬೆನ್ನಿಗೆ ಬರಲು ಕೆಲಬರು
ಹರಣ ಹರವರಿಯಾಯ್ತು ರಾವಣ
ಕೆರಳಿದೊಂದೇ ರಥದಿ ಸೂಥಿಯಲಡ್ಡಗಟ್ಟಿದನು ॥ ೩೨ ॥

ಉರಿಯು ಹರವರಿಗಸುರನುದಕದ
ಗೆರೆಯಃನಿಟ್ಟಂತಾದ ಹೆದೆಗಳ
ಸರಳ ಸಾರವ ಕೆದರಿ ಕಪಿಗಳ ಧಟ್ಟ ಸೀಳಿದನು ॥
ಹೊರಳಿಗಡಿದನು ಕೊಚ್ಚಿ ಬಿಡುತವೆ
ತಿರುಗಿಸಿದ ಮರ್ಕಟರ ಸೇನೆಯು
ಧುರದೊಳವನೇಕಾಂಗ ವೀರನು ಸದೆದ ವನಚರರ ॥ ೩೩ ॥

ಹೆಚ್ಚಿ ಹಬ್ಬಿದ ಮುಗಿಲ ಬರಸಿಡಿ
ಲುಚ್ಚಳಿಸುವಂತುದಧಿಯೊಳಗಣ
ಕಿಚ್ಚುವಾರ್ಧಿಯನಾವರಿಸುವಂತಸುರನಡ್ಡವಿಸೆ ॥
ಮುಚ್ಚಿದಭವನ ಭಾಳನೇತ್ರದ
ಮುಚ್ಚಳವ ತೆರೆದುರಿವ ಕಿಚ್ಚನು
ಬಿಚ್ಚಿ ಬೀಸಿದ ತೆರದಲುರೆ ಅಟ್ಟಿದನು ಮರ್ಕಟರ ॥ ೩೪ ॥

ಉರಿಯು ಕೋಟೆಗೆ ಸಿಕ್ಕಿದಂತವ
ತಿರುಗಿ ಸೇನೆಯನೊಬ್ಬ ತುಳಿದನು
ಮರಳಿಸಿದನಸಹಾಯ ಶೂರನು ಮೂರು ಯೋಜನಕೆ ॥
ನೆರೆದ ಸೇನೆಯು ಮಧ್ಯರಂಗವು
ಸರಳನೂರರಲಳತೆಯುಹುದೆನೆ
ಸುರರಿಗುಬ್ಬಸ ಹುಟ್ಟೆ ಕೋದಂಡಗಳನೊದರಿಸಿದ ॥ ೩೫ ॥

ಹತ್ತು ಬರಸಿಡಿಲಂತೆ ಚೀರಿದ
ಹತ್ತು ಚಾಪದಿ ಸರಳ ಸುರಿದನು
ಮೃತ್ಯುವೋ ಕಾಲಾಗ್ನಿ ರುದ್ರನೊ ಸಮರ ಭೈರವನೊ ॥
ತೆತ್ತಿಸಿದನಮರಾರಿ ಕಪಿಗಳು
ಸತ್ತು ಸವೆಯದೆ ಕಾದುತಿರ್ದುದು
ಸುತ್ತ ಕರಗಸದಂತೆ ಸೀಳಿದ ಸೇನೆಗುರಿಮಾರಿ ॥ ೩೬ ॥

ಹರಿದು ಬಂದನು ಕುಂಭಕರ್ಣನ
ಹಿರಿಯಮಗನಾ ಕುಂಭನೆಂಬವ
ನೊರೆವ ಸರಳಲಿ ತೊಡೆದ ದಧಿಮುಖನಾಳಿನಾಳುಗಳ ॥
ಕೊರೆದು ಕೊಚ್ಚಿದ ಕಡಿದು ಸೀಳಿದ
ನೆರೆದ ಬಲವನು ಕೊಂದು ಸವರಿದ
ಅರಗಿನರಮನೆಗುರಿಯು ದಿಬ್ಬಣಹೊಕ್ಕ ತೆರನಾಯ್ತು ॥ ೩೭ ॥

ಪಡೆಯು ಮೋಹವಬಿಟ್ಟನೇ ಕೇ
ಳೊಡೆಯನಕಟೆಂದೆನುತ ಗೋಳಿಡೆ
ಫಡಫಡೆನುತಡಹಾಯ್ದು ಹೆಗ್ಗೊಂಬುಳ್ಳ ಹೆಮ್ಮರನ ॥
ಉಡಿದು ದಧಿಮುಖ ಹರಿದುಬಂದನು
ಹೊಡೆದ ರಥ ನುಗ್ಗಾಯ್ತು ರಕ್ಕಸ
ಹಿಡಿದ ಚಾಪವ ಮುರಿದು ಸೂತನ ತರಿದ ತವಕದಲಿ ॥ ೩೮ ॥

ನಿದ್ದೆಗೈವನ ಮಗನೆ ತಂದೆಯು
ವಿದ್ಯೆಗಲಿಯದೆ ಧುರಕೆ ಬಹರೇ
ಹದ್ದಿಗೋಗರವಾದೆ ಪಾತಕಿಯೆನುತ ದಾನವನ ॥
ಕದ್ದ ಕಳ್ಳನ ಕಟ್ಟುವಂದದಿ
ಹದ್ದುಗಟ್ಟನು ಕಟ್ಟಿ ಹೊಡೆವರೆ
ಬಿದ್ದನಸುವಡಗಿತ್ತದಾರಿತು ಕಪಿ ಬಲಾನೀಕ ॥ ೩೯ ॥

ಕಾಲನೂರಿಂಗಣ್ಣ ತೆರಳಿದ
ಕಾಳಗವ ತಾನಾಂತ ತಕ್ಷಣ
ಕಾಲ ಕೋಲಾಹಲನ ಬಣ್ಣಿಸಲರಿದು ಚಳಕದಲಿ ॥
ಸೀಳಿದನು ಸವರಿದನು ಕೊಚ್ಚಿದ
ಹೋಳುಗಡಿದನು ಕಡಿದು ನಡೆದನು
ಕೀಲಿಸಿದ ಹದಿನೆಂಟು ಶರದಲಿ ಧರೆಗೆ ದಧಿಮುಖನ ॥ ೪೦ ॥

ಮಿಡುಕುಗೆಟ್ಟನು ಬಿದ್ದ ದಧಿಮುಖ
ನೊಡನೆ ಹಳಚಿದನವನನಂಗದ
ಸಿಡಿಲು ಬರಸಿಡಿಲೆರಗಿದಂತೊಳಹೊಕ್ಕು ದಾನವನ ॥
ಹಿಡಿದು ಕೆಡಹಿದ ತೇರನೊಡೆದನು
ದಡಿಗನಡಿ ಕಪಿ ಮೇಲೆ ಹೊರಳಲು
ಬಿಡಿಸಿಕೊಂಡನು ದೈತ್ಯ ತಿವಿದನು ಗದೆಯಲಂಗದನ ॥ ೪೧ ॥

ಬಡಿದಡಂಗೆಯ್ಯೊಡ್ಡಿ ಗಾಯವ
ತಡೆದುಕೊಳ್ಳುತೆ ಮರಳಿ ಬಲುಹಿಂ
ಹೊಡೆದಡಾತನ ಸಂದು ಕಳಚಿತು ಬದಿಯನಿಟ್ಟೆಲುವು ॥
ಉಡಿದು ನಿರಿನಿಟಿಲೆಂದು ನುಗ್ಗಾ
ಯ್ತೊಡೆಯ ರಾಘವ ತಟ್ಟಿ ಲೀಸೆನೆ
ಬಿಡದೆ ಕಾದೆ ಕುಮಾರ ಕಾಳಗ ಕಣ್ಗೆಸೊಗಸಾಯ್ತು ॥ ೪೨ ॥

ಸಿಡಿಯೆ ಮಕುಟವು ಬಿದ್ದ ರಕ್ಕಸ
ನೊಡಲು ಜರ್ಜರಿಯಾಯ್ತು ಕರುಳನು
ದಡಿಗ ಕಾರಿದ ಹಿಂದೆ ಕರ ಖತಿಗೊಂಡು ಮತ್ತೆರಗೆ ॥
ಒಡಲು ಉಳಿದುದು ಹರಣವಳಿದುದು
ನೃಡನು ಮೆಚ್ಚಿದ ರಾಮ ಹೆಚ್ಚಿದ
ಒಡನೆ ಮಮ್ಮಲ ಮರುಗಿ ವಿಭಿಷಣ ಮಗಗೆ ಹಲುಬಿದನು ॥ ೪೩ ॥

ಒಬ್ಬನಳಿದನು ದನುಜನಾಯಕ
ಒಬ್ಬ ದಧಿಮುಖನೊಂದನಿತ್ತಲು
ಹಬ್ಬವಾಯಿತು ಮಾರಿಮಾಸಣಿಯರಡಗನೊಗಡಿದರು ॥
ದಿಬ್ಬಣವ ಬರಹೇಳು ಮೃತ್ಯುವ
ಬೊಬ್ಬೆಮಾಣಲಿ ನರಕದತ್ತಲು
ತುಬ್ಬ ಹೇಳೋ ಖಳರನೆನುತಂಗದನು ತಿರುಗಿದನು ॥ ೪೪ ॥

ಅತ್ತಲಿತ್ತಲು ಹರನ ಬೆಟ್ಟವ
ಕಿತ್ತ ವೊಗ್ಗಲ್ಲಮರರೆಲ್ಲರ
ತೊತ್ತುಗೆಲಸವ ಮಾಡಿಸಿದ ಪರಿಯಲ್ಲ ಕಾದಿದರೆ ॥
ಹತ್ತು ಹಿರಿದಲೆಗಳನು ತರಿದಾ
ಮೃತ್ಯುದೇವಿಗೆ ಬಿದ್ದನಿಕ್ಕುವೆ
ಇತ್ತ ತಿರುಗೆಂಬೆನುತ ಹರಿದೆಯ್ತಂದ ಸುಗ್ರೀವ ॥ ೪೫ ॥

ಎಲವೊ ನೀ ಕಡು ಸಹಸಿಯೋ ಧಿಟ
ಸುಲಭನಲ್ಲವು ನಾವರಿಯೆವೇ
ಕೊಲಿಸಿದ್ಯೆ ನರನಿಂದ ಬಾಲಿಯ ಬೀರ ಕಂಡುದಲ ॥
ಗಳಹತನದಲಿ ಹಿರಿಯ ನೀ ಹೆ
ಕ್ಕಳಿಸಿ ಬಾಯೊಡೆವಂತೆ ಚೀರದೆ
ಗೆಲವಕೊಂಡರೆ ಬಳಿಕ ಹೇಳುವೆನೆಂದ ದಶಕಂಠ ॥ ೪೬ ॥

ಗೆಲ್ಲು ಕೇಳುವೆನಿನ್ನು ಬಳಿಕೆಲೆ
ಕಳ್ಳ ನಡೆ ನಡೆಯೆನುತ ಹೆಗ್ಗೊಂ
ಬುಳ್ಳ ಹೆಮ್ಮರನೊಂದ ತಂದಪ್ಪಳಿಸಿದನು ಖಳನ ॥
ಬಿಲ್ಲು ಮುರಿದುವು ತೋಳುನೊಂದೆದೆ
ಯಲ್ಲಿ ಕೊಂಬೆಗಳುಡಿಯೆ ಬಲುಗೈ
ಯ್ಯಲ್ಲಿ ದಾನವ ಹೊಡೆಯ ರವಿಸುತ ನುರುವ ಖಾತಿಯಲಿ ॥ ೪೭ ॥

ತಳ್ಳುಳಿಸಿ ಕಪಿರಾಯ ಬಿದ್ದನು
ಗಲ್ಲದಲಿ ಬಿಸಿ ನೆತ್ತರೊಕ್ಕುದು
ಬಳ್ಳುಗೆಡದೆಲೆ ಕಪಿಯೆ ಪೌರುಷವೆತ್ತ ಹೋಯ್ತೆಂದ ॥
ಮೆಲ್ಲನೆದ್ದನು ಮತ್ತೆ ತರಣಿಜ
ಬುಲ್ಲವಿಸಿದನು ಕೋಪ ಶಿಖಿಯಲಿ
ಚೆಲ್ಲವಾಡುತ ಕೊರಳು ಕೈಗಳ ಬಿಗಿದ ಬಾಲದಲಿ ॥ ೪೮ ॥

ಬಿಡುಬಿಡೆಂದರೆ ಮುನ್ನ ಸೀತೆಯ
ಬಿಡುಬಿಡೆಂಬುದ ಕೇಳಿ ರಾವಣ
ಸುಡುಸುಡೆಂದರೆ ಹನುಮ ಸುಟ್ಟುದು ಸಾಲದೇ ಹಿಂದೆ ॥
ಫಡ ಫಡೆಲವೋ ಎನಲು ವಿಜಯವ
ಪಡೆವೆನೆಂದನು ಸುಭಟ ರಕ್ಕಸ
ಜಡಿಯಲೆರಗಿದ ಹತ್ತು ಬಾಯಲಿ ನೊರೆಯ ಬಿಟ್ಟಿಸೆಯ ॥ ೪೯ ॥

ಇನಜ ಧೈರ್ಯದಲೆದ್ದು ಮರದಲಿ
ದನುಜನೇರಿದ ರಥವ ಹೊಡೆಯಲು
ಕನಲಿ ಕೆಡೆ ಕೆಡೆಯೆನುತ ಮೂವತ್ತಾರು ಬಾಣದಲಿ ॥
ವನಚರೇಂದ್ರನ ಕೀಲಿಸಿದ ಕಡು
ಗನಲಿ ಪುನರಪಿ ಹತ್ತು ಶರದಲಿ
ದನುಜ ಬಲ್ಲಹನೆಸಲು ಮುಗ್ಗಿದನಕಟ ಸುಗ್ರೀವ ॥ ೫೦ ॥

ಗಂಡುತನವೇನಾಯ್ತು ಹೇಳೆಲೆ
ಭಂಡ ನೀ ಬಾಯ್ಬಡಿಕತನದಲಿ
ತೊಂಡುಗೆಡವರೆ ಕಾದದಿಪ್ಪರೆಯೆನುತ ಮೂದಲಿಸಿ ॥
ಗಂಡುತನವುಳ್ಳವರು ರಣದಲಿ
ಮಂಡದೋರುವರೆನುತ ಬಳಿಕೀ
ರಂಡೆಹುಯ್ಯಲು ಬೇಡ ಕಾದುವರುಂಟೆ ಕರೆಯೆಂದ । ೫೧ ॥

ಗುಂಡುಕಲ್ಲಿನಲಟ್ಟಿ ದನುಜರ
ತಂಡ ಸಾವುದೆ ಸುರರ ನೆರೆ ಗೋ
ಳುಂಡೆಗೊಳಿಸಿದೆ ತೊತ್ತುಗೆಯ್ಸಿದೆ ನೆರೆದ ಮರ್ಕಟರ ॥
ದಂಡು ಬಂದುದು ಹಲವು ಕಾಲಕೆ
ಕಂಡೆವಯ್ಯ ವಿಶೇಷವನು ಕಪಿ
ಪುಂಡರಿರ ಮೈದೋರಿಯೆಂದರೆ ನೀಲ ಹರಿತಂದ ॥ ೫೨ ॥

ಮೇರುವಂದದಿ ಬಿದ್ದನೈ ರಣ
ಧೀರ ಸುಗ್ರೀವಾಂಕನೆಂದೆಂ
ದಾರಿ ಹೆಕ್ಕಳಿಸದಿರು ರಕ್ಕಸ ತೆರಳದನುನಾಗು ॥
ಹಾರುವಗೆ ಕಾಳಗವೆ ಬಣಗೇ
ಸಾರು ಸರಿಯೆನಲಿವಗೆ ದನುಜರು
ತೀರದಿನ್ನೂ ನಿನಗೆ ಸ್ಥೈರಿಸು ಕೊಲುವೆನಾನೆಂದ ॥ ೫೩ ॥

ಹಾರುವನು ನಾನಹುದು ಕಪಿಗಳ
ಬೇರುಗೊಲೆಯನು ಗೆಯ್ದು ವಿಜಯುವ
ಹಾರುವೆನು ನೋಡೆಂದು ಹಾರುವತನವ ಕೈಮೆಗಳ ॥
ಸೇರದಣಕವೆನುತ್ತ ರಕ್ಕಸ
ಮೇರೆಯಿಲ್ಲದೆ ಸರಳ ಸುರಿದನು
ಭೋರನಂಬರ ಮುಳುಗೆ ದಾಯದಿ ಸರಳನೇರಿಸಿದ ॥ ೫೪ ॥

ಬಾಲದಲಿ ತೂರಿದನು ವಿಜಯುವ
ನೀಲಲೋಹಿತ ರುದ್ರನೆನಿವ ಘಡ
ಮೇಳವೇ ರಾವಣನ ಸಮ್ಮುಖಕಾರು ನಿಲಬಹುದು ॥
ಹೊಳಿ ಹೊಕ್ಕನು ತೇರು ತುರಗವ
ಬಾಲದಲಿ ಬಿಡೆಕಟ್ಟಿ ಸೂತನ
ಸೀಳಿ ದನುಜನ ಕಾಳುಗೆಡಿಸಿದನೊಂದು ಕ್ಷಣದೊಳಗೆ ॥ ೫೫ ॥

ಝಡಿದು ಖಡ್ಗದಲಸುರ ಬಾಲದಿ
ಹೊಡೆಯೆ ತಪ್ಪಿಸಿಕೊಂಡು ಕಡಿದು
ಕೆಡೆದನು ರಥತುರಂಗವನಹಹ ಸಂಭ್ರಮಕೆ ॥
ಒಡನೆ ಹೊಸ ವಾಜಿಗಳ ಹೂಡುತ
ದಡಿಗ ರಕ್ಕಸ ಹಲ್ಲುಗಡಿಯಲು
ತುಡುಕಿ ಸರ್ರನೆ ತಿರುಗಿ ರಥವನು ನಭಕೆ ಕಪಿಯಿಟ್ಟ ॥ ೫೬ ॥

ಇಟ್ಟಡಾ ರಥ ನುಚ್ಚುನೂರೆನೆ
ಥಟ್ಟನವ ಪಡಿ ರಥವನೇರಲು
ದಿಟ್ಟ ಕಪಿ ಸೈದುಗಳ ಚೆಲ್ಲಿದ ಕೀಲ ಕಳಚಿದನು ॥
ಅಟ್ಟಿ ಕೊಂತದಲಿರಿಯೆ ಕಪಿ ಜಗ
ಜಟ್ಟಿ ಕೊಂತವ ಹಿಡಿದು ಜೋಲಲು
ಬಿಟ್ಟು ಕೊಂತವ ನೀಲ ಮಕುಟದ ಮೇಲೆ ಮಂಡಿಸಿದ ॥ ೫೭ ॥

ತಿರುವನಂತದಿ ಕಡಿಯಲಾ ಖಳ
ಕೆರಳಿ ಖಡ್ಗವ ಸೆಳೆಯೆ ಕಪಿ ತಾ
ನಿರದೆ ಹಲುಗಿರಿದೇಡಿಸುತ ಹುಬ್ಬಿಕ್ಕಿ ಘಳಘಳಸಿ ॥
ಬೆರಳ ತುದಿಯಲಿ ಬಡಿಯ ತುರಿಸುತ
ತರುಚರೇಶ್ವರ ಬಲು ವಿಕಾರದಿ
ಮರಳುಗೊಳಿಸಲು ನೋಡಿ ಹೊಗಳಿತ್ತುಭಯ ಬಲವಂದು ॥ ೫೮ ॥

ತಿರುಗಿದನು ಸವ್ಯಾಪಸವ್ಯದಿ
ತುರಗಸಂತತಿ ಬವಣಿಗೊಂಡವು
ಸರಳಲಿಕ್ಕಿಸದೆಣಿಕೆಗೊಳ್ಳದೆ ಕೈದುಗಳ ಕೊಂಡು ॥
ಕರಗಳೀರೈದೈಯ್ಯ ದೈತ್ಯಗೆ
ಎರಡೆ ಕೈ ನೀಲಂಗೆ ಭಲರೇ
ಹುರುಳುಗೆಡಿಸಿದನವನ ನೋಡುತ ದನುಜ ಕೈಮರೆದ ॥ ೫೯ ॥

ಪೂತುರೇ ಕಲಿ ನೀಲ ಭಲರೇ
ಭೂತುಗೆಡಿಸಿದನಸುರ ರಾಯನ
ನಾ ತತೂಕ್ಷಣ ಕಪಿಗಳೊದಗಿದಡಸುರ ಸೋಲುವನು ॥
ಖಾತಿಯಲಿ ಅಮರಾಳಿ ಮರುಗಿತು
ಭೀತಿಗೊಳುತಿರಲುಭಯ ಮೋಹರ
ಘಾತುಕನು ಹೈರಣ್ಯ ಬಾಣವ ಬೇಗ ತೆಗೆದೆಚ್ಚ ॥ ೬೦ ॥

ಹೊಗೆಯ ಹೊರಳಿಯ ಬಾಯ ಧಾರೆಯ
ಲಗಿವ ತುಂತುರ್ಗಿಡಿಯ ಮುಮ್ಮೊನೆ
ನೆಗೆವ ದಳ್ಳುರಿ ಮಸಗೆ ಕೆನ್ನೆಗೆ ತೀವಿ ಖಳನೆಸಲು ॥
ಭುಗಿಲು ಭುಗಿಭುಗಿಲೆನುತ ನೀಲನ
ಮೊಗೆದು ಮುತ್ತಿತು ಬಾಣ ತಂದೆಗೆ
ಮಗನ ಮೋಹವದೆತ್ತ ಹೋಯಿತೊ ಬಿದ್ದನಾ ನೀಲ ॥ ೬೧ ॥

ಉರುವ ವೀರನು ನೀಲಬಿದ್ದನು
ಒರಲಿದನು ಸುಗ್ರೀವ ಬಾಯನು
ತೆರೆದುದಾ ಕಪಿ ಸೇನೆ ಖರ ಸಂಗ್ರಾಮ ಸಂಘಟಿಸೆ ॥
ಮರುಗುತಿದೆ ಗೀರ್ವಾಣ ಸಂಕುಲ
ವರಚುತ್ತಿರ್ದುವು ಭೇರಿ ನಿಸ್ಸಳ
ಹರೆಗಳಗಣಿತ ಹತ್ತುಬಾಯಲಿ ದೈತ್ಯ ಬೊಬ್ಬಿರಿದ ॥ ೬೨ ॥

ಕುರಿಯ ಮರಿಗಳ ಗೆಲಿದ ದಂತಿಗೆ
ಕುರುಹಿನುಡುಗೊರೆಯುಂಟೆ ಬಡ ವಾ
ನರರ ಕೊಂದೆಮಗಾವ ಹೆಸರುಂಟಾದರಹಿ ನೊಕ್ಕಿ ॥
ಗರುಡನೊಳು ನಾಯ್ ನೊಣಜೆಯಾಂತರೆ
ಕೊರತೆಯಹುದೆಂದೊರೆಯುದಿಹರೆ
ಖರೆಯುದಲಿ ಬರಹೇಳು ರಾಮನನೆಂದ ದಶಕಂಠ ॥ ೬೩ ॥

---

## ೨೨ನೇ ಸಂಧಿ

ಪಲ್ಲ ॥ ಕಾಳಗದಲಮರಾರಿಗಳ ನೆರೆ
ಸೀಳಿಬಿಟ್ಟನು ಚಾಪವಿದ್ಯಾ
ಭಾಳಲೋಚನ ಖಳನ ಭಂಗಿಸಿಬಿಟ್ಟ ಸಮರದಲಿ ॥

ಪದ ॥ ನೀಲ ಬಿದ್ದರೆ ಬಳಿಕ ಸೇನಾ
ಜಾಲ ಕವಿದುದು ಗಿರಿಕುಗುಟ್ಟುತ
ಶೈಲಶೃಂಗದಲಿಡುತಲೊಂದೇ ಸವನೆ ಶತಕೋಟಿ ॥
ಧಾಳಿಗಳ ಮಾಡುತ್ತ ದೈತ್ಯನ
ಕಾಳುಗೆಡಿಸುತ ಸುತ್ತಿ ಮುತ್ತಿತು
ಕಾಳ ರಕ್ಕಸ ಪಡೆಯ ಕೊಂದಿತು ಮೂರು ಕೋಟಿಯನು ॥ ೧ ॥

ಇಟ್ಟು ಮುರಿದರು ತೇರು ತುರಗವ
ನೊಟ್ಟಿದರು ಗಿರಿಗಳನು ಕಪಿ ಭಟ
ರಟ್ಟುಳಿಯನಾನುವರೆ ರಾವಣನೆನಿತರವನೆನಲು ॥
ಬೆಟ್ಟ ಮರ ಕಲುಗುಂಡುಗಳ ಮೊಗೆ
ದೊಟ್ಟಿ ದನುಜನ ಮುಸುಕಿದರು ಜಗ
ಜಟ್ಟಿಗಳು ರಾಘವನ ಮೋಹದ ಪಟ್ಟದಾನೆಗಳು ॥ ೨ ॥

ರಕ್ಕಸರು ಮುರಿದೋಡೆ ಕಪಿಭಟ
ರೊಕ್ಕಲಿಕ್ಕಿತು ಜರೆದು ದೈತ್ಯರ
ಜಕ್ಕುಲಿಸಿದರು ಕಲ್ಲುಗುಂಡನು ಕರೆದು ಸದೆಬಡಿದು ॥
ಮುಕ್ಕುರುಕಿದರು ಮುಸುಕಿದರು ಖಳ
ಸಿಕ್ಕಿದನು ಹಿಡಿ ಹಿಡಿಯೊ ಹಿಡಿಯೆನೆ
ರಕ್ಕಸರ ನೆರೆ ತಿಂಬ ಕೊಕ್ಕಸರಾಯ್ತು ಮರ್ಕಟರು ॥ ೩ ॥

ಕಾಣಬಾರದೆ ಖಳನ ಬಿಲುಗೈ
ದಾಣ ತಪ್ಪಿತು ಗುಂಡು ಬಡಿಗೆಯು
ಶ್ರೇಣಿಗಮರಾರಿಗಳು ಸೆಡೆದುದು ಎನುವ ಧನುವಿಲ್ಲ ॥
ಬಾಣ ನಿಷ್ಫಲವಾದುದಮರರ
ಶ್ರೇಣಿಗಳು ಕೈಮುಚ್ಚಿ ನಗೆ ಬಿ
ನ್ನಾಣವಾದುದು ದನುಜ ಕೈಗುಂದಿದನು ನಿಮಿಷದಲಿ ॥ ೪ ॥

ಮೂರುಲೋಕಕ್ಕುರುವ ಬಲ್ಲಿದ
ವೀರನೆತ್ತಲುಃ ಮರ್ಕಟಂಗಳು
ಚಾರಿವರಿವುದದೆತ್ತ ಶಿವ ಶಿವ ಭಾಗ್ಯ ಹಾರಿತಲ ॥
ವೀರ ಸಿರಿಯು ಕಟಾಕ್ಷವಾರಿಗೆ
ಸೇರುವುದು ಸನ್ಮಾರ್ಗಿಗಲ್ಲದೆ
ತೀರಿತವನಾಯುಷ್ಯ ಪರಸತಿಗಳುಪಿ ಖಳ ಕೆಟ್ಟ ॥ ೫ ॥

ಇಟ್ಟ ಕಲುಗುಂಡಿಂಗೆ ಸೆಡೆವನೆ
ದಿಟ್ಟ ರಾವಣನೆನುತ ಜೆಟ್ಟಿವ
ಹಿಟ್ಟುಗುಟ್ಟಿದ ಮಿಟ್ಟಿ ಜೋಳಿಯ ಬಿಟ್ಟ ಸಱಳಿನಲಿ ॥
ಒಟ್ಟುವುದು ಕಪಿ ನಿವಹ ಖಳತರಿ
ದೊಟ್ಟುವನು ಮರ್ಕಟರು ಪುನರಪಿ
ಬೆಟ್ಟವನು ಹೇರುವರು ಖಳ ಗುಡುಗುಟ್ಟಿ ಬೊಬ್ಬಿರಿವ ॥ ॥ ೬ ॥

ಬಾಳೆಗಳ ಬರಸಿಡಿಲು ಹೊಡೆದಂ
ತಾಳಿಗೊಂಡನು ಚಾರಿವರಿದನು
ತೂಳಿ ತುಳಿದನು ಕಡಿದು ಹೆರಹಿದ ಪಡೆಯ ಬಱಿಗೈದ ॥
ಕೋಲ ಕೋಲಾಹಲನು ಕದನದ
ಕಾಲಭೈರವನಂತೆ ಕಪಿಗಳ
ಸೀಳಿ ಬಿಸುಟನು ಹೋಳುಗಡಿದನು ಧರೆಗೆ ಕೀಲಿಸಿದ ॥ ೭ ॥

ಕೆಡಹಿದನು ಶತಬಲಿಯು ಗವಯನ
ಕಡಿದ ಮೈಂದನ ಕೊಂದ ಕಂಪನ
ಬಿಡದೆ ಸೀಳಿದ ನಳನ ತೂಳಿದ ತುಳಿವ ತಾರಕನ ॥
ಹೊಡೆದ ತಿಮಿರನ ಗಂಧಮಾದನ
ಬಡಿದ ಪನಸನ ತರಿದು ತಳಪಟ
ಹುಡಿಯುಮಾಡಿದ ಕೊಂದ ರಾವಣ ಪಡೆಯು ಕೈದಣಿಯೆ ॥ ೮ ॥

ಕಡಲ ಮೊಗೆಮೊಗೆದೀಂಟಿ ತೀರಿಸಿ
ಬಡಬನೇಳ್ವಂದದಲಿ ರಕ್ಕಸ
ಪಡೆಯ ಕೊಲುತಿರೆ ವೀರ ವಿಜಯಸ್ತಂಭ ಹನುಮಂತ ॥
ಜಡಿದು ಪುಟನೆಗದಾರುತಿರ್ದಾ
ಸಿಡಿಲ ಸಡಗರದಂತೆ ಭುಜವನು
ಹೊಡೆದು ರಾಮಂಗೆರಗಿ ರಕ್ಕಸಮಾರಿ ಹರಿತಂದ ॥ ೯ ॥

ಖಳರು ತೆಂಕಲು ಸಕಲ ಮರ್ಕಟ
ಬಲವು ಬಡಗಲು ಮೇಲೆ ದೇವರು
ಖಳಕುಲೇಶ್ವರ ಕಪಿಕುಲಾಗ್ರಣಿಗಳ ಪದಹತಿಗೆ ॥
ಇಳೆಯು ಹೊತ್ತಿಹ ಕಮಠನಳುಕಲು
ಹಳೆಯ ಹಾವದುಹೊತ್ತ ಮೇದಿನಿ
ಇಳಿಯೆ ಸೇನೆಯ ಬಗಿದು ಥಟ್ಟನೆ ಹನುಮ ಹರಿತಂದ ॥ ೧೦ ॥

ಬೀಸಿ ಬಾಲದಿ ಗೋಣ ಬಿಗಿದನು
ಸಾಸಿಗನ ಶಿರ ಡೋರಿವೋದುವು
ಹಾಸಿ ಹರಹಿದ ತೋಳನೊಬ್ಬುಳಿ ಮಾಡಿ ಬಂಧಿಸಿದ ॥
ವಾಸವಾರಿಯ ಕಣ್ಣುಗಳು ಹೊರ
ಸೂಸೆ ಬಾಯಲಿ ನೊರೆಗಳುಕ್ಕಲು
ಮೀಸೆಗಡಿವುತ್ತಿರಲು ಹಲುಗಿರಿಪೀಡಿಸಿದ ಹನುಮ ॥ ೧೧ ॥

ಕಂಡು ಬಲ್ಲಾ ಎನಲು ಪವನಜ
ತೊಂಡ ರಾವಣ ನುಡಿದನೆಲವೋ
ಕಂಡು ನಾ ಬಲ್ಲಂತೆ ನೀ ಮುನ್ನಾವ ದಿಕ್ಪಾಲ ॥
ಹಿಂಡು ಸೆರೆಯೆನಗಮರರೆಲ್ಲರು
ಗಂಡು ತೊತ್ತಿಗರೈಸೆ ನಿನ್ನನು
ಕಂಡೊಡರಿಯಲು ಕಾನ ಕೋಡಗ ಸ್ವರ್ಗದೊಳಗುಂಟೆ ॥ ೧೨ ॥

ದಡಿಗ ಕೈಗಳ ಬಿಡಿಸಲಾರದೆ
ನುಡಿವನೆಲೆ ಕಪಿವೀರ ಕೈದುವ
ಹಿಡಿದೊಡಲ್ಲದೆ ಕಾದೆನೆಂಡೆನೆ ಹನುಮನಿಂತೆಂದ ॥
ಬಿಡಿಸಿಕೋ ತೋಳುಗಳ ಕೈದುವ
ಹಿಡಿದು ಕಾದುವೆ ಬಳಿಕ ನೀನೆನೆ
ಬಿಡೆಲೊ ಕೋಡಗ ಮುಷ್ಟಿಯುದ್ಧವ ಕೊಟ್ಟೆ ನಾನೆಂದ ॥ ೧೩ ॥

ಪೊಡವಿಜೆಯ ಹೋಗಾಡಿ ರಾಘವ
ಹಿಡಿವನೈ ಬಲು ಬೊಮ್ಮಚರಿಯವ
ಕೊಡುವರಿಲ್ಲದರಿಂದ ನೀ ಹೊಸ ಬೊಮ್ಮಚರಿಯಾವೆ ॥
ಜಡೆಗಳೊಡೆಯಗೆ ನಿನಗೆ ಕಜ್ಜಟ
ಅಡವಿಯರಮನೆ ಲೆಕ್ಕ ಸರಿಯಾ
ಯ್ತೊಡೆಯ ಬಂಟರಿಗೆನುತ ರಕ್ಕಸನಳಲು ನಗೆ ನಕ್ಕಾ ॥ ೧೪ ॥

ಖಳನ ಕೈಗಳ ಕಟ್ಟ ಸಡಲಿಸು
ತೆಲವೊ ಹೊಯ್ಗಳ ಪಂಥವೆಂತುಟೊ
ಗೆಲುವವರು ಗೆಲಲೈಸೆ ತೋರೆಲೊ ಧರ್ಮಗಾಳಗವ ॥
ಗಳಹ ಬೇಡೆನಲೆನ್ನ ತೋಳ್ಗಳ
ಬಲುಹನಾನಲು ನಿನಗೆ ತೀರದು
ಖಲವಿರೋಧಿಯೆ ಭದ್ರದಂತಿಯೆ ಕೇಳು ನೀನೆನಲು ॥ ೧೫ ॥

ಹೊರಸೆ ಬೆಳ್ಳಿಯು ಗುಂಡನೆತ್ತಿದ
ಗರುವ ಬೇಡವು ನಾನು ತಿವಿದರೆ
ಅರಸಿಯೆಲುಗಳನಾಯ್ದು ಸುಡುವಂತಹುದು ನಿನ್ನವರು ॥
ಅರಿಯ ಬಹುದಿನ್ನೇನು ತಳುವೇ
ಬರಿಯ ಮಾತಿನಲೇನು ಫಲ ತಲೆ
ವೊರೆಯನಿಳುಹುವೆ ದೈವವುಂಟಾನಂಜೆ ನೋಡೆಂದ ॥ ೧೬ ॥

ಆರು ತಿವಿವರು ಮುನ್ನ ಬಗುಳೆನೆ
ಜಾರ ನೀನೆನಲಾನು ತಿವಿದರೆ
ತೀರಿತೆಲೆ ಕಪಿ ನಿನ್ನ ಸಂಸಾರಕ್ಕೆ ಕಡೆಯಹುದು ॥
ವೈರಣೆಯ ಹೊಯ್ಲೆನ್ನದೆನೆ ಕೈ
ವಾರ ಮಾಣಲಿ ಮುನ್ನ ತಿವಿಯೆನೆ
ಹೋರಲೇತಕೆ ಸಾಯಲೊಲುವರೆ ಹೊಯ್ಲ ಒಗೆಯೆಂದ ॥ ೧೭ ॥

ಚರಣಗಳ ಸಸಿನೂರಿ ತನುವನು
ಹರಹಿ ಬಾಲವ ನೆಗಹಿ ಮನದಲಿ
ಹರಿಯ ನೆನೆವುತ ಹೊಯ್ಲನಾಲಿಸಿ ಹನುಮ ನಿಂತಿರಲು ॥
ಸುರವಿದಾರಣ ಹತ್ತು ಕೈಗಳ
ತಿರುವಿ ಮಿಳಿಯಿಂದದಲಿ ಸುತ್ತಿದ
ಸುರರು ಕಂಗೆಡಲಾರುತಪ್ಪಳಿಸಿದನು ದಶಕಂಠ ॥ ೧೮ ॥

ಪವನಸುತ ಡೆಂಡಣಿಸಿ ಬಿದ್ದನು
ಶಿವ ಶಿವಾ ರಘುನಾಥ ಶರಣೆನು
ತವನಿಗೊರಗಿದನೆರಡು ಗಳಿಗೆಗೆ ಮತ್ತೆ ಚೇತರಿಸಿ ॥
ಜವದಿ ಹಸರಿಸಿಕೊಂಡನೊಯ್ಯನೆ
ಅವಯವಂಗಳ ನಿಗುಚುತಿದ್ದನು
ಭವನ ಶಕ್ತಿಗೆ ಮಿಗಿಲು ರಾವಣನೆನುತ ನಡೆತಂದ ॥ ೧೯ ॥

ಎಳೆದನಸುರನ ಕುರಿಯನೆಳೆವಂ
ತಿಳೆಗೆ ಬಗ್ಗಿಸಿ ಹತ್ತು ತಲೆಗಳ
ಸೆಳೆದು ನೆತ್ತಿಗೆ ತೆಗೆದು ತುರುಬನು ಕಟ್ಟಿ ಹಿಡಿದೊತ್ತಿ ॥
ಬಲವದುರಿ ಕಲಿ ಕಾಲಭೈರವ
ಖಳಕುಲಾಂತಕನವನಿಯಲಿ ಕರ
ತಳವ ನೀಡಲು ಹದುಳವೆಲೆ ಹಾದರಿಗ ನಿಲ್ಲೆಂದ ॥ ೨೦ ॥

ಅಸುರನೆದೆಯಲಿ ಢಕ್ಕೆಗುಟ್ಟಿತು
ಉಸಿರು ಗುರುಗುರಿಸಿತ್ತು ನೆತ್ತಿಯ
ಬೆಸುಗೆ ಬಿಡೆ ಹಿಡಿಹಿಡಿದು ನಡುಬೆನ್ನಿಂಗೆ ಕೈಯೊತ್ತಿ ॥
ಹೊಸತು ತೋರುವೆನಾಂತುಕೊಳ್ಳೆನು
ತಸಮಸಾಹಸಿ ತಿವಿದರಮುವಾ
ದೆಸೆಗೆ ಚೆಲ್ಲಿತು ಕರುಳು ಪಯ್ಸರವೋಗಿ ಖಳ ಕೆಡೆದ ॥ ೨೧ ॥

ಧರೆಗೆ ಮದಕರಿ ಮತ್ತೆ ಮೆಟ್ಟಿದ
ಹಿರಿಯ ತೊಂಡೆಯ ಹಣ್ಣಿನಂದದಿ
ಕರುಳನೋಕರಿಸಿದನು ಕೈಸನ್ನೆಯಲಿ ಸಾರಥಿಗೆ ॥
ಇರಿಸಿಕೊಳ್ಳದೆ ಕೂಡೆ ಕಳುಹುವ
ದರಸಿ ಮಂಡೋದರಿಯ ಬೆನ್ನಲಿ
ಧರಣಿಜೆಯ ನೀ ಹೊತ್ತು ತಳುವದಿರೆನುತ ಮೈಮರೆದ ॥ ೨೨ ॥

ಕೆಟ್ಟಿ ಹನುಮಾಯಣವಿದಾಯಿತು
ಮುಟ್ಟಿ ರಾಮಾಯಣದ ಕಥೆಗಳ
ಬಟ್ಟೆದಪ್ಪಿತು ಮಾರಿಯಾಯ್ತೆನುತಣುವನುದಕವನು ॥
ಥಟ್ಟನಸುರನ ಬಾಯುಗೆರೆದನು
ನಿಟ್ಟುಸಿರನಾರೈದು ಮುಸುಡನು
ಮುಟ್ಟಿ ನೇವರಿಸಿದರೆ ಗಳಿಗೆಗೆ ದನುಜ ಮೈಮುರಿದ ॥ ೨೩ ॥

ನೊಂದ ಹುಲಿಯಂತಸುರನಾ ಹರಿ
ನಂದನನ ಹೊಗಳಿದನು ಭಲರೇ
ಹಿಂದೆ ರಣಕೆನ್ನೊಡನೆ ನಿಲುವವರಿಲ್ಲ ಜಗದೊಳಗೆ ॥
ಇಂದು ಕಂಡೆನು ನಿನ್ನನಹುದೋ
ಹಿಂದಣಾಂತಲ್ಲಾಂತುಕೊಳ್ಳಾ
ಎಂದು ರಾವಣನೆದ್ದು ಕೋಪದಿ ತಿವಿದನನಿಲಜನ ॥ ೨೪ ॥

ಧರೆಗೆ ತಿರ್‍ರನೆ ತಿರುಗಿಬಿದ್ದನು
ಹೊರಳಿ ಕೈಕಾಲೊದೆದುಕೊಂಡನು
ಕರೆದೊಡರಿಯನು ಮೂರ್ಛೆಯಿಂದೊರಗಿದನು ಹನುಮಂತ ॥
ತರಣಿಸುತ ನೆರೆಬಿದ್ದ ನೀಲನ
ಹರಣವಳಿದುದು ಹನುಮನೊರಗಿದ
ಧರೆಗೆ ಧುರಕಿನ್ನಾರುಬಹರೆನುತಿರ್ದ ದಶಕಂಠ ॥ ೨೫ ॥

ಅಸುರರಾರಿತು ಕಪಿಗಳೊರಗಿತು
ಬಿಸುರುಹಾಕ್ಷನು ಮನದಿ ಚಿಂತಿಸೆ
ಹೆಸರ ವೀರರು ಬಿದ್ದರಿಂದಿನ ಸಮರವತಿ ಬಿರಿಸು ॥
ಅಸುರ ಗೆಲಿದನು ಭಾಪು ದೈವವೆ
ಹಸಿಯು ಹಾದರಿಗಂಗೆ ದೈವದ
ಎಸಕ ದೊಡ್ಡಿತು ಶಿವ ಶಿವಾಯೆಂದಮರರಳಲಿದರು ॥ ೨೬ ॥

ದನುಜನೀಪರಿ ಮೂದಲಿಸುತಿರೆ
ಕನಲಿ ಲಕ್ಷ್ಮಣ ಬಂದು ತಡೆದನು
ಧನುವನೊದರಿಸಿ ದನುಜ ನೀ ಹೆಕ್ಕಳಿಸದಿರುಯೆನುತ ॥
ಅನುವರಾಂತವನೈದೆ ಕಂಡಾ
ದನುಜ ಲಕ್ಷ್ಮಣಗೆಂದ ಅರಸಿಯು
ನೆನಗೆ ತೆತ್ತವ ಬರಲಿ ನೀ ಹೋಗೆಂದ ಬೇಗದಲಿ ॥ ೨೭ ॥

ಎಲವೊ ರಕ್ಕಸ ಬಳ್ಕುಗೆಡೆಯದಿ
ರುಳಿದುಹೋದರೆ ನೀನು ವೀರನು
ಹೊಲೆಯ ಕಳ್ಳುಂಡಂತೆ ಬಗುಳಿದರೇನು ಫಲವಹುದು ॥
ಫಲವ ನೋಡುವೊಡಾಂತು ಕೊಳ್ಳೈ
ಗಳಹು ನೀ ಬಳಿಕೆನುತ ಲಕ್ಷ್ಮಣ
ಹಿಳುಕು ಮೊನೆಗಳ ತೆತ್ತಿಸಿದಪ್ಪೋಲೆಚ್ಚ ರಾವಣನ ॥ ೨೮ ॥

ಕಡಿದ ಲಕ್ಷ್ಮಣನೆಚ್ಚ ಬಾಣವ
ನುಡಿಗೆ ತೆರಹಿಲ್ಲೇನ ಹೇಳುವೆ
ತೊಡಚಿ ಸುರಿದರೆ ಕಡಿದ ರಕ್ಕಸನೊಡನೆ ನೃಪ ಸುರಿದ ॥
ಬಿಡದೆ ರಕ್ಕಸನೆಸಲು ಲಕ್ಷ್ಮಣ
ಕಡಿದ ದನುಜನ ಹತ್ತು ಚಾಪವ
ಹಿಡಿದ ಹತ್ತನು ಮತ್ತೆ ಕಡಿದನು ಕಡುಗಿ ಸೌಮಿತ್ರಿ ॥ ೨೯ ॥

ಹಿಡಿದ ತೆರಹಿನೊಳೆಂಟು ಶರದಲಿ
ಕಡಿದ ಸೂತನ ತೇರು ತುರಗವ
ನೊಡನೆ ಪಡಿ ರಥವೇರೆ ತೇಜಿಯ ಕಾಲ ತುಂಡಿಸಿದ ॥
ಬಿಡದೆ ರಥವೇರ್‍ವೈದಸೀ ಪರಿ
ಕಡಿದು ಬಿಟ್ಟರೆ ದನುಜ ಮನದಲಿ
ಕಡುಗಿ ಮಂತ್ರಾಸ್ತ್ರವನು ತೊಡಚಿದನಾಹವಾಗ್ರದಲಿ ॥ ೩೦ ॥

ಕರಿಯ ಬಾಣದಲೆಚ್ಚ ರಕ್ಕಸ
ಹರಿಯ ಬಾಣದಿ ಗೆಲಿದ ಲಕ್ಷ್ಮಣ
ಉರಿಯ ಬಾಣಕೆ ವರುಣ ಬಾಣವ ಗಿರಿಗೆ ಕುಲಿಶವನು ॥
ಅರಸನೆಚ್ಚಾ ಸರ್ಪ ಬಾಣವ
ಗರುಡ ಬಾಣದಿ ತಮಕೆ ತರಣಿಯ
ಹುರುಳುಗೆಟ್ಟನು ದನುಜ ಮಾಯಾಸ್ತ್ರಗಳ ತುಡುಕಿದನು ॥ ೩೧ ॥

ಆಲಸವು ನಿದ್ರೆಗಳು ಕವಿದುವು
ಮೇಲುಗಾಳಗವೆಂದು ಖಳರು ವ
ರಾಳಿಗುಟ್ಟಿತು ಹುಟ್ಟಿದುವು ಕುರಿ ಕೋಣ ಕಾಟಿಗಳು ॥
ತೂಳಿದುವು ಫಣಿ ವಾಯಸಂಗಳು
ಗೋಳುಗುಟ್ಟಿತು ಸೇನೆ ಕತ್ತಲೆ
ಮೇಲೆ ಕವಿದುದು ಬೀಸಿದನು ಖಳನಿಂದ್ರಜಾಲವನು ॥ ೩೨ ॥

ಅಳವುಗೆಡುತಿರೆ ಲಕ್ಷ್ಮಣಾಂಕಗೆ
ತಿಳಿದು ವಿಭೀಷಣ ಬಂದು ಹೇಳಿದ
ಚತುರ್ಕಲಿ ಶಿತಿಕಂಠ ಬಾಣಕೆ ಮಾಯೆ ಹರಿಗೆಂದು ॥
ಖಳನು ಕಂಡನು ಹಗೆಗೆ ಮರ್ಮವ
ತಿಳುಹುವುದನಾ ವೀರ ಲಕ್ಷ್ಮಣ
ಖಳನ ಮಾಯವ ಗೆಲಿದನಾ ಶಿತಿಕಂಠ ಬಾಣದಲಿ ॥ ೩೩ ॥

ದನುಜ ತಮ್ಮನ ಕಂಡು ಮನದಲಿ
ಕನಲಿ ಮಮ್ಮಲ ಮರುಗಿ ಸುಯ್ದನು
ದನುಜಕುಲಕಿವ ಕೊಡಲಿಗಾವಾದನು ಮಹಾದೇವ ॥
ನೆನೆಸಿಕೊಡುವನು ಹಗೆಗೆ ಮರ್ಮವ
ನನುಜನೀತನ ಕೊಲುವೆನೆನುತನೆ
ತನಗೆ ಮಯನಿತ್ತುಗ್ರ ಶಕ್ತಿಯ ಕೊಂಡು ತಿರುವಿಟ್ಟ ॥ ೩೪ ॥

ಎಸಲು ಬಾಣಾವಳಿಯು ಕುರುಕಿತು
ಮುಸುಕಿ ಮಂತ್ರಾಸ್ತ್ರಗಳ ನುಂಗಿತು
ದೆಸೆಯ ಮುತ್ತಿತು ಹೊಗೆ ಚಡಾಳಿಸಿ ಹಬ್ಬಿತಂಬರವ ॥
ಕುಸುರಿ ಕಿಡಿಗಳು ಭುಗಿಲುಭುಗಿಲೆನು
ತುಸುರಿಗುಬ್ಬಸ ಹುಟ್ಟಿ ಕಂಡವ
ರಸುಗಳುಡುಗಿದುವಾರು ನಿಲುವರು ಶಕ್ತಿಯಿದಿರಿನಲಿ ॥ ೩೫ ॥

ಶರಣುವೊಕ್ಕರ ಸಲಹದಾತನ
ಧುರದಲಾಂತನನಿರಿಯದಾತನ
ಹರಸಿ ಬೇಡಿದೊಡೀಯದನ ಧೃತಿಗೆಡುವ ಭೂಪತಿಯ ॥
ಧರಣಿ ಹೊರುವುದೆ ಹುಟ್ಟಿದಾತಗೆ
ಮರಣ ತಪ್ಪದು ಕಡೆಗೆ ಭೃತ್ಯನ
ಹೊರೆಯ ಬೇಕೆನುತವನ ನೂಕಿಯೆ ಮುಂದೆ ನಿಂದಿರ್ದ ॥ ೩೬ ॥

ಜಯ ಜನಾರ್ದನ ರಾಯ ರಘುಕುಲ
ಜಯ ಜಗನ್ಮಯ ಪರಮ ಪಾವನ
ಜಯ ಖಳಾಂತಕ ಕಮಲಲೋಚನ ಕಾಯೊ ಕಾಯೆನುತ ॥
ಭಯದಲಮರರು ಬಾಯಬಿಡುತಿರೆ
ಮಯನ ಮಾಯಾಶಕ್ತಿ ರಾಮ
ಪ್ರಿಯನ ಉಸುಗುಚ್ಚಳಿಸೆ ಬಿದ್ದನು ರಾಮರಾಮೆನುತ ॥ ೩೭ ॥

ಕೆಡೆದ ರವಿಸುತ ನೀಲ ಲಕ್ಷ್ಮಣ
ಕೆಡೆದ ಹನುಮನು ಹಲವು ಸುಭಟರು
ಕೆಡೆದೊಡೇಳುವುದುಂಟೆ ನೀ ಕೆಡಬೇಡ ಹೋಗೆಲವೊ ॥
ಪೊಡವಿ ನಗದೇ ಕಾದಿ ಸತ್ತರೆ
ಬಿಡೆನು ಕೊಲ್ಲದೆ ಧುರದೊಳಾಂತರೆ
ಜಡೆಯ ಕಟ್ಟನುವಾಗು ರಾಘವಯೆಂದ ದಶಕಂಠ ॥ ೩೮ ॥

ಎನಲು ಕನಲಿದನವನಿವಲ್ಲಭ
ಧನುವ ಕೊಂಡನು ತಿರುವ ತೊಡಿಸಿದ
ಮೊನೆಯ ಹೊಗರಿನ ಕೋಲ ತೂಗುತ್ತೆಂದ ರಘುರಾಯ ॥
ದನುಜ ಸಾವುದಕಾವೊಡಂಬ
ಟ್ಟನುವರಾಂತಕೆ ಬಂದೆವಲ್ಲದೆ
ದನುಜರೊಳು ಸಲೆ ಕಾದಿ ಮನುಜರು ಗೆಲುವರೇಯೆಂದ ॥ ೩೯ ॥

ಕಾನ ಕೋಡಗ ಕರಡಿ ಮುಸುಗಳ
ಸೇನೆ ಧಾಳಿಯನಿಟ್ಟು ಲಂಕೆಗೆ
ಜಾನಕಿಯ ಸೆರೆಬಿಡಿಸದುಳಿವುದೆ ಶಿವ ಮಹಾದೇವ ॥
ನೀನು ಬಾಲಿಯ ಕೊಂದ ವೀರವ
ನಾನು ಕೇಳಿದು ಬಲ್ಲೆ ಬದುಕಿರೆ
ಮಾನಿನಿಯರನು ಮತ್ತೆ ಗಳಿಸಲು ಬಹುದು ಹೋಗೆಂದ ॥ ೪೦ ॥

ಒಳ್ಳೆ ಹೆಬ್ಬಾವಹುದೆ ರಾತ್ರಿಯ
ಕಳ್ಳ ವೀರನೆ ಗಡ್ಡ ಬೆಳೆದರೆ
ಭಲ್ಲುಕನು ಪಂಡಿತನೆ ಕುಕ್ಕುರ ಕೊಬ್ಬೆ ಹುಲಿಯಹುದೆ ॥
ಉಳ್ಳಿಯೆಲೆ ಸೌಗಂಧವಪ್ಪುದೆ
ಮುಳ್ಳು ಕೈದುವೆ ಹರಿವ ನಾಯ್ಗಳ
ಕೊಲ್ಲದಿದ್ದರೆ ಕೊರತೆ ಕೊಂದರೆ ಪಾಪ ಬಹುದೆಂದ ॥ ೪೧ ॥

ಅಡವಿಯರಮನೆ ಶೈಲ ಚಾವಡಿ
ಜಡೆಯ ಮುಡಿಯೇ ಮಕುಟ ಭಸ್ಮವು
ತುಡಿಗೆ ಭೋಜನ ಕಂದ ಮೂಲವು ನೊಪ್ಪು ಸೆಳೆಮಂಚ ॥
ಮಡದಿಯಿಲ್ಲದೆ ಬೊಮ್ಮಚರಿಯವು
ಉಡಿಗೆ ನಾರಿನ ದಟ್ಟಿಯಲ್ತೆ ತ
ಮ್ಮಡಿಗೆ ಕಾಳಗವೇಕೆ ನಿನಗೆಂದಮರರಿಪು ಜರೆದ ॥ ೪೨ ॥

ಮರುಳೆ ಸುಭಟಾಂಗದಲಿ ನೀನತಿ
ಖರೆಯನೈ ಸಂದೇಹವೇ ಶಿವ
ಗೆರೆಯ ದಾಂಟಲು ನೆರೆಯೆ ಮಾತಿನ ವೀರವತಿ ಚಿರಿಸು ॥
ಸೊರಹು ನಿನ್ನಯ ಹರಣವಳಿಯದೆ
ಮರುಳುಗೆಡದರೆ ನೀನು ವೀರನೆ
ಸರಳ ಮೊನೆಯಲಿ ಮಾತನಾಡುವಯೆಂದ ರಘುರಾಯ ॥ ೪೩ ॥

ಸರಳು ನಿಮ್ಮನರಣ್ಯನೆಂಬನ
ಕರುಳ ಸವಿಯನು ಕಂಡು ನಮ್ಮನು
ನರರ ಮಾಂಸವ ಬೇಡಿ ಬಯಸುತಲಿಹುದು ತವಕದಲಿ ॥
ಆರರೆ ರಾಘವ ಲೇಸುಮಾಡಿದೆ
ಧುರದಿ ನೀ ಬಂದೆನ್ನ ಸರಳಿಗೆ
ಹಿರಿದು ಹಬ್ಬವ ಮಾಡಿದೈ ಎನುತೆಚ್ಚ ರಾಘವನ ॥ ೪೪ ॥

ಹತ್ತು ಬಿಲ್ಲಲಿ ಸರಳ ಸುರಿವನ
ದೆತ್ತ ನಭ ದೆಸೆಯೆತ್ತ ರಾಘವ
ನೆಕ್ತಲಂಬರಮಣಿಯ ಪುಸುಕಿತು ಬಾಣಗತ್ತಲದು ॥
ಮುಕ್ತಿ ಸುರಿದನು ಸರಳನಮಮಾ
ಕತ್ತಲೆಯ ಮೊತ್ತಗಳು ರವಿಯನು
ಮುಕ್ತಿದಂತಾಯ್ತೊಂದು ನಿಮಿಷದಲೇನ ಬಣ್ಣಿಸುವೆ ॥ ೪೫ ॥

ತರುಬಿ ಕಾದಿದರೆರಡು ಗಳಿಗೆಗೆ
ತರಿದ ರಘುಪತಿ ಹತ್ತು ಕೋಟಿಯ
ಮುರಿದು ಮುತ್ತಿದ ಬಲವ ಸವರಿದ ಮುಖ್ಯ ನಾಯಕರ ॥
ಒರಗಿಸಿದನೊಂಬತ್ತು ಕೋಟಿಯ
ಕುರುಹಿನಸುರರ ಮೂರು ಕೋಟಿಯ
ಹರಿಬ ಕಂಡನು ಮುರಿದು ಬಲವನು ಬಯಲುಮಾಡಿದನು ॥ ೪೬ ॥

ಕಣದ ಮಧ್ಯದಿ ಕೋಟಿ ರಕ್ಕಸ
ಗಣವು ಬಿದ್ದರೆ ಕುರುಹಿಗೋಸುಗ
ಘಣಲುಗುಟ್ಟುವುದೊಮ್ಮೆ ರಾಮನ ಬಿಲ್ಲ ಜಯಘಂಟೆ ॥
ಘಣಿಲು ಘಣಘಣ ಘಣಿಲು ಘಣಘಣ
ಘಣಿಲು ಘಣಿಲೆಂದೆರಡು ಜಾವದ
ಲೆಣಿಸಲರಿಯೆನು ರಾಮಚಂದ್ರನು ಕೊಂದ ಪಡೆಯೆಸಿತೊ ॥ ೪೭ ॥

ಹೇರಿದನು ಖಳರಸುವನಂತಕ
ನೂರಿಗೆಲೆ ನರಕಕ್ಕೆ ಮಿಕ್ಕರ
ಸೂರೆಯಿತ್ತನು ಭೂತಸಂತತಿ ತಿಂದು ಬೇಸತ್ತು ॥
ಸಾರಿದರು ತೆರಪಿಲ್ಲವೆಂದರೆ
ಮೀರಿ ಜವಗುಂದಿದನು ಬೊಮ್ಮನ
ದೂರಿದನು ಹೊರಗೇರಿ ಕಟ್ಟಿಸು ಪುರವು ನೆರೆಯದಿರೆ ॥ ೪೮ ॥

ಅರರೆ ಮಾರಿಗೆ ಮಸಣಿಗುಬ್ಬಸ
ವರುಚಿಯಂತಕಗಾಯ್ತು ಪಥ್ಯವು
ಅರಗಲಾರದೆ ಮೃತ್ಯು ದೇವಿಗೆ ಮೊಳನುಗಳು ಮೊಳೆಯೆ ॥
ಅರುಣ ಜಲದರವಟ್ಟಿಗೆಯ ತನಿ
ಗರುಳ ಸೇವಿಗೆಯಡಗು ಬೋನದಿ
ಮರುಳು ಪಡೆಗಳು ಉಂಡು ಹರಸಿದವಂದು ರಾಘವನ ॥ ೪೯ ॥

ನಡುಗಿ ಹಿಮದಲಿ ಮಿಂದು ಪಾವಕ
ನೊಡಲ ತುಂಬಿಸಿ ಜಪತಪಂಗಳ
ಜಡಿತೆಯಲಿ ಬೇಸತ್ತು ಸ್ವರ್ಗದ ಸತಿಯುರವಸರವ ॥
ಪಡೆಯಲರಿಯರು ಜಪತಪಂಗಳ
ಗೊಡವೆಯಿಲ್ಲದ ಪಾಪಿ ದೈತ್ಯರು
ಮಡಿದು ಸ್ವರ್ಗವ ಸೂರೆಗೊಂಡರು ರಾಮ ಬಾಣದಲಿ ॥ ೫೦ ॥

ಬೀಯವಾದುದು ಬಿಲ್ಲು ಕೈದುಗ
ಳಾಯ ಬೀತುದು ರಥವು ಸವೆದುದು
ಮಾಯಗಾರನ ಮಕುಟ ಕಚ್ಚುಟ ಶಕಟ ಸರಿಯಾಯ್ತು ॥
ಆಯೆನಲು ದೇವಾಳಿ ರಕ್ಕಸ
ರಾಯ ಭೈರವನಾದನಹಹಾ
ಕೈಯ ಮುಚ್ಚಿದನೇನ ಹೇಳುವೆ ರಹಣವಾಯ್ತೆಂದು ॥ ೫೧ ॥

ಎಲವೊ ನೀ ದಿಟ ವೀರ ತಪ್ಪದು
ಹಲರ ಕೆಡಹಿದೆ ಕಾದಿ ಬಳಲಿದೆ
ತೊಲಗು ನಷ್ಟಾಂಬರನ ಕೊಲ್ಲೆನಕೀರ್ತಿ ಬಹುದೆಂದು ॥
ಬಳಿದು ಬಿಸುಟನು ಕಣೆಯ ನಿನ್ನೀ
ತಲೆಯನೊಡ್ಡಿಸಿ ನಾಳೆ ಬಂದರೆ
ಕಳನ ಮಧ್ಯದಿ ಕೊಲುವೆನೀಶ್ವರ ಮೆಚ್ಚಿ ಹೋಗೆಂದ ೫೨ ॥

ಸರಿಯುತಿರಲಡಹಾಯ್ದು ಪವನಜ
ನರಸನೊಳು ತೊಡರ್ದಾಗ ಬಂಟನು
ಧುರಕೆ ಕಲೆಯಲು ಬಾರದೆಂದಾನಿರ್ದನಿನ್ನೈವರ ॥
ಸರಿಯದಿರು ಫಡ ಹೊಯ್ಲನಾನೆಲೆ
ತಿರುಕುಳಿಯೆ ನೀ ಹೋಗಬೇಡೆನೆ
ಮರುತನಂದನನಂಗವಣೆಗಾ ರಾಮನಿಂತೆಂದ ॥ ೫೩ ॥

ಜಲವ ಹೊಕ್ಕನ ಹುತ್ತ ಸಾರ್ದನ
ಅಲಗ ಬಿಟ್ಟನ ಹುಲ್ಲು ಕಡಿದನ
ಸಲೆ ದಿಗಂಬರ ಮುಕ್ತಕೇಶಿಯ ಬೆನ್ನ ತೆತ್ತವನ ॥
ಕೊಲಲು ನಗುವುದು ಲೋಕ ಹನುಮಾ
ಖಳನ ಬಿಡು ಬಿಡು ಹೋಗಲೆಂದೆನೆ
ಭಳಿರೆ ವೀರರ ವೀರ ಭಾಪೆಂದುಲಿದುದಮರಗಣ ॥ ೫೪ ॥

ವಾಸವಾರಿಯ ಮುಕುಟ ಹೋದುವು
ಹೇಸಿಕೆಯ ಹೆಣ್ಣಾದನಾ ಖಳ
ಘಾಸಿಯಾದನು ದೈತ್ಯ ಲಜ್ಜೆಯ ನೀಗಿ ಹುಲುವಾಗಿ ॥
ಲೇಸುಲೇಸಾಯ್ತು ಕಟ ಮಾಟ
ಕ್ಲೇಸು ಘನವಲ್ಲೆಂದು ಕೆಲರಪ
ಹಾಸ ಮಾಡಲು ನಾಚಿ ಲಂಕೆಯ ಹೊಕ್ಕ ರಾವಣನು ॥ ೫೫ ॥

ಇತ್ತ ಹರಿ ಸುಗ್ರೀವ ಬಿದ್ದರೆ
ಚಿತ್ತದಲಿ ಕರ ನೊಂದು ಸುಯ್ದನು
ಮತ್ತೆ ನೀಲನ ಮೂಗಿನುಸುರನು ಬೆರಳಲಾರಯ್ದು ॥
ಸತ್ವಗುಂದಿದನಂದು ರಾಘವ
ಮತ್ತೆ ಮೂಕನದಾಗಿ ತಮ್ಮನ
ಹತ್ತೆ ಬಂದನು ಕಂಡು ಧೊಪ್ಪನೆ ಕೆಡೆದು ಹೊರಳಿದನು ॥ ೫೬ ॥

ಸಿರಿಯನೊಲ್ಲದೆ ಪುರವನೊಲ್ಲದೆ
ಸರಸಿಜಾನನೆ ಸತಿಯನೊಲ್ಲದೆ
ಕರಹಿತವೆ ಸೌಮಿತ್ರಿಯೆಂಬಾ ತಾಯ ನೀನಗಲಿ ॥
ನೆರವು ಬೇಕೆಂದಡವಿಗೈದಿದೆ
ತರುಣ ಹೇಳಲಿ ತಮ್ಮ ನಿನ್ನನು
ಘರಸಿ ಹಡದಳೆ ಖಳನ ಶಕ್ತಿಗೆ ಶಿವ ಶಿವಾಯೆಂದ ॥ ೫೭ ॥

ಸಲಹುವೊಡೆ ತಾಯಾಗಿ ರಕ್ಷಿಪೆ
ಬಲುಹಿನಲಿ ಪತಿಯಾಗಿ ನೀನಿಹೆ
ಹಲವು ಮಾರ್ಗವ ನೇಮಿಸುವೆ ಗುರುವಾಗಿ ನೀನೆನಗೆ ॥
ಛಲಕೆ ನೀ ಕಲಿವೀರನೆನಿಸುವೆ
ಬಲದ ಭುಜವಹೆ ರಣಕೆ ಹೊಕ್ಕರೆ
ಹಲವು ಮಾತೇನೆನ್ನ ಗೋಣನು ಕೊಯ್ದೆ ನೀನೆಂದ ॥ ೫೮ ॥

ತಾಯಿ ತಂದೆಯುಗಲ್ದ ದುಃಖವು
ಜಾಯೆ ಸೆರೆಯೆಂಬೊಂದು ಶೋಕವು
ಮಾಯೆಯಿಂದವೆ ಸತ್ತ ಸಂಕಟವೆಲ್ಲವನು ಮರೆದು ॥
ಕಾಯವನು ಹಿಡಿದಿರ್ದ ರಾಮನ
ಬಾಯಲಿಕ್ಕಿದೆ ಮಣ್ಣನಕಟಾ
ತಾಯಿಗಳಿಗೇನೆಂಬೆ ನಾನೆಂದೆನುತ ಮರುಗಿದನು ॥ ೫೯ ॥

ವಾನರರ ಕರಡಿಗಳ ಕೊಂಡಿ
ನ್ನೇನು ಫಲ ರಾವಣನ ತಲೆಗಡಿ
ದೇನು ಲಂಕೆಯನೊಯ್ದು ನೀರೊಳಗದ್ದಿ ಫಲವೇನು ॥
ಜಾನಕಿಯ ತಂದೇನು ತಮ್ಮಾ
ಹಾನಿ ನಿನಗಾಯ್ತಾನು ಬದುಕಿದೊ
ಡೇನು ಸುಡಲೀ ಬದುಕು ಹರಣವ ಬಿಡುವೆ ನಿನ್ನೊಡನೆ ॥ ೬೦ ॥

ನೀನು ಮಾಡುವುದೇನು ತಮ್ಮಾ
ನಾನು ಪೂರ್ವದೊಳಾರ ಸೋದರ
ಹಾನಿಗೈದೆನೊ ಶಿವ ಶಿವಾ ಅಸುಗಾಯದಾದೆನೆಲ ॥
ಕಾನನಕೆ ಬರಲೇಕೆ ರಕ್ಕಸ
ಜಾನಕಿಯ ಸೆರೆವೊಯ್ಯಲೇತಕೆ
ಭಾನುಕುಲಜನ ಬದುಕು ನಗೆಗೇಡಾಯ್ತಲಾಯೆಂದ ॥ ೬೧ ॥

ತರುಣ ಪರಿಭವವಾಯಲ್ತಾ ನೀ
ಮರಳಿ ಹೋಗಂಗದನೆ ಬಾಲಿಯು
ನೆರೆಗೆ ಹೋದನು ತಮ್ಮ ನಿನ್ನಯ ಪುರವನಾಯಕವು ॥
ನಿರಪರಾಧಿಯ ಕೊಲೆಯು ತನಗಿ
ನ್ನಿರದೆ ಅಂಗೈಮೇಲೆ ಮೊಳೆತುದು
ಹರಹರಾ ಕಡು ಪಾಪಿ ತಾನೆಂದಳಲಿದನು ರಾಮ ॥ ೬೨ ॥

ಸತಿಗೆ ನಾ ಮರುಳಾಗಿ ಖಳರಿಗೆ
ಹಿತದ ತಮ್ಮನ ತೆತ್ತೆನೆನಗತಿ
ಹಿತವನಾಗಿಯೆ ಬಿದ್ದ ಸುಗ್ರೀವಾಂಕ ರಣದೊಳಗೆ ॥
ಪತಿಯ ಬೆಂಬಳಿಯುಳಿದ ಸೀಲನು
ಕ್ಷಿತಿಗೆ ಬಾಹಿರನಾದೆನೈ ಜೀ
ವಿತವ ಹಿಡಿದಿರಲಾರೆನೆನುತವೆ ರಾಮ ಮೈಮರೆದ ॥ ೬೩ ॥

ಅರಸು ಮೂರ್ಛೆಗೆ ಸಲಲು ವಿಭಿಷಣ
ಹಿರಿದು ತನ್ನೊಳಗಳಲುತಿರಲಾ
ಸುರಿವ ಕಂಬನಿಯಿಂದ ಜಾಂಬವನಿರದೆ ಬಾಯ್ಬಿಡುತ ॥
ಭರದಲಾ ಹನುಮಂತ ದೇವನ
ಕರೆದು ಬೇಗನೆ ಮದ್ದು ತಾಯೆನೆ
ಹರಿದುಬಂದನು ಹನುಮ ಸಂತೈಸಿದನು ರಘುಪತಿಯ ॥ ೬೪ ॥

ಅರಸ ಚಿಂತಿಸಲೇಕೆ ವರ ಹಿಮ
ಗಿರಿಯಲೌಷಧವುಂಟು ಭೂಪನ
ಹರಣಬಾರದೆಯಿದ್ದೊಡಂತಕ ಕಾಲಮೃತ್ಯುಗಳ ॥
ಉರವ ತಿವಿವೆನು ತಂದುಕೊಡುವೆನು
ಹರಿಯೆ ನೋಡುವುದೇನು ಭೃತ್ಯನ
ಪರಿಯದೆನುತಾಕ್ಷಣಕೆ ನೆಗೆದನು ಔಷಧಿಯ ತರಲು ॥ ೬೫ ॥

ಭರದಿ ಸಾಗಿಸಿ ತಂದ ಸಸ್ಯವ
ಮರುತನಂದನ ಕಿತ್ತುತೆಗೆವುತ
ಪರಮಮೂಲಿಕೆ ರಸವ ಲಕ್ಷ್ಮಣನೇರಿಗೊಳಗೆರೆಯೆ ॥
ಹರಣ ಚೇತರಿಸಿತ್ತು ಕಂಗಳ
ತೆರೆದು ಮೈಮುರಿದೆದ್ದ ತಮ್ಮನ
ಹರುಷ ಮಾರುತಿ ರಾಮನಪ್ಪಿದ ಹೊಗಳುತನಿಲಜನ ॥ ೬೬ ॥

ಎನ್ನ ವಲ್ಲಭನೆದ್ದನೆದ್ದನು
ಎನ್ನ ರತುನದ ಬೊಂಬೆಯೆದ್ದನು
ಎನ್ನ ಹೊನ್ನಂದಣದ ಮಾಣಿಕನೆದ್ದನೈ ಭಲರೆ ॥
ಇನ್ನು ನಾ ಬದುಕಿದೆ ವಿಭೀಷಣ
ಇನ್ನು ಸುಖಿ ತಾನೆಂದ ಹರಿ ಸಂ
ಪನ್ನ ಸದುಗುಣಿ ಮಾಯಮಾರುತಿ ನೋಡಿ ಮನದಣಿಯೆ ॥ ೬೭ ॥

ಭಾಳದಲಿ ಭಾಳವನು ನರಹರಿ
ಮೇಳವಿಸಿದನು ಕದಪ ಕದಪಿಗೆ
ಲೀಲೆಯಲಿ ನಗುತಪ್ಪುತವೆ ನಲಿದಾಡಿ ಮುದ್ದಾಡಿ ॥
ಕೇಳುತಿರೆ ವೇದನೆಯ ಲಕ್ಷ್ಮಣ
ಹೇಳಿದನು ನೂರಾರು ನಿನಗೆನ
ಗೇಳು ಮಡಿಯೆನೆ ರಘುಕುಲೋತ್ತಮ ಸಂತಸಂಬಟ್ಟ ॥ ೬೮ ॥

ಅಸುವ ಸಂತೈಸಿತ್ತು ಶಕ್ತಿಯ
ಮಸೆಯ ಮಾಣಿಸುತೊಡನೆ ದೇಹವು
ಮಿಸುನಿಯಂದದಿ ಪುಟವನಿಟ್ಟುದು ಕೆಡೆದ ಮರ್ಕಟರ ॥
ಹೊಸತು ಮಾಡಿತು ಮದ್ದು ಮಾರಿಯ
ನಸುರರತ್ತಲು ಕಳುಹೆ ರಾಮನ
ಹೆಸರ ಕೊಂಡವರಿಂಗೆ ಕೇಡಿಲ್ಲೆಂದುದಮರಗಣ ॥ ೬೯ ॥

ಮದ್ದಿನನಿಲನ ಸುಳುಹಿನಲಿ ಪಡೆ
ಯೆದ್ದು ಬೊಬ್ಬಿಡೆ ಹರುಷಗಡಲೊಳ
ಗಿದ್ದ ರಾಘವ ಕುಸುಮ ವೃಷ್ಟಿಯ ಸುರಿದನಮರೇಂದ್ರ ॥
ಹದ್ದುಮೀರಿದ ಹಬ್ಬವಾಯಿತು
ಹೊದ್ದಿದರ ಹೊರೆವಾತ ಸುಖದಿಂ
ದಿದ್ದನಿಲ್ಲಿಗೆ ಸಂಧಿ ಮುಗಿದುದು ಸಂಜೆ ರಂಜಿಸಿತು ॥ ೭೦ ॥

---

## ೨೩ನೇ ಸಂಧಿ

ಪಲ್ಲ ॥ ತಾಳಭಂಜನನೊಡನೆ ಕದನವ
ತಾಳಿದರೆ ಗೆಲುವಿಲ್ಲ ಸತಿಯನು
ಬೀಳುಗೊಡುವುದೆ ಲೇಸು ಲಂಕಾಪತಿಯೆ ಬೇಗದಲಿ ॥

ಪದ ॥ ಮಕುಟಭಂಗವ ಪಡೆದು ರಾವಣ
ವಿಕಳನಾಗಿರೆ ಮಾಲ್ಯವಂತನು
ಸುಕರದಿಂದವೆ ಮರುಗಿ ಬುದ್ಧಿಯ ಹೇಳಲೈತಂದ ॥
ಬಕನ ಪರಿಯಲಿ ಮೌನ ಬಲಿದಿರೆ
ಚಕಿತಲೋಚನ ಸಭೆಗೆ ಬಂದ
ಛಕನ ಮನವನು ಬೋಳವಿಸಿ ನೀತಿಗಳ ತಿಳುಹಿದನು ॥ ೧ ॥

ಬರಲು ತಾನಿದಿರೆದ್ದನತ್ಯಾ
ದರದಿ ಮನ್ನಿಸಿ ಕರೆದುಕೊಂಡನು
ಹೊರೆಗೆ ದಾನವನಸುರಪತಿಯನು ನೋಡಿ ಬಿಸುಸುಯ್ದು ॥
ಧುರದಲಪಜಯವಾಯ್ತಲಾ ನೀ
ನಿರದೆ ನೊಂದ್ಯೆ ಕಂದ ಮನದಲಿ
ಹಿರಿದು ಚಿಂತಿಸಬೇಡ ಕೇಳ್ಳೆ ಯುಕುತಿಗಳನೆಂದ ॥ ೨ ॥

ಪೇಳುವರು ಲೋಕದಲಿ ಗಾದೆಯ
ಬಾಲರಿಗೆ ವೃದ್ಧರಿಗೆ ತಪಸಿಗೆ
ಹೇಳಲುಂಟೇ ಬುದ್ಧಿವಾದವ ಹೇಳಿ ಹುರುಳಿಲ್ಲ ॥
ಕಾಳಗದ ಮಾತೇಕೆ ನಮಗಿ
ನ್ನಾಳುತನಗಳು ಹಿಂದೆ ಹೋದುವು
ಕೇಳು ಹಿರಿಯರ ಮಾತ ತಲೆಯನು ನೀಗದಿರಲೆಂದ ॥ ೩ ॥

ಗಣಿಕೆಯರ ಮಾತೇಕೆ ಜರಠಗೆ
ರಣವಿಚಾರವದೇಕೆ ಷಂಡಗೆ
ಸೆಣಸಲೇತಕೆ ಹರಕೆಗಟ್ಟಿದ ಕುರಿಯು ನೀನಾಗಿ ॥
ಹಣೆಯಲಪದೆಸೆ ಬರೆಯೆ ಗಾದೆಯ
ಭಣಿತೆಗಳ ಸೊರಹುತ್ತಲಿಲ್ಲವು
ರಣದ ಕತೆ ಬೇಡೆನಲು ಮತ್ತಿಂತೆಂದನಸುರೇಂದ್ರ ॥ ೪ ॥

ಉರಿಯಲಿಟ್ಟರೆ ಕಡಿಯಲೊರೆದರೆ
ಪಿರಿದು ಬಣ್ಣದ ಮಿಸುನಿಯಳಿವುದೆ
ಗರಗಸದಿ ಸೀಳಿದರೆ ತೇದರೆ ನಿಜಸುಗಂಧವನು ॥
ತೊರೆವುದೇ ಮಲಯಜವು ನೀನವ
ಧರಿಸಿ ಕೇಳಿನೆ ಮಾಣದಾಂಪಡೆ
ಹಿರಿಯತನದಲಿ ಮೆರೆದು ಮನ್ನಿಸಿ ತರುವರಿಯನಿಂದು ॥ ೫ ॥

ಖೂಳತನದಲಿ ನಡೆದು ಮುಂದಣ
ಮೇಲುಗೀಳನು ನೋಡದೀಪರಿ
ಹಾಳುಮಾಡಿದೆ ಪುರವನಕಟಾ ಜನಿಸಿ ನೀನೊಬ್ಬ ॥
ಗೋಳುಗುಟ್ಟಿತು ಪುರಜನಂಗಳು
ಕೇಳು ಮಾತನು ಹೋದ ಬಲವದು
ಸಾಲವೇ ಇನ್ನಾದರಬಲೆಯನಿತ್ತು ಬದುಕೆಂದ ॥ ೬ ॥

ತೊಂಡ ರಾವಣ ಕೇಳು ಕೆಡುಕನು
ಕಂಡುಕಂಡೆಚ್ಚರದರುಂಟೇ
ಗಂಡುಗುದುರೆಯುದೀಯಿತೆಂದರೆ ಒಳಗೆ ಕಟ್ಟೆಂಬೆ ॥
ಗುಂಡಿನಂತಿಹೆ ನೀನು ಒರಲೆಗೆ
ಕೆಂಡ ಸಾಧ್ಯವೆ ಹರಿಯ ಕೂಡಣ
ದಂಡಿಯಲಿ ಲೇಸಿಲ್ಲ ಸೀತೆಯನಿತ್ತು ಬದುಕೆಂದ ॥ ೭ ॥

ಹರಿಯ ಕಟಕದಲೊಂದು ಕೋಡಗ
ಪುರವನುರುಹಿತು ಬಾಣವೊಂದಕೆ
ವರುಣ ಕಪ್ಪವ ತೆತ್ತು ನೆತ್ತಿಯಲಾಂತನದ್ರಿಗಳ ॥
ಅರಿಗೆ ತಮ್ಮ ವಿಭೀಷಣಾಂಕನು
ಒರೆದು ಕೊಡುವನು ಮರ್ಮಭೇದನ
ಸರಿದುಹೋಯಿತು ಚಂದ್ರಹಾಸವು ಬಿಡುವುದವನಿಜೆಯ ॥ ೮ ॥

ಲಲನೆಯೊಬ್ಬಳಿಗಾಗಿ ನಮ್ಮಯ
ಕುಲವ ಸಂಹರಿಸುವುದು ಮಂತ್ರವೆ
ಇಲಿಯ ಮಾಂಸವ ಬಯಸಿ ಕೇಸರಿ ಸಾಯಸಂಬಟ್ಟು ॥
ಶಿಲೆಯ ಮಧ್ಯದಿ ಬಿಲವನಗಳುತೆ
ತಲೆಯ ಸಿಕ್ಕಿಸಿಕೊಂಡ ಗಾದೆಯ
ನೆಲವೊ ಮಾಡದಿರೆಂದು ಮನದಲಿ ಮರುಗಿ ಹೇಳಿದನು ॥ ೯ ॥

ಕೇಳಲಾಶಿಸದರಿಯದವನಲಿ
ಹೇಳುವಾತನು ಜಾಣನೆನಿಸನು
ಬಾಲೆ ಶೃಂಗರವಟ್ಟ್ಮ ಕುರುಡನ ಮುಂದೆ ಕುಣಿದಂತೆ ॥
ಕೇಳದಡವಿಯಲಳುವ ತೆರನಲಿ
ಹೇಳಿ ನಿಷ್ಫಲ ಚಂದ್ರಕಾಂತಗೆ
ಬಾಲೆ ಕುಡಿನೀರೆರೆವೆನೆಂದಾ ಗೋಪಿಯಂದದಲಿ ॥ ೧೦ ॥

ಗುರುವ ಲಘುವನು ಉತ್ತಮಾಧಮ
ವೆರಡ ಸರಿಗಾಂಬವರ ಮಧ್ಯದಿ
ಹಿರಿಯನೇಗುವ ಹೇಮ ಗುಂಜಿಗೆ ಸರಿಯೆನಿಪ್ಪಂತೆ ॥
ಕರಡಗೆಯ ಕಸ್ತುರಿಯ ಮಾರಲು
ಹರದ ಬೇಡನ ಮನೆಗೆ ಹೋಗುತ
ಹುರುಳುಗೆಟ್ಟಂತಹುದು ಮೂರ್ಖರ ನಡುವೆ ಪಂಡಿತನು ॥ ೧೧ ॥

ಸೀತೆಯನು ಕಳುಹುವುದು ಬಹು ವಿಧ
ಮಾತಿನಲಿ ಫಲವೇನು ಕೇಳಿಲೆ
ತಾತನಾದೆನಗೊಲವೆಯಾದರೆ ಲೇಸ ಬಯಸುವರೆ ॥
ಈ ತಳೋದರಿಯಿಂದ ಕುಲಕೆ ವಿ
ಘಾತಿ ತಪ್ಪದು ಮಗನೆ ನಿನಗಾಂ
ನೀತಿ ಪೇಳುವೊಡೇಸರವ ನಾನೆಂದನಸುರಂಗೆ ॥ ೧೨ ॥

ಆದರೆಯು ಮನನೊಂದು ಮೋಹದಿ
ಬೋಧಿಸಿದೆ ನಾನಿಂದು ಮನದಲಿ
ಹಾದಿಯಾವುದು ನೋಡು ಧರ್ಮವನಿಹಪರಂಗಳಲಿ ॥
ಮೇದಿನಿಯಲಪಕೀರ್ತಿ ತಪ್ಪದು
ಹೋದ ಬಲವೇ ಸಾಕು ಕಳುಹುವು
ದಾ ದಯಾನಿಧಿಯಡಿಗೆ ಸಾರಿದೊಡಹುದು ಪರಮ ಸುಖ ॥ ೧೩ ॥

ಹಿರಿಯರನುಮತ ಪೌರಜನ ಹಿತ
ಅರಸಿ ಮಂಡೋದರಿಗೆ ಸನ್ಮತ
ಹಿರಿಯ ಮಗನಿದನೊಲುವ ವಿಭಿಷಣ ಮುನ್ನ ಹೇಳಿದನು ॥
ನೆರೆದ ಪಟುಭಟರಿಂಗದೇ ಮತ
ಪರಿಜನಂಗಳ ಬಯಕೆ ನೀಮೊಗ
ದಿರುಹದಿರು ಕೇಳೆಂದನಸುರೋದಧಿ ಸುಧಾಕಿರಣ ॥ ೧೪ ॥

ನೀವು ನೇಮಿಸಿದಂತೆ ನನಗಿ
ನ್ನಾವನಡಿಗಡಿಗೊರೆವ ನೀತಿಯು
ದೈವದೂರರಿಗೆಂತು ಸೇರುವುದುಚಿತ ಬೋಧೆಗಳು ||
ನಾವು ಮಾಡುವುದೇನು ಸಲಹುವ
ದೈವವೇ ಕೆಡಹುವೊಡೆ ಭುವನದ
ಲಾವ ತಡೆವನು ನೋಡೆ ವಿಶ್ವಂಭರನ ನಾಟಕವು || ೧೫ ||

ವನಿತೆಯನು ಬಿಡದಂತೆ ನನ್ನಯ
ಮನವ ಬೋಧಿಸಿ ರಾಮಚಂದ್ರಗೆ
ವನಿತೆಯನು ಕೊಡದಂತೆ ಮನದಲಿ ಖತಿಯ ಪುಟವಿಟ್ಟು ||
ದಿನದಿನಂಪ್ರತಿ ವೈರಭಾವವ
ನೆನಗೆ ಹುಟ್ಟಿಸಿ ಸಂಹರಿಸುವನು
ಮುನಿ ಹೃದಾಂಬುಜವಾಸಗಿದು ನಿಜ ಲೀಲೆ ಕೇಳೆಂದ || ೧೬ ||

ಒಮ್ಮೆ ಸಂಹರಿಸುವನು ಸೃಜಿಸುವ
ನೊಮ್ಮೆ ಮಾಡುವನೊಮ್ಮೆ ಕೆಡಹುವ
ಬೊಮ್ಮ ಮುಖ್ಯರಿಗರಿಯಲಾರದು ಕಪಟ ನಾಟಕವು ||
ನಮ್ಮಳವೆ ಸಂಸಾರ ನಾರಿಯು
ನೆಮ್ಮ ಸುಖದುಃಖಕ್ಕೆ ಮರುಗುವ
ಕರ್ಮಿಗಳು ನಮಗೆಂತು ಸೇರುವುದುಚಿತ ಬೋಧೆಗಳು || ೧೭ ||

ಉರಿಯಲಳಿವುದು ಕಾಯ ಮೋಹದ
ತರುಣಿವುಳಿವಳು ಬಂಧುವರ್ಗವು
ಸರಿಗು ಹಿಂದಕೆ ಪುರಜನಂಗಳು ಮಕ್ಕಳೇನಹರು ||
ಸಿರಿಯದಾರಿಂಗಾದೊಡಪ್ಪುದು
ಇರದೆ ಬಹುದಾ ಪಾಪಪುಣ್ಯವು
ಪರಕೆವುಳಿವುದು ಕೀರ್ತ್ಯಕೀರ್ತ್ಯಗಳೆರಡು ಜಗದೊಳಗೆ || ೧೮ ||

ಕೀರ್ತಿಯಾಗಲಿ ಮೇಣು ತನಗಪ
ಕೀರ್ತಿಯಾಗಲಿ ಹಿಡಿದುದನು ಬಿಡೆ
ಕೂರ್ತು ನೀ ನವಗೆಂದುದದು ಲೇಸಾಯ್ತು ಕೇಳಿದೆನು ||
ಧೂರ್ತತನದಿಂ ಕಾದಿ ಕೂಡುವೆ
ನಾರ್ತು ಪರಿಯಂತರದಲಾ ತ್ರೈ
ಮೂರ್ತಿಯನು ಮೂದಲಿಸಿದಲ್ಲದೆ ಮುಕುತಿಯಿಲ್ಲೆಂದ || ೧೯ ||

ಸುದತಿನೆವದಿಂದಲ್ಲದೆನ್ನೊಳು
ಕದನ ಹುಟ್ಟಿದು ಹುಟ್ಟಿದಲ್ಲದೆ
ಹೃದಯದಲಿ ಖತಿ ಹುಟ್ಟಿ ಹುಟ್ಟದೆ ಕಾದನೆನ್ನೊಡನೆ ॥
ಕದನ ಮುಖದಲಿ ಹರಿಯುಬಲವನು
ಸದೆದು ಕೈವಲ್ಯವನು ಕೊಂಬೆನು
ಇದಕೆ ಸಂಶಯವಿಲ್ಲ ಬಿಡೆ ಬಿಡೆ ನಾನು ಸೀತೆಯನು ॥ ೨೦ ॥

ಬಿಡೆನು ಸೀತೆಯ ಕಾದಿ ರಾಘವ
ಬಿಡಿಸಲಾಪರೆ ಮೇಣು ನಾನಾ
ಪೊಡವಿಜೆಯ ಸೆರೆಯಾಗಿ ಲಂಕೆಯಲಾಳುವೆನು ಬಿಡದೆ ॥
ನುಡಿಯದಿರಿ ನೀವಿನ್ನು ಮಂಚಕೆ
ನಡೆಯಿರಾನಿದ ಬಲ್ಲೆನೆಲ್ಲವ
ನುಡಿಸಿದರೆ ಶಿವನಾದರಾಗಲಿ ಮಾನಗೇಡಹುದು ॥ ೨೧ ॥

ನೆರೆದ ಸಭೆಯಲಿ ಕುಳಿತು ದುಗುಡದ
ಭರಕೆ ತಗ್ಗಿದ ಕೊರಳಗಲ್ಲದ
ಕರದ ಸ್ವೈವೆರಗಿಂದ ದೃಷ್ಟಿಯು ಬಲಿದ ಚಿಂತೆಯಲಿ ॥
ಹರಿಯು ಕಾಣದ ಬಿರಿಸ ನೆನೆನೆನೆ
ದಿರದೆ ವಿಕಲಿತನಾಗಿ ರಕ್ಕಸ
ಭರದಿ ದುಃಖದಿ ಸುಯ್ದು ಮಂತ್ರಿ ಪ್ರಕರಕಿಂತೆಂದ ॥ ೨೨ ॥

ವನಜಭವನಲಿ ವರವ ಬೇಡಿದೆ
ದಿವಿಜ ದನುಜರ ಗೆಲುವ ವೀರ್ಯವ
ಮನುಜರೇಗುವರೆಂದುಪೇಕ್ಷೆಯ ಮಾಡಿ ಕೆಡಿಸಿದೆನು ॥
ನಿನಗೆ ನಮ್ಮನ್ವಯದಲುದಿಸಿದ
ಮನುಜನಿಂದವೆ ಮರಣವೆಂದನು
ತನುವ ಬಿಡುತನರಣ್ಯನೆಂದುದದು ಘಟಿಸಿತೆನಗೆಂದ ॥ ೨೩ ॥

ನೊಂದು ಶಪಿಸಿದ ವೇದವತಿ ತಾ
ನಿಂದು ಕುಲನಾಶಕ್ಕೆ ಬಂದಳೆ
ಹಿಂದೆ ರಂಭಾ ದೇವಿಗಳುಪಿದ ಪಾಪ ಸಂಧಿಸಿತೆ ॥
ಅಂದು ಸಂಭವಿಸಿತ್ತು ವಾನರ
ರಿಂದ ಕೇಡೆನಗೆಂದು ಕೋಪದಿ
ನಂದಿಯಿತ್ತಾ ಶಾಪ ತಪ್ಪದೆ ಬಂದುದೆನಗೆಂದ ॥ ೨೪ ॥

ಏನಮಾಡಿದರೇನು ದೈವಾ
ಧೀನವೆಲ್ಲವು ಲೋಕ ತಪವನು
ನಾನು ಮಾಡಿದೆ ದೈವಹೀನಗೆ ವಿಫಲವಾಯ್ತೆಂದು ॥
ಧ್ಯಾನಿಸಿದೊಡೇನಹುದು ಕದನವ
ನಾನುವೆನು ಬಳಿಕಾದುದಾಗಲಿ
ಮಾನವೇಂದ್ರನ ಕೊಲುವೆನಲ್ಲದೊಡಳಿವೆ ತಾನೆಂದ ॥ ೨೫ ॥

ಎದ್ದನಾದರೆ ಕುಂಭಕರ್ಣನು
ಇದ್ದ ಕಪಿಗಳನೈದೆ ಮುಕ್ಕುಗು
ನಿದ್ದೆವಲೆಯೊಳಗಾದ ತಮ್ಮನನೆಬ್ಬಿಸಲು ಬೇಕು ॥
ಇದ್ದವರಲೇನಹುದು ರಿಪುಗಳ
ಮದ್ದನರೆವನು ತಮ್ಮನಾತನ
ಹೊದ್ದಿ ತಿಳುಹೆನೆ ಖಳರು ಹರಿದರು ಕೋಟಿ ಸಂಖ್ಯೆಯಲಿ ॥ ೨೬ ॥

ಮರುಗಿದಳು ಕೈಕಸೆಯು ಮಗನನು
ಕರೆದು ಪರಿಮಿತದಲ್ಲಿ ಕೇಳಿಲೆ
ಇರುವ ತಮ್ಮನನೆತ್ತದಿರು ನೀನೆನ್ನ ನುಡಿಗೇಳು ॥
ಹರಿಗೆ ಸೀತೆಯನಿತ್ತು ಕಂಡರೆ
ಸಿರಿಗೆ ಕಂಟಕವಿಲ್ಲ ನಿನ್ನಯ
ಮರುಳುತನದಲಿ ಪಡೆಯ ನೀಗದಿರೆಂದು ಹೇಳಿದಳು ॥ ೭ ।

ನಾರಿ ನರಕಕೆ ದಾರಿ ದುರ್ಜನ
ಕಾರಿ ಕುಲಸಂಹಾರಿ ನಿನಗಿದು
ಮಾರಿ ಮೋಹನಕಾರಿ ದುಷ್ಕೃತಕಾರಿ ಪರನಾರಿ ॥
ಭೂರಿ ಸೌಖ್ಯನಿವಾರಿ ಕೇಡಿನ
ದಾರಿ ನಿನಗಪಕಾರಿ ಕಡೆಗದು
ಮಾರಿ ನೀನವಿಚಾರಿ ಬಿಡು ಬಿಡು ಬೇಡ ಸಾರಿದೆನು ॥ ೨೮

ಭಾಳಲೋಚನ ವರವು ಸವೆದುದು
ಬಾಲಕಿಯು ಕತದಿಂದ ಹೋದುದು
ಕಾಳ ರಕ್ಕಸ ಸೇನೆ ತುಂಬಿದ ಲಂಕೆ ಬಯಲಾಯ್ತು ॥
ಖೂಳತನಗಳ ಬಿಡೆಲೊ ಮಕ್ಕಳ
ಮೌಳಿಯೇ ಬಿಡು ಬೇಡಿಕೊಂಬೆನು
ಬಾಳ ಮಧುವನು ನೆಕ್ಕಿ ನಾಲಗೆ ಹೋದ ಪರಿಯಹುದು ॥ ೨೯

ಕತ್ತಲೆಯ ಕೋಟಿಗಳು ರವಿಯನು
ಮುತ್ತಿಗೆಯ ತಾಳುವುದೆ ಬಿಸಿಲಿನ
ಹಿತ್ತಿಲಲಿ ಹೊಸ ತಳಿರಿನೆಳೆತೋಟಂಗಳಪ್ಪುವುವೇ ॥
ಮುತ್ತನೊಗುವರೆ ಪೊರನ ತೌಡಿಗೆ
ಇತ್ತು ಬದುಕಾ ಹರಿಗೆ ಸೀತೆಯ
ನೆತ್ತಿಯಲಿ ನೀನಡೆದು ಕೆಡದಿರು ಮಗನೆ ಬೇಡಿದೆನು ॥ ೩೦ ॥

ಲೇಸ ಬಯಸುವಿರಹುದು ರಾಜ್ಯದ
ಲಾಸೆ ತಾ ಮುನ್ನಿಲ್ಲ ಕೊಟ್ಟರೆ
ವಾಸವಾದ್ಯರು ನಗರೆ ಸೀತೆಯನಂಜಿ ರಾಘವಗೆ ॥
ವಾಸಿಯಿಲ್ಲದ ಬದುಕು ಬೇಯಲಿ
ಸೂಸಿ ಕೆಡಿಸದಿರಿನ್ನು ನೀತಿಯ
ನಾಸಿಕದಲುಸುರಿರಲು ಸೀತೆಯ ಬಿಡುವುದಿಲ್ಲೆಂದ ॥ ೩೧ ॥

ಕೇಳಿ ಸುಯ್ಯುತ್ತಬಲೆ ತಿರುಗಿದ
ಳಾಲಯಕೆ ದುಗುಡದಲಿ ತನಯನ
ಮೇಲಣಾಸೆಯಬಿಟ್ಟಳಕಟಾ ಹಡೆದ ಬಸುರುರಿಯೇ ॥
ಹೇಳಿ ಮಾಡುವುದೇನು ಕೇಡಿನ
ಕಾಲಕಾವನ ಮಾತು ಸೇರ್ವುದು
ಹಾಳುಮಾಡಿದ ಕುಲವ ಕೂಗಿದನೆನುತ ಮರುಗಿದಳು ॥ ೩೨ ॥



## ೨೪ನೇ ಸಂಧಿ

ಪಲ್ಲ ॥ ನಿದ್ದೆಯಲಿ ಹಲಗಾಲ ಸೈಗೆಡೆ
ದಿದ್ದ ತಮ್ಮನನೆಬ್ಬಿಸಿದ ದು
ರ್ಬುದ್ಧಿ ರಾವಣ ರಣಕೆ ನೂಕಿದ ಕುಂಭಕರ್ಣನನು ॥

ಪದ ॥ ಅಸುರ ನಿದ್ರೆಯೊಳಾರು ತಿಂಗಳು
ಒಸೆದು ಮಲಗಿದನೆದ್ದನಾದರೆ
ಹಸಿದು ಮುಂದಿರ್ದವರ ಮುಕ್ಕದೆ ಮಾಣನೆಂದೆನುತ ॥
ಹಸಿಯ ಮಾಂಸದ ಪರ್ವತಂಗಳ
ಬಿಸಿಯ ನೆತ್ತರ ಕೊಪ್ಪರಿಗೆಗಳ
ನೆಸೆವ ಸುರೆ ದೋಣಿಗಳು ಹಲವನು ಮುಂದೆ ನೆರಹಿದರು ॥ ೧ ॥

ಗಂಧ ಕಸ್ತುರಿ ಪರಿಮಳಂಗಳ
ನೊಂದು ದೋಣಿಯ ತುಂಬಿ ಹೂಗಳ
ವೃಂದವನು ನೆರಹುತ್ತ ವಸ್ತ್ರಾಭರಣಗಳ ಮುಂದೆ ॥
ತಂದಿರಿಸೆ ಸಮ್ಮುಖಕೆ ಬಿರು ಸು
ಯ್ಲಿಂದೆ ತೆರೆತೆರೆದೂಗಿ ಕರ ಬಲು
ಹಿಂದ ಕೆಲಸಾರ್ದಾರಿ ಬೊಬ್ಬಿರಿದಿತ್ತು ಖಳ ನಿಕರ ॥ ೨ ॥

ಆರಚಿ ಕೂಗಿದರೆತ್ತಲೆಂದವ
ನರಿಯನೊಯ್ಯನೆ ಗೊರೆವ ದನಿಯಲಿ
ಮರೆಸಿಹೋಯಿತು ಖಳರು ಕೈಸನ್ನೆಯಲಿ ಮಾತಾಡೆ ॥
ಹರೆಯ ಕೊಂಬಿನ ಶಂಖ ಕಹಳೆಯ
ಬಿರುಬಿನಬ್ಬರದಿಂದ ದನುಜರು
ಒರಲಿ ಸೋತರು ಖಳನ ನಿದ್ದೆಯ ಭರವು ಬಲುವಾಯ್ತು ॥ ೩ ॥

ಕೋಟಿ ಹರೆಗಳು ಕೋಟಿ ನಿಸ್ಸಳ
ಕೋಟಿ ಭೇರಿಯು ಕೊಂಬುಕೋಟಿಯು
ಕೋಟಿ ತಿತ್ತಿರಿ ಡೌಡೆ ಗಿಡಿಬಿಡಿ ಪಟಹ ತಂಬಟವ ॥
ಕೋಟಿ ಡಿಂಡಿಮುಗಳನು ಬಾರಿಸೆ
ಗೋಟುತುಂಬಿತು ಜಗದ ಕಿವಿಗಳ
ಪಾಟಿ ಹೊಟ್ಟಿತು ಕೇಳನಾ ಖಳ ಗೊರೆದು ತೆಕ್ಕುತಿರೆ ॥ ೪ ॥

ಸರಳ ಕುಡಿಯಲಿ ಹೊಸೆದು ಕೆಲಬರು
ಹುರಿದ ಮರಳನು ಮೇಲೆ ಚಲ್ಲಲು
ಹರಹಿ ಸಾಸಿವೆ ರಸಗಳನುಪ್ಪು ಮೆಣಸುಗಳ ॥
ಹಿರಿಯ ಮೂಗಿನ ಹೋರು ತುಂಬಲು
ಭರದಿ ಬಿರಿಸಿಂದವನು ಸೀತರೆ
ಗಿರಿಯ ತೋರದ ಭಟರು ತರಗೆಲೆಯಂತೆ ಹಾರಿದರು ॥ ೫ ॥

ಒತ್ತಿ ಧೃಡಮುಷ್ಟಿಯಲಿ ತಿವಿದರು
ಸತ್ವವುಳ್ಳವರೆರಡು ಬದಿಯನು
ಮತ್ತನಾಗಿರೆ ಮುಸಲ ಮುದ್ಗರ ಪಿಂಡಿವಾಳದಲಿ ॥
ಇತ್ತರದಲೆರಗುತಿರೆ ಮೆಲ್ಲನೆ
ಒತ್ತಿದಂತಾಯ್ತವಗೆ ಕನವರಿ
ಸುತ್ತ ಖಳ ಸುಖಸುಪ್ತನಾದನು ಸೇನೆ ಬೇಸರಿಸೆ ॥ ೬ ॥

ಬಲುಗಿರಿಯಲಪ್ಪಳಿಸೆ ಚಿಟುಕನು
ತಳೆದ ಪರಿಯಾಯ್ತೇನ ಹೇಳುವೆ
ತಲೆಯ ಕುರಿವಿಂಡಿನಲಿ ತುಳಿಸಲು ತುರಿಸಿದಂತಾಯ್ತು ॥
ಶಿಲೆಯ ದಾಡೆಯ ಮೇಲೆ ಹೊಡೆಯಲು
ಬಲದ ಕೈಯಲಿ ತೂರಿಕೊಂಡನು
ತಿಳಿಯದಾತನ ನಿದ್ದೆ ಅದಿರದ ಬೆಟ್ಟದಂತಿರಲು ॥ ೭ ॥

ಏಳನವನಿನ್ನೇನ ಮಾಡಲಿ
ಆಳಿದನೆ ಚಿತ್ತೈಸುಯೆಂದೆನೆ
ಕೇಳಿ ಖಳ ಚಿಂತಿಸಲು ತೊಳಗುವ ಕಾಯಕಾಂತಿಯಲಿ ॥
ಸಾಲ ಕೆಂಜೆಡೆ ವೀಣೆ ತುಳಸೀ
ಮಾಲೆಯೊಪ್ಪುವ ಮುನಿವರೇಣ್ಯನು
ಶೂಲಿ ಕಳುಹಲು ಬಂದ ನಾರದ ಖಳನ ಹೊರೆಗಾಗಿ ॥ ೮ ॥

ವಿನಯದಲಿ ಪೊಡಮಡಲು ಸುಖಿಯಾ
ಗೆನುತ ಬಲು ದುಮ್ಮಾನವೇಕೆನೆ
ಅನುಜ ನಿದ್ದೆಯ ತಿಳಿಯನದರಿಂ ಮನನಿರೋಧವೆನೆ ॥
ದನುಜ ದುಗುಡವ ಮಾಣು ಬಾ ಸಿ
ನ್ನನುಜನಾವೆಡೆ ತೋರು ನಡೆಯೆಂ
ದೆನಲು ಹರುಷದಿ ಬಂದನಾತನ ಹೊರೆಗೆ ಮುನಿಸಹಿತ ॥ ೯ ॥

ಮೃತ್ಯುವಿನ ಕಟವಾಯಿಗೊಯ್ಯುವ
ಮರ್ತ್ಯರಸುಗಳ ಮತ್ತೆ ತರಿಸುವ
ಸತ್ಪುರುಷರಿಂಗೇನಸಾಧ್ಯವು ನಿದ್ದೆ ಹರಿಸುವುದು ॥
ಕೆತ್ತ ಕಂಗಳ ತೆರೆ ಸುರಾರಿಯೆ
ಚಿತ್ತದುಮ್ಮಳಗಳೆಯಲೇಳ್ಳೆ
ಮತ್ತಗಜವೇ ಕುಂಭಕರ್ಣಾ ಎಂದ ನಾರದನು ॥ ೧೦ ॥

ದನಿಯು ಕೂಡಿಸಿ ಸಪ್ತತಂತ್ರಿಯು
ಮುನಿಪ ಮಧ್ಯಮ ಷಡ್ಜ ಪಂಚಮ
ವೆನಿಪ ಸಪ್ತಸ್ವರವನಾಳಾಪಿಸಲು ಕ್ರಮದಿಂದ ॥
ದನುಜ ಕೇಳಿದ ನಿದ್ದೆ ತಿಳಿದುದು
ವನಚರಂಗಳು ಪುರವ ಮುತ್ತಿದ
ಕನಸ ಕಂಡನು ಮೈಯ ಮುರಿದಾಗುಳಿಸಿ ಕಂದೆರೆದ ॥ ೧೧ ॥

ಸೂಳವಿಸಿ ನಿಸ್ಸಾಳ ಕೋಟಿಯು
ತೂಳುವರೆ ತಂಬಟೆಯ ಧ್ವನಿಗಳ
ಕೇಳದವನೀ ಸಪ್ತತಂತ್ರಿಯ ದನಿಯ ಕೇಳಿದನೆ ॥
ಹೇಳಲೇನದ ಬ್ರಹ್ಮಶಾಪದಿ
ಸಾಲುಗೆಡೆದನ ಮುನಿಪನೆತ್ತಿದ
ರೇಳಿಲವೆ ಸತ್ಪುರುಷರೊಲುಮೆಯದೇನ ಸಾಧಿಸದು ॥ ೧೨ ॥

ಭರದಲೆದ್ದನು ಕುಂಭಕರ್ಣನು
ಸುರಮುನೀಂದ್ರನದೃಶ್ಯನಾದನು
ಸರಿದರಸುರರು ಮುಂದೆ ನಿಲ್ಲದೆ ಪ್ರಾಣ ಭೀತಿಯಲಿ ॥
ಉರಿವ ಕಣ್ಣಿನ ಕೋರೆ ದಾಡೆಯ
ಕರಿಯ ಕಾಯದ ಜೋಲು ಬಸುರಿನ
ಪರಮ ಮಂಗಳಮೂರ್ತಿ ಕುಳಿತನು ಕಣ್ಗೆ ಭಯವಾಗೆ ॥ ೧೩ ॥

ಮುಂದಣಡಗನು ಮೊಗೆದು ಮುಕ್ಕುತ
ತಿಂದನಾ ಕುರಿ ಕೋಣ ಕಾಟಿಯ
ನೊಂದು ಕಡೆಯಿಹ ಸುರೆಯ ದೋಣಿಯ ಹಲವು ಬರುಗೆಯ್ದು ॥
ತಂದುಕೂಡಿಸಿದನಿತನೆಲ್ಲವ
ನೊಂದನುಳಿಯದೆ ತಿಂದನಸುರನು
ಬಂದು ಹೆದರುತ ನೀರನೆರೆಯಲು ತೊಳೆದ ಕೈ ಮೊಗವ ॥ ೧೪ ॥

ತುಷ್ಟನಾದನು ಬಳಿಕ ಸಲೆ ಕೈ
ಘಟ್ಟಿ ಕೊಂಡನು ಪರಿಮಳಿಸುತಿರೆ
ಗಟ್ಟಿ ಸುಣ್ಣದ ಮುದ್ದೆಯುಲೆಯೆಡಕೆಗಳ ಹೇರುಗಳ ॥
ಒಟ್ಟಿದರು ಬಾಯೊಳಗೆ ತುಡಿಗೆಯು
ತೊಟ್ಟು ಪಟ್ಟಾವಳಿಯು ಮುಂಜೆರ
ಗುಟ್ಟು ಕುಳಿತಿರೆ ಹತ್ತೆ ನಾರಿದ ರಾವಣನ ಮಂತ್ರಿ ॥ ೧೫ ॥

ಏನು ಕಥನವದಲೆಬ್ಬಿಸಿದಿರೆನೆ
ವಾನರಂಗಳ ಥಾಳಿ ಬಂದುದು
ದಾನವೇಶ್ವರಗೆನಲು ಬಿಡು ಮತ್ತಾವುದಿಲ್ಲವಲ ॥
ಕಾನ ಕೋಡಗ ಬಂದು ಮಾಡಿದ
ಹಾನಿ ದೈತ್ಯರಿಗುಂಟೆ ಕೇಳಿದೆ
ನೇನ ಹೇಳಾನಗೆಯುನೆಂದನು ನಗುತ ಘಟಕರ್ಣ ॥ ೧೬ ॥

ಕೆಲದಿ ಸಾಹೋಯೆಂದು ಪಟುಭಟ
ರುಲಿಯೆ ತೊಲತೊಲಗೆನುತ ದಾನವ
ಕುಲಶಿರೋಮಣಿ ತಮ್ಮನರಮನೆಗಾಗಿ ನಡೆತರಲು ॥
ಕುಳಿತನೋಲಗವಿತ್ತು ರಾವಣ
ಚೆಲುವ ತಮ್ಮನ ಮೊಗವ ನೋಡುತ
ಖಳಶಿರೋಮಣಿ ಸಂದ ವೃತ್ತಾಂತವನು ಹೇಳಿದನು ॥ ೧೭ ॥

ಇಂದುಮುಖಿ ಸೀತೆಯನು ನಾ ತರೆ
ಹೊಂದಿದನು ಮಾರೀಚ ರಾಘವ
ಕೊಂದನಾ ಖರದೂಷಣಾದ್ಯರ ಬಳಿಕ ಬಾಲಿಯನು ॥
ಒಂದು ಬಾಣದಿ ಕೆಡೆಯೆ ರವಿಸುತ
ಬಂದು ತಾನಾಳಾದ ಹನುಮನು
ಮುಂದೆ ಮುದ್ರಿಕೆಯಿತ್ತು ಲಂಕೆಯ ಸುಟ್ಟು ಮರಳಿದನು ॥ ೧೮ ॥

ಕಡಲು ಕಪ್ಪವ ತೆತ್ತು ಬಂಧನ
ಕೊಡಲನಿತ್ತುದು ಕೊಡೆಯು ಕಡಿದನು
ಗಡಣದಸುರರ ಸಂಧಿ ನೆವದಲಿ ಸುಭಟನಂಗವನು ॥
ಕೆಡಹಿ ಹೋದನು ಬಳಿಕ ಸುರಜಿತು
ಕೆಡಹಿ ಕಟ್ಟಿದ ನಾಗ ಪಾಶವ
ಬಿಡಿಸಿಕೊಂಡನು ರಾಮು ಹದ್ದಿನ ಬಲದಿ ಕೇಳೆಂದ ॥ ೧೯ ॥

ಕಾಳಗದಲಳಿದವರ ಲೆಕ್ಕವ
ಹೇಳಲರಿಯೆನು ಮುಂದೆ ಬವರವ
ತಾಳಲಸದಳ ಕರಡಿ ಕಪಿಗಳ ಬಿರಿನು ರಣದೊಳಗೆ ॥
ಆಳುಗಳ ಬಲ್ಲಹನು ನೀನಿರೆ
ಸೋಲದೆಲ್ಲಿಯುದೆಮಗೆ ಹರಿಬದ
ಕಾಲವಿದು ಕೈಗುಣವ ತೋರುವುದೆಂದನಮರಾರಿ ॥ ೨೦ ॥

ದನುಜ ದಿವಿಜರ ಬಗೆಯುದೆನಗಾ
ಮನುಜ ಕಪಿಗಳ ಮೇಳವೇ ತೆಗೆ
ಅನುಜನಾವೆಡೆ ತೋರು ವಿಭಿಷಣ ಬಾರನೇಕೆನಲು ॥
ಮುನಿದು ಹೋದನು ಹಗೆಯು ಬಳಿಗೆಂ
ದೆನಲು ಸೈವೆರಗಾಗಿ ರಕ್ಕಸ
ಮನದಿ ಸುಯ್ದನು ಕೇಡಮಾಡಿದೆಯನುಜನಲ್ಲೆಂದ ॥ ೨೧ ॥

ಏನು ಕಾರಣ ಹೋದನೆಂದೆನೆ
ಜಾನಕಿಯು ಬಿಡಹೇಳ್ದ ಬಿಡೆನೆನೆ
ಮಾನಗೆಡೆ ಸಭೆಯೊಳಗೆ ಬಯ್ದರೆ ನೂಕಿಸಿದೆನೆನಲು ॥
ಹಾನಿಗದು ಕಾರಣವು ಮರ್ಮವ
ಮಾನವೇಂದ್ರಂಗರುಪದಿರನವ
ಮಾನಿನಿಗೆ ಮರುಳಾಗಿ ನೀ ಮತಿಮರೆದೆ ಅಕಟೆಂದ ॥ ೨೨ ॥

ನೀತಿಗಳಲತಿ ನಿಪುಣ ನೀ ವಿ
ಖ್ಯಾತ ವೇದ ಪುರಾಣಸಿದ್ಧನು
ಖಾತಿಗೊಳಬೇಡಣ್ಣ ನೀನಾ ವಿಧಿಯ ಮೊಮ್ಮಗನು ॥
ಪಾತಕವನಂಗೆಯ್ಸಬಹುದೇ
ಸೀತೆಯಾರೆಂದರಿಯಲಾ ಕುಲ
ಘಾತಿ ಬೇಡವಳತ್ತಹೋಗಲಿ ಬಿಟ್ಟು ಕಳುಹೆಂದ ॥ ೨೩ ॥

ಅರಿವನೊಂದೇ ಗುಣದಲುತ್ತಮ
ನರಿವ ಮಧ್ಯಮನೆರಡು ಗುಣದಲಿ
ಉರುವ ಹೊಯ್ಲಲಿ ತಾಗಿ ಮೂರರೊಳರಿವ ಕಡು ಮೂರ್ಖ ॥
ಅರಿಯದವ ನೀನೊಬ್ಬನೊಂದೆರ
ಡರಲಿ ಮೂರ್ಖರ ಕುಲಶಿರೋಮಣಿ
ಜರೆದು ಬುದ್ಧಿಯ ಹೇಳಲಹಿತನೆ ತಮ್ಮ ನಿನಗೆಂದ ॥ ೨೪ ॥

ಅರುಹಿ ಕೊಡುವನು ತಮ್ಮನೆಂದನೆ
ಜರೆದನಣ್ಣನ ಕುಂಭಕರ್ಣನು
ಅರುಹಿಕೊಟ್ಟನೆ ಹರನ ಬಿಲ್ಲನು ಮುರಿವ ಸಾಹಸವ ||
ಅರುಹಿದನೆ ಬಾಲಿಯನು ಕೊಲುವುದ
ನರುಹಿದನೆ ತಾಳೇಳ ತರಿವುದ
ಬರಿದೆ ದೂರದಿರಂಣ ನಿನ್ನದು ಮರುಳತನವೆಂದ || ೨೫ ||

ದನುಜರಿದಿರಲಿ ಕಾದಿ ಗೆಲುವಾ
ಮನುಜರುಂಟೇ ಶರಣುವೊಕ್ಕರೆ
ಮನುಜ ಕಾವನೆ ಖಳರಿಗಿದು ವಿಪರೀತವೆಂದರಿಯು ||
ಜನಕಜೆಯು ಬಿಡ ಹೇಳ್ದೆ ನಾನೆಂ
ದೆನುತ ಕನಲದಿರಣ್ಣ ನೀತಿಯು
ನಿನಗೆ ನಾನೆನಲುಂಟೆ ದಾಯಕೆ ಬಲವ ನೀಗಿದೆಲ || ೨೬ ||

ಎನಗೆ ಕನಲದಿರೆಲವೊ ಬುದ್ಧಿಯು
ನೆನಗೆ ಹೇಳುವೊಡೆಬ್ಬಿಸಿದೆನೇ
ಕನಸು ಬೆಳೆಸುತ ಕೊರೆದುಕೊಂಡನು ತೆಕ್ಕುತಿರು ಹೋಗು ||
ನಿನಗದೇತಕೆ ನಾಡ ಗಡಿಬಿಡಿ
ದನುಜರೊಳು ನೀ ಜೀವಗಳ್ಳನು
ನನಗೆ ಬುದ್ಧಿಯ ಹೇಳೆ ಸಾಕಾಯ್ತಾಯ್ತು ನಡೆ ಹೋಗು || ೨೭ ||

ನಿನ್ನ ಬಲದಲಿ ಸತಿಯು ತಂದೆನೆ
ನಿನ್ನ ಬಲದಲಿ ಸುರರ ಗೆಲಿದೆನೆ
ನಿನ್ನ ಬಲದಲಿ ಹಿಂದೆ ಕೈಲಾಸವನು ನೆಗಹಿದೆನೆ ||
ಮುನ್ನ ದಿಗ್ವಿಜಯಂಗಳೆಲ್ಲವು
ನಿನ್ನಲಾಯಿತೆ ಬಿಡೆನು ಸೀತೆಯು
ನೆನ್ನ ರಾಘವ ಕೊಲಲಿ ಮೇಣಲ್ಲದಿರೆ ನಾ ಕೊಲುವೆ || ೨೮ ||

ಎಡರು ಬಡತನ ಶತ್ರು ಸಂಕಟ
ವಡಸಿದಾಗಳು ಒಡನೆ ಹುಟ್ಟಿದ
ರೊಡನೆ ಸಾವುದು ಮೇಣು ಬದುಕಿರೆ ವ್ಯರ್ಥ ಬಂಧುಗಳು ||
ಹಡೆದ ಭಾಗ್ಯವ ನೆಚ್ಚಿ ಭೋಗಿಪ
ಜಡರು ನಿನ್ನವೊಲಾರು ಪೊಡವಿಲಿ
ಗೆಡಹಥಿರು ತಿಳಿಗೇಡಿ ನೀ ಹೋಗೆಂದ ದಶಕಂಠ || ೨೯ ||

ಒಡಲ ನೆಳಲಿಗೆ ಮತ್ತೆ ಬೇರೊಂ
ದೆಡೆಯುಲೇನು ಸ್ವತಂತ್ರವುಂಟೇ
ಒಡಲು ನಿನ್ನಾಧೀನ ಸಮರದಲೆನ್ನ ಸಾಹಸವ ॥
ಕಡೆಗೆ ನೋಡುವೆ ನೀನು ಮನವನು
ತುಡುಕಿನೋಡಿದೆನ್ನೈಸೆ ನೇಮವ
ಕೊಡು ಮನೋವ್ಯಥೆ ಬೇಡ ವನುಜನ ಕೊಲುವೆ ನೋಡೆಂದ ॥ ೩೦ ॥

ಸರಳು ಚಾಪವ ಹಿಡಿದೆನಾದೊಡೆ
ಕರಿವರೂಥದಲಡಿಯು ನಿಟ್ಟೊಡೆ
ಪರಶು ಪಟ್ಟಿಸಗಳನು ಕೊಂಡೊಡೆ ಕೊರತೆ ತನಗಿಹದು ॥
ಎರಡು ಕೈಯುಲಿ ಮೊಗೆದು ಮುಕ್ಕುವೆ
ನೆರೆದ ಕಪಿಗಳ ಕಡಲೆಗುರುಕುವೆ
ನರರ ಗೆಲುವೆನು ಮನದ ದುಗುಡವ ಬಿಟ್ಟು ಕಳೆಯೆಂದ ॥ ೩೧ ॥

ಕೆರಳಿ ನುಂಗಲು ಲೋಕ ಹೊಟ್ಟೆಯು
ಹೊರೆಯೆ ನಾಲದು ನೀರಡಕೆಗೇಳ್
ಶರಧಿ ಸಾಲದು ಮುಳಿದೊಡಂತಕ ಕಾಲಮೃತ್ಯುಗಳ ॥
ಒರಸಿ ಬಿಡುವೆನು ಬಿನುಗು ಕಪಿಗಳು
ಧುರಕೆ ಸರಿಯೇ ನನ್ನ ಸತ್ವವ
ನರಿಯೆಲಾ ನೀ ಮೆಚ್ಚಿ ಕಾದುವೆನೆಂದ ಘಟಕರ್ಣ ॥ ೩೨ ॥

ಎನಲು ತೆಗೆದಪ್ಪಿದನು ಬೇಕಾ
ದನಿತನಿತ್ತನು ತೊಡಿಗೆ ವಸ್ತ್ರವ
ಕನಕ ಘಂಟೆಯು ಕಟ್ಟಿ ನಡುವಿಂಗುಟ್ಟ ಪಟ್ಟೆಯನು ॥
ತನುವ ಶೃಂಗರಿಸಿದನು ಸಮರಕೆ
ಮನೆಯು ಹೊರವಂಟಿದ್ದು ಬರುತಿರೆ
ವನಚರೇಶ್ವರರೆಲ್ಲ ಕಂಡುದು ಲೋಕಭೀಕರನ ॥ ೩೩ ॥

ಮೂರು ಲೋಕದ ಗಂಡ ಮುಕ್ತಿಯು
ಸೂರೆಗೊಳಲ್ಕೆತಪ್ಪ ಪರಿಯುಲಿ
ತೋರುತಿದ್ದನು ಧೂಮಕೇತುವಿನಂತೆ ಕಪಿಪಡೆಗೆ ॥
ಕೋರ ದಾಡೆಯು ಕಾರುಮುಗಿಲನು
ಮೀರಲಧಿಕಚ್ಛವಿಯು ಚರಣವ
ನೂರಲಡಿಗಡಿಗವನಿ ಕಂಪಿಸೆ ದನುಜ ಹೊರವಂಟ ॥ ೩೪ ॥

## ೨೫ನೇ ಸಂಧಿ

ಪಲ್ಲ ॥ ಅಂಬುಜಪ್ರಿಯಕುಲಲಾಮನು
ನಂಬಿದವರಿಗೆ ನಾಕಭೂರುಹ
ಕುಂಭಕರ್ಣನ ಗೆಲಿದನಹಿಪತಿ ನಲಿಯೆ ಹರನೊಲಿಯೆ ॥

ಪದ ॥ ಹತ್ತು ತಲೆಯವನನುಜನಾರು
ತ್ತತ್ತಲಿತ್ತಲು ನೋಡುತಿರೆ
ಅತ್ತಲಮರವ್ರಾತ ತವತವಗಂಜಿನೋಡುತಿರೆ ॥
ಸತ್ಯಲೋಕದ ಮಾರಿಯಿವನನು
ಹೆತ್ತ ತಾಯಿನ್ನಾವಳೋ ಶಿವ
ಹತ್ತು ಯೋಜನದಗಲದಲಿ ಖಳಸೇನೆ ಬರುತಿಹುದು ॥ ೧ ॥

ಬೆದರಿದುದು ಕಪಿಸೇನೆ ಕಂಗೆ
ಟ್ಟೊದರಿ ಹಲುಗಿರಿಯುತ್ತ ಹಾಯ್ದುದು
ಕದನ ಸಾಕಿವನೊಡನೆನುತ ನಿಲದೆಲ್ಲರೋಡುತಿರೆ ॥
ಇದಿರಲಾನುವನಾವ ಶಿವ ಶಿವ
ಗದೆಯ ತಿರುಹುತ ಪುರದ ಕೋಟೆಯ
ಯಿದಿರು ದಾಟುತೆ ಕಪಿಭಯಂಕರ ಬಂದ ರಣಕಾಗಿ ॥ ೨ ॥

ಧರಣಿ ಕಂಪಿಸೆ ತುರಗ ಕಂಬನಿ
ಸುರಿಯೆ ವಾಮಭುಜಾಗ್ರ ಕುಣಿದುವು
ಸುರವಿರೋಧಿಯ ಮುಂದೆ ನರಿಗಳು ನೆರೆದು ಕೂಗಿದುವು ॥
ತರಣಿ ನಿಷ್ಪ್ರಭನಾದ ನಭದಿಂ
ದುರಿವ ಕೊಳ್ಳಿಗಳುದುರೆ ದಿವಸದೊ
ಳಿರದೆ ತಾರೆಗಳುರಿಯೆ ಕವಿದುವು ಹದ್ದು ಕಾಗೆಗಳು ॥ ೩ ॥

ಎಣಿಕೆಯಿಲ್ಲದೆ ಕುಂಭಕರ್ಣನು
ರಣಕೆ ನೂಕಿದ ಹತ್ತು ಕೋಟಿಯ
ಕುಣಿವ ಕುದುರೆಯ ಭದ್ರದಂತಿಯ ನೆಂಟು ಕೋಟಿಯನು ॥
ಮಣಿವರೂಥಗಳಾರು ಕೋಟಿಯ
ನೆಣಿಸಲರಿಯೆನು ವಾಯುದಳವನು
ಫಣಿಯ ಕೊರಳಳುಕಿತ್ತು ದಿಗ್ಗಜ ತಲೆಯ ಕೊಡಹಿದುವು ॥ ೪ ॥

ಹೊಡೆವ ಹರೆಗಳನಂತ ಭೇರಿಯು
ಗಡಣಕೆಡೆಕಡೆಯಿಲ್ಲ ಬಿರುಬಿಂ
ಬಡಿನ ನಿಸ್ಸಳ ಕೋಟಿ ತಂಬಟೆ ಮುರಜ ಡಿಂಡಿಮವು ॥
ಬಿಡದೆ ಮೊರೆಯುವ ಕಹಳೆ ತಿತ್ತಿರಿ
ಕಡೆಯು ಕಾಣೆನು ಪಟಹ ಗಿಡಿಬಿಡಿ
ಸಿಡಿಲ ಹರವರಿಯಂತೆ ತುಂಬಿತು ವಾದ್ಯದಬ್ಬರವು ॥ ೫ ॥

ಧರಣಿಯಡಿಗಡಿಗೊಲೆಯೆ ಶೂಲವ
ತಿರುಹಿ ಪಡೆಸಹಿತ್ಯೈದೆ ಬರುತಿರೆ
ತರುಚರಂಗಳಿಗೊಂದೆ ತರಹರದೋಟ ಶೋಭಿತವು ॥
ತರಣಿಕುಲಪತಿ ಕಂಡು ಮೆಚ್ಚುತ
ಶಿರವ ತೂಗುತ ಹೊರೆಯ ಭಕ್ತನ
ಕರೆದು ಕೇಳಿದನಾವ ಸಾಹಸಮಲ್ಲನಿವನೆಂದು ॥ ೬ ॥

ಚಿತ್ತವಿಸು ಪೌಲಸ್ತ್ಯ ಮುನಿಪನು
ಹೆತ್ತ ಮಗನಿವ ಕುಂಭಕರ್ಣನು
ಹತ್ತುತಲೆಯುವನನುಜ ಸರಿಯಿಲ್ಲಿವಗೆ ಜಗದೊಳಗೆ ॥
ತೊತ್ತು ಗೈವುದು ಲೋಕವೀತಗೆ
ವೃತ್ಯುಗಿತ್ಯುಗಳಿವನ ತೊಂಡರು
ತತ್ತರಜಭವರುಗಳ ಬಗೆಯನು ದೇವ ನೀನುಳಿಯೆ ॥ ೭ ॥

ಶೂಲವೀತಗೆ ಕೈದು ಗೆಲುವರೆ
ಶೂಲಿಗಸದಳ ಇವನ ರಣದಲಿ
ಕೇಳು ರಾವಣ ವರದಿ ಬಲ್ಲಿದನಿವಗೆ ವರವಿಲ್ಲ ॥
ಕಾಳ ರಕ್ಕಸ ಲೋಕವೆಲ್ಲವ
ಗೋಳುಗುಟ್ಟಿಸೆ ಅಜನು ಶಪಿಸಿದ
ಬೀಳು ನೀ ವೃತಕಲ್ಪನಾಗೆನೆ ನಿದ್ದೆ ಗೈದಿಹನು ॥ ೮ ॥

ಇಂದು ವ್ಯಸನದಲೆಬ್ಬಿಸಿದ ಬಲು
ಹಿಂದ ರಾವಣ ಕುಂಭಕರ್ಣನ
ಮುಂದೆ ನಿಲಲರಿದಿವನ ಖುರಪುಟ ಬಿರಿಸು ರಣದೊಳಗೆ ॥
ತಿಂದೊಡಕ್ಕರು ಹಿಂಗದೀತಗೆ
ತಂದೆ ನೀನಿದಿರಾಗಬೇಹುದು
ಮುಂದಿ ನೋಯದ ಮುನ್ನ ದೈತ್ಯನ ಕೆಡಹಬೇಕೆಂದ ॥ ೯ ॥

ಕೇಳಿ ರಘುಪತಿ ನಗುತ ನಿಂದಿರೆ
ಕಾಳರಕ್ಕಸ ಸೇನೆ ಕವಿದುದು
ಶೂಲ ಪಟ್ಟಿಸ ಪರಶು ಖಡ್ಗ ಮುಸುಂಡಿಯಿಂದಿಡುತ ॥
ಶೈಲ ಮರ ಕಲುಗುಂಡ ಸುರಿವುತ
ತೂಳಿದರು ಕಪಿಭಟರು ಕದನದ
ಕಾಲಭೈರವ ಕುಂಭಕರ್ಣನು ತೂಳಿದನು ಪಡೆಯ ॥ ೧೦ ॥

ಒಂದು ಕಡೆಯಲಿ ಖಳರ ಬೊಬ್ಬೆಗ
ಳೊಂದು ಕಡೆಯಲಿ ಕಪ್ಪಿಗಳಬ್ಬರ
ಒಂದು ಕಡೆಯಲಿ ರಥದ ಚೀತ್ಕೃತಿ ಕರಿಯ ಬೃಂಹಿತವು ॥
ಒಂದು ಕಡೆಯಲಿ ತುರಗ ಹೇಷಿತ
ಒಂದು ಕಡೆಯಲಿ ವಾದ್ಯ ನಿಸ್ವನ
ದಿಂದ ಶಬ್ದಬ್ರಹ್ಮ ತುಂಬಿತಜಾಂಡ ಮಂಡಲವ ॥ ೧೧ ॥

ರಕ್ಕಸನು ತನ್ನೆರಡು ಕೈಯಲಿ
ಸಿಕ್ಕಿದನಿತನು ಮೊಗೆದು ಮುಕ್ಕುತ
ಮರ್ಕಟಂಗಳನೊಕ್ಕಲಿಕ್ಕುತ ಮುಂದೆ ಬರುತಿರಲು ॥
ದಿಕ್ಕುಗೆಟ್ಟುದು ಸೇನೆ ಸುರೆಯಲಿ
ಸೊಕ್ಕಿದಾತನು ತನ್ನನರಿಯನು
ಅಕ್ಕಟಾ ಕಪಿಸೇನೆ ಮುರಿದೋಡಿತ್ತು ದೆಸೆದೆಸೆಗೆ ॥ ೧೨ ॥

ಕೆಲರು ಕಂಗಳು ತಿರುಗಿ ಬಿದ್ದದು
ಕೆಲರು ಶರಧಿಯ ಬಿದ್ದು ಸತ್ತುದು
ಕೆಲರು ಗಿರಿಗುಹೆಗಳನು ಹೊಕ್ಕುದು ಮರುಗಿ ಕಂಗೆಡುತ ॥
ಕೆಲರು ಮರಮಟ್ಟುಗಳನೇರಿತು
ಕೆಲರು ಹಿಂದಕೆ ಕಡಲ ದಾಟಿತು
ಬಲವು ಬಯಲಾಯ್ತಾರು ನಿಲುವರು ದೈತ್ಯನಿದಿರಿನಲಿ ॥ ೧೩ ॥

ಕಂಡನಂಗದವೋಡುವವದಿರ
ಗಂಡು ವೇಷವನಾಂತಿರೆಲವೋ
ಭಂಡರಿರ ಕಣದಲ್ಲಿ ಕಂಗೆಟ್ಟೋಡುವರೆ ಭಟರು ॥
ಹೆಂಡಿರುಗಳಪಹಾಸ್ಯವಾಡರೆ
ತೊಂಡ ದೈತ್ಯನ ತಡೆವೆ ನಾ ಮುಂ
ಕೊಂಡು ಕಾದುವೆ ನಿಮ್ಮ ನೋಯಿಸಲೀಸೆ ತಾನೆಂದ ॥ ೧೪ ॥

ಹರಿಯ ಬಾಣಕ್ಕವನು ಗುರಿಯೆಂ
ದುರು ಮದಾಂಧನ ಬಿಟ್ಟು ಕೆಲದಲಿ
ಬೆರಸಿ ಕಾದುವ ಭಟರನಟ್ಟಿತು ವೀರ ಮರ್ಕಟರು ॥
ನೆರೆದ ಜಂಬುಕ ಮತ್ತದಂತಿಯು
ಕೆರಳಿಸುವ ಪರಿಯಾಯ್ತು ಕೆಲದಲಿ
ಬೆರಸಿಕಾದುವ ಭಟರದೇನೆಂದೆಂನದ್ಭುತವ ॥ ೧೫ ॥

ಮರದಲೆರಗಿದ ವಿವಿಧ ಪನಸನು
ಗಿರಿಯುಲಪ್ಪಳಿಸಿದನು ಮತ್ತಾ
ಮರುತನಂದನ ರಥ ರಥಂಗಳ ತುರಗ ತುರಗದಲಿ ॥
ಕರಿಯ ಕರಿಯಿಂ ಸದೆದನಂಗದ
ಹಿರಿಯ ಕಲುಗುಂಡುಗಳ ಭರದಿಂ
ಸುರಿದು ಕೊಂದನು ದನುಜರಟ್ಟಿಗಳಾಡೆ ರಣದೊಳಗೆ ॥ ೧೬ ॥

ಹನುಮ ಕೊಂದನು ಹತ್ತು ಲಕ್ಷವ
ದನುಜಲಕ್ಷವ ನೀಲನೊರಸಿದ
ಪನಸನಜಿಗಿಜಿಮಾಡಿ ಮಡುಹಿದನೆರಡು ಲಕ್ಷವನು ॥
ಕನಕ ರಥ ಹದಿನೆಂಟು ಲಕ್ಷವ
ಮುನಿದು ಮುರಿದನು ನೀಲ ರಕ್ತದ
ವನಧಿಯಾಯಿತು ಕೊಂದ ಶತಬಲಿ ಮೂರು ಲಕ್ಷವನು ॥ ೧೭ ॥

ಅರಿಯ ಗೆಲುವೊಡೆ ಕಾಲುದೊಡಕಿದ
ನೆರೆದ ದೈತ್ಯರ ಸವರಿದಲ್ಲದೆ
ಗಿರಿಯ ಕೀಳಲು ಬಳ್ಳಿ ಮೆಳೆಗಳ ಸವರುವಂದದಲಿ ॥
ಸುರವಿರೋಧಿಯ ಸುತ್ತ ನೆರೆದಿಹ
ಕರಿತುರಂಗಮ ಪತ್ತಿ ಕೆಡಹಲು
ಅರುಣ ಜಲದಲಿ ನೆರೆಯುಲಂಬುಧಿ ಕಲಕಿ ಕೆಸರಾಯ್ತು ॥ ೧೮ ॥

ನೆರೆದ ಪಡೆ ಸಂಹಾರವಾಗಲು
ಕೆರಳಿದನು ಕಲಿ ಕುಂಭಕರ್ಣನು
ತಿರುಗಿ ಶೂಲದಲಪ್ಪಳಿಸಿದನು ಬೆರೆತ ಕಪಿ ಪಡೆಯ ॥
ಧರಣಿಗುರುಳಿತು ನುಚ್ಚುನೂರಾ
ಯ್ತೆರಡು ಕೋಟಿಗಳವನ ಶೂಲಕೆ
ಕರುಳು ಮಾಲೆಯ ಕಟ್ಟಿದಂತಿರೆ ನೆಗಹಲೊಪ್ಪಿದುದು ॥ ೧೯ ॥

ರವಿಜ ಗವಯನು ಗಂಧಮಾದನ
ಪವನನಂದನ ಪನಸ ಶತಬಲಿ
ವಿವಿಧ ನಳ ಗವಯಾಕ್ಷನಿಂತಿವರೊಮ್ಮೆ ಮೋಹರಿಸಿ ॥
ಅವನ ಕೆಣಕಿದರೆಂಟು ದೆಸೆಯಲಿ
ರವಿಜ ಬೆಟ್ಟದಲಿಟ್ಟ ಕೋಪದಿ
ಪವನಭವ ಹೆಗ್ಗಲ್ಲಲಿಟ್ಟನು ಶೂಲವನು ಮುರಿದ ॥ ೨೦ ॥

ಬೆಟ್ಟದಲಿ ಕಲ್ಲಿನಲಿ ಬಲು ಮರ
ಮಟ್ಟನಿಂದಿಡುತಿರಲು ಮೈಯಲಿ
ಹಿಟ್ಟುಹಿಟ್ಟಾಯ್ತೇನನೆಂಬೆನು ನೋವನವನರಿಯ ॥
ಮುಷ್ಟಿಯಲಿ ಚರಣದಲಿ ಖಳ ಸದೆ
ಗುಟ್ಟೆ ಕೆಡಹಿದ ಹಿಂದೆ ಮುಂದಕೆ
ಅಟ್ಟೆ ಕಪಿಗಳ ಚಿಗುಳಿದುಳಿದನು ಸೇನೆ ಮೆದೆಗೆಡಲು ॥ ೨೧ ॥

ಒದೆದ ಕೆಡಹಿದ ನಳನ ಮೈಂದನ
ಸದೆದ ನೀಲನ ತುಳಿದ ಪನಸನ
ಹೃದಯದೊಳಗಸುವಿಲ್ಲ ಮತ್ತಾ ಗವಯ ಗತಿಗೆಟ್ಟ ॥
ಗದೆಯಲಪ್ಪಳಿಸಿದ ಗವಾಕ್ಷನ
ಬದಿಯ ತಿವಿದರೆ ಬಿದ್ದನಂಗದ
ಬೆದರಿ ಕಪಿ ಪಡೆ ಗೋಳುಗುಟ್ಟಿತು ನಾಯಕರು ಬೀಳೆ । ೨೨ ॥

ತರಣಿನಂದನ ಕಿತ್ತನಗ್ಗದ
ಹಿರಿಯ ಪರ್ವತವೊಂದ ದನುಜನ
ಶಿರವನಪ್ಪಳಿಸಿದರೆ ನೊಂದನು ಮತ್ತೆ ತರಹರಿಸಿ ॥
ಉರಿಯನುಗುಳುತೆ ಶೂಲದಿಂದವೆ
ತಿರುಹಿ ರವಿಜನನಿಟ್ಟನದನಾ
ಮರುತನಂದನ ಹಾಯ್ದು ಹಿಡಿದನು ಮುರಿದು ಬೀಸಾಟ ॥ ೨೩ ॥

ಉರಿದು ಕೋಪದಲುಕ್ಕಿ ಕಂಗೆ
ಣ್ಣುರಿ ಚಡಾಳಿಸೆ ಗದೆಯ ಸರ್‍ರನೆ
ತಿರುಗಿ ಕೆಡೆಕೆಡೆಯೆನುತ ಹನುಮನ ಶಿರದಲೆರಗಿದನು ॥
ತಿರುಹಿ ಡೆಂಡಣಿಸುತ್ತ ಮಾರುತಿ
ಧರಣಿಗುರುಳಿದರಸುರರಾರಿತು
ಸುರವಿದಾರಣ ಬೊಬ್ಬಿರಿದನಾಕಾಶ ಗೋಳಿಡಲು ॥ ೨೪ ॥

ಒಡನೆ ಹೆಗ್ಗಿರಿಯಿಂದ ರವಿಸುತ
ಹೊಡೆಯೆ ಗದೆಯಲಿ ಹಿಟ್ಟುಗುಟ್ಟಿದ
ನಡಸಿ ರವಿಸುತನುತ್ತಮಾಂಗವನೆರಗೆ ತರಹರಿಸಿ ॥
ಕೆಡೆದ ರವಿಜನ ಕುಂಭಕರ್ಣನು
ಹಿಡಿದು ಕಂಕುಳೊಳವುಚಿಕೊಂಡನು
ಪಡೆಯ ಪ್ರಾಣವನೊಯ್ವ ಪರಿಯಲಿ ತೆರಳಿದನು ಪುರಕೆ ॥ ೨೫ ॥

ಅತ್ತಲಸುರ ಮಹೋತ್ಸವಂಗಳ
ವಿಸ್ತರಿಸಿದನು ಲಾಜ ಕುಸುಮವ
ಸುತ್ತ ಸುರಿದರು ಗುಡಿಯ ಕಟ್ಟಿಸಿ ಕಳಸ ಕನ್ನಡಿಯ ॥
ಎತ್ತುವಾರತಿ ತಳಿರು ತೋರಣ
ಸುತ್ತ ಪನ್ನೀರುಗಳ ಚಳೆಯದಿ
ಚಿತ್ತವೊಸೆದುದು ಮೂರ್ಛೆ ತಿಳಿದುದು ಮೆಲ್ಲನರ್ಕಜಗೆ ॥ ೨೬ ॥

ಅನ್ನೆವರ ಹನುಮಂತನಸು ಚೈ
ತನ್ಯವಡೆದನು ಸುತ್ತ ನೋಡಿದ
ತನ್ನ ಹೊಡೆದವನೆತ್ತ ಹೋದನೊ ಕಾಣೆನರ್ಕಜನ ॥
ಬನ್ನವಟ್ಟಿಹ ಕಪಿಕುಲಂಗಳ
ಮುನ್ನ ಸತ್ರಾಣಿಸುವೆ ರವಿಸುತ
ತನ್ನ ಸತ್ವದಿ ಬರಲಿ ಮೇಣಲ್ಲದಿರೆ ಬಿಡಿಸುವೆನು ॥ ೧೭ ॥

ನಾನು ಬಿಡಿಸಲು ಕೀರ್ತಿ ತಪ್ಪದು
ದಾನವಾಗ್ರಣಿ ಕೊಂಡುಹೋದನು
ಏನಮಾಡುವೆ ಬಿಡಿಸದಿದ್ದರೆ ಕಾರ್ಯ ತಪ್ಪುವುದು ॥
ಭಾನುಸುತ ಕನಲುವನೊ ಬಿಡಿಸಲು
ತಾನೆ ಬಹನೊಂದೆರಡು ಗಳಿಗೆಗೆ
ತಾನು ನೋಡುವೆನೆನುತ ಸಂತೈಸಿದನು ನೊಂದವರ ॥ ೨೮ ॥

ರಾಮ ನಾಮವ ನೆನವುದೆಂದಾ
ಭೀಮನೊಯ್ಯನೆ ಕಿವಿಯಲುಸುರಲು
ರಾಮ ರಾಘವ ರಕ್ಷಿಸೆಂದೆನೆ ಸತ್ವ ಹಿರಿದಾಯ್ತು ॥
ಆ ಮಹಾ ಖಳನುರು ಭುಜಾಂತರ
ಸೀಮೆಯಿಂ ಜಡಿತೆಯಲಿ ಜಿಗಿದನು
ರಾಮನಾಮವದಾರ ಕಾಯದು ನಂಬಿ ನೆನೆವುತಿರೆ ॥ ೨೯ ॥

ಕರೆ ಮನದ ರಕ್ಕಸಗೆ ನಾನೊಂ
ದುರುವ ಕುರುಹನು ಮಾಡಿದಲ್ಲದೆ
ಬರಿದೆ ಹೋಹುದು ನೀತಿಯಲ್ಲೆನುತೆರಡು ಕೈಗಳಲಿ ॥
ಹರಿದುಕಿತ್ತನು ಕಿವಿಗಳೆರಡನು
ಮೆರೆವ ಕುಂಡಲ ಸಹಿತ ಮೂಗನು
ಹರಿದು ಬಾಯಲಿ ಕಚ್ಚಿ ಹಾರಿದನರರೆ ಕಪಿ ವೀರ ॥ ೩೦ ॥

ವೀರನಧಟಿಗೆ ನೆರೆದ ಕಪಿಪಡೆ
ಯಾರಿತಿತ್ತಲು ಮೂರು ದೆಸೆಯಲಿ
ಸೋರುತಿಹ ಬಿಸಿನೆತ್ತರಿಂದವೆ ಬೆಟ್ಟದಂತಿರ್ದ ॥
ವೀರ ಭಟನಾ ಕುಂಭಕರ್ಣನು
ಭೂರಿ ಕೋಪದಲುಕ್ಕಿ ತಿರುಗಿದ
ಪೌರ ಜನರನು ನೋಡಿ ನಾಚುತ ಬಂದ ರಣಕಾಗಿ ॥ ೩೧ ॥

ಭಂಗವಟ್ಟಾ ಕುಂಭಕರ್ಣನು
ಸಿಂಗ ಕೆರಳಿದವೋಲು ಕಪಿಗಳ
ನುಂಗತೊಡಗಿದನೆರಡು ಕೈಯಲಿ ಮೊಗೆದು ಭರದಿಂದ ॥
ಹಿಂಗದಾತನ ಪಾನ ಕಿವಿ ನಾ
ಸಂಗಳಿಂ ಸುರಿವ ರಕುತದಿ ಕಪಿ
ಸಂಗ ಕಂಗೆಡುತಿರ್ದುದರಿಯದೆ ಮೊಗೆದು ತಿನುತಿರಲು ॥ ೩೨ ॥

ಕೆಲಬರಜಿಗಿಯಾಗಲಣಲೊಳು
ಕೆಲರು ಕಟವಾಯಲ್ಲಿ ಜೋಲಲು
ಕೆಲರು ದಾಡೆಯ ಕೆಳಗೆ ಸಿಲುಕಲು ತೆರಹುಗಾಣದಿರೆ ॥
ಖಳರು ವಾನರರೆಂದು ನೋಡದೆ
ಹೊಳಲ ಬಾಯೊಳಗೊಟ್ಟುತಿರ್ದನು
ಖಳನ ಜಠರದಲೆಂಟು ಲಕ್ಷದ ಭಟರು ಸಿಕ್ಕಿದರು ॥ ೩೩ ॥

ಹಗೆಯ ಬಸುರೊಳು ಸಿಲುಕಿದವರನು
ತೆಗೆವೆನೆನುತವೆ ಲಕ್ಷ್ಮಣಾಂಕನು
ಬಗಿದನರ್ಧ ಶಶಾಂಕಶರದಲಿ ಖಳನ ನಡು ಬಸುರ ॥
ಜಿಗಿದು ಹೊರವಡುತಿರಲು ನಡುವಿಗೆ
ಬಿಗಿದ ಘಂಟೆಯು ಹರಿದು ಬಿದ್ದುದು
ನಗಚರಂಗಳು ಸಿಕ್ಕಿತದರೊಳಗೆಂಟು ಸಾವಿರವು ॥ ೩೪ ॥

ಒಂದು ಮಾಡಿದಡೊಂದು ಸಂದುದು
ಬಂಧವಾಯಿತು ಖಳನ ಹೇರೊಡ
ಲಿಂದ ಬಿದ್ದರನೊಳಗುಗೊಂಡುದು ಘಂಟೆ ಕವ್ರುಚುತಲಿ ॥
ಹಿಂದೆ ಹೋಹವರಿಲ್ಲ ದನುಜನ
ಮುಂದೆ ಮಗುಚುವರಿಲ್ಲ ಕಪಿಗಳು
ನೊಂದರೆನುತವೆ ಅದೊಂದುಪಾಯವ ನೆನೆದ ಹನುಮಂತ ॥ ೩೫ ॥

ಬೆಳೆಸಿ ಬಾಲವ ನೀಡಿ ಘಂಟೆಯು
ಚಳಕದಲಿ ಮಗುಚಿದನು ಕಪಿಗಳು
ಘಳಿಲನೆದ್ದುದು ಕಾಲು ಕೈ ತಲೆ ಬಾಲ ನೊಂದವರು ॥
ಕೊಲುತ ಕೈಯಲಿ ನೆರೆದ ಸೇನೆಯ
ತಳಪಟವ ಮಾಡಿದನು ದೈತ್ಯನ
ಕೊಳುಗುಳದ ಪರಿ ಹೊಸತು ಕಪಿಗಳ ಕಂಗೆಡಿಸುತಿರಲು ॥ ೩೬ ॥

ಹಲವು ಕಾಲಕ್ಕೆನಗೆ ಕುಂಭಿನಿ
ಯೊಲವು ಸೇರಿತು ಬಾಯ ಬರ ಬಿಡೆ
ಬಲದಲೆಡದಲಿ ತುಂಬಲಾಯಿತು ನೆರೆದ ಮರ್ಕಟರ ॥
ಇಳೆಯೊಳಾನೇ ಧನ್ಯ ಬಗೆವೊಡೆ
ಸಲೆ ಬಸುರ ನಾ ತುಂಬಿಕೊಂಡೊಡೆ
ಬಳಿಕ ಕಾಂಬೆನು ರಾಮುಗೀಮನನೆನುತ ಹರಿತಂದ ॥ ೩೭ ॥

ಸೇನೆ ಕರ ಸಂಹಾರವಾಗಲು
ಜಾನಕೀಪತಿ ಬಿಲ್ಲ ಹಿಡಿದನು
ದಾನವೇಶ್ವರ ನಿಲ್ಲು ನಿಲ್ಲನುವಾಗು ಕಾದೆನಲು ॥
ನೀನಲಾ ರವಿಕುಲದೊಳುದಿಸಿದ
ಜಾನಕೀಪತಿಯೆಂಬವನು ನಿನ
ಗಾನು ಸರಿಯೇ ಕಾದ ಬರುವೀ ಮಾತು ಹೊಸತೆಂದ ॥ ೩೮ ॥

ಒಡೆಯರಿಗೆ ಭೃತ್ಯಾಪರಾಧವು
ಕಡೆಗೆ ಶಿಷ್ಯನ ಪಾಪ ಗುರುವಿಗೆ
ಮಡದಿ ಮಾಡಿದ ಪಾಪ ಪತಿಗೆಂಬಿನಿತು ನಾಣ್ಣುಡಿಗೆ ॥
ಜಡಜಪೀಠನು ನೀಡಿದೀ ಹೇ
ರೊಡಲ ತುಂಬಿಸಲೇನು ಮಾಡೆಯೊ
ಒಡೆವುದೇ ವಿಧಿ ನನಗೆ ನೀನಾ ವಿಧಿಯ ಸೇರೆಂದ ॥ ೩೯ ॥

ಗೆಲುವು ನಮ್ಮದೊ ಸೋಲು ನಮ್ಮದೊ
ಇಳೆಯೊಳರಿತವರಾರು ಅಂತಿರ
ಲಲಗ ಹಿಡಿದೆವು ನಿಮ್ಮಡಿಗಳಿದಿರಿನಲಿ ಕಣದೊಳಗೆ ॥
ಗೆಲಿದೊಡಲ್ಲದೆ ನಮಗೆ ಮಾಣದು
ಗೆಲಲಿ ಸೋಲಲಿ ಒಡೆಯ ಬಂಟರ
ಬಲುಹ ಮೂಜಗವರಿಯಲಾವೇ ಧನ್ಯರಹುದೆಂದ ॥ ೪೦ ॥

ಹಿಂದಣುಪಕೃತಿ ನಿಲಲಿ ಸಮರಕೆ
ಬಂದೆವಲ್ಲಾ ದೈವ ಗತಿಯಲಿ
ಬಂದುದಕ್ಕೀ ಭಂಗವಾಯಿತು ಇದಕೆ ತಕ್ಕುದನು ॥
ಒಂದೆರಡು ಲಾಗಿನಲಿ ನಿಮ್ಮಸು
ಹಿಂದುಮುಂದನು ಮಾಡದುಳಿವೆನೆ
ಎಂದು ದಾನವ ಗದೆಯ ತಿರುಹುತ ಮುಂದೆ ಹರಿತಂದ ॥ ೪೧ ॥

ದಾನವರಿಗಾಹಾರಭೂತರು
ಮಾನವರು ಮತ್ತಿಂದು ನಿನ್ನಯ
ಮಾನಿನಿಯ ನವಗಿತ್ತೆ ಸಾಯಸಗೊಂಡು ನೀನೀಗ ॥
ಕಾನ ಕಪಿಗಳಲೆನ್ನ ಬಸುರನು
ಮಾನವಿಲ್ಲದೆ ತುಂಬಿಸಿದೆ ಮ
ತ್ತೇನು ಲೇಸನು ಮಾಡ ಕರೆದೆಯೊ ಎಂದ ಘಟಕರ್ಣ ॥ ೪೨ ॥

ನಾವು ಮಾಡಿದ ಲೇಸ ಜಗದೊಳ
ಗಾವ ಮಾಡುವ ನಿನಗೆ ನಿನ್ನವೊ
ಲಾವನೈ ನಾಶಕನು ತಿಳಿಯಲು ಭುವನದೊಳಗುಂಟು ॥
ನಾವು ಮಾರಿಯು ನಿನಗೆ ಮದುವೆಯ
ನೋವಿ ಮಾಡಲು ಬಂದೆವೀಗಳು
ಸಾವ ಲಗ್ನವು ಸನಿಯ ಬಂದುದು ಮುಂದೆ ಬಾಯೆಂದ ॥ ೪೩ ॥

ಕೊಂದೆ ಗಡ ಬಾಲಿಯ ವಿರಾಧನ
ಕೊಂದೆ ತಾಟಕಿ ವರ ಸುಬಾಹುವ
ಹಿಂದಣವರಲ್ಲಾವು ಸಾವರೆ ನಿನ್ನ ಕೈಯಲ್ಲಿ ॥
ನಿಂದು ಕಾದಿದೊಡಹುದು ನಿನ್ನನು
ತಿಂದೆನಿದೊ ನೋಡೀಗ ಬಾಯೆನು
ತೆಂದು ದಾನವ ಗದೆಯ ತಿರುಹುತ ಮುಂದೆ ಹರಿತಂದ ॥ ೪೪ ॥

ಹಿಡಿದು ಸರ್ರನೆ ತಿರುಹಲಮರರು
ನಡುಗಿ ಕಂಗೆಟ್ಟೋಡಿತತ್ತಲು
ಬಿಡದೆ ಸುಂಟರುಗಾಳಿಯುಟ್ಟಿತು ಭಗಣ ಮಂಡಲಕೆ ॥
ಪೊಡವಿಪತಿ ಕೋದಂಡ ಧರಿಸುತ
ತೊಡಚಿ ವಾಯುವ್ಯಾಸ್ತ್ರದಿಂದವೆ
ಕಡಿಯೆ ಕೈ ಗದೆ ಸಹಿತ ಬಿದ್ದುದು ಸೇನೆ ನುಗ್ಗಾಯ್ತು ॥ ೪೫ ॥

ಅಹುದು ಭಲರೇ ರಾಮ ನರಳಿನ
ವಹಿಲ ಲೇಸಾಯ್ತಾಯ್ತು ಮೆಚ್ಚಿದೆ
ಮಹಿಮ ನೀ ದಿಟವೆನುತ ಮುದ್ಗರವಿಡಿದನೆಡಗೈಯ ॥
ಬಹಳ ಸತ್ವದಿ ತಿರುಹಿ ಹರಿಯ
ಪ್ರಹರಿಸುತ್ತಿರಲೊಡನೆ ರಘುಪತಿ
ರಹಣ ಮಾಡಿದ ಮಹೇಂದ್ರ ಬಾಣದಿ ಕಡಿದನಾ ಕೈಯ ॥ ೪೬ ॥

ಎರಡು ಕೈಯುಡಿಗೆಂಟು ಸಾವಿರ
ತರುಚರಂಗಳು ನುಗ್ಗುನುರಿಯಾ
ಯ್ತೆರಡು ಮೋಟನು ತಿರುಹಿ ಬೀಸಲು ಸೇನೆ ಮೆದೆಗೆಡೆಯೆ ॥
ಎರಡು ಶರದಿಂ ಕುಂಭಕರ್ಣನ
ಎರಡು ತೋಳನು ಕಡಿಯಲಾ ಖಳ
ಚರಣದಲಿ ತುಳಿತುಳಿವೆನೆನುತ್ತೈತರಲು ಹರಿ ಕಂಡ ॥ ೪೭ ॥

ತೋಳು ಹೋದರೆಯೇನು ರಾಘವ
ಕೇಳಿದರಿಯಾ ರಾಹು ಕೇತುಗ
ಳೂಳಿಗಂಗಳ ನಿನ್ನ ಸೇನೆಯನ್ನೈದೆ ನುಂಗುವರೆ ॥
ಸಾಲದೇ ಬಾಯೊಂದು ಮತ್ತಿನ
ಕಾಲು ನಾಲಗೆಯಿಂದ ಲೋಕದಿ
ಬಾಳನೇ ಗೆಲವಿಂಗೆ ಹೆಕ್ಕಳಿಸದಿರು ನೀನೆಂದ ॥ ೪೮ ॥

ಸುರಶಿರೋಮಣಿ ನೋಡಿ ಮೆಚ್ಚುತ
ಭರದಿ ತೊಡಚಿದ ದಿವ್ಯ ಬಾಣದ
ಪರಿಯ ಕಂಡಾ ಕುಂಭಕರ್ಣನು ನಿಂದು ಮನದೊಳಗೆ ॥
ಹರಿಯ ನೆನೆವುತ ಹರಿಯ ನೋಡುತ
ಹರಿ ನಮೋಜಯಯೆನುತ ನಿಂದಿರೆ
ಅರಸ ಬಾಣವ ಬಿಟ್ಟ ತಲೆಗಡಿದಟ್ಟಿ ನಿಟ್ಟಿಸೆಯೆ ॥ ೪೯ ॥

ಆರಿದುದು ಕಪಿಸೇನೆ ರಕ್ಕಸ
ಮೇರುಗೆಡೆವಂದದಲಿ ಬಿದ್ದನು
ವಾರಿನಿಧಿ ಹೊರಸೂಸೆ ನೆಲ ನೆಗೆಯಲ್ಕೆ ಮರ್ಕಟರು ॥
ನೀರೊಳಗ್ದವು ಬೀಳೆ ಲಂಕಾ
ದ್ವಾರ ಕಿತ್ತುದು ಕೋಟೆ ಬಿದ್ದುದು
ಧಾರಿಣಿಯು ಹೊತ್ತಹಿಯು ತಲೆಗಳು ಜಡದು ಝುಮ್ಮೆಡಲು ॥ ೫೦ ॥

ಎದ್ದನಾ ಖಳ ಮೂರು ದಿವಸಕೆ
ಬಿದ್ದನಾ ಖಳ ಮೂರು ದಿವಸಕೆ
ತಿದ್ದಿತಾತನ ಹಣೆಯುಬರಹವು ದಿವಸವಾರರಲಿ ॥
ಬಿದ್ದುದಾ ಕಪಿಸೇನೆ ದೈತ್ಯನ
ಯುದ್ಧದಲಿ ಮೂವತ್ತು ಕೋಟಿಯು
ನರ್ಧ ಜೀವವ ಮಾಡಿ ಬೊಮ್ಮನ ಬೆರಸಿದನು ದನುಜ ॥ ೫೧ ॥

ಹರುಷದಲಿ ಗುಡಿಗಟ್ಟಿ ಕುಣಿದುದು
ಸುರರ ಸಂತತಿ ಕುಸುಮ ವೃಷ್ಟಿಯು
ಸುರಿಯೆ ದೇವಿಯುರಾಡೆ ನಭದಲಿ ಪಾಡೆ ಕಿನ್ನರರು ॥
ಹರಿಯ ಭುಜಬಲ ಸಾಹಸಂಗಳ
ನಿರದೆ ಕೊಂಡಾಡುತ್ತಲಿರ್ದರು
ಪರಮ ಮಂಗಳವಾಯ್ತು ಧರೆಗಾನಂದಮಯವಾಯ್ತು ॥ ೫೨ ॥

ತರುಚರಂಗಳ ಚಾರಿವರಿದಾ
ನರನ ಕಳವಳಗೊಳಿಸಿ ಕಾದಿದ
ಹರಿಯ ಶರಕೊಳಗಾಗಿ ಕೈಗಳು ಹೋಗೆ ಕಂಗೆಡದೆ ॥
ಭರದಲೊದಗಿದ ಕಾಲಕರ್ಮಕೆ
ಸರಿದ ಕಡುಗಲಿ ಕುಂಭಕರ್ಣನು
ಧುರದಲಳಿದನು ದೇವ ಚಿತ್ತೈಸೆಂದರಾ ಚರರು ॥ ೫೩ ॥

ಕೇಳಿ ಬಸುರನು ಬಡಿದು ಚಿಂತಾ
ಲೋಲ ಮೂರ್ಛೆಗೆ ಸಂದು ತಿಳಿದನು
ಕಾಳುಮಾಡಿದೆ ವೀರ ತಮ್ಮನ ಕೊಂದೆನಕಟೆನುತ ॥
ಏಳದಿರಲೆಬ್ಬಿಸಿದೆ ಕದನದಿ
ಮೇಲುದಾಗನು ನೋಡದೆನ್ನಯು
ತೋಳು ಮುರಿದುದು ಸುರರ ಜಠರದ ಶೂಲ ಹೋಯ್ತೆಂದ ॥ ೫೪ ॥

ಸುರನರೋರಗ ಯಕ್ಷ ಗಣವನು
ಧುರಧಿ ಲೆಕ್ಕಿಸದಿರ್ದ ವೀರನು
ನರನ ಬಾಣದಲಳಿವನೇ ನಿಜ ವೀರವೇನಾಯ್ತು ॥
ಸುರರು ನಗುವಂತಾಯ್ತು ವಜ್ರದ
ಗಿರಿಯು ಸಾರದ ಸತ್ವ ತೀದುದು
ಪುರವ ಕಪಿಗಳು ಕವಿಯೆ ಸದರವೆ ತಮ್ಮ ನೀನಿರಲು ॥ ೫೫ ॥

ಹಿಂದೆ ವಿಭಿಷಣನೆಂದ ನುಡಿಗಳು
ಬಂದುದಂಗೈ ಮೇಲೆ ಮೊಳೆತುದು
ಇಂದ್ರಜಿತು ತನಗೆಂದ ನುಡಿಗಳು ತಾಗಿತಿಂದಿನಲಿ ॥
ಒಂದ ಕೇಳದೆ ಎಗಡು ಬಗೆಯದೆ
ಬಂಧುಘಾತಕಿ ಪಾಪಿಯಾದೆನೆ
ಯೆಂದು ರಾವಣ ಹಲುಬೆ ತಿಳುಹಿದ ಮಾರಿಮುಖ ಬಂದು ॥ ೫೬ ॥

ಹೋದ ತಮ್ಮನು ಬಹನೆ ಈ ಪರಿ
ಖೇದಗೊಂಬರೆ ಕಣನ ಮಧ್ಯದಿ
ಕಾದಿ ಸತ್ತವಗಳುವರೇ ನೀ ಮೂಢನಂದದಲಿ ॥
ಮೂದಲಿಸುತಲಿ ಕಾದಿ ಸಾವುದು
ಹಾದಿ ವೀರರಿಗಖಿಳ ಶಾಸ್ತ್ರವ
ನೋದಿದವ ನೀ ಮರುಳುಗೊಂಬರೆ ಮಾಣು ಸಾಕೆಂದ ॥ ೫೭ ॥

ಹಲವು ನೀತಿಯ ಶಾಸ್ತ್ರಸಾರವ
ತಿಳುಹಿ ದೈತ್ಯನ ಮನದ ಶೋಕವ
ತಿಳುಹಿ ಕಳೆದನು ಚಾರುಚತುರೋಕ್ತಿಗಳ ಬೋಳಯ್ಸಿ ॥
ನಳಿನ ಸಖಗಪರಾಶಯಾಂಗನೆ
ಯೊಲವು ಸೇರಿತು ಹಿಮಮಯೂಖನು
ಸುಳಿದ ನಭ್ರದ ಪಥವು ಧವಳಿತವಾಯ್ತು ಥಳಥಳಿಸಿ ॥ ೫೮ ॥

---

## ೨೬ನೇ ಸಂಧಿ

ಪಲ್ಲ ॥ ದನುಜರಾಯನ ಸುತರು ಕಾದಿತು
ವನಚರೇಂದ್ರರ ಕೂಡೆ ನಾಕದ
ವನಿತೆಯರ ಬೆರಸಿದರು ವೀರಸ್ವರ್ಗ ಭೋಗದಲಿ ॥

ಪದ ॥ ಇತ್ತ ಮಂಡೋದರಿಯು ಗಂಡನು
ಹತ್ತು ಮೊಗವನು ತೊಳೆದು ಹಣೆಯಲಿ
ಬಿತ್ತರದಿ ಕತ್ತುರಿಯ ತಿಲಕವನಿಟ್ಟು ಶೃಂಗರಿಸಿ ॥
ಕೃತ್ತಿವಾಸಂಗೆರಗಿ ದೇವರ
ನೃತ್ಯ ಬಂದೋಲಗವನಿತ್ತನು
ಸುತ್ತ ತಿರುಗಿತು ಮಂತ್ರಿ ಮಕ್ಕಳು ಸುಭಟ ಸಂದೋಹ ॥ ೧ ॥

ತ್ರಿಶಿರ ದೇವಾಂತಕ ನರಾಂತಕ
ನಸುರಭಟ ಮಹಕಾಯನೆಂಬವ
ವಿಷಮ ವಿಕ್ರಮನಾ ಮಹೋದರ ಬಿರುದಿನತಿಕಾಯ ॥
ಹೆಸರ ವೀರರು ಸಭೆಯಲಿದ್ದು
ದಶಶಿರಂಗತಿ ಮೋಹದವದಿರು
ಒಸೆದು ಭಾಷೆಯನಿತ್ತರರುವರು ತಂದೆಯಿದಿರಿನಲಿ ॥ ೨ ॥

ಕಳುಹಿ ನೋಡುವುದೆನುತ ತನ್ನನು
ಕಳದ ಮಧ್ಯದಿ ಹಗೆಯ ಹರಣವು
ಕಳೆದ ವಾರ್ತೆಯ ನಿನಗೆ ತರಿಸುವೆನೆಂದನಾ ತ್ರಿಶಿರ ॥
ಕೊಲುವೆ ಕಪಿಗಳನಹಿತರಿಬ್ಬರ
ತಲೆಯ ಹರಿಯಾಣದಲಿ ತರಿಸುವೆ
ಗೆಲದೆ ಮುಖವನು ನೋಡೆನೆಂದು ನರಾಂತಕನು ನುಡಿದ ॥ ೩ ॥

ಹಿಂದೆ ರಣದಲಿ ನಾ ನರಾಂತಕ
ನೆಂದು ಹೆಸರಿಸಿಕೊಂಡೆ ಕಪಿಗಳ
ಕೊಂದು ಜಗದಲಿ ವಾನರಾಂತಕನೆನಿಸಿಕೊಂಬೆನೆನೆ ॥
ತಂದೆ ದುಗುಡವ ಬಿಡು ಸಮೀರಣ
ನಂದನನು ತಾನೊಬ್ಬನುಳಿವನು
ಕೊಂದು ತೋರುವೆ ನಾ ಮಹೋದರನಹಡೆ ಕೇಳೆಂದ ॥ ೪ ॥

ನಾ ಮಹೋದರನಹುದದಾದೊಡೆ
ರಾಮ ಲಕ್ಷ್ಮಣರಿಬ್ಬರನು ನಿ
ರ್ನಾಮರೆನಿಸುವೆ ಒಬ್ಬ ಮರುತಜನುಳಿಯೆ ಮಿಕ್ಕವರ ॥
ತೋಮರದಲೊರಸುವೆನು ರಣದಲಿ
ಭೂಮಿಸುತೆ ತಾನೊಲಿದು ತಾತನ
ಕಾಮಿಸುವ ವೋಲಾನು ಮಾಡುವೆನೆನ್ನ ಕಳುಹೆಂದ ॥ ೫ ॥

ಮುಟ್ಟಿ ನಾ ಮರಿಮರ್ಕಟಂಗಳ
ಮೆಟ್ಟಿ ಸೀಳುವೆ ಚಾರಿವರಿವೆನು
ಇಟ್ಟಿ ಪಟ್ಟಿಸ ಸರಳು ಮಿಟ್ಟಿಗಳಿಂದ ಕಪಿಗಳನು ॥
ನೆಟ್ಟನವನಿಗೆ ಕೆಡಹಿ ರಾಮನ
ಕಟ್ಟಿ ತಂದೊಪ್ಪಿಸುವೆ ನಿನಗಾಂ
ಕೊಟ್ಟಿ ಭಾಷೆಯನೆನುತ ಘರ್ಜಿಸಿದನು ಮಹಾಕಾಯ ॥ ೬ ॥

ಒಬ್ಬ ಕೊಂದನು ಒಬ್ಬ ತಿಂದನು
ಒಬ್ಬ ಕಡಿದನು ಒಬ್ಬ ಕೆಡೆದನು
ಒಬ್ಬ ಸವರಿದನೊಬ್ಬ ನಿಂದನು ಒಬ್ಬ ಮರಳಿಚಿದ ॥
ಅಬ್ಬರಿಸಿ ನುಡಿವವರು ಸುಖವನು
ತುಬ್ಬದಿಹರೇ ನಿನಗೆ ನೆರೆದಿವ
ರೊಬ್ಬ ರಾಮನದೇನಮಾಡುವನೆಂದನತಿಕಾಯ ॥ ೭ ॥

ಒಂದು ಶರದಲಿ ತರಿದ ತಾಳವ
ನೊಂದು ಬಾಣದಿ ಮುರಿದ ವಾಲಿಯ
ನೊಂದು ವಿಶಿಖದಿ ಶರಧಿಯನು ಕುಡಿಸಿದನು ಜಗವರಿಯೆ ॥
ಇಂದ್ರಜಿತುವಿನ ಕಟ್ಟ ಗೆಲಿದನು
ಕೊಂದು ಕಳೆದನು ಕುಂಭಕರ್ಣನ
ನಿಂದಿರೇಶನ ಕಾದಿ ಕೊಲ್ಲದೆ ಮಾಣರಿವರೆಂದ ॥ ೮ ॥

ದೈವ ಬಲವೇ ಬಲವು ಪೌರುಷ
ವೇವುದನ್ಯಾಯಿಗಳಿಗೆತ್ತಣ
ದೈವ ಧರ್ಮದ್ರೋಹಪರರಿಗೆ ಜಯವದೆತ್ತಣದು ॥
ಏವರಿತ್ತಾ ಭಾಷೆಗಳ ನಾ
ನೀವುದಿಲ್ಲವು ನಿನಗೆ ರಣದಲಿ
ಸಾವೆನಲ್ಲದೆ ಗೆಲಿದೊಡಲ್ಲದೆ ಮಗಳೆ ನಾನೆಂದ ॥ ೯ ॥

ಸತಿಯ ಬಿಡುವಾ ಮಾತು ನಿಮ್ಮಯ
ಮತಿಗೆ ಸೇರದು ಬಿಡಲು ಹೇಳಲು
ಖತಿಗೆ ಕಾರಣ ನಾನು ಸಂಧಿಯ ಹೇಳುವವನಲ್ಲ ॥
ಸತಿಯ ಬಿಡದೊಡೆ ರಾಮ ಖಳಕುಲ
ತತಿಗೆ ಕೇಡನು ಹಣ್ಣದುಳಿಯನು
ಪಿತನ ಭಾಗ್ಯಕೆ ಕಾದುವೆಮ್ಮಲಿ ಕೊರತೆಯಿಲ್ಲಿಂಪ ॥ ೧೦ ॥

ಮೂದಲಿಸಿ ಹಿಮ್ಮೆಟ್ಟದಿದಿರಲಿ
ಕಾದದುಳಿಯೆನು ಜಯಪರಾಜಯ
ವಾದುದಾಗಲಿ ಪತಿಯ ಭಾಗ್ಯವು ಬಂಟನಾಳುತನ ॥
ಕಾದಿ ಗೆಲುವೆನು ಮೇಣು ರಣದಲಿ
ಹೋದನೆನಿಸುವೆ ಕಳುಹು ಸೀತೆಯ
ಬಾಧೆ ಬೇಡೆನುತೆದ್ದು ನಿಂದನು ಸಭೆಯೊಳತಿಕಾಯ ॥ ೧೧ ॥

ವಿದಿತ ನೀತಿಯ ಕೇಳಿ ತಾತನ
ವದನ ಕಂದಿದ ಕಂಡು ಕುವರನು
ವಿಧಿಯ ಲಿಖಿತವನಾರು ಬಲ್ಲರುಯೆಂದ ಮನದೊಳಗೆ ॥
ಮದಮುಖಂಗಿದು ಪಥ್ಯವಲ್ಲಾ
ಬದುಕ ನೀಗಿದನಕಟಯೆನುತವೆ,
ತ್ರಿದಶರಿಪುವಿಗೆ ಹರುಷವಹ ಮಾತುಗಳ ತೊಡಗಿದನು ॥ ೧೨ ॥

ತಂದೆಯೆಂಬುದು ದೈವ ಸುತರಿಗೆ
ತಂದೆಯೊಲುವುದೆ ಧರ್ಮ ಸುತರಿಗೆ
ತಂದೆಯೆಂದಂತಿಹುದು ತತ್ಪರಿತೋಷಪರರಾಗಿ ॥
ಎಂದು ನಗುತತಿಕಾಯ ರಾಮನ
ಕೊಂದು ಕಳೆವೆನು ದುಗುಡವನು ಬಿಡು
ತಂದೆ ನೇಮವನಿತ್ತು ಕಳುಹೆನೆ ಹರುಷಮುಖನಾದ ॥ ೧೩ ॥

ನಗೆಯ ಸೂಸುತ ಹತ್ತು ಮುಖದಲಿ
ತೆಗೆದು ಮಕ್ಕಳನಪ್ಪಿ ಹರಸಿದ
ಹಗೆಯ ಗೆಲ್ಲುವುದೆಂದು ಕಪ್ಪುರ ವೀಳೆಯವನಿತ್ತ ॥
ಜಗದೊಳೊಬ್ಬರಿಗಳಕದಭಟರು
ಬಿಗಿದು ಸೇನೆಯ ಕೂಡಿ ಬಲು ಕಾ
ರ್ಮುಗಿಲ ಮರಿಗಳವೋಲು ಹೊರವಡೆ ಭೇರಿಮೊಳಗಿದುವು ॥ ೧೪ ॥

ಹೊಡೆವ ರಣವರಿ ಪಟಹ ಡಿಂಡಿಮ
ವಡಸಿದುವು ನಿಸ್ಸಾಳದಬ್ಬರ
ಬಿಡದೆ ನೂರೀರೇಳು ತಿತ್ತಿರಿ ಕಹಳೆ ಚೀರಿದುವು ॥
ಪಡೆಯ ಲೆಕ್ಕವ ಬಲ್ಲನೀಶ್ವರ
ನೊಡವಿ ಕುಸಿದುದು ತುರಗ ಕರಿ ರಥ
ಕಡೆಯ ಕಾಣೆನು ನಾಲ್ಕು ದಿಕ್ಕಿನ ಬಾಗಿಲುಗಳಲ್ಲಿ ॥ ೧೫ ॥

ತರಣಿಕುಲಪತಿ ಕಂಡ ರಕ್ಕಸ
ನೆರವಿ ಘೋರಿಸೆ ರಣಕೆ ಬರುವುದ
ಹೊರೆಯ ಭಕ್ತನ ಕರೆದು ಕೇಳಿದನಿವರದಾರೆಂದು ॥
ಅರಸ ಪಶ್ಚಿಮ ಗಿರಿಯ ಹೋಲುವ
ವರ ಸುದರ್ಶನವೆಂಬ ರಥದಲಿ
ತರಣಿ ತೇಜದಲೆಸೆವನಾತ ಮಹೋದರನು ದೇವ ॥ ೧೬ ॥

ಹೊಳೆವ ಹೇಮದ ರಥಕೆ ಹೂಡಿದ
ಲುಳಿಯ ತೇಜಿಯ ಶಸ್ತ್ರತುಂಬಿದ
ಹಲವು ಕಂಬುಗೆ ಸಹಿತ ಮೆರೆಯುವ ಹುಲಿಯ ಹಳವಿಗೆಯ ॥
ಮುಳಿದೊಡಾತನ ಶಕ್ರ ವರುಣಗೆ
ಗೆಲುವೊಡಸದಳ ಮೂರು ಮಕುಟದ
ಖಳ ಕುಮಾರ ತ್ರಿಶಿರನೆಂಬವ ಬಲದಲಿಪ್ಪಾತ ॥ ೧೭ ॥

ಬಿಳಿಯ ತೇಜಿಯನೇರಿ ಕೈಯಲಿ
ಬಲುಹಿನಗ್ಗದ ಗದೆಯ ಹಿಡಿದಿಹ
ದಲನಿಸೂದನನಂತೆ ತೋರುವನವ ನರಾಂತಕನು ॥
ತಳಿತ ಮಾಣಿಕ ತೊಡುಗೆಯೊಪ್ಪುವ
ಪಳಿಯ ಮುಂಜೆರಗುಟ್ಟು ಮಕುಟದ
ತಲೆಯನೊಲೆವವ ಹಿಂದೆ ದೇವಾಂತಕನು ನೋಡೆಂದ ॥ ೧೮ ॥

ಬಗೆವಡವನತಿಕಾಯ ಸಾಹಸಿ
ವಿಗಡ ವಿಕ್ರಮ ವೀರ ಹಗೆಗಳ
ಹೊಗಳಿ ಹೆಕ್ಕಳಿಸುವನು ಖಳನವನುಗ್ರ ಸಾಹಸನು ॥
ನಗುತ ಕೊಲುವನು ರಥವನೇರಿದ
ಹೊಗೆಯ ಬಣ್ಣದ ಕಾಂತಿ ಪಸರಿಸೆ
ಬಿಗಿದ ಹರಿ ಹಳವಿಗೆಯ ಪಟುಭಟ ಮುನ್ನಿನಹನೆಂದ ॥ ೧೯ ॥

ಕತ್ತಲೆಯು ಕಡೆದಂತೆ ಬೆಳೆದಿಹ
ಮತ್ತ ದಂತಿಯನೇರಿ ಹಗೆಗಳ
ಕುತ್ತುವಂದದಿ ನೋಡಿ ಹಲು ಮೊರೆವವ ಮಹಾಕಾಯ ॥
ಮತ್ತ ಕರಿಘಟೆ ತುರಗ ರಥಗಳು
ಹತ್ತು ಸಾವಿರವೊಬ್ಬರೊಬ್ಬರಿ
ಗೆತ್ತಿ ಬಂದುದು ದೇವ ಚಿತ್ತೈಸೆಂದ ವಿಭೀಷಣನು ॥ ೨೦ ॥

ಹರಿ ತಿರುಗಿ ನೋಡಿದರೆ ಮಹಿತಳ
ಬಿರಿಯಲಂಗದನೆದ್ದ ನೆಡದಲಿ
ತಿರುಗಿ ನೋಡಿದೊಡೆದ್ದ ಜಾಂಬವ ಮತ್ತೆ ಕಲಿ ನೀಲ ॥
ಹರಿಯ ಸನ್ನೆಯನರಿತು ಪಾವನಿ
ನೆರೆದ ಕಪಿಭಟರೆಲ್ಲರೆದ್ದುದು
ತಿರೆಯ ನುಂಗಿದ ಶರಧಿಯಂತೆರಡೊಡ್ಡು ಹಳಚಿದುವು ॥ ೨೧ ॥

ತುರಗ ತುರಗದಲಪ್ಪಳಿಸಿದರು
ಕರಿಯ ಕರಿಯಿಂದೆರಗುತಿರ್ದರು
ಭರದಲರಿಗಳ ರಥವ ರಥದಲಿ ಜಪ್ಪಿ ಹುಡಿಮಾಡಿ ॥
ಧುರದಲಡಬಿದ್ದವರ ಕೊಲುತವೆ
ತರುಚರಂಗಳು ವೀರ ದನುಜರು
ಬೆರಸಿ ಹೊಯ್ದಾಡಿದರು ಮುಷ್ಟಾಮುಷ್ಟಿ ಯುದ್ಧದಲಿ ॥ ೨೨ ॥

ಇಡುವ ದನಿಗಳು ತಡೆವ ದನಿಗಳು
ಹೊಡೆವ ದನಿಗಳು ಕೆಡೆವ ದನಿಗಳು
ಕಡಿವ ದನಿಗಳು ಮಿಡಿವ ದನಿಗಳು ಕೂಡಿ ಬಯ್ವ ದನಿ ॥
ಅಡಗಲಿಸಿ ಹೊಯ್ದಾಡಿ ಬಿದ್ದುದು
ಪಡೆಯಲೆರಡರಲಮಮ ಖಳಪಡೆ
ಯಡಗು ಮಾರಿಯರಂಗಡಿಗಳಲಿ ಮಾರಿ ಸವೆಯದಿರೆ ॥ ೨೩ ॥

ಪೊಡವಿಗೊರಗಿದ ಪಯುತ ಕರಿ ರಥ
ಉಡಿದು ಬಿದ್ದುದು ನಾಲ್ಕು ಸಾವಿರ
ಮಿಡುಕಿದುದು ಹಯವೆಂಟು ಸಾವಿರ ಹೇಗೆ ಹರಿವಡೆಯೆ ॥
ಒಡೆದ ತಲೆಗಳ ಕಡಿದ ಬೆನ್ನಿನ
ಸಿಡಿದ ಖಂಡದ ಹರಿದ ಕರುಳಿನ
ಉಡಿದ ತೋಳಿನಲಡ್ಡಕೆಡೆದುದು ಕೋಟಿ ಮರ್ಕಟರು ॥ ೨೪ ॥

ಬಣಗು ಕಪಿಗಳಿಗೇತಕೀ ರಾ
ವಣನ ಮಕ್ಕಳ ಕೂಡೆ ಕಣನಲಿ
ಸೆಣಸು ಶರಧಿಯ ದಾಂಟು ಬರುಕೊಲಿಂಬ ಗೆ ಬಲಿಯಾಗೆ ॥
ಅಣುವ ಮರಳೈ ಸಿನ್ನ ಹವಣೇ
ರಣವದೇತಕೆ ಹಣ್ಣುಗರಡಿಗೆ
ಜುಣುಗಿ ಮರಳಂಗದನೆ ಬಾಲಕ ಸಾಯುಟರು ಹೋಗು ॥ ೨೫ ॥

ಎಲವೊ ನರಿಗಳು ಸೊಕ್ಕಿ ಕೊಬ್ಬಿದ
ಹುಲಿಯುನಟ್ಟುವ ಗಾದೆಯಾಯಿತು
ಖಳರ ಕಪಿಗಳು ಸೆಣಸುವಂತಾಯ್ತೆನುತ ಕೋಪದಲಿ ॥
ಸುಳಿದು ಸೂಠಿಯಲಾ ನರಾಂತಕ
ಸೆಳೆದು ಖಡ್ಗದಲಡ್ಡ ಹಾಯ್ದರ
ಕೊಲುತ ಹರಿತರೆ ಸೇನೆ ಕಂಗೆಡಲಾಂತನಂಗದನು ॥ ೨೬ ॥

ತೊಲಗು ಕೆಲಸಾರೆಲವೊ ರಕ್ಕಸ
ಕುಲವಿನಾಶಿಯ ಕುವರ ಸಾಯದೆ
ಕಲಹದಲಿ ಸುರಗಿರರ ಗೆಲಿದಾ ಗರ್ವ ಬೇಡಿಲ್ಲಿ ॥
ತಲೆಯ ತಿಂಬೆನು ಮಿದುಳ ವೋದುವೆ
ಬಲಿಯ ಕೊಡುವೆನು ಭೂತನಿಕರಕೆ
ಹುಲಿಯ ಮುಂದಣ ಹುಲ್ಲೆಯಾಗದಿರೆಂದನಂಗದನು ॥ ೨೭ ॥

ಎನಲು ಖತಿಗೊಂಡುಸುರ ಗದೆಯಲಿ
ವನಚರೇಂದ್ರನ ತಿವಿಯೆ ಟೊಣೆದನು
ಮುನಿದು ಹೆಮ್ಮರನೊಂದ ತಂದಪ್ಪಳಿಸೆ ಗದೆಯಿಂದ ॥
ದನುಜ ಹೊಡೆದರೆ ನುಚ್ಚು ನೂರಾ
ಯ್ತನುವರಾಂತದಲಮಮ ರಕ್ಕಸ
ಕನಲಿ ಗದೆಯಲಿ ಹೊಡೆದೊಡಂಗದ ಡೆಂಡಣಿಸಿ ಬಿದ್ದ ॥ ೨೮ ॥

ಮರಳಿ ಧೃತಿಯಿಂದೆದ್ದು ಕೋಪಾ
ತುರನು ತುರಗವನೊದೆದು ಕೆಡಹಲು
ಧರೆಗೆ ಬಿದ್ದನು ದೈತ್ಯನಾ ಕ್ಷಣ ಮುಷ್ಟಿಯಲಿ ಖಳನ ॥
ಉರವ ತಿವಿದರೆ ಮಿಡುಕುಗೆಟ್ಟನು
ಮರಳಿ ತಿವಿದರೆ ಮೂರ್ಛೆಹೋದನು
ಕೆರಳಿ ಕಪಿ ಮೇಲೆರಗೆ ನೆತ್ತರು ಕಾರಿ ಖಳ ಬಿದ್ದ ॥ ೨೯ ॥

ಎಲಿಲೆ ಕವಿಕವಿಯೋ ನರಾಂತಕ
ನಳಿದನೇ ಘಡ ಮರಳು ಮರ್ಕಟ
ತೊಲಗು ಸಾರ್ ಸಾರೆನುತ ದೇವಾಂತಕ ಮಹೋದರರು ॥
ಹಳುಚುತಿರೆ ಹರಿತಂದ ತ್ರಿಶಿರನು
ಖಳರು ಮೂವರನೊಬ್ಬನಂಗದ
ಭಲರೆ ತಡೆದನು ದೇವಸಂಕುಲ ನೋಡಿ ಬೆರಗಾಗೆ ॥ ೩೦ ॥

ಹಿಂದೆ ಚರಣದಲೊದೆದನೊಬ್ಬನ
ಮುಂದೆ ಮುಷ್ಟಿಯಲೊಬ್ಬ ದೈತ್ಯನ
ಸಂದುಸಂದನು ತಿವಿದನೆಡಬಲದಲ್ಲಿ ಬಾಲದಲಿ ॥
ಬಂದವರನಪ್ಪಳಿಸುತಿರ್ದನು
ಒಂದು ಜಾವವನಿಂತು ಕಾದಿದ
ಸಂದ ಸುಭಟರದೇವ ಭಾಪೆಂದುಲಿದುದಮರಗಣ ॥ ೩೧ ॥

ಮಸೆದ ಸರಳಲಿ ಕಪಿಯು ದೇಹವ
ಮುಸುಕುವಂದದಲೆಸುವನೊಬ್ಬನು
ಅಸಿ ಮುಸುಂಡಿಯುಲಿಡುವನೊಬ್ಬನು ಒಬ್ಬ ಕಲುಗುಂಡ ॥
ಮುಸುಕಿ ಕಪಿಯನು ಕಾಳುಗೆಡಿನಲು
ಅಸಮ ಸಾಹಸಿ ಧೈರ್ಯಗುಂದದೆ
ದೆಸೆಯನೋಡದೆ ಕಾದುತಿರೆ ಹರಿತಂದನಾ ಹನುಮ ॥ ೩೨ ॥

ಎಲವೊ ಪಾತಕಿಗಳಿರ ಧರ್ಮದ
ನೆಲೆಯನರಿಯದ ನಾಯಿಗಳಿರಾ
ಹಲವರೊಬ್ಬನಕೂಡೆ ನಿಂಬುದು ಬಲುಹೆ ಮತ್ತೇನು ॥
ಎಲಲೆ ತಿರುಗುವುದಿತ್ತಲಿತ್ತಲು
ಬಲುಹ ನೋಡುವೆನೆನುತ ಜಾಂಬವ
ಕೆಲದಲಿದ್ದೆಯ್ತಂದನಾಳಿಂಗಾಳು ಸರಿಯಾಯ್ತು ॥ ೩೩ ॥

ಕೈದು ಖಳರಿಗೆ ಕಪಿಗಳಿಗೆ ಬಲು
ಗೈದು ತಿರುಹಿದ ಮುಷ್ಟಿ ತಮ್ಮೊಳು
ಬೈದು ಮೂದಲಿಸುತ್ತ ತಿವಿದಾಡಿದರು ಕೋಪದಲಿ ॥
ಸುಯ್ದು ಕಿಡಿಕಿಡಿಯಾಗಿ ರಕ್ಕಸ
ನೈದು ಸರಳಲಿ ಅಂಗದನನೀ
ರೈದು ಸರಳಲಿ ಜಾಂಬವಂತನ ಒಡಲು ಝುಮ್ಮೆಡಲು ॥ ೩೪ ॥

ದಡಿಗ ಬಾಣವ ಸುರಿಯೆ ಕಿಡಿಗಳ
ಗಡಣ ರಣಗತ್ತಲೆಯ ಕಳೆಯಲು
ಹೊಡೆದ ಖಡ್ಗವು ನುಚ್ಚುನೂರಾಗುತ್ತ ಉಪವನಂಗವಲಿ ॥
ಜಡಿದ ಕೋಪದಿ ಗದೆಯಲಣುವನ
ಹೊಡೆಯಲೈತರೆ ತುಡುಕಿ ಚರಣವ
ಹಿಡಿದು ಸರ್ಪನೆ ಸೀಳಿ ಮಹಿಗಪ್ಪಳಿಸಿಯೊಡಾಡಿ ॥ ೩೫ ॥

ಕಾಳಿ ಮಹಿಷಾಸುರನ ಸೀಳಿದ
ಹೋಳಿನಂತಿರಲಾ ಮಹೋದರ
ಕಾಲನೂರಿಗೆ ಹೋದನವುವಾ ತ್ರಿಶಿರನೆಂಬನನು
ಕೋಲ ಕೆದರುತ ಪ್ರಳಯದಂದದಿ
ಸಾಲುಗೆಡಹುತ ಮುಂದೆ ಬರುತಿರೆ
ನೀಲನೆಂಬವನಾರಿ ಹಳಚಿದನಂದು ದಾನವನ ॥ ೩೬ ॥

ನೀಲ ಬಲ್ಲಿದನೆಂದು ರಣದಲಿ
ಹೇಳುವರು ಗಡ ಓಂದೆ ಸಂದುದು
ತಾಳಿಕೊಳ್ಳಾನೆಚ್ಚ ಬಾಣವ ಬಲುಹ ನೋಡುವೆನು ॥
ಏಳಗೊಡೆನೆನುತಸುರ ನೀಲನ
ಕೀಲಿಸಿದನೇಳೆಂಟು ಶರದಲಿ
ಹೇಳಲೇನದ ನೀಲ ಕಂಗೆಡೆ ಹನುಮ ಹರಿತಂದ ॥ ೩೭ ॥

ಇವನು ಸರಳಲಿ ಸೋಲನೆನುತವೆ
ತವಕದಿಂದಜಕೊಟ್ಟ ಶಕ್ತಿಯು
ಲವನು ತಿರುಹಿಡೆ ಘೋರುಘೋರೆನುತುರಿವುತ್ಯೈತರಲು ॥
ಪವನಸಂಭವ ಹಾಯ್ದು ಹಿಡಿದನು
ಜವದಲೆದ್ದನು ನೀಲನಾಗಳೆ
ತಿವಿದು ಕುದುರೆಯ ಕೊಂದು ಸೂತನ ಸೀಳಿ ಬೀಸಾಟ ॥ ೩೮ ॥

ಪೂತುರೇ ಕಲಿ ನೀಲ ಭಲರೇ
ಪೂತುರೇ ಹನುಮಂತ ಚಾಗುರೆ
ಪೂತು ಮರುತಜ ಪೂತು ನೀಲ ಕಪೀಂದ್ರ ಭಾಪೆನುತ ॥
ಖಾತಿಯಲಿ ತಾರೇಯನಾ ಪುರು
ಹೂತ ವೈರಿಯು ಕೂಡೆ ಕಾದುತ
ಕಾತರಿಸದೊಡನೊಡನೆ ತಿವಿದನು ಮುಷ್ಟಿಯುದ್ಧದಲಿ ॥ ೩೯ ॥

ಹೊಡೆವನಂಗದ ಕೆಡೆವ ರಕ್ಕಸ
ಕೆಡೆವನಂಗದ ಹೊಡೆವ ರಕ್ಕಸ
ಹೊಡೆವ ಕಪಿಖಳ ಕೆಡೆವನಂಗದ ಹೊಡೆವ ಕಪಿ ಕೆಡೆವ ॥
ನುಡಿಗೆ ತೆರಪಿಲ್ಲೊಬ್ಬರೊಬ್ಬರು
ಹೊಡೆವ ಕೆಡೆವಾ ಸಂಭ್ರಮಂಗಳು
ಬಿಡದೆ ಕಾದಿತ್ತುಭಯಬಲವೊಂದೆರಡು ಗಳಿಗೆವರ ॥ ೪೦ ॥

ಒಡನೊಡನೆ ಹೊಯ್ದಾಡಿ ಕಾದುತ
ಖಡುಗವನು ಸೆಳೆಕೊಂಡನಂಗದ
ಹೊಡೆಯಲಾ ಖಳ ಕೈಯ ನೋಡಲು ಕೈಯೆರಡು ಕಡಿಯೆ ॥
ಬಿಡದೆ ಮತ್ತೊಮ್ಮೆರಗೆ ದೈತ್ಯನ
ವೊಡಲು ಬಾದಣವಾಯ್ತು ಶಿವ ಶಿವ
ನುಡಿಯ ಬಾರದು ದೈತ್ಯನುಬ್ಬಟೆ ಬೀಯವಾಯ್ತಂದು ॥ ೪೧ ॥

ಅತ್ತ ಜಾಂಬವನೊಡನೆ ಹೊಯ್ದಾ
ಡುತ್ತ ಶರವಸಿ ಮುಸಲ ಗದೆಯಲಿ
ನೆತ್ತಿಯೆದೆ ಬಸುರೊಡೆಯೆ ಕಾದಿದನಾ ಮಹಾಕಾಯಃ ॥
ಸತ್ವಗುಂದಿದ ಸಮರ ನೂಕದು
ಸತ್ತೆನೆಂದೆನಬಹುದೆ ಜನ್ಮವ
ನುತ್ತರಿಸಿದನು ಜೀವವಡಗಿತು ಕಾಯ ಮಲಗಿದುದು ॥ ೪೨ ॥

ಆರಿತಮರವ್ರಾತ ಕಪಿಕುಲ
ಸಾರಿದುವು ರಣವಿಜಯಲಕ್ಷ್ಮಿಯು
ಸೇರಿದಳು ರಾಘವನೆಡೆಯ ದೈತ್ಯರು ಸೇರಿದರು ಯಮನ ॥
ಮಾರುತಿಯು ಜಾಂಬವನು ನೀಲನು
ತಾರೆಯಾತ್ಮಜರೆಲ್ಲ ಮೆರೆಯಲು
ಭಾರಿಯಲಿ ರಾವಣನ ಮಕ್ಕಳು ಕಂಡರಂತಕನ ॥ ೪೩ ॥

ಕಾಳಗದಲರಿಭಟರ ಗೆಲಿದ ವಿ
ಶಾಲಮತಿ ಹನುಮಂತ ದೇವನ
ಲಾಲಿಸಿದ ನೃಪನಿತ್ತನಂಗದಗಂಗಚಿತ್ತವನು ॥
ನೀಲ ಬಳಲಿದೆಯೆಂದ ತನುವನು
ಬೋಳವಿಸಿದನು ಜಾಂಬವಂತನ
ಭೂಲತಾಂಗಿಯ ರಮಣನೀಪರಿ ಭಟರ ಮನ್ನಿಸಿದ ॥ ೪೪ ॥

## ೨೭ನೇ ಸಂಧಿ

ಪಲ್ಲ ॥ ಧುರದ ನೆವದಲಿ ಹರಿಯು ಕೊಡುವ
ಭರದಿ ಬಂದತಿಕಾಯ ಲಕ್ಷ್ಮೀ
ಧರನ ಕಳವಳಗೊಳಿಸಿ ಕೊಡಿದ ಹರಿಪದಾಂಬುಜವ ॥

ಪದ ॥ ಮೊದಲಿಸಿಯಿದಿರಾಗಿ ರಣದಲಿ
ಕಾದಿ ಕೈವಲ್ಯವನು ಪಡೆದರು
ಸೋದರರು ನಿಗಮಾಳಿ ಕಾಣದ ಪರಮ ಪಾವನನ ॥
ವೇದವೇದ್ಯನನೀಗ ರಣದಲಿ
ಕಾದಿ ಕೈವಲ್ಯವನು ಕೊಡುವೆ
ನಾದಿ ಮೂರ್ತಿಯನೆನುತ ನಗುತತಿಕಾಯನಸುವಾದ ॥ ೧ ॥

ಪ್ರಳಯ ಕಾಲದೊಳೊಬ್ಬನೀಶ್ವರ
ನುಳಿದ ವೋಲತಿಕಾಯನುಳಿದನು
ಬಲವು ಬಯಲಾಯ್ತೊಪನೆ ಪುಟ್ಟಿಪರಳಿಪರಕಟೆನುತ ॥
ಬಿಳಿಯ ತೇಜಿಯ ಹೇಮರಥವನು
ಸುಳಿಸಿದನು ಕಪಿಬಲವ ಬೆದರಿಸಿ
ಕಲಹಕಾಲಾಂತಕನು ಕೈವಾರಿಸುತ ಬರುತಿರ್ದ ॥ ೨ ॥

ಅರಿ ಭಯಂಕರ ಬಂದ ಬಂದನು
ಸುರರ ಮಸ್ತಕ ಶೂಲ ಬಂದನು
ಪರಮ ನೀತಿಯ ನಿಪುಣ ಬಂದನು ದನುಜ ಬಲ್ಲಹನು ॥
ತರುಣವೃಂದದ ತಿಲಕ ಬಂದನು
ಪರಮ ದೇವರ ಭಕ್ತ ಬಂದನು
ತೆರಳಿ ಕೋಡಗಿಗಳಿರಯೆಂದೊದರಿದುವು ಕಹಳೆಗಳು ॥ ೩ ॥

ಸೋಮನಾಥನ ಸತಿಗೆ ಜಪವಾ
ರಾಮನಾಮವು ಕಂಡು ಬರಹೇ
ಳಾ ಮುಕುಂದನ ಕಾಂಬೆವಾ ಹಂಪದವ ನಿಮಿಷಾರ್ಧ ॥
ರೋಮಶನ ಪರಮಾಯು ಕಂಡಾ
ರಾಮಗಿದು ಕೌಮಾರ ಹರೆಯವು
ಕಾಮನಯ್ಯನ ಕಾಂಬೆ ಬರಹೇಳವನ ಕಾಳಗಕೆ ॥ ೪ ॥

ಪ್ರಳಯಕಾಲದಲವನು ಪಟಿತರು
ತಳಿರಲೊರಗುವನೆಂಬರಹಿಪತಿ
ತಳಪನೆಂಬರು ಕೆಲರು ಪಾಲ್ಗಡರಸನೆಂಬರಲಾ ॥
ಹಲವು ಮಾತೇನಾತ ಲವಣದ
ಜಲಧಿ ತೀರಕೆ ಬಂದ ಗಡ ಘಡ
ತಳುವದೇತಕೆ ಬೇಗ ಕರೆ ಕರೆಯೆಂದನತಿಕಾಯ ॥ ೫೩ ॥

ಅರಿಯ ಬಾರದು ಶ್ರುತಿಗೆ ತನ್ನಯ
ಸಿರುಗೆಯೆಂಬರು ಬಲ್ಲ ಹಿರಿಯರು
ಮರೆದು ಮಾನಿಸನಾದ ಸುರಪತಿಯೆಮ್ಮ ಜೂರಿದರೆ ॥
ಸೆರೆಯನೊಯ್ದಾ ನೆವದಿ ಭೂಮಿಯ
ಹೊರೆಯನಿಳುಹುವೆನೆಂದು ಬಂದವ
ನರಸಿಕಾಂಬುವುದಿದಾವ ಭರವಸೆ ಕಾದ ಬರಹೇಳು ॥ ೬ ॥

ತ್ರಿಪಥಗಾಮಿನಿಯೆನಿಪ ಜಾಹ್ನವಿ
ನೃಪನ ಚರಣದಲುದಿಸಿದಳು ಗಡ
ತಪನ ದಕ್ಷಿಣನಯನನವೆಂಬರು ಕಾಂಬೆವಾ ಕುರುಹ ॥
ಅಪಹಸನ ಬೇಡೆನಗೆ ನಮ್ಮೊಳು
ಕಪಿಗಳಳವಲ್ಲಲ್ಲ ನಡೆ ನಡೆ
ರಿಪುವಿದಾರಣನಾವೆಡೆಯೊಳಿಹನೆಂದನತಿಕಾಯ ॥ ೭ ॥

ದಡಿಗನೊದರಿಸಿ ಸಿಂಹನಾದದಿ
ತೊಡಚಿ ಸ ರಿದನು ಸರಳ ಸಾರವ
ಕಡಿದು ಹರಹುತ ಮರ್ಕಟಂಗಳನೊಕ್ಕಲಿಕ್ಕುತಿರೆ ॥
ಕಡುಹು ಕಂಡೋಡಿತ್ತು ಕಪಿಗಳು
ಸಿಡಿದು ದೆಸೆ ದೆಸೆಗೋಡೆ ಕಪಿಗಳ
ಗಡಣ ಮತ್ತಾರಿವನು ತರಹರವಿಲ್ಲಯೆನುತಾದುರ್ ॥ ೮ ॥

ಆರು ಸರಳಲಿ ನಳನ ಕೆಡಹಿದ
ಮೂರು ಶರದಲಿ ಜಾಂಬವನು ತಲೆ
ಯೂರಿ ಬಿದ್ದನು ನೀಲನೆಂಟಂಬಿದ ಹೊರಳಿಪನು ॥
ಊರುಗೆಡಿಸಿದ ಕುಮುದ ಮೈಂದನ
ಕಾರಿವನು ತನಿಗರುಳ ಪನಸನು
ಹೇರಿದನು ಹದಿನೆಂಟು ಶರದಲಿ ಶರಭ ಶತಬಲಿಯ ॥ ೯ ॥

ಬೇಡಬೇಡೆನುತೆಚ್ಚ ತಾರನ
ಕಾಡಿ ಕಂಪನನಳವು ಗೆಡಿಸಿದ
ಗೂಡುಗೊಂಡನು ಗವಯನಂಗದಗೇರು ಬಲುವಾಯ್ತು ॥
ನೋಡಿ ಮರುಗಿದರಮರರಳಿಳಿದ
ರೋಡಿ ಹೋಯಿತು ಮರ್ಕಟಂಗಳು
ರೂಢಿಪತಿಯನು ಶರಣುವೊಕ್ಕುದು ಹಲ್ಲಗಿರಿವುತ್ತ ॥ ೧೦ ॥

ಆರಿವನು ಕಪಿಭಟರನೆಲ್ಲವ
ಚಾರಿವರಿವುತ ಧುರದಲೈತಹ
ವೀರ ಕಾಂಚನ ಮಕುಟ ಕುಂಡಲದಿಂದ ಮೆರೆವವನು ॥
ತೋರ ಕಾಯನು ಧೀರ ಸಾಹಸಿ
ಸೌರ ಚಾಪವೆ ಕೈಯ ಬಿಲ್ಲೆನೆ
ಭಾರಿಯಾಳಿವನಾಗಬೇಹುದು ತಿಳುಹು ತನಗೆನಲು ॥ ೧೧ ॥

ರಾವಣನ ಮಗನಿವನು ರಣದಲಿ
ದೇವಕೋಟಿಯ ಬಗೆಯನೆಂದೆನೆ
ಆವ ಕೈದುಗಳಾವ ಶಸ್ತ್ರಾಸ್ತ್ರದಲಿ ಪರಿಣತನು ॥
ಭಾವಿಕನು ಕರಿತುರಗ ರಥದಲಿ
ದೇವ ಕಮಲಜನಿತ್ತ ವರದಲಿ
ಸಾವು ಬಾರದು ದಿವಿಜ ದನುಜರಲವಗೆ ಚಿತ್ತೈಸು ॥ ೧೨ ॥

ವಿವಿಧ ಮಂತ್ರದಿ ಸಾಮ ಭೇದದ
ಲಿವನು ನಿಪುಣನು ನೀತಿ ಪರಿಚಿತ
ನಿವನ ಸತ್ವದಲಿಹನು ರಾವಣ ವೀರನೆಂದೆನಿಸಿ ॥
ಇವನು ಸುರಪತಿ ವರುಣಯಮವೈ
ಶ್ರವಣರೆಂಬರ ಗೆಲಿದ ಪೂರ್ವದಿ
ಇವನ ಗೆಲಿದವರಿಲ್ಲ ಜಗದಲಿ ಕಪಿಗಳಳವಲ್ಲ ॥ ೧೩ ॥

ಇವನ ಚಾಪವ ಕಡಿಯ ತೀರದು
ಸವೆದು ಹೋಗದು ಬಾಣವೀತಗೆ
ಕವಚವಾರಿಗಭೇದ್ಯ ಬೊಮ್ಮನ ವರದ ಲಾಗಿನಲಿ ॥
ಶಿವನ ಹೋಲುವನೀತ ಕಪಿಗಳ
ಸವರುವದರಿಂ ಮುನ್ನ ಸವರುವು
ದಿವನ ಮೇಣವರಿವರಲಾಗದುಯೆಂದ ವಿಭಿಷಣನು ॥ ೧೪ ॥

ವನಚರರು ಹವಣಲ್ಲ ನೀವುವ
ನನುಜ ಲಕ್ಷ್ಮಣಗೀಯಬೇಕೆನೆ
ದನುಜಮರ್ದನ ನೋಡಲೆದ್ದನು ವೀರ ಲಕ್ಷ್ಮಣನು ॥
ಅನಿಮಿಷರು ನಲಿದಾಡೆ ನೆರೆದುದು
ವನಚರಂಗಳು ಕಲ್ಲುಗುಂಡನು
ತನತನಗೆ ಸುರಿವುತ್ತ ಮುತ್ತಿತು ರಾಮನಾಜ್ಞೆಯಲಿ ॥ ೧೫ ॥

ತೊಲಗಿ ಮರ್ಕಟಗಳಿರ ಸಾಯದೆ
ಹುಳುವುಗಡಿತವು ನಮಗೆ ಬಾಲಿಯ
ತಲೆಯಗೊಂಡವನಾರು ಬರಹೇಳವನ ಬೇಗದಲಿ ॥
ಕೊಲುವವನು ನಾನಲ್ಲ ಕಪಿಗಳ
ತೊಲಗಿ ತೊಲಗಿಯೆನುತ್ತ ರಕ್ಕಸ
ಸುಳಿಸಿ ತೇರನು ಮುಂದೆ ನೂಕಿದ ಭಟರ ಲೆಕ್ಕಿಸದೆ ॥ ೧೬ ॥

ಬಿಗಿದ ಬತ್ತಳಿಕೆಯನು ಬೆನ್ನಿನ
ಲುಗಿದ ವಜ್ರಾವರ್ತ ಚಾಪವ
ತೆಗೆದು ಕಟ್ಟಿದವಾಂಗ ತಿರುವಡೆ ಜಡೆಯನೊಬ್ಬುಳಿಸಿ ॥
ಬಿಗಿದ ಭಾಳದಿ ಭಸಿತಪಟ್ಟೆವ
ಹಗೆಯ ಹಂತಿಯ ಗಂಡ ಜಗ ಕೈ
ಮುಗಿವ ಬಿರುದಿನ ತೊಡರು ಪೆಂಡೆಯನಿಟ್ಟು ನಡೆತಂದ ॥ ೧೭ ॥

ಗುರುವ ಮನದಲಿ ನೆನೆದು ರಾಮನ
ಚರಣಕೆರಗುತೆ ಪಾದರೇಣುವ
ಧರಿಸಿ ನಾರಿಯ ನೀವಿ ಜೇವಡೆಗೈದು ಭುಜ ಹೊಯ್ದು ॥
ಪರಮ ಮಂತ್ರಾಸ್ತ್ರಗಳ ತಿರುವಿಗೆ
ತರಲ.ಘೇಯೆನಲಖಿಳ ಕಪಿಪಡೆ
ಧುರದಲಭಿಮುಖನಾಗಿ ಬರಲತಿಕಾಯ ಬಿಲುಗೊಂಡ ॥ ೧೮ ॥

ಸುರಿವ ಬೆಟ್ಟವ ತರಿದು ಕಪಿಗಳ
ಹೊರಳಿಗಡಿವುತ ಮುಂದೆ ನೂಕುತ
ಸರಿಸದಲಿ ಬಹ ಲಕ್ಷ್ಮಣಾಂಕನ ಕಂಡು ಖಳನೆಂದ ॥
ತೆರಳು ತೆರಳನುವಾಯ್ತು ಕಾದುವ
ತರಳತನ ನಾಕಾಯ್ತು ನಿನ್ನಯ
ಹಿರಿಯವನ ಬರಹೇಳು ಕಾದುವೆ ನಾಕು ನಡೆಯೆಂದ ॥ ೧೯ ॥

ಸಣ್ಣವನು ನೀ ಸಾರು ಕೆಡದಿರು
ಉಣ್ಣೆ ನೀನೆಳೆಗೂಸು ಬಾಯಿಗೆ
ಹಣ್ಣಹತ್ತದು ಅಣಲಹೊಳಲೊಳಗೆಂಟೆ ಹಲ್ಲುಗಳು ॥
ಹೆಣ್ಣ ಬಳಿವಿಡಿದಳಲಿ ಬಂದಿ
ದ್ದಣ್ಣನನು ಬರಹೇಳು ಕಾದಲು
ಚಿಣ್ಣ ನೀ ಮರಳೆಂದ ದೇವಾರಾತಿ ಕಟಕಿಯಲಿ ॥ ೨೦ ॥

ಕಡಲೊಳೊರಗಿದ ಬಾಡಬಾಗ್ನಿಯು
ತಡೆಯದೆಬ್ಬಿಸಿ ಕೆಣಕಿ ಸಮರವ
ಹಿಡಿದ ಶಲಭನೆ ನಿನ್ನ ಮನದಂಗವಣೆ ಲೇಸೆಂದ ॥
ಹಿಡಿದ ಬಿಲ್ಲನು ಹಾಯ್ಕಿ ಹಿಂದಕೆ
ನಡೆವುದೊಳ್ಳಿತು ಸಾಯಬೇಡೆನೆ
ತೊಡಚು ಸಾರಿದೆ ಹೋಗು ಹೋಗೆನುತೆಂದನತಿಕಾಯ ॥ ೨೧ ॥

ಗಿರಿಯನಿರಿಯದೆ ವಜ್ರ ಕೇಸರಿ
ಕರಿಯ ಸೀಳದೆ ನಿನ್ನವೊಡಲತಿ
ಹಿರಿದು ಬೆಳೆದರೆ ಬರಿಯ ಮಾತಿನಲೇನು ಫಲವಹುದು ॥
ಹರನ ಕಣ್ಗಿಚ್ಚಿನಿತು ತ್ರಿಪುರವ
ನುರುಹಿ ಕಳೆಯದೆ ಬೇಗ ತೊಡು ತೊಡು
ಸರಳ ಬರುಮಾತಿನಲಿ ಫಲವೇನೆಂದ ಸೌಮಿತ್ರಿ ॥ ೨೨ ॥

ಬಾಲನಾಗಲಿ ವೃದ್ಧನಾಗಲಿ
ಕಾಲ ನಿನಗೆಂದರಿತುಕೊಂಡಿರು
ಕಾಳುಗೆಡೆದರೆ ದಿಟಕೆ ವೀರನೆ ನೀನು ತ್ರಿಭುವನದಿ ॥
ಬಾಲಕನು ತಾನಾಕ್ರಮಿಸನೇ
ಕೋಲ ಮೊನೆಯಲಿ ಮಾತನಾಡ್ವೆ
ಹೇಳುವನೆ ಸತ್ಪುರುಷ ತನ್ನಯ ಗುಣವ ತಾನೆಂದು ॥ ೨೩ ॥

ಎಲವೊ ನೀ ಹಿಂದೆನಿಬರರಸರ
ಗೆಲಿದೆ ರಣದಲಿ ಸುಭಟತನದಲಿ
ಸುಲಭನಹೆ ನೀನಸ್ತ್ರಶಸ್ತ್ರದಿ ಖರೆಯ ಮತ್ತೇನು ॥
ಅಲಗಿನಲಿ ಮಾತಾಡುವಾತನ
ಬಲುಹ ಕಂಡರೆ ತಿಳಿಯಲಾರದೆ
ತೊಲಗದಿದಿರಾಗೆನುತ ರಕ್ಕಸನಿಳಿದ ಬಲು ರಥವ ॥ ೨೪ ॥

ಕೊಂಡ ಕೋದಂಡವನು ರಕ್ಕಸ
ಮಂಡಿಸುತೆ ಕೈಹೊಡೆಯು ಬಿಗಿದನು
ಹಿಂಡು ದೇವರ ಹಾಹೆ ಹೆದ್ದೊಡರೊಪ್ಪಲಿಡಗಾಲ ||
ಗಂಡುತನ ತನಿಗೆದರಲಾ ತ್ರೈ
ಪುಂಡ್ರಧಾರಿಗೆ ನಮಿಸಿ ಬರುತಿಹ
ಗಂಡ ಲಕ್ಷ್ಮಣನಿದಿರಲೇರಿದ ಹೊಳೆವ ಮಣಿರಥವ || ೨೫ ||

ಧನುವ ಜೇವಡೆಗೈದು ಭುಜವನು
ದನುಜನಪ್ಪಳಿಸಿದನು ಸಿಡಿಲಿನ
ಘನಕೆ ನೈವೆರಗಾಗೆ ತುಡುಕಿದ ಸರಳ ನಾರಿಯಲಿ ||
ಮೊನೆಯು ಬೋಳಿಯು ಬಿಟ್ಟೆ ಸರಳಿನ
ಕನಕಪುಂಖದ ಕಂಕಪತ್ರದ
ಘನಸಿತಾಸಿತ ಸರಳ ಸುರಿದನು ದೈತ್ಯನುರವಣಿಸಿ || || ೨೬ ||

ಎತ್ತಲಂಬರ ಅವನಿಮಂಡಲ
ವೆತ್ತ ದೆಸೆಗಳದೆತ್ತ ಕಪಿಬಲ
ವೆತ್ತ ಹಗಲಿರುಳಾದುದಮಮಾ ಬಾಣಗತ್ತಲೆಗೆ ||
ಕಿತ್ತುದಂಬರ ಭರತನನುಜನ
ಮುತ್ತಿ ಮುಸುಕಿತು ಬಿಡದೆ ಪುನರಪಿ
ತೆತ್ತಿಸಿದನಸುರೇಂದ್ರ ತೆರಪನು ಕೊಡದೆ ಸೈಗರೆದ || ೨೭ ||

ಭಲರೆ ರಕ್ಕಸ ಚಾಪವಿದ್ಯದಿ
ಸುಲಭನಹೆಯಹೆ ಮರಳಿ ಹೇಳಲು
ಸಲುವುದೈ ಹಗೆಯಾದರೇನೈ ಗುಣಕೆ ಮತ್ಸರವೆ ||
ತೊಲಗದಿದಿರಾಗೆಮ್ಮ ಕೈ ವೈ
ಬಲುಹ ನೋಡೆಂದೆನುತ ಲಕ್ಷ್ಮಣ
ಖಳನ ಬಾಣವ ಸವರಿ ಮುಸುಕಿದ ಕ್ಷಣಕೆ ಹೊಸತೆನಿಸಿ || ೨೮ ||

ಮುಸುಕಿತಂಬರಮಣಿಯು ಮುಗಿಲಿನ
ದೆಸೆಯ ಹಾಸಿತು ಕಾಸಿತಭ್ರದ
ಬಿಸಿಲು ಬೀತುದುಯಿರುಳು ಬೀಸಿತು ಮಾಸಿತೈ ಹಗಲು ||
ಬಸುರ ನುಸುಳಿತು ಕರುಳ ಹಿಣಿಲನು
ಕುಸುರಿದರಿಯಿತು ಖಳನ ಮತಿ ಮುಸು
ಳಿಸಿತು ಕುಸಿಯಿತು ದರ್ಪವಮಮಾಯೆನುತ ಬೆರಗಾದ || ೨೯ ||

ಓಡಿತಮರರು ಬೆನ್ನ ಬದಿಗಳ
ತೀಡುತಭ್ರದ ಕೋಹು ಕೋಹಿಗೆ
ಗಾಢದಲಿ ಸುರುಸುಯ್ಯುಸುಯ್ಯೆನುತಂಬು ಮೊರೆದಟ್ಟಿ ॥
ಮೂಡಿಮುಳುಗಿದರಸುರ ರಾವುತ
ರೋಡಿಹೋದರು ಜಡಿಯೆ ಸೀಸಕ
ಝಾಡಿಸಿತು ಖಳ ಕಂಡು ಕಾದಲು ಮರೆದು ಬೆರಗಾದ ॥ ೩೦ ॥

ತೂರಿ ಬಿಸುಡುತ ಮರಳಿ ರಕ್ಕಸ
ನಾರು ಸರಳಿಂದೆಚ್ಚ ಲಕ್ಷ್ಮಣ
ಮೂರು ಬಾಣದಿ ಕಡಿದ ಮಗುಳವನೆಚ್ಚನೀರಾರ ॥
ಆರು ಬಾಣದಿ ಕಡಿದ ಮೂವ
ತ್ತಾರು ಬಾಣದಲೆಚ್ಚನದನೀ
ರಾರು ಬಾಣದಿ ಕಡಿದ ಲಕ್ಷ್ಮಣನಹಹ ಸಂಭ್ರಮವೆ ॥ ೩೧ ॥

ಇಷ್ಟ ಕಂಡ್ಯೆ ದನುಜ ನೀ ಮುಂ
ದೆಷ್ಟು ಕಾಂಬೆಯೊ ನಾವು ಬಲ್ಲೆವೆ
ಸೃಷ್ಟಿಯೊಡೆಯನ ಘನತೆಗಷ್ಟಿಷ್ಟೆಂದು ಮಿತವುಂಟೆ ॥
ಇಷ್ಟು ಮತ್ತಿನ್ನಷ್ಟು ಪುನರಪಿ
ಅಷ್ಟರಿಮ್ಮಡಿಯಷ್ಟು ಹಗೆ ಹರಿ
ವಷ್ಟು ನೀ ಬಲ್ಲಷ್ಟು ಕೈದೋರಳುಕ ಬೇಡೆಂದ ॥ ೩೨ ॥

ರಣದೊಳಿಬ್ಬರ ಲಾಗುವೇಗವ
ನೆಣಿಸಲರಿದಾಯ್ತಸುರ ಭೂಸನ
ಹಣೆಯನೊಡೆಯೆಸೆ ಮೂರು ಸರಳಲಿ ರುಧಿರ ಸೋರುತಿರೆ ॥
ತ್ರಿಣಯನಂತಿಹ ಲಕ್ಷ್ಮಣಾಂಕನ
ಕೆಣಕಿ ಬಸುರೊಳಗಂಬ ಕೊಂಡನು
ಗಣನೆಯಿಲ್ಲದೆ ಬಾಣ ಹಾಯ್ದುವು ತೋದ ರಕ್ತದಲಿ ॥ ೩೩ ॥

ತೊಡುವ ಸರಳೆಡೆಯಾಡಿ ಬಳಲಿತು
ಕಡಿಯದಿಬ್ಬರ ಬಿಲ್ಲು ರಥ ಕಡಿ
ವಡೆಯದಾತಗೆ ಸರಳು ಸವೆಯದು ವೀರರಿಬ್ಬರಿಗೆ ॥
ದಡಿಗನುರದೊಳಗೆಚ್ಚ ಬಾಣವು
ಸಿಡಿದು ಬಿದ್ದುದು ಕವಚ ಹರಿಯದೆ
ತೊಡಚಿ ಲಕ್ಷ್ಮಣ ಖಳನ ಹಣೆಯಲಿ ಸರಳ ಕೀಲಿಸಿದ ॥ ೩೪ ॥

ಎಸುವ ರಕ್ಕಸ ಕಡಿವ ಲಕ್ಷ್ಮಣ
ನೆಸುವ ಭೂವರ ಕಡಿವ ರಕ್ಕಸ
ಯೆಸುವ ಖಳ ನೃಪ ಕಡಿವ ನೃಪನೆನೆ ಕಡಿವನಸುರಾರಿ ॥
ಎಸುವ ಕಡಿವರು ಕಡಿವರೆಸುವರು
ಅಸುರ ಭೂಪರು ಕಡಿದು ಕೆಡೆವರು
ಆಸಮ ವೀರರ ಸಮರರಂಜಿಸಿತಮರರಾಲಿಗಳ ॥ ೩೫ ॥

ಅಸುರನೊಡಳೊಳಗಸ್ತ್ರ ಶಸ್ತ್ರದ
ಮಸೆಯ ಕಾಣೆನು ಲಕ್ಷ್ಮಣನ ನಡು
ಬಸುರ ಕಡೆಯೆಡೆಯಾಡುತಿರ್ದುವು ದೈತ್ಯನಂಬುಗಳು ॥
ಎಸುವ ಕಡಿಪಬ್ಬರದ ಖಣಿ ಖಟಿ
ಲೆಸೆದುದಮಮಾ ಹಿಡಿದ ಧನು ಕೈ
ಗೆಸರು ಮಸಗಿತು ಧೈರ್ಯಗುಂದದೆ ನಿಂದು ಕಾದಿದರು ॥ ೩೬ ॥

ಕಾಳಗವ ಬಣ್ಣಿಸುತ ಕವಿ ವರ
ಹೇಳ ಮರೆದನು ನಡುವೆ ಜುಣುಗಿದ
ಕಾಲವನು ದಿವ ರಾತ್ರಿ ತ್ರಿಗುಣಾವರ್ತವಾಯ್ತೆನಲು ॥
ಹೇಳಲೇನದನನ್ಯಮಾರ್ಗದಿ
ಕಾಲನಿಟ್ಟನು ತರಣಿ ರಾತ್ರಿಯ
ಕಾಲ ಮೂವತ್ತೆರಡು ಗಳಿಗೆಯನೆಣಿಸಿ ಬಿಡುತಿರ್ದ ॥ ೩೭ ॥

ಖಾತಿಗೊಂಡುದು ನೋಡುವವರ
ವ್ರಾತ ತವ್ಮೊಳು ತೋಟಿ ಹುಟ್ಟಿತು
ಸೋತ ಲಕ್ಷ್ಮಣನಲ್ಲ ರಕ್ಕಸ ಸೋತನೆನೆ ಕೆಲರು ॥
ಆತು ನಿಲಲಳವಲ್ಲ ಲಕ್ಷ್ಮಣ
ಸೋತನೆಂದೆನೆ ಕೆಲರು ರಕ್ಕಸ
ಸೋತನೆಂದೆನೆ ಹಣೆಯಲುಂಟೇಯೆಂದು ಕೆಲರೆನಲು ॥ ೩೮ ॥

ಹಿಡಿದ ಚಾಪವು ಚಕ್ರದಂತಿರೆ
ತಡೆಯದೆಸುತಿರಲೊಬ್ಬರೊಬ್ಬರು
ತೊಡುವ ಬಿಡುವುದ ಕಾಣಲಾಗದು ಲಾಗುವೇಗದಲಿ ॥
ತೊಡಲು ತೊಡುವನು ಬಿಡಲು ಬಿಡುವನು
ತಡೆಯೆ ತಡೆವನು ಹೆಣಗೆ ಹೆಣಗುವ
ಕಡಿಯೆ ಕಡಿಯುವ ವೀರ ಲಕ್ಷ್ಮಣನೊದಗಿ ಕಾದಿದನು ॥ ೩೯ ॥

ತರಹರಿಸಿ ನಿಲಬಾರದಸುರನ
ಖುರಪುಟಂಗಳು ಬಿರಿಸು ತಾಳುವ
ಡರಿದು ಧನುಶರ ಕವಚ ರಥ ಕಡಿವಡೆಯುದೆಂದೆನುತ ॥
ಕೆರಳಿ ಲಕ್ಷ್ಮಣ ಪಾವಕಾಸ್ತ್ರವ
ಭರದಿ ತೆಗೆದಿಸೆ ಉರಿ ಚಡಾಳಿಸಿ
ತರರೆ ಹೊಗೆ ಕಿಡಿಕೆಂಡಸುರಿವುತ ಬರಲು ಖಳ ಕಂಡ ॥ ೪೦ ॥

ನರನು ಬಲ್ಲಿದ ಕಾದಲೆಮಗಿ
ನ್ನರಿದು ಮಂತ್ರಾಸ್ತ್ರಗಳನಿದ ಪರಿ
ಹರಿಸಬೇಹುದುಯೆಂದ ಖಳನಣಕದಲಿ ನಸುನಗುತ ॥
ಭರದಿ ಸೂರ್ಯಾಸ್ತ್ರವನು ತೆಗೆದಿಸೆ
ಉರುಹಿತಾಗ್ನೇಯಾಸ್ತ್ರ ಬೇಗೆಯು
ಲೆರಡು ಮೋಹರವಾಡೆ ತನ್ನೊಳು ಭಸ್ಮವಾಯ್ತೆಂದು ॥ ೪೧ ॥

ಹೋಯಿತಾಗ್ನೇಯಾಸ್ತ್ರ ಕಪಿಬಲ
ಬಾಯ ಬಿಡುತಿರಲಂದು ರಕ್ಕಸ
ರಾಯನಬ್ಬರಿಸುತ್ತ ಮೂದಲಿಸಿದನು ಕಟಕಿಯಲಿ ॥
ಸಾಯಸದಲಾರ್ಜಿಸಿದ ಸರಳದು
ವಾಯುದಲಿ ಹೋಗಾಡಿ ಹೋದುದು
ಪಾಯವಿಲ್ಲವನಿಯಲಿ ಬಿಲ್ಲನು ಬಿಸುಟು ಮರಳೆಂದ ॥ ೪೨ ॥

ಮರಳಿಸುವೆ ನೋಡೆನುತ ಲಕ್ಷ್ಮಣ
ಮರುತ ಬಾಣವ ಬಿಟ್ಟನವುಮಾ
ಮೊರೆದು ಸುಂಟರುಗಾಳಿಯಟ್ಟಿತು ಖಳನ ಬಲು ರಥವಾ ॥
ತುರಗ ಕಾಳ್ಗೆಡಲಸುರ ಕೋಪದಿ
ಉರಗ ಬಾಣವ ಬಿಡಲು ಫಣಿಗಳು
ಹರಿದು ಗಾಳಿಯ ಕುಡಿದು ಹಗೆಯನ ಹಂಗು ಮಗುಚಿದುದು ॥ ೪೩ ॥

ಕರಿಗೆ ಕಂಠೀರವನ ಬಾಣವ
ಗಿರಿಗೆ ತೊಟ್ಟನು ಕೌಲಿಶಾಸ್ತ್ರವ
ಭರದಲೆಚ್ಚನು ರಾಕ್ಷಸಾಸ್ತ್ರಕೆ ದಿವ್ಯ ಮಾರ್ಗಣವ ॥
ಉರು ಪಿಶಾಚಕೆ ರೌದ್ರ ಬಾಣವ
ನಿರದೆ ರಣ ಸೌರಂಭವೆಸೆದಿರೆ
ಎರಡು ಮೋಹರ ನೋಡಿ ಹೊಗಳಿತು ವೀರರಥಟುಗಳ ॥ ೪೪ ॥

ಅರಿ ಭಯಂಕರ ಪಾವಕಾಸ್ತ್ರವ
ಭರದಿ ಕೆಡೆಕೆಡೆಯೆನುತ ತೆಗೆದಿಸೆ
ಧರಣಿಗಚ್ಚರಿಯೆನಲು ಬಂದುದು ಶಿವಶಿವಾಯೆನುತ ॥
ಉರಿಯೊ ಹೊಗೆಯೋ ಬೆಂದೆವೇಗುವೆ
ಇರದೆ ಹೋದೆವೆ ಕೆಟ್ಟೆವಾರೆವು
ಬರಿದೆ ಬೆಂದೆವು ಕೆಟ್ಟೆವೆಂದೊದರಿತ್ತು ಕಪಿ ಸೇನೆ ॥ ೪೫ ॥

ಏನಿದಚ್ಚರಿ ನೆರೆದ ಮರ್ಕಟ
ಸೇನೆ ಬಾಯ್ಬಿಟ್ಟೊರಲುತಿದೆಯಿದ
ಕೇನ ಮಾಡುವೆನೆನುತ ಮನದಲುಪಾಯವನು ಕಂಡು ॥
ಭಾನುದಿವ್ಯಾಸ್ತ್ರವನು ಬಿಟ್ಟರೆ
ಮೌನ ಬಲಿದುದು ಬಾಯ ಕಟ್ಟಿತ
ದೇನನೆಂಬೆನು ರಹಣವಾದುದು ರಣದ ಮಧ್ಯದಲಿ ॥ ೪೬ ॥

ಹಲವು ಮಂತ್ರಾಸ್ತ್ರಗಳು ಸವೆದರೆ
ಖಳನು ಕಳವಳಗೊಂಡು ತವಕದಿ
ನೆಳೆದನಾ ಸಮ್ಮೋಹನಾಸ್ತ್ರವ ಗೆಲುವೊಡಸದಳವು ॥
ಹಿಳುಕ ಮಂತ್ರಿಸಿ ಬಿಡಲು ಕಪಿಗಳ
ತಲೆಯನೇರಿತು ನಿದ್ರೆ ಲಕ್ಷ್ಮಣ
ನೊಲೆದು ಮೈಯನು ಕೈಯ ಧನುಶರ ಕಳಚುತಿರಲಂದು ॥ ೪೭ ॥

ಆಗುಳಿಸಿ ಮೈಮರೆದು ತನುವನು
ತೂಗಿ ತೂಕಡಿಸಿತ್ತು ನಿದ್ರಾ
ಬಾಗಧೇಯರು ಬಲಿದು ಕಂಗಳ ಮುಚ್ಚಿ ಕೆಡೆವುತಿರೆ ॥
ಕೈಗಿರಿಯ ಬಿಸುಡುತ್ತ ಕಪಿಗಳು
ಬಾಗಿ ಮೈಮರೆದೊಲೆಯೆ ವಿಭಿಷಣ
ನಾಗಲಾ ಕ್ಷಣ ಹರಿದು ಬಂದನು ರಾಮರಾಮೆನುತ ॥ ೪೮ ॥

ಜನಪ ನೀ ಸಿರಿರಾಮನಾಮದ
ನೆನಹ ಮರೆದೈ ತಂದೆ ತೊಡು ತೊಡು
ದನುಜನೆಸುತಿರೆ ನೀನು ಕೈಮರೆಯುವುದೆ ಕಾಳಗದಿ ॥
ಜನಪ ಬಿಡು ಸಮ್ಮೋಹನಾಸ್ತ್ರವ
ನೆನಲು ಕೌಶಿಕ ಮುನಿಯ ಚರಣವ
ನೆನೆದು ಬಿಡಲಾ ಮಾಯೆ ಮಾಯೆಯು ನುಂಗೆ ಬಯಲಾಯ್ತು ॥ ೪೯ ॥

ಆಯುವಂತನೆ ಕೇಳು ಮಿಕ್ಕಿನ
ಸಾಯಕದಲಿವನಳಿಯ ದೈತ್ಯನಿ
ಕಾಯ ಕವಚವಿಭೇದಿ ವೈರಿಂಚಾಸ್ತ್ರ ಹೊಡೆನಲು ॥
ವಾಯು ಮಾತಿದು ಹುಸಿಯೊ ದಿಟವೋ
ಮಾಯವೋ ಮೇಣರಿವೆನುತಬು
ಜಾಯತಾಕ್ಷನ ತಮ್ಮ ತೆಗೆದನಮೋಘ ಬಾಣವನು ॥ ೫೦ ॥

ತರಣಿ ನಿಷ್ಪ್ರಭನಾದ ದೆಸೆ ಸೀ
ಕರಿಸೆ ಕಂಪಿಸಲವನಿಮಂಡಲ
ಹುರುಳುಗೆಟ್ಟುದು ಖಳರು ತಾರಾಳಿಗಳು ಕಂದಿದುವು ॥
ಮರುತನಪಸವ್ಯದಲಿ ತಿರುಗಿದ
ನರಿಗಳಿದಿರಲಿ ಕೂಗೆ ತೇರಿನ
ತುರಗ ಕಂಬನಿ ಸುರಿಯೆ ದೈತ್ಯನ ನಿಧನ ಸೂಚಿಸಿತು ॥ ೫೧ ॥

ಇಂದಿವಗೆ ಕಡೆಗಾಲವೆಂಬುದ
ನಂದು ಲಕ್ಷ್ಮಣನರಿಯೆ ದೇವರ
ವೃಂದ ನಲಿದುದು ಹರುಷಗೊಂಡುದು ವಿಧಿಯ ಹೊಗಳುತ್ತೆ ॥
ಕಂದಿತಸುರನ ಮುಸುಡು ಧೈರ್ಯವು
ಕುಂದಿ ಮನದೊಳಗಳುಕಿ ನಿಂದನು
ಮುಂದುಗೆಟ್ಟನು ದೈತ್ಯ ಸಿಡಿಮಿಡಿಗೊಂಡು ಮರನಾದ ॥ ೫೨ ॥

ಶಿವನೆ ಗತಿ ಶರ್ವಾಣಿಯರಸನೆ
ಭವನೆ ಭಾಳಾಂಬಕನೆ ಬಲುಹಾ
ಗಿವನು ಕಾದಿದನಿನಿತು ಪರಿಯಿಂತಾಯ್ತು ಸಂಗ್ರಾಮ ॥
ಇವನ ಕರುಳನು ತಿನ್ನು ಕಪಟವ
ಕವಿಸಿ ಜವಗೆಡಿಸಿವನ ನುಂಗೆನು
ತವಿರಳಾಸ್ತ್ರವನೆಚ್ಚ ಲಕ್ಷ್ಮಣ ಕಿವಿಯ ಸರಿಗುಗಿದು ॥ ೫೩ ॥

ಹೊಗೆದುದೋ ಬ್ರಹ್ಮಾಂಡ ಬೆಂದುದು
ಮೊಗೆವ ಕಾರ್ಬೊಗೆ ಗಗನಕಡರಿತು
ಜಗವ ಮುಸುಕಿತು ಉಸುರು ತೆಗೆಬಗೆಯಾಯ್ತು ಜೀವರಿಗೆ ॥
ಬಗೆಯೆ ಕಾದೆಸರಾದುದಂಬುಧಿ
ಹಗಲು ನೀಗಿತು ಹಗೆಯ ಕೂಗಿತು
ಭುಗಿಲಿಡುತ ದಿವ್ಯಾಸ್ತ್ರ ಬಂದುದು ಖಳನನರಸುತ್ತ ॥ ೫೪ ॥

ಹೊಳೆವ ಹೊಗರಿನ ಬಾಯ ಧಾರೆಯ
ತಳರುಗಿಡಿಗಳ ಪವನ ವೇಗದ
ಲೆಲೆಲೆ ಬರುತಿಹ ಬಾಣವನು ಖಳ ಕಂಡು ತವಕದಲಿ ॥
ಹಲವು ಮಂತ್ರಾಸ್ತ್ರಗಳ ಬಿಟ್ಟನು
ಬಲುಹು ಶಕ್ತಿಯೊಳಿಟ್ಟೊಡನಿತನು
ಮುಳಿದು ನುಂಗಿತು ಕಡಿದುದಮಮಾ ಖಳನ ನಡುಗೊರಳ ॥ ೫೫ ॥

ಸಿಡಿದು ಹೋಯಿತು ಮೂರು ಯೋಜನ
ಕಡಿದ ತಲೆಯಂಬರಕೆ ಹಾರಿತು
ಪೊಡವಿ ಕಂಪಿಸೆ ಬಿದ್ದುದಾತನ ಮುಂಡ ರಥದಿಂದ ॥
ಅಡಗಿ ಹೋಯಿತು ತೇರು ತುರಗವು
ಕೆಡೆದ ಸಾರಥಿವುಳಿದ ದೈತ್ಯರು
ಸಿಡಿದು ಬಿಟ್ಟೋಡಿತ್ತು ಕಪಿಗಳು ನೆರೆದುಘೇಯೆನಲು ॥ ೫೬ ॥

ಪರಮ ಮಂಗಳನಾಮ ಪಾವನ
ಚರಿತ ವೈಷ್ಣವ ಲೋಕರಕ್ಷಕ
ವರ ಶಿರೋಮಣಿ ನಿಗಮ ವಂದ್ಯನೆ ನಿತ್ಯ ಸಂತುಷ್ಟ ॥
ದುರಿತಹರ ಕರುಣಾಳು ವಿಶ್ವಂ
ಭರ ಜನಾರ್ದನ ಶರಣುಶರಣೆನು
ತುರುಳುತಿರ್ದುದು ಖಳನ ತಲೆ ರಘುನಾಥ ಶರಣೆನುತ ॥ ೫೭ ॥

ಧರಣಿ ಕಂಪಿಸೆ ಖಳನ ರುಂಡವು
ಹೊರಳಿ ಬಂದುದು ಹರಿಯ ಚರಣಕೆ
ದುರಿತಮರ್ದನನೊಲಿಯೆ ಬಿದ್ದುದು ತೆರೆದ ಕಂಗಳಲಿ ॥
ಹರಿಯ ನೋಡಿತು ನೋಡಿ ಲಾಲಿಸಿ
ಭರದಿ ನೋಡಿತು ನೋಡಿತಾಗಳೆ
ಬೆರೆಯಿತಾತನ ಪಾದ ಮುನಿಜನ ಮೆಚ್ಚಲಚ್ಚುತನ ॥ ೫೮ ॥

ಹಲವು ಯಾಗವ ಮಾಡಿ ಧರ್ಮದ
ನೆಲೆಯ ಕಾಣದೆ ತಪದ ತಾಪದಿ
ಬಳಲಿ ಮೌನ ಧ್ಯಾನದಿಂದವೆ ಹರಿಪದಾಂಬುಜವ ॥
ಹೊಲಬನರಿಯವು ಶ್ರುತಿ ಸಮೂಹವು
ಬಳಲುತಿಪ್ಪವು ದೈತ್ಯನೊಂದೇ
ಗಳಿಗೆ ಮಾತ್ರಕೆ ಕಾದಿ ಕೈವಲ್ಯವನು ಸಲೆ ಪಡೆದ ॥ ೫೯ ॥

ಸುರಪ ಸುರಿದನು ಸುಮನಸಾರವ
ಹರುಷದಲಿ ನಾರದನು ಕುಣಿದನು
ಸುರರ ದುಂದುಭಿ ಜಯಜಯಧ್ವನಿಯಭ್ರದೊಳಗೆಸೆಯೆ ॥
ಧುರದಲರಿಯನು ಗೆಲಿದು ಲಕ್ಷ್ಮೀ
ವರನ ಚರಣಕ್ಕೆರಗಲಾಗಳೆ
ಹರುಷದಲಿ ಬಿಗಿದಪ್ಪಿ ತಮ್ಮನ ಬಳಲಿದ್ಯೆಯೆಂದ ॥ ೬೦ ॥

ಕಾಳಗದಲತಿಕಾಯ ಬಿದ್ದುದ
ಕೇಳಿ ರಾವಣ ಮರುಗಿ ಗಲ್ಲದ
ಮೇಲೆ ಕರವಿಟ್ಟಳಲಿ ದುಗುಡದಿ ಬೆಂದು ಬಿಸುಸುಯ್ದು ॥
ಮೇಲೆಮೇಲಡರುವ ಪರಾಭವ
ದೇಳಿಲವ ಲೆಕ್ಕಿಸದೆ ಕದನಕೆ
ಮೇಳವಿಸುತಿರೆ ಮುಂದಣಪರಾಂಬುಧಿಗೆ ರವಿಯಿಳಿದ ॥ ೬೧ ॥

ಅನುದಿನಂಬಿಡದುರುಹುತಿಹನೀ
ದಿನಪನೆಂಬೀ ನುಡಿಯ ಕಳೆಯಲು
ವನಧಿಯಲಿ ಸಲೆ ಮುಳುಗಿ ಶಾಂತವ ತಳೆದು ಮೂಡಲಿಗೆ ॥
ದಿನಪ ಚಂದ್ರಮನಾಗಿ ಬರಲದು
ಮನದ ರಾಗದಿ ನೋಡೆ ಮುತ್ತಿ
ರ್ದನಿಮಿಷಾಳಿಗಳಂತೆ ತಾರೆಗಳೆಸೆದುವಭ್ರದಲಿ ॥ ೬೨ ॥

## ೨೮ನೇ ಸಂಧಿ

ಪಲ್ಲ ॥ ಅರಿಬಲದ ಹೊಣಿಗನು ಮೋಸದೊ
ಳಿರುಳು ಕೊಂದನು ವರದ ಬಲದಲಿ
ಹರಿ ವಿಮೋಹಿತನಾಗಿ ಮಾಯಾ ಬಲವ ತೂರಿದನು ॥

ಪದ ॥ ಕಾಳಗಕೆ ಹೋದವರು ರಣದಲಿ
ಬೀಳುತಿದ್ದುದು ಮರಳಿ ಬಹ ಬಿ
ಲ್ಲಾಳ ಕಾಣೆನು ಹೋಯಿತ್ತೈ ಹೇರಾಳ ನಾಯಕರು ॥
ಕಾಳಲರಿದಿಂದ್ರಾರಿ ಮೊದಲೇ
ಕಾಳುಮಾಡಿದನಕಟ ಕೊಲ್ಲದೆ
ಖೂಳನಾದನು ಎಂದು ರಾವಣ ಹಲುಬಿ ಮರುಗಿದನು ॥ ೧ ॥

ಎಲ್ಲಿ ಬಾಗಿಲು ಗವನಿ ಕಾಲುವೆ
ಎಲ್ಲಿ ಅಗಳಗುಸೆಗಳು ಎಡೆಕಡೆ
ಯೆಲ್ಲಿ ಬಿಡು ಕಡಿ ಕಂಡಿ ಹಿತ್ತಲು ಗುಲ್ಮವಾವಲ್ಲಿ ॥
ಅಲ್ಲಿಗಲ್ಲಿಗೆ ನಾಯಕರು ಬಲು
ಹುಳ್ಳ ತೇಜಿಯ ಭಟರ ಕಾವಲು
ಬಲ್ಲಿತಾಗಲಿ ನಾಲ್ಕು ಬಾಗಿಲಲೆಂದ ಪಶಕಂಠ ॥ ೨ ॥

ಭಾನು ಮುಗಿಲೊಳು ಮುಳುಗುತಿರೆ
ಪವಮಾನ ಬಗಿದಂತಾಯ್ತು ತಂದೆಯ
ಮೌನ ಮುಸುಕನು ಕಂಡು ಬಿಡು ಬಿಡು ದುಗುಡ ನಿನಗೇಕೆ ॥
ನಾನು ಸುಖದಿಂದಿರಲು ಬಹುದೇ
ಹಾನಿ ನಿನಗಾಗಿರಲು ಮನುಜನ
ಸೇನೆ ಸಹಿತವೆ ಕೊಲುವೆ ನೋಡುವುದೆಂದನಿಂದ್ರಾರಿ ॥ ೩ ॥

ಹೋದ ದನುಜರ ಕಂಡು ರಣದಲಿ
ಖೇದಗೊಂಡಿದಿರಾಡಿ ಪುನರಪಿ
ಕಾದದಿದ್ದರೆ ನೊಂದ ಹುಲಿಯನು ಕೆಣಕಿಬಿಟ್ಟವನ ॥
ಗಾದೆಯಹುದಿಂದಾನು ಕದನದಿ
ಹೋದ ರಾಘವನೆನಿಸಿ ತೋರುವೆ
ಮೇದಿನೀಸುತೆ ಬಸುರ ಬಡಿದಳುವಂತೆ ಮಾಡುವೆನು ॥ ೪ ॥

ಹಿಂದೆ ನಾಗಾಸ್ತ್ರದಲಿ ಕಪಿಗಳ
ಕೊಂದೆನದು ಹುಸಿಯಾಯ್ತು ನೀನೇ
ಬಂದು ನೋಡಾ ಕೊಂದು ತೋರುವೆ ನಿನ್ನ ಕಣ್ಣಾರೆ ॥
ಬೆಂದ ಬೇರಂಕುರಿಸುತಿದೆ ಕರ
ನಿಂದೆಗಾನೊಳಗಾದೆ ಕೊರತೆಯ
ನಿಂದು ಕಳೆವೆನೆನುತ್ತ ತಂದೆಯ ಚರಣಕೆರಗಿದನು ॥ ೫ ॥

ವಿಜಯನಾಗೈ ಕಂದ ನೀನವ
ನಿಜೆಯ ಗಂಡನ ಗೆಲ್ಲು ಕದನದೊ
ಳಜಭವಾದ್ಯರಿಗುಂಟೆ ನಿನ್ನಿಂದಧಿಕ ಸಾಹಸವು ॥
ರಜನಿಯಲಿ ನೀ ಕಾದಿ ವೈರಿ
ವ್ರಜವ ತೊತ್ತಳ ತುಳಿವುದೆಲೆ ಮದ
ಗಜವೆ ಬಾಳೆನುತಪ್ಪಿ ತಂಬುಲವಿತ್ತು ಮನ್ನಿಸಿದ ॥ ೬ ॥

ತರಣಿರಂಗವಿಭಾಡನೆಂಬುರು
ತರದ ಮಕುಟವನಿಟ್ಟು ಪದಕವ
ಕೊರಳೊಳಳವಡಿಸಿದನು ಕಂಕಣ ಕಡಗ ಮುದ್ರಿಕೆಯ ॥
ಬೆರಳಲೋರಣವಾಗಿ ಧರಿಸಿದ
ಕರಿಯ ಪಟ್ಟೆಯನುಟ್ಟು ಖಳ ಶೃಂ
ಗರಿಸಿ ಮನ್ನೆಯ ಮಾಂಡಲೀಕರಿಗಿತ್ತನುಡುಗೊರೆಯ ॥ ೭ ॥

ತರುಣಿಯರು ಶೃಂಗಾರದಾರತಿ
ಹರಸುತಿಹ ಹಾರುವರ ಹರಕೆಯು
ಬಿರುದ ಹೊಗಳುವ ಭಟರರಬ್ಬರವೊಪ್ಪಲಿಂದ್ರಾರಿ ॥
ಹಿರಿದು ಸಿಂಗರವಟ್ಟು ಕಾದುವ
ಭರದಿ ಹೊರವಡೆ ಪಲ್ಲಿ ಕರೆದುದು
ಉರಿಯ ದಿಕ್ಕಿನಲೊಡನೆ ದಕ್ಷಿಣ ಭುಜವು ಕುಣಿವುತಿರೆ ॥ ೮ ॥

ನಡೆನಡೆದು ಬೇಸತ್ತು ದಿನಪತಿ
ಕಡಲ ಬಿದ್ದನು ಗಗನ ಭಿತ್ತಿಯ
ತೊಡೆಯಲುದಕವ ತರಲು ರತ್ನಾಕರನ ಸಾರಿದನೊ ॥
ಉಡುಪ ಬಹ ಸಮಯವನದೇತಕೆ
ತಡೆದನೆಂದರಸುತ್ತ ಹೋದನೊ
ಒಡೆಯರೊಬ್ಬರ ಕಾಣೆ ಪೂರ್ವಾಪರದ ಸತಿಯರಿಗೆ ॥ ೯ ॥

ಜಾರೆಗುಪಪತಿಯೊಲವು ನಿಶಿಯಲಿ
ಸೇರಿದಂತಾಯ್ತವಗೆ ತನ್ನ ಮ
ನೋರಥಂಗಳ ಪಡೆದು ಕಾದುವೆನೆನುತ ಕುಂಭಿನಿಯ ॥
ಹೋರ ಹೊಕ್ಕನು ಕೆಡಿಸಲೊಬ್ಬರು
ಬಾರದಂದದಿ ಕಾಹನಿರಿಸಿದ
ಮಾರಣದ ಹೋಮವನು ತೊಡಗಿದ ವೀರನಿಂದ್ರಾರಿ ॥ ೧೦ ॥

ಅರುಣ ಕುಸುಮವ ಕೋಟಿ ಕುರಿಗಳ
ಕರಿಯು ಹಲವನು ಕೋಣ ಶತಕವ
ತರಿಸಿದನು ಕಾರೆಳ್ಳ ಕರೆಸಿದ ಬೊಮ್ಮ ರಕ್ಕಸರ ॥
ಸುರಿದ ರಕ್ತದ ಕೊಪ್ಪರಿಗೆಗಳ
ಸುರಿದು ಘಟಿ ಹರಿಯಣದಲಡಗನು
ಚರುಗಳನು ಸಂಬಾರ ಸಮಿಥೆಯ ಮೊನ ನೆರಹಿದನು ॥ ೧೧ ॥

ಅರುಣ ವಸ್ತ್ರವನುಟ್ಟು ಶಿರದಲಿ
ನೆರೆದು ದಾಸಣ ದಂಡೆಗಳ ದ
ಳ್ಬುರಿಯ ನೋಟದ ಬಸುರ ಕಿಚ್ಚನು ತೆಗೆದು ಕೊಂಡದಲಿ ॥
ಅರಳು ಕಂಗಳ ಕೆಂಪಿನಕ್ಷತೆ
ಕರಿಯ ತಗರಿನ ರಕ್ತ ಗಂಧವು
ವರವಿಡಂಬದಿ ಉಕ್ಕಿನ ಸ್ರುವೆಯಿಂದ ಬೇಳಿದನು ॥ ೧೨ ॥

ಕರುಳ ಚರುವನು ನರದ ದರ್ಭೆಯ
ಸುರಿದ ರಕುತದ ಗಂಧ ಚಂದನ
ವರರೆ ಬದಿಯೆಲು ಹೋಮುಗಟ್ಟಿಗೆ ರುಧಿರದಾಜ್ಯದಲಿ ॥
ಉರಿ ಪ್ರದಕ್ಷಿಣವಾಗಿ ಚರಿಸಿತು
ಸಿರಿಯ ಸೂಚಿಸುತಿರ್ದುದಸುರಗೆ
ಭರದಿ ಬೇಳಿದ ಮಂತ್ರಕೋವಿದನೇಕ ಚಿತ್ತದಲಿ ॥ ೧೩ ॥

ಆರು ನೋಡುವರವನು ಮಾಡುವ
ಮಾರಣದ ಹೋಮವನು ಕೊಂಡದ
ಲಾರು ಬೇಳಲುಬಹುದು ಕರುಳಿನ ಕಮರಿನಟ್ಟುಳಿಗೆ ॥
ವೀರ ಸುಟ್ಟನು ಕರಿಯು ಹಲವನು
ತೀರಿಸಿದ ಕುರಿ ಕೋಣ ಕಾಟಿಯ
ಹಾರುವರು ಹಿಮ್ಮೆಟ್ಟಿ ತಾನೇ ಬೇಳತೊಡಗಿದನು ॥ ೧೪ ॥

ಓವೊ ಬದಿಯೆಲುವಿಂದ ಪೊತ್ತಿದ
ಪಾವಕನ ದಳ್ಳುರಿಯು ನೆಗೆದುದು
ಶೀವಿತ್ತೈ ಕುಂಭಿನಿಯ ಮೋರೆಗೆ ಧೂಪವಿಟ್ಟಂತೆ ॥
ದೇವರಿಪು ತಾ ಕಡಿದು ಬೇಳಿವ
ಶೀವಿದೊಡಲಿನ ಮಾಂಸ ಖಂಡವು
ಬೇವುತಿರ್ದುದು ಕಮರು ಗಾಢದಲೆಸೆಯೆ ಕೊಂಡವಲಿ ॥ ೧೫ ॥

ಸುಮ್ಮನುಣ್ಣುತೆ ಹೋಗಲರಿಯದು
ಅಮ್ಮ ಕೊಡು ಕೊಡು ವರವ ವಾಂಛಿತ
ದಮ್ಮುಗೆಯ ರಿಪುಜಯವ ಬೇಗನೆ ನಿನ್ನ ಕಿಂಕರಗೆ ॥
ನಿಮ್ಮ ಕರುಣದಲಾನು ಪೂರ್ವದೊ
ಳೊಮ್ಮೆ ಗೆಲಿದೆನು ಮತ್ತೆ ಕಪಿಗಳ
ಹಮ್ಮು ಮುರಿವೆನು ಕೃಪೆಯ ಮಾಡೆನುತಿರ್ದಸಿಂದ್ರಾರಿ ॥ ೧೬ ॥

ಬೇಳಿದನು ತನಗುಳ್ಳ ಶಸ್ತ್ರವ
ಬೇಳಿದನು ಬತ್ತಳಿಕೆ ಬಾಣವ
ಬೇಳಿದನು ಧನು ಕವಚ ಸೀಸಕ ತೇರು ಮೊದಲಾಗಿ ॥
ಬೇಳಿದನು ಮಂತ್ರಾಸ್ತ್ರ ಹಲವನು
ಬೇಳಲರಿಯನು ಪ್ರಾಣವೊಂದನು
ಬೇಳ ಮರೆದನು ಭಲರೆ ವೀರರದೇವನಿಂದ್ರಾರಿ ॥ ೧೭ ॥

ಖಳನ ಭಕ್ತಿಯನಾವ ಬಣ್ಣಿಸ
ಲಳವು ಶಿವ ಶಿವ ಪಾದವೆರಡನು
ಕಳಚಿ ಬೇಳಿದನೆರಡು ಜಂಘೆಯ ಮುರಿದು ಹೋಮಿಸಿದ ॥
ಕುಳಿತ ತೊಡೆಯೆರಡುಳಿದುದೆಲುವಿನ
ಹಳೆಯ ಪಂಜರದಂತೆ ನಿಜಗಲಿ
ಸೆಳೆದು ಖಡ್ಗದಿ ತಲೆಯ ತರಿದಾಹುತಿಯ ಬೇಳಿದನು ॥ ೧೮ ॥

ಕೂಡಕೂಡಲೆ ಖಳನ ಹಂದಲೆ
ಮೂಡುತಿರ್ದುದು ಮತ್ತೆ ನೋವನು
ನೋಡದರಿದನು ಬೇಳುತಿರಲಾಹುತಿಯ ಮತ್ತವನು ॥
ಮೂಡಿದಂದದಿ ಬೇಳುತಿರ್ದನು
ದಾಡೆಗುಟ್ಟುತ ಕಡಿದು ಬೇಳಲು
ಮೂಡುತಿರ್ದುವು ಸುಟ್ಟನೀಪರಿ ಹಲವು ತಲೆಗಳನು ॥ ೧೯ ॥

ಭಾಪು ವೀರರ ದೇವ ಸುರಜಿತು
ಭಾಪು ಕಲಿಗಳ ಕಂಠಕೌಸ್ತುಭ
ಈ ಪರಿಯ ಸಾಹಸಿಗಳುಂಟೇ ವರವ ನೀಯದೊಡೆ ॥
ಪಾಪ ಕುಂಭಿನಿಗಹುದುಯೆನುತ ಪ್ರ
ತಾಪಗೊಳುತಿರೆ ದೇವಿಯನುಚರ
ನಾಪುರಂದರ ವೈರಿ ತಾನೇ ಬಿದ್ದ ಕೊಂಡದಲಿ ॥ ೨೦ ॥

ನೊಸಲ ಕಂಗಳ ಭಾಳವಟ್ಟದ
ಬಸಿವ ನೆತ್ತರ ಫಣಿಯಕುಂಡಲ
ಎಸೆವ ಕೊರಳಲಿ ರುಂಡಮಾಲೆಭುಜಂಗ ಭೂಷಣವು ॥
ಭಸಿತ ಭಾಳದ ಕುರುಳ ದಂಡೆಯ
ಬಿಸುರುಹಾನನೆ ಹಾಯ್ದು ಕೊಂಡದ
ಲಸುರ ಮುಗ್ಗದ ಮುನ್ನ ಹಿಡಿದೆತ್ತಿದಳು ಕರುಣದಲಿ ॥ ೨೧ ॥

ಭೀಮಭೀಷಣಿ ಭೀತಿದಾಯಕಿ
ಕಾಮರೂಪಿಣಿ ನೀಲಲೋಹಿತೆ
ಸೋಮವದನೆ ಕುಮಾರಿತಾರಿಣಿ ಮನವಿಮೋಹಿನಿಯು ॥
ವಾಮಲೋಚನೆ ರುದ್ರಭೈರವಿ
ತಾಮರಸೆ ತರಳಾಕ್ಷಿ ತಾಮಸೆ
ಕಾಮರೂಪದೊಳೆಸೆದರಾ ದೇವತೆಯ ಬಳಸಿನಲಿ ॥ ೨೨ ॥

ಮೆರೆವ ನೀಲಾಂಬರದ ಪಸರಿಪ
ನಿರಿಯ ತೊಳಗುವ ದಂತಪಂಕ್ತಿಯ
ಮಿರುಗಿ ಮೆರೆವ ಸುರತ್ನದುಂಗುರ ಶೂಲ ಡಮರುಗದ ॥
ಮೆರೆವ ಧವಳಾಂಗದ ಸುರೇಖೆಯ
ಕಿರಿಯ ನಡುವಿನ ಪೀನ ಕುಚಯುಗ
ದೆರಕದಂತಿರೆ ದೇವಿ ವೈದಡವಿದಳು ದಾನವನ ॥ ೨೩ ॥

ಬೇಡು ಮೆಚ್ಚಿದೆ ಕಂದ ನೀನೇ
ಬೇಡಿಕೊಳ್ಳಭಿಮತವ ತಕ್ಷಣ
ಕಾಡಲಾಗದು ಮಾರುಗೊಂಡೈ ಮಗನೆ ತನ್ನುವನು ॥
ಬೇಡು ಬೇಡೆನಲವನು ಬೇಡಿದ
ಕೇಡ ಹೇಳುವೆನೇನ ರಾಮನ
ಕೋಡಗಂಗಳು ಸಹಿತ ರಣದಲಿ ಕೊಂದುಕೊಡುಯೆನಲು ॥ ೨೪ ॥

ಕೇಳಿ ಬೆರಗಾದಳು ನಿಕುಂಭಿನಿ
ಹೇಳು ಹೇಳೆನುತಿತ್ತ ತನ್ನನು
ಬೇಳಃ ಮಾಡಿದೆ ಬಾಯ್ಗೆ ಹೋಗದ ತುತ್ತ ನೆಗಹದಿರು ॥
ಕಾಳು ಮಾಡಿದೆ ಕದನದಲಿ ಕ
ಟ್ಟಾಳು ಗೆಲಲಸದಳವು ಚಿಂತಿಸೆ
ಶೂಲ ಕಿಬ್ಬದಿಯಲಿ ಮುರಿದವೊಲು ದೇವಿ ಮರುಗಿದಳು ॥ ೨೫ ॥

ಕೊಡುವೊಡರಿದೀ ವರವನೊಡನೆಯೆ
ಕಡಿದು ಬೇಳಿದನಸುರನಕಟಾ
ಕೊಡದರೀತನ ರಿಣವು ತನ್ನನು ಮುಟ್ಟದಿರದೆನುತ ॥
ನುಡಿ ಮಗನೆ ಮತ್ತೊಂದ ನೀನವ
ಗಡಿಸಿ ಕಾಡದಿರೆನಲು ತನಗಿದ
ಕೊಡುವುದೊಲುವರೆ ಉಳಿದ ವರಗಿರ ಬೇಡ ತನಗೆಂದ ॥ ೨೬ ॥

ಧರ್ಮದಲಿ ನಡೆವಾತ ರಾಘವ
ಧರ್ಮದೂರರು ನೀವು ನೋಡುವೊ
ಡೆಮ್ಮ ಶಕ್ತಿಯದೇನು ಧರ್ಮರ ಮೇಲಣಾಪಹತಿಗೆ ॥
ನಮ್ಮ ದೂರದಿರೆನಲು ಚಿತ್ತವಿ
ಸಮ್ಮ ಹೇಳದಿರೆನಗೆ ನೀನೀ
ಧರ್ಮಗಿರ್ಮವ ಬೇಗ ಕೊಡು ಸಮ್ಮೋಹನಾಸ್ತ್ರವನು ॥ ೨೭ ॥

ಅಡಗಿ ಕೊಲ್ಲದಿರೆಲವೊ ವರವನು
ಪಡೆದ ಗರ್ವದೊಳಿಂದು ರಾಮನ
ಪಡೆಯ ಠಕ್ಕಿಸಲರಿದು ಮಡಿಯುನು ಫಲಿಸದೀ ವರವು ॥
ಬಡವರಧಮರ ಕಾಡದಿರು ಕಾ
ಲಿಡದಿರನ್ಯಾಯದಲಿ ಕೊಟ್ಟೆನು
ಮೃಡವಿರಿಂಚಿಗಳಿಂಗೆ ತೀರದ ವರವ ನಿನಗಾನು ॥ ೨೮ ॥

ಬಲಿದುದಾತನ ದೇಹ ದೇವಿಯು
ಒಲವು ಸಾರ್ದುದು ತೆಗೆದುಕೊಟ್ಟಳು
ಖಳನು ಬೇಳಿದ ತೇರು ಧನು ಶರ ಶಕಟ ಮೊದಲಾಗಿ ॥
ಹಲವು ಮಂತ್ರಾಸ್ತ್ರಗಳ ಕವಚವ
ಬಳಿಕ ಬಲು ಸಮ್ಮೋಹನಾಸ್ತ್ರವ
ನೊಲಿದು ಕೊಟ್ಟಳು ಗೆಲ್ಲು ಹೋಗೆಂದಡಗಿದಳು ದೇವಿ ॥ ೨೯ ॥

ಹರುಷದಲಿ ಹೊರೆಯೇರಿ ಹಿಗ್ಗಿದ
ನುರುವ ಸಂತಸದಿಂದ ಹೆಚ್ಚಿದ
ವರ ಮನೋರಥ ಸಾರ್ದ ಪರಮಾನಂದಮಯನಾಗಿ ॥
ಸುರವಿರೋಧಿ ಸುರಾರಿ ಸುರಜಿತು
ಸುರದಿಶಾಪಟಿ ಸುರಪದಲ್ಲಣ
ಸುರವಿಭಾಡನು ಸುರ ಭಯಂಕರ ಧನುವನೊದರಿಸಿದ ॥ ೩೦ ॥

ಸುರಗಿಯತಿಬಲರೆಂಟು ಲಕ್ಷವು
ಹರಿಗೆಯವರೊಂಬತ್ತು ಲಕ್ಷವು
ಪರಶು ಪಟ್ಟಿಸದವರು ಸಬಳಿಗರೆರಡು ಲಕ್ಷಗಳು ॥
ಸರಳು ಚಾಪದ ಭಟರನಂತವು
ಕರೆದು ಕೂಡಿದುವಭ್ರಮಾರ್ಗದಿ
ಇರಳು ಮೋಸದಲಸುರ ಬಂದನು ಮುಗಿಲ ಮರೆವಿಡಿದು ॥ ೩೧ ॥

ಏನ ಹೇಳುವೆ ಬಳಿಕ ದನುಜನ
ಸೂನು ಪಡೆಸಹ ನಭವನಡರಿದ
ವಾನರಂಗಳು ಕಾಣದಂತಿರೆ ಮಾಯಕೋವಿದನು ॥
ಜಾನಕಿಗೆ ಬಲಗಣ್ಣು ಕುಣಿದುದು
ಜಾನಕೀಶಂಗೆಡದ ನಯನವು
ಹಾನಿ ಸೂಚಿಸುತಿರ್ದುದವಶಕುನಂಗಳೊದಗಿದುವು ॥ ೩೨ ॥

ಕೆಲರು ಕೈದಂಡೆಗಳ ಬಾಲವ
ಕೆಲರು ಮರಮುಟ್ಟುಗಳ ಶಿಲೆಗಳ
ಕೆಲರು ಮರಳನು ಬಿಗಿದು ತಲೆದಿಂಬುಗಳ ನೆರೆ ಮಾಡಿ ॥
ಕುಲಗಿರಿಯ ಸಾಲಿಟ್ಟು ಕೆಡಹಿದ
ನೆಲೆಯ ಹೋಲಿತು ನಿದ್ರೆ ಸೇನೆಯ
ಲುಲುಹು ಕಾಣದು ಕೀಳು ಮೇಲೆಂದಿರದೆ ಮಲಗಿದುದು ॥ ೩೩ ॥

ಹೊರಳಿ ಮಗ್ಗುಲೊಳವುಚಿ ಕೆಲಬರು
ಮುರುಟಿಕೊಂಡರು ಕೆಲರು ನೆಲನಲಿ
ಹೊರಳುತಿರ್ದರು ಉರುಳಿನರಳುವರುಬ್ಬೆಗಬ್ಬರಿಸಿ ॥
ಭರದ ನಿದ್ರೆಯ ತಾಳಲನಿಬರು
ಕರೆದರ್ರೈ ಕೇಡುಗಳ ಗೊರೆವುತೆ
ವರವ ತಾಳ್ದಗೆ ಹಗೆಯು ಮೈಮರೆದಿರುಳು ಮಲಗಿರಲು ॥ ೩೪ ॥

ದನುಜ ಸೂಚನೆಗೊಡಲು ಹೊಡೆದರು
ಕನಕನಿಸ್ಸಳ ಭೇರಿ ಕೋಟಿಯು
ವನಚರಂಗಳ ಕಿವಿಯು ಮಾರಿಯು ಹರೆಯನಗಣಿತವ ॥
ಕನಕ ಘಂಟೆಗಳೆಂಟು ಸಾವಿರ
ಧನುಜನೇರಿದ ರಥದಿ ಘಣಿಲೆನೆ
ಘನರವಂಗಳ ಪಟಹದಬ್ಬರ ತುಂಬಿತಂಬರವ ॥ ೩೫ ॥

ಮರುಗಿದನು ಸುರನಾಥ ದಂಡವ
ಮರೆದನಂತಕ ವಹ್ನಿ ಬೆದರಿದ
ಮರೆಯ ಹೊಕ್ಕನು ಧನಪನೀಶನು ಪಾರಿ ನಡುಗಿದನು ॥
ಕರೆ ಮನದ ರಕ್ಕಸನ ತೋಟಿಗೆ
ಒರತು ಸುರರೋಡಿತ್ತು ಗಘುಪತಿ
ಬೆರಳ ಮೂಗಿಗೆ ತಂದ ಬೆರಗಿನಲೇನಿದೇನೆಂದ ॥ ೩೬ ॥

ಅಸುರಕುವರನ ತೋಟಿ ಬೇಡಾ
ವಿಷಮವೀರನ ತೋಟಿ ಬೇಡಾ
ಹಸಿದ ಮಾರಿಗೆ ಬಿದ್ದನಿಕ್ಕುವ ವಿಗಡವಿಕ್ರಮನ ॥
ಅಸಮಸಾಹಸಿ ತೋಟಿ ಬೇಡಾ
ದೆಸೆಯನುಳ್ಳನ ತೋಟಿ ಬೇಡೆಂ
ದೊಸೆದುದಿಕ್ಕೆಲದಲ್ಲಿ ನಭದಲಿ ಗವರು ಗಹಳೆಗಳು ॥ ೩೭ ॥

ಅಮರದಲ್ಲಣ ಬಂದಬಂದನು
ಸಮರ ಭೈರವ ಬಂದ ಬಂದನು
ಸುಮನಸರಕುಲಕೇತು ಬಂದ ಕುಮಾರನಿವ ಬಂದ ॥
ಅಮಿತ ವಿಕ್ರಮ ವೀರ ಬಂದನು
ಸಮತೆಯುಳ್ಳರ ದೇವ ಬಂದನು
ಯಮನ ಮೃತ್ಯುವ ಗೆಲಿದ ಗಂಡರಗಂಡನೈತಂದ ॥ ೩೮ ॥

ಇರುಳು ಮುಪ್ಪುರಿಗೊಂಡುದೋ ಕಾ
ರಿರುಳ ತಿರುಳಂಕುರಿಸಿತೋ ಮೇ
ಣುರಗರಾಯನ ವಿಷವು ಯೌವನಗೊಂಡು ಭುವನದಲಿ ॥
ಹರೆದುದೋ ಹರ ಕೊರಳ ಗರಳವ
ಧರೆಗೆ ತೊಡೆದನೊಯೆನಲು ಕತ್ತಲೆ
ಸುರಿವ ಕಾಡಿಗೆ ಸೋನೆಯಾಯಿತ್ತುಪಮೆಗರಿದಾಯ್ತು ॥ ೩೯ ॥

ಖಳರು ಕೈದಣಿಯೆಚ್ಚು ಮರ್ಕಟ
ಬಲವ ಕೊಲುತಿರಲಿಂದ್ರದಲ್ಲಣ
ಸುಳಿಸಿದನಲಾ ರಥವ ಚಕ್ರದವೋಲು ದೆಸೆದೆಸೆಗೆ ॥
ಮುಳಿದು ಸರಳನು ಸುರಿವನವುವಾ
ಹಿಳುಕು ಹಿಳುಕನು ಹಳಚುತಿರ್ದುವು
ಕೊಲುವ ಕೆಡೆವುದನೇನ ಬಣ್ಣಿಪೆ ಕಪಿಗಳುರುಳುತಿರೆ ॥ ೪೦ ॥

ಹಿಂದೆ ಕಟ್ಟನು ಹಳಿಯು ಹದ್ದಿನ
ಬಂಧುತನದಲಿ ಗೆಲಿದ ಪರಿಯು
ಲ್ಲಿಂದು ಗೆಲುವಂಗವನು ನೋಡುವೆ ಸಕಲ ಮರ್ಕಟರ ॥
ಕೊಂದೊಡಲ್ಲದೆ ಮರಳೆನೆಲವೋ
ಹಿಂದೆ ನಡೆ ನಡೆ ಸಾಯ ಬೇಡಾ
ಬಂದ ಬಟ್ಟೆಯ ಹತ್ತು ಕೊಲುವವನಿಂದ್ರಜಿತು ಕಾಣಾ ॥ ೪೧ ॥

ಬಲವು ಬೆದರುವವೋಲು ಭುಜ ಹೊ
ಯ್ದಲಘು ಸಾಹಸಿ ಮುಗಿಲ ಮರೆಯಲಿ
ಸೆಳೆದು ಚಾಪದಿ ಸರಳ ಸುರಿದನು ಗಂಧಮಾದನನ ॥
ಬಲವ ಸವರಿದ ಮರ್ಕಟಂಗಳ
ತಲೆಯ ಚಂಡಾಡುತ್ತಲಿರ್ದನು
ಚಲಿಸದಂತಿರ ಗಂದಮಾದನ ದರೆಗೆ ಕೀಲಿಸಿದ ॥ ೪೨ ॥

ಸರಳುವೊಂಬತ್ತರಲಿ ನಳನನು
ಧರೆಗೆ ಕೆಡಹಿದ ಹಿಂದೆ ಮುಂದಾ
ಸುರದ ಕೋಪದಿ ಕಂಪನೆಂಬನ ಬಿಡದೆ ಮುಸುಕಿದನು ॥
ಕರಡಿಯೊಡೆಯನ ಹತ್ತು ವಿಶಿಖದಿ
ಸರಳು ಮೂರರೊಳೆಚ್ಚ ಪನಸನ
ಸುರದಿಶಾಪಟಿ ಹತ್ತು ಶರದಿಂದೆಚ್ಚ ದಧಿಮುಖನ ॥ ೪೩ ॥

ಏಳು ಬಾಣದಲೆಚ್ಚ ಗವಯನ
ಸೀಳಿ ಬಿಸುಟ ಗವಾಕ್ಷನೆದೆಯನು
ಹೊಳಿದನು ಹನ್ನೆರಡು ಶರದಲಿ ಶರಭ ಶತಬಲಿಯ ॥
ಹೋಳುಗಡಿದನು ಹತ್ತು ವಿಶಿಖದಿ
ಜೋಲುತಿರ್ದುದು ಕರುಳು ಪನಸಗೆ
ಕೋಲು ಹತ್ತರಲೆಸಲು ದಧಿಮುಖ ರಕ್ತಮುಖನಾದ ॥ ೪೪ ॥

ಕಾಣಬಾರದು ಖಳನು ಸುರಿವಾ
ಬಾಣ ವೃಷ್ಟಿಗೆ ಬೆನ್ನ ತೆತ್ತುದು
ಮಾಣದಡಿಗಡಿಗೆಚ್ಚ ಕೆಡಹಿದನಸುರ ಖ್ಯಾತಿಯಲಿ ॥
ಬಾಣವನು ಸುರಿವುತ್ತ ಕಪಿಗಳ
ಪ್ರಾಣವನು ಕೊಳುತಿರ್ದನೆಲ್ಲರ
ಗೋಣ ಕೊಯ್ದನು ಮಳೆಯು ಸವರುವವೋಲು ಕೆಡಹಿದನು ॥ ೪೫ ॥

ಹೋದ ಹೋದೆಡೆಯಲ್ಲಿ ಕಪಿಗಳ
ಭೇದಿಸಿತು ಖಳ ಬಾಣ ಕೊರೆದುದು
ಬಾದಣವನಕ್ಕಾಡಿ ಹೋದುದು ಕಪಿಗಳವಯವವು ॥
ಕಾದಿ ಸಾವುದು ಧರ್ಮ ಮೋಸದ
ಲೀ ದುರಾತ್ಮಕನೆಮ್ಮ ಕೊಂದನು
ತೀದುದೆಂದಮರಾಳಿ ಮರುಗಿತು ವಿಧಿಯ ಬೈಯುತ್ತ ॥ ೪೬ ॥

ಹರಿಯು ವಜ್ರದ ಘಾತದಲಿ ಹೆ
ಗ್ಗಿರಿಗಳವನಿಗೆ ಬೀಳುವಂದದ
ಲರಿಯು ಮೆದೆಗೆಡೆದಿತ್ತು ಮುತ್ತದ ಹೂತ ಮಗನಂತೆ ॥
ಉರಿಯನುಗುಳುವ ಫಣಿಯು ಹೋಲುವ
ಶಿರವ ಕಾಂಬರು ಕಾಣರಸುರನ
ತಿರುಗಿ ಮೇಲಕೆ ನೋಡೆ ಕಣ್ಣೊಳಗಂಬು ನಾಟಿದುವು ॥ ೪೭ ॥

ಖಳನು ಬಲು ಮಾಯವನು ಬೀಸಿದ
ನಳವುಗೆಡಿಸಿದ ಬಹಳ ಸೇನೆಯು
ನೆಲೆಲೆ ಶಿವ ಬಲುಗೇಡ ಕೊಟ್ಟನು ರಾಘವೇಶ್ವರಗೆ ॥
ತಲೆಯನೇರಿತು ನಿದ್ರೆ ಲಕ್ಷ್ಮಣ
ನಿಳೆಗೆ ಹರಹಿದ ತನುವ ಶಿವ ಶಿವ
ನೆಳೆದು ಪಡೆಯನು ಗೆಲಿದನವ ಸಮ್ಮೋಹನಾಸ್ತ್ರದಲಿ ॥ ೪೮ ॥

ಬವರಿಗನು ಕೌಳಿಕದ ಮಾಯದ
ಲವನಿಪನ ಬಿಲುಗೈಯ ಮರೆಸಿದ
ಶಿವನೆ ದೈವದ್ರೋಹಪರರಿಗೆ ದೇವಿಯೊಲವಾಯ್ತೆ ॥
ಸವನಿಸಿದುದೋ ಭಾಪು ದೈವದ
ಕವಲುದೊಡಕಿಗೆ ಕಪಿಗಳಳವೇ
ಜವನನಟ್ಟುವ ಮಾರಿ ಮಸಣಿಯು ಗಾದೆಯಾಯ್ತೆಂದು ॥ ೪೯ ॥

ಗಾಯವಿಲ್ಲದರಿಲ್ಲ ಮರಣ
ಪ್ರಾಯರಾದರು ಕೆಲರು ಹೋದರು
ಮಾಯದಲಿ ಖಳ ಕೊಂದ ಸೇನೆಯನಿರುಳು ರಾಘವನ ॥
ಕಾಯವನು ಶಿಖಿತಲ್ಪವೆನಿಸುತೆ
ಸಾಯಕಂಗಳಲೆಚ್ಚ ಮುಸುಕಿದ
ತೋಯಜಕೆ ಮರಿದುಂಬಿ ಕವಿವಂದದಲಿ ಮೊನೆದೋರೆ ॥ ೫೦ ॥

ಮುನ್ನ ಬಾಲಿಯ ಕೊಂದೆಗಡ ನಿನ
ಗಿನ್ನು ನರಿಯಾರುಂಟು ಸಾಗರ
ಬನ್ನ ಬಟ್ಟುದು ಕಾರ್ಯ ಸಿದ್ಧಿಗೆ ಮಡದ ಮಾರೀಚ ॥
ತಿನ್ನವದಿರಡಗುಗಳನೆನುತವೆ
ಕೆನ್ನೆವರೆ ತೆಗೆದೆಚ್ಚ ರಾಮನ
ಬೆನ್ನನೊಡ್ಡೊಡ್ಡೆನುತ ಕರೆದನು ಕನಲಿ ಕೂರಂಬ ॥ ೫೧ ॥

ಮಾರಿಗುಣಬಡಿಸಡಗು ನೆತ್ತರ
ಹೀರು ಕಪಿಗಳ ಕರುಳ ಜಂಪವ
ಕಾರುಕಾರೆನುತಮಮ ಕೈಗಳನೊಡ್ಡಿ ಕರುಣಿಸದೆ ॥
ಕೂರಲಗಸುರಿವುತ್ತ ಸುತ್ತಲು
ಚಾರಿವರಿದನು ಕದನಲಂಪಟ
ವೈರಿ ಕರ್ಕಶಕಾರಿ ಕಪಿಗಳ ಮಾರಿ ಇಂದ್ರಾರಿ ॥ ೫೨ ॥

ಕೋವಿದನ ಶರಹತಿಗೆ ಬೀಳುತ
ನೋವಿನಿಂದಲಿ ಮೊರೆದು ಕಿರಿಚುತ
ಸಾವನಡಿಗಡಿಗಿದಿರುಗೊಂಬರು ಬೆದರಿ ಕಳವಳಿಸಿ ॥
ವೋವೊ ಕೈವಾರಿಸುವೊಡರಿಯನು
ದೈವದೂರರಿಗೆಂತು ಸೇರಿತೊ
ದೇವಿಯೊಲವೆಂದೆನುತ ಮರುಗಿತು ಸುಮನಸವ್ರಾತ ॥ ೫೩ ॥

ಬೂತುಗೆಡೆದೋಡಿದನು ಹಿಂದಾ
ದೂತ ಮೌನವ ಹಿಡಿದನೇತಕೆ
ಈತನೇ ಅಂಗದನು ಶಿವ ಶಿವ ಕಾದು ಬಾಯೆಂದ ॥
ಪೂತುರೆನುತಂಗದನು ಪುಟನೆಗೆ
ದಾ ತತಕ್ಷಣ ಖಳನ ಮುಂದಲೆ
ಯಾತು ಹಿಡಿದರೆ ಕೊರಳು ಸಿಕ್ಕಿತು ಕೈಗೆ ಹಾರದಲಿ ॥ ೫೪ ॥

ಹೊರನೆ ಹಗಲೇನಾದೆ ಮರೆಹೊ
ಕ್ಕಿರಿದೆ ಸಾರರಗುಲಿಗ ಪಂಥವೆ
ಮುರಿವೆ ಗಂಟಲ ಬಳೆಯ ಬಸುರಿನ ಬಿಸಿಯ ರಕುತವನು ॥
ಸುಲಿಯಲೆರೆವೆನು ಮರುಳು ತಂಡಕೆ
ತೆರಹುಗೊಡೆನೆಂದವನ ನೆತ್ತಿಯ
ಲೆರಗೆ ಡೆಂಡಣಿಸುತ್ತ ಬಸವಳಿದಸುರ ಖತಿಗೊಂಡ ॥ ೫೫ ॥

ಬಿಗಿದ ಕೈಕಾಲುಗಳ ಬಾಲದಿ
ಜಿಗಿದು ಹುಬ್ಬಿಕ್ಕುತ್ತ ಕೆನ್ನೆಯ
ನೊಗೆದೊಡುರುಳಿದುವಮರ ವೈರಿಯ ಹಲವುಹಲ್ಲುಗಳು ॥
ಬಗುಳು ಮೂದಲೆಯೆಂತೊ ಹೇಳೆನು
ತೊಗೆದನೆಡಬಲಗೈಯಲಂಗದ
ಮಗುಳೆ ಮಗಳುವಗಡಿಸಿ ತಿವಿದನು ದೈತ್ಯ ಬಸವಳಿದ ॥ ೫೬ ॥

ಎಸುವೊಡನುವಿಲ್ಲಿರಿಯ ತೀರದು
ಹಸನಗೆಟ್ಟಸುರಾರಿ ಸಿಲುಕಿದ
ಮಸಗ ಬಾರದು ದೈತ್ಯಸೋತನು ಹಲವು ಮಾತೇನು ॥
ಉಸುರುತವೆ ಕುಂಭಿನಿಯ ಬೈದನು
ಅಸುರ ಪಡೆ ಕಪಿಭಟನ ಸುತ್ತಲು
ಮುಸುಕಲವಗಡವಾಯ್ತು ಬಾಲದ ಕಟ್ಟು ಸಡಿಲುತಿರೆ ॥ ೫೭ ॥

ಅಸುರ ಧೈರ್ಯದೊಳುಗುಚಿಕೊಂಡನು
ಮುಸುಕಿದನು ಕತ್ತಲೆಯ ಬೀಳೆನು
ತಸಿಯಲಪ್ಪಳಿಸಿದನು ಫಡ ಫಡ ಬೀಳು ಬೀಳೆನುತ ॥
ಅಸಮ ಸಾಹಸಿ ಬೀಳೆ ಹೊಡೆದರೆ
ಬಿಸಿಯ ರಕ್ತದೊಳೊಳಳ್ದನಂಗದ
ನಸುವ ಬಿಟ್ಟನು ಬಿದ್ದ ಮದಗಜದಂತೆ ಭೂತಳಕೆ ॥ ೫೮ ॥

ಕಂಡನಾ ಹನುಮಂತ ನಭದಲಿ
ತೊಂಡ ದೈತ್ಯನ ಹಾರಿ ಹಿಡಿದನು
ದಂಡೆ ಹೊಯ್ಲಿಂದುಗುಚಿಬಿದ್ದುದು ರತ್ನಮಯ ಮಕುಟ ॥
ಹಿಂಡುವಲೆಯು ವನಣುಗ ಹನುಮನ
ಚಂಡಿಕೆಯ ಹಿಡಿದೆಳೆದು ಬಗ್ಗಿಸೆ
ಗಂಡುಗಲಿ ಮುಳಿದವನ ಮುಡಿಯನು ಹಿಡಿದು ಬೀಸಿದನು ॥ ೫೯ ।

ಅಹುದು ಮತ್ತೇನೆಲವೊ ನೀ ಕಡು
ಸಹಸಿಯದನಾವರಿಯೆವೇ ದಿಟ
ಮಹಹ ಹೆಡಗೈಗಟ್ಟಿ ಪುರದಲಿ ಮೆರೆಸುವಾ ದಿವಸ ॥
ಗಹನಚರ ನುಡಿ ಮೌನವೇಕೆನೆ
ಅಹುದು ಕೊಂದೆನು ನಿನ್ನ ತಮ್ಮನ
ದಹಿಸಿ ಲಂಕೆಯ ಬಳಿಕ ಮೌನವತೊಟ್ಟೆ ಕಾನೆಂದ ॥ ೬೦ ॥

ಮರುಳು ಸುಡದೇ ಮನೆಯ ಪೌರುಷ
ಮರಿದು ನಿನಗಿನ್ನಾರು ಸರಿ ತೆಗೆ
ಕುರುಡಿ ಬೀಳುತ ಹುಲಿಯಬಾಯಲಿ ಬಿದ್ದು ಹುಲಿ ಸಾಯೆ ॥
ಕುರುಡಿಗಗ್ಗದ ವೀರವೆಂಬೀ
ಬಿರುದು ನಿನ್ನದೆನುತ್ತ ಗದೆಯಿಂ
ದುರವ ತಿವಿದರೆ ಕೆಂಡಗೆದರಿತು ಹನುಮ ಖತಿಗೊಂಡ ॥ ೬೧ ॥

ಖಳನು ಮುಡಿಯನು ಕೈಗೆ ಸುತ್ತಿದ
ಸೆಳೆದು ಕಿಬ್ಬದಿ ಮುರಿಯೆ ತಿವಿದರೆ
ಚಳಕದಿಂದವೆ ಕೊಯ್ದುಕೊಂಡನು ಮುಡಿಯನಿಂದ್ರಾರಿ ॥
ಕಲಿಯ ಬಾಲವ ಹಿಡಿದು ತಿರುಹಿದ
ಬಲುಹಿನಿಂಪ್ಪಳಿಸಿ ತಿವಿದರೆ
ತಳದಲಜಿಗಿಜಿಯಾಯ್ತು ಕಪಿ ಪಡೆ ದಂತಿ ತುಳಿದಂತೆ ॥ ೬೨ ॥

ಉರಿ ಚಡಾಳಿಸಿ ಕಂಗಳಿಂದಾ
ಸುರದ ಕೋಪದೆ ಖಳನ ಕೆಚ್ಚೆದೆ
ಬಿರಿಯೆ ತಿವಿದರೆ ಕರುಳನೋಕರಿಸುತ್ತ ರಥದಿಂದ ॥
ಉರುಳಿಬಿದ್ದನು ಧರೆಗೆ ತೇರನು
ತಿರುಹಿಯಂಬರಕಿಡಲು ಹೋಗುತ
ಮರಳಿ ಬಂದುದು ತೊಳೆಪ ರಥ ಕಪಿ ಕಂಡು ಬೆರಗಾದ ॥ ೬೩ ॥

ಗುಡುಗುಡಿಸಿ ಗದೆಯಿಂದ ರಕ್ಕಸ
ಹೊಡೆಯೆ ಹನುಮನ ಹಣೆಯ ಚಿಪ್ಪುಗ
ಳೊಡೆಯೆ ನೆತ್ತರು ಸುರಿಯೆ ಕಂಗಳು ಮುಚ್ಚೆ ಕಂಪಿಸುತ ॥
ಬಿಡದೆ ಹೆಣಗಿದನಣುವ ರಕ್ಕಸ
ನೊಡನೆ ಹೋರುತ್ತಿರಲು ಮರ್ಕಟ
ಧಡಿಯಲುಳಿದಂತಾಗೆ ಮಾರುತಿ ಕಂಡು ಚಿಂತಿಸಿದ ॥ ೬೪ ॥

ಅಡವಿಗೋಣಗಳೆರಡು ಹೋರಲು
ಗಿಡುವು ಹುಡಿಗೆಡೆದಂದವಾಯಿತು
ತೊಡಚಿ ನಡುವಿರುಳವನ ಕೂಡಣ ಛಲಕೆ ಕಾದಿದರೆ ॥
ಪಡೆ ಹತಾಹುತವಹುದು ನಾಕೆಂ
ದಡಗಿದನು ಹನುಮಂತ ಭರದಲಿ
ಕೆಡೆದ ಹೆಣಗಳ ಬಗಿದು ಹೊಕ್ಕನು ಮುಸುಕಿ ಮಲಗಿದನು ॥ ೬೫ ॥

ಚಂಡ ಭುಜಬಲ ವೀರನಿತ್ತಲು
ಕಂಡನಾ ವಿಭಿಷಣನ ಹೊರೆಗು
ದ್ದಂಡ ಬಂದನು ಕೈಯ ಹಿಡಿದನು ನಗುತ ನುಡಿಸಿದನು ॥
ಉಂಡು ಸುಖದಲಿ ಬಾಳಲಾರದೆ
ಪುಂಡನಾದೈತಂದೆ ನಡೆ ನಡೆ
ಹಿಂಡು ಹೆಣನೊಳಗಿಹರೆ ಮರುಳಿನವೋಲು ಬಾಯೆಂದ ॥ ೬೬ ॥

ಎಲವೊ ಕುಲಧರ್ಮದಲಿ ಬಾಳುವು
ದಿಳೆಯೊಳನಿಬರು ಮೆಚ್ಚುವಂತಿರೆ
ಬಳಿಕ ತನಗದು ಕೂಡದಿದ್ದರೆ ಸಾವುದೇ ವಿಹಿತ ॥
ಲಲನೆ ಸೀತೆಯ ಬಿಡಿಸು ನೀ ದಶ
ಗಳಗೆ ಹಿತವಹ ತನಯನಾದರೆ
ಹಲವು ಮಾತೇನಲ್ಲದಿದ್ದರೆ ನೀನೆ ಹಗೆಯೆಂದ ॥ ೬೭ ॥

ಸತಿಯನಾರಿಗೆ ಕೊಡುವೆನಾಕೆಯ
ಪತಿಯದಾವಲ್ಲಿಹನು ತೋರಾ
ಹಿತವನಾಡಿದೆ ಮರುಳೆ ಮಾನವನೆಲ್ಲಿ ಸತಿಯೆಲ್ಲಿ ॥
ಅತಿಶಯದ ಸಂಪತ್ತನೊಲ್ಲದೆ
ಪತಿಯ ಬಿಟ್ಟುಪಪತಿಯ ಸಾರಿದ
ಸತಿಯು ಪಾಡಾಯ್ತಿಂದು ನಿನಗೆಲೆ ತಂದೆ ಕೇಳೆಂದ ॥ ೬೮ ॥

ಜೀವರಂತರ್ಯಾಮಿ ರಾಘವ
ನಾವನಾದರೆ ಉಳಿವರಾರೆಲೆ
ಗಾವಿಲನೆ ನೀನಾರ ಕೊಲುವೆಯದಾರು ಸಾವವರು ॥
ರಾವಣನ ಹೆಮ್ಮಗನು ನಿನ್ನನ
ದಾವ ತಿಳುಹುವ ಭ್ರಮೆಯ ಬೀಜವ
ಸಾವು ಹರಿಗೆಲ್ಲಿಯದು ಪತಿ ದೀರ್ಘಾಯು ಹೋಗೆಂದ ॥ ೬೯ ॥

ತಪ್ಪದಹುದಿದು ನೀನು ಬದುಕುವೆ
ಮುಪ್ಪಿನವನೇನೆಂದರೇನೆನೆ
ಅಪ್ಪ ಬಿದ್ದವರಾರು ಬಗೆಗಳೆದಿತ್ತ ನೋಡೆಂಬೆ ॥
ಸರ್ಪ ಕುಲದಲಿ ಹುಟ್ಟಿದವರಿಗೆ
ಕಪ್ಪೆಗಳು ಹುದುವಾಳು ಬಾಳಿಂ
ಗೊಪ್ಪುವುದೆ ಎಲೆ ತಂದೆ ಲಂಕೆಗೆ ಹೋಹ ಬಾಯೆಂದ ॥ ೭೦ ॥

ವಾನರರ ದೆಸೆಯಿಂದ ಲಂಕೆಯು
ದಾನವರಿಗಳಿವೆಂದು ಬಲ್ಲೆನು
ಕಾನಕಪಿಗಳದಾರು ಮನದಲಿ ತಿಳಿದು ನೋಡೆಲವೊ ॥
ನೀನು ನನ್ನನು ನುಡಿಸಿ ಕಾಡದೆ
ಮೌನದಲಿ ನಡೆಯೆಲವೊ ನಾನೀ
ದಾನವಾಂತಕನಳಿದೊಡಳಿವೆನು ಬದುಕೆ ಬದುಕುವೆನು ॥ ೭೧ ॥

ಸಾಸಿಗನು ತಂದೆಯನು ಕೊಲ್ಲದೆ
ಹೇಸಿ ಬಿಟ್ಟನು ಸಿರಿಯನೊಲ್ಲದೆ
ದೇಸಿಗರ ದೇವತೆಯ ನಂಬುವ ಬಾಳು ಸುಡಲೆಂದ ॥
ವಾಸವೇಶ್ವರ ವೈರಿ ತೆರಳೆ
ಕ್ಲೇಶ ಬೀಜವ ಬಿತ್ತಿ ವೊಳೆಸಿದ
ಘಾಸಿಯಾಗದ ಕಪಿಗಳಿಲ್ಲವನಿವನ ಪಡೆಯೊಳಗೆ ॥ ೭೨ ॥

ರಾಘವನು ಮೈಮರೆದ ಲಕ್ಷ್ಮಣ
ಯೋಗ ನಿದ್ರೆಯ ತಾಳ್ದ ಕಪಿಗಳ
ಪೂಗ ಜೀವನ್ಮುಕ್ತವಾದುದು ದೈತ್ಯ ಬೊಬ್ಬಿರಿದ ॥
ಕೂಗಿದನು ಕಪಿ ಕಟಕವೆಲ್ಲವ
ನೀಗಿದನು ನೀರಳಿದನಸ್ತ್ರವ
ಬೇಗೆಯಲಿ ಬೇಳಿದನು ಕಪಿಗಳ ಮಾರಿ ಇಂದ್ರಾರಿ ॥ ೭೩ ॥

ಸೆಣಸುವಭಟರ ಗಂಡ ವೀರರ
ಮಣಿಯು ರಾಕ್ಷಸ ಕುಲಶಿರೋಮಣಿ
ರಣದೊಳೀಡಾಡಿದನು ಕೆಡಹುತೆ ಮರ್ಕಟರ ಪಡೆಯ ॥
ಎಣಿಸ ತೀರದ ಕಪಿಗಳಂತಕ
ನಣಲ ಹೊಳಲೊಳಗಾಗೆ ತಾನಾ
ಕ್ಷಣದೆ ಮಣಿರಥವೇರಿ ಲಂಕೆಗೆ ನಡೆದನಿಂದ್ರಾರಿ ॥ ೭೪

ಹರುಷವಿುಗಲಾರತಿಯು ಸೇಸೆಯು
ಬಿರುಬಿನಬ್ಬರದಿಂದ ಕಾರಿರು
ಳರಿವಿಭಾಡನನಿದಿರುಗೊಂಡರು ಗಾನಗಮುಕದಲಿ ॥
ಧರಣಿಯುಮರರ ಮಂತ್ರದೊಸಗೆಯು
ಹರಕೆಯುಲಿ ಖಳ ಹೊಕ್ಕ ಲಂಕೆಯು
ಪುರದಿ ಸಂಭ್ರಮವಾಯ್ತು ಗುಡಿ ತೋರಣಗಳೊಪ್ಪಿದುವು ॥ ೭೬ ॥

---

## ೨೯ನೇ ಸಂಧಿ

ಪಲ್ಲ ॥ ಹಗೆಯು ಹಂತಿಯು ಗಂಡ ಹನುಮನು
ನಿಗಮದೂರನ ತನಯ ಕೊಂದರ
ಬಗೆದು ಮರುಜೀವನದಲೆತ್ತಿದ ರಾಘವನ ಪಡೆಯು ॥

ಪದ ॥ ಅತ್ತಲಸುಕೆಯು ಬನಕೆ ಹರಿದುದು
ಮೊತ್ತದಸುರರು ಕಳವಳಂಗಳ
ನಿತ್ತರೈ ಕಾಣಿಕೆಯು ಶೋಕಾನೀಕದುಡುಗೊರೆಯು ॥
ಪುತ್ತಳಿಯನೊಯ್ವಂತೆ ಯಾನದಿ
ಯೆತ್ತಿತಂದರು ಖಳರು ಮೂದಲಿ
ಸುತ್ತ ತೋರಿದರಿರುಳು ರಣರೌರವವನವನಿಜೆಗೆ ॥ ೧ ॥

ಉರಿಯು ಸೈರಿಸಲಾರದವನಿಗೆ
ಹೊರಳುತಿರ್ದರು ಕೆಲರು ನೋವಿಗೆ
ನರಳುತಿರ್ದರು ಕೋದ ರಕ್ತದ ವೈಯು ಮರ್ಕಟರು ॥
ಬಿರಿದ ನೆತ್ತಿಯ ಕಂದಿದಧರದ
ಹರಿದ ಕಾಂತಿಯ ಹಸುರು ಕಂಗಳ
ನೊರೆಗಳುಕ್ಕುವ ಬಾಯ ಕಪಿಗಳ ಧರಣಿಗುರುಳಿದರ ॥ ೨ ॥

ಕಾಳುಗಿಚ್ಚಿನ ನಡುವೆ ಸಿಕ್ಕಿ
ದ್ದಾಲಿಗಲ್ಲಿನವೋಲು ತೆಕ್ಕುತ
ಬಾಲೆ ಬಸವಳಿದಳಲಿ ನಡುಗುತ ಸುಯ್ದು ಮೊರೆಯಿಡುತ ॥
ಹೋಲಿದಳು ಬತ್ತಿರ್ದ ಕೆರೆಗಳ
ಬಾಲಮತ್ಸ್ಯವನಬಲೆ ಬಸುರನು
ಸಾಲೆ ಬಡಿದಳು ಬಳಲಿ ಬಾಯ್ಬಿಟ್ಟೊರಲಿದಳು ದೇವಿ ॥ ೩ ॥

ಅಡಿಗಡಿಗೆ ಹಂಬಲಿಸಿ ಹಳವಿಸಿ
ಬಿಡದೆ ಶೋಕದೊಳಳ್ದು ರಕ್ತದ
ಕಡಲೊಳಾಳುವ ಕಪಿಕದಂಬವ ಕಂಡು ಕಳವಳಿಸಿ ॥
ಉಡುಪಥದಿ ನೆರೆಗಚ್ಚಿ ರಾಹುವು
ಕೆಡೆದ ಚಂದಿರನಂತೆ ಕೆದರಿದ
ಮುಡಿ ಮುಖೇಂದು ವಿಲಾಸಗುಂದಲು ಹಲುಬಿದಳು ದೇವಿ ॥ ೪ ॥

ಬುಡುಬುಡಿಸಿ ಮೇರುಗಳ ಪಕ್ಷವು
ಕಡಿದ ಪರ್ವತದಂತೆ ಹೇರೊಡ
ಲಡಗೆಡೆದು ಕೈಕಾಲು ಖಂಡಿಸಿ ಮೂಲೆಗೆಯ್ದಂತೆ ॥
ನಡೆವೊಡಾರರು ಮೆಲ್ಲನುಸುರನು
ಬಿಡುವೊಡಾರರು ವೇದನೆಗೆ ಬಾ
ಯ್ಬಿಡುತಲಿರ್ದುದು ತೋದ ರಕುತದ ವ್ಯೈಯ ಮರ್ಕಟರು ॥ ೫ ॥

ಒದೆದುಕೊಂಬವ ನೀಲ ಕೈಗಳ
ಕೆದಕಿ ಕೊಂಬವ ಮೈಂದನಂಗದ
ಬದಿಯ ಬಾದಣದವನು ದಧಿಮುಖ ಹೊರಳುತಿಪ್ಪಾತ ॥
ಮುದುಗರಡಿ ಜಾಂಬವನು ನರಳುವ
ನೊದರುತಿಪ್ಪವ ರವಿಜ ನೋಡೆಲೆ
ಸುದತಿ ನಿನಗೇಕಾಶೆ ಬಿಡು ಬಿಡು ಮನದ ಹಂಬಲನು ॥ ೬ ॥

ಜಡೆಗೆದರಿ ಹುಡಿಹತ್ತಿದಾಸ್ಯದ
ಮಡಿದ ಗೋಣರೆಮುಚ್ಚಿದಕ್ಷಿಗ
ಳುಡಿಗೆ ರಕ್ತದಿತೋದ ಬಡನಡು ಬಳುಕಿ ಬಸವಳಿದ ॥
ಕೆಡೆದ ರಾಮನ ಕಂಡು ಜಾನಕಿ
ಮಿಡುಕಿದಳು ಹಮ್ಮೈಸಿ ಹಲುಬುತ
ಬಡಿದುಕೊಂಡಳು ಶೋಕದಿಂದವೆ ತನ್ನ ತೆಳುಬಸುರ ॥ ೭ ॥

ಏನೆ ರಘುಕುಲದರಸ ರಾಘವ
ಯೇನೆ ಸಾರ್ದರ ಪೊರೆವ ಭೂಪತಿ
ಯೇನೆನೆನ್ನಯ ಪತಿಯೆ ಹಗೆಗಳ ಹತಿಯೆ ಸದುಗತಿಯೆ ॥
ಏನೆ ಬೇವೆನು ಹೋನೆ ಶೂಲವ
ಸಾವೆನಾರೆನು ಕೆಟ್ಟೆ ರಘುಕುಲ
ದೇವ ನನಗಿನ್ನಾರು ಗತಿ ಹಾಯೆಂದಳವನಿಸುತೆ ॥ ೮ ॥

ಉರಿವ ಕತ್ತರಿವಾಣಿ ಬಸುರಲಿ
ಹರಿದ ಪರಿಯಾಯ್ತರಸ ಮುತ್ತಿನ
ಸರವ ಸರಿಸಿದು ಸಂಭ್ರಮಾಲಿಂಗನದ ನೆನಪಿರದೇ ॥
ಸರಸಭಾಷಿಯರಣ್ಯ ಮಧ್ಯದ
ಲಿರಿಸಿ ನನ್ನನು ನೋಡಿ ನುಡಿಸದೆ
ಯಿರಲು ಬಹುದೇ ಹರಣವಲ್ಲಭ ಮರೆವರೇ ಎನ್ನ ॥ ೯ ॥

ವೀರವಡಗಿತೆ ಪತಿಯೆ ಥಗೆಯಿದ
ನಾರಿಗುಸುರುವೆನಾರ ಕೇಳುವೆ
ದಾರಿತಪ್ಪಿದ ಬಳಿಕ ಚಿಂತಿಸಲೇನು ನಿಷ್ಫಲವು ॥
ವೀರ ನಿನಿಗೀ ಪಡೆಗೆ ನಾನೇ
ಮಾರಿಯಾದೆನು ಮತ್ತೆ ಬೇರಿ
ನ್ನಾರು ಮಹಿಯ ಕುಮಾರಿಯಲ್ಲದೆ ಹಾ ಮಹಾದೇವ ॥ ೧೦ ॥

ಮಗನನಗಲಿಸಿ ಕೊಂದೆ ತಂದೆಯ
ಹಗೆಗೆ ಸತಿಯನು ಕೊಟ್ಟೆಯನುದಿನ
ರಘುಜನಾಳುಗಳೆನಿಪ್ಪ ಕಪಿಗಳ ಕೊಂದೆನಿನ್ನೇನು ॥
ಬಗೆಯೆ ಬರೆದೆಲೆ ವಿಧಿಯೆ ಬದಲನು
ಅಗಲಲಾಗದುಯೆಂದು ಜನಕನು
ಮಗಳನಿತ್ತನು ನಿನ್ನ ಗುಣವನು ನೋಡಿ ವಲ್ಲಭನೆ ॥ ೧೧ ॥

ಪಟ್ಟವೆಂಬಾ ನೆವದಿ ಮಂಥರೆ
ಯಿಟ್ಟ ಕಿಚ್ಚಿದು ಕೈಕೆ ಕಡು ದಯೆ
ಗೆಟ್ಟು ನೂಕಿದಳಡವಿಗೇತಕೆ ವಿಧಿಯ ಕಾಟವಿದು ॥
ಸುಟ್ಟ ಮೃಗವದನೇಕೆ ಬಯಸಿದೆ
ನಟ್ಟಿದೆನು ಬಳಿಯಲ್ಲಿ ತಮ್ಮನ
ನೆಟ್ಟನೆನ್ನವೊಲಾರು ಪಾಪಿಗಳುಂಟು ಭುವನದಲಿ ॥ ೧೨ ॥

ಸತಿಯ ಚಾರಿತ್ರ್ಯದಲಿ ಹೆಚ್ಚುಗು
ಪತಿಗಳಾಯುಷವೆಂಬರಾರ್ಯರು
ಮತಿ ವಿನಾಶಿನಿಯಲ್ಲದಾನಾ ಮೃಗಕೆ ಕಳುಹುವೆನೆ ॥
ಕೃತಕಿ ಪಾತಕಿ ನಿನ್ನ ತಮ್ಮಗೆ
ಖತಿಯ ಹುಟ್ಟಿಸಿ ಬಳಿಯಲಟ್ಟಿದೆ
ಹಿತನನಹಿತನನೆಂದು ಬಗೆದಾ ಪಾಪಿಗಿದು ಘನವು ॥ ೧೩ ॥

ಆವ ಪುರುಷಗೆ ನೋವನೆಸಗಿದೆ
ನಾವಳೋಲೆಗೆ ಕೇಡತೊಟ್ಟೆನೊ
ಆವ ಹೆಣ್ಣಿನ ಮತಿಗೆ ಮರುಳಹ ಮದ್ದನಿಕ್ಕಿದೆನೊ ॥
ಸಾವು ತಪ್ಪದು ಮಾನಹತಿ ದಿಟ
ಬೇವುದುತ್ತಮ ಆರ್ತಿಯೆನ್ನಯ
ಜೀವಗಳೆಯನೆ ಮೇಘನಾದನು ಎಂದಳವನಿಸುತೆ ॥ ೧೪ ॥

ಭರತನವಧಿಗೆ ನಿಮ್ಮ ನುಡಿಯಿಂ
ದುರಿಯಬೀಳುವನನುಜ ಸಹಿತವೆ
ತರಣಿಕುಲವಿಂದಿನಲಿ ತೀರಿತು ನನ್ನ ಕತದಿಂದ ॥
ಭರದಲಡವಿಗೆ ಬಂದು ಮಾಯಕೆ
ಹರಣವಳಿದೆಲೆ ಹರಣವಲ್ಲಭ
ಸಿರಿಯು ಕರವಿಡಿದಾತನೀ ನಿರ್ಭಾಗ್ಯನಾದೆಯಲ ॥ ೧೫ ॥

ಮಾರ್ಗವೊಂದರಲೊಮ್ಮೆ ಮೂವರು
ಹೋಗಲಾಗದುಯೆಂಬ ನುಡಿ ತಲೆ
ತಾಗಿತಿಂದಿನಲಕಟ ನೋಡಲು ಮೀರಿ ಬಂದೀಗ ॥
ಕಾಗೆಗಳಿಗುಣಿಸಾಗಿ ನಗೆಗೆಡೆ
ಯಾಗಿ ಗೋಣನು ಕೊಯ್ದೆಯೆನುತವೆ
ಬಾಗಿ ಬಾಯನು ಹೊಯ್ದುಕೊಂಡಳು ತಿಳುಹುವವರಿಲ್ಲ ॥ ೧೬ ॥

ಹಸಿಯ ಮಣ್ಣಿನ ರೂಪ ಬೇಸಗೆ
ಬಿಸಿಲೊಳೊಡೆದಂತಿರಲು ಎದೆಯನು
ಬಸುರ ಧೊಪ್ಪನೆ ಹೊಯ್ದುಕೊಂಡಳು ಬಿದ್ದು ಹೊರಳುತ್ತ ॥
ಬಸವಳಿದು ಬಾಯ್ಬಿಟ್ಟುವೊರಲಿದ
ಲಸುನ ಬಿಡಲೊಂದನುವ ಕಾಣದೆ
ವಸುಮತೀಭವೆ ಹಲುಬಿ ಮೂರ್ಛೆಗೆ ಸಂದಳಾಕ್ಷಣಕೆ ॥ ೧೭ ॥

ಖಳರು ದೇವಿಯನತ್ತಲೊಯ್ದರು
ಬಳಿಕ ವಿಭಿಷಣನಿತ್ತ ಕೊಳುಗುಳ
ದೊಳಗೆ ಸ್ವಾಮಿಯನರಸುತಿದ್ದನು ನಿಶಿಯೊಳಳಲಿಗನು ॥
ಇಳಿವ ಕಂಬನಿಯಿಂದ ಬಿದ್ದರ
ತುಳಿದು ಬಳಲುತ ಜೊಂಪಿಸುತ್ತಪೆ
ಬಳಿಯಲ್ಬೈದುವ ಮರುಳು ತಂಡವ ಜರೆವುತೆತಯ್ತಂದ ॥ ೧೮ ॥

ಒಂದ ನಾ ನೆನೆಯಲ್ಕೆ ವಿಧಿ ಮ
ತ್ತೊಂದ ನೆನೆದಂತಾಯ್ತು ರಾಘವ
ನಿಂದ ಬದುಕುವೆನೆನಲಭಾಗ್ಯಂಗಾದುದೀ ಹದನ ॥
ಎಂದು ಮನದೊಳಗಳಲಿ ವಿಭಿಷಣ
ನೊಂದು ತಾ ಕಡು ಪಾಪಿಯಕಟಕ
ಟೆಂದು ರಾಮನ ಗುಣವ ನೆನೆದಡಿಗಡಿಗೆ ಬಾಯ್ಬಿಟ್ಟ ॥ ೧೯ ॥

ದಡಿಗ ಕೊಲ್ಲದೆ ಮಾಣ ರಣದಲಿ
ಬಿಡದೆ ಗೋಳಿಡುತಿಪ್ಪನಾವನೊ
ನುಡಿಸ ಬೇಕೆನುತೊಡನೆ ಮುಚ್ಚಿದ ಹೆಣನ ಕೆಲಬಗಿದ ॥
ಇಡಿದ ಕಾಗೆಯ ಹಣ್ಣ ರಾಶಿಯ
ಹೆಡಗೆಯೊಳಗೊಮ್ಮುಗ್ಗೆಮಾಡಿದ
ಪಡಿಯ ಜಾಂಬವನೆದ್ದು ಡೆಂಡಣಿಸುತ್ತ ಬೆಸಗೊಂಡ ॥ ೨೦ ॥

ಘುರನೊಳಳುವವನಾರು ನೀನೆನೆ
ಧರೆಗೆ ಭಾರಕ ಪಾಪಿ ನಾನಾ
ಸುರವಿರೋಧಿಯ ತಮ್ಮ ವಿಭಿಷಣನೆಂಬ ನಿರ್ಭಾಗ್ಯ ॥
ಎರಡು ಸಲ ಯೋಜನವ ತೊಳಲಿದೆ
ಭರದಿ ಕಂಡೆನು ನಿನ್ನನೊಬ್ಬನ
ಅರಸನೇನಾದನೊ ಮಹಾದೇವೆನುತ ಬಾಯ್ಬಿಟ್ಟ ॥ ೨೧ ॥

ನೊಂದು ಮನದೊಳಗಳಲಿ ಬದುಕೇ
ಕೆಂದು ಹಳವಿಸಿ ಮರುಗುತಿರಲಾ
ಗೊಂದು ವಾಕ್ಯವು ಕೇಳ ಬಂದುದು ಗಗನ ಮಾರ್ಗದಲಿ ॥
ನೊಂದ ನೋವೆಲ್ಲಡಗಿ ರಣದಲಿ
ಹೊಂದಿದವರೇಳುವರು ಮಾರುತಿ
ಯಿಂದ ಚಿಂತಿಸಬೇಡ ಕೇಳೆಂದುದು ನಭೋವಚನ ॥ ೨೨ ॥

ಕರೆದು ನುಡಿವಂಬರದ ವಾಣಿಯು
ಹೊರಿಗೆಯನು ನಿಶ್ಚೈಸಿ ಜಾಂಬವ
ಧುರದೊಳಳಿದರ ಬಳಿಕ ನೋಡುವ ಮಿಕ್ಕರಂತಿರಲಿ ॥
ಹುರುಡೆ ಪುಣ್ಯಕೆ ಗುಣಕೆ ಸಲೆ ಮ
ತ್ಸರವೆ ಪಾವನಿಯೆಲ್ಲಿ ನೋಡೆನೆ
ನೆರೆದ ಪಡೆಸಹ ರಾಮ ಬಿದ್ದನು ಹನುಮನೆಲ್ಲಳಿವ ॥ ೨೩ ॥

ಬಳಿಕ ಹನುಮನನರಸಿ ತೊಳಲುತ
ಬಳಲುತಿರೆ ದನಿಗೇಳಿ ಮಾರುತಿ
ನೊಳೆಯ ಹೆಬ್ಬುಲಿಯಂತೆ ಮೊರಕುತ ಹೆಣನ ಕೆಲ ಬಗಿದು ॥
ಸುಳಿವನಾವನೊ ಕೊಲ್ಲು ಬದಿಗಳ
ಯೆಲುವ ಮುರಿಮುರಿಯೆನುತ ಮತ್ತಾ
ಚಲನಸಂಭವ ನಿದ್ದೆಯಿಂದಬ್ಬರಿಸಿ ಘರ್ಜಿಸಿದ ॥ ೨೪ ॥

ಸುಳಿವ ಪಾತಕಿ ನಾನು ವಿಭಿಷಣ
ಚಲನಸಂಭವ ಎಂದು ಬಾಯ್ಬಿಡೆ
ತೊಲಗಿ ಬಾ ಬಿದ್ದವರ ತುಳಿಯದಿರೆನುತ ದನಿಗೊಡಲು ॥
ಉಳಿದವರ ನೀ ಕಂಡುದುಂಟೇ
ತಿಳುಹಬೇಕೆನಲೊಬ್ಬ ಜಾಂಬವ
ಉಳಿದನೆಂದೆನೆ ತೋರು ನಡೆಯೆನುತಣುವ ಬರುತಿರ್ದ ॥ ೨೫ ॥

ಕೆಡೆದ ಕಪಿಗಳಯೊಡಹಿ ದಾಟುತ
ಬಿಡದೆ ನೆತ್ತರ ಕೆಸರ ಜಾರುತ
ಬಿಡಿಸುತವೆ ಚರಣಕ್ಕೆ ಸುತ್ತಿದ ಕರುಳ ಸರವಿಗಳ ॥
ಒಡತಿಯನು ಖಳರೊಯ್ದರೆನುತವೆ
ನುಡಿದು ತಮ್ಮೊಳು ಮರುಗಿ ಬಿಕ್ಕು
ತ್ತೊಡನೆ ಬಂದರು ಜಾಂಬವಂತನ ಹತ್ತಿ ಸಾರಿದರು ॥ ೨೬ ॥

ಎಡರು ಬಂದಡಸಿರಲು ಧೈರ್ಯ್ಯಂ
ಗೆಡುವರೇ ನೀನುಳಿದುದುಚಿತವು
ತೊಡೆದು ದುಃಖವ ವರ ಸುಶೇಷಣನನರಸು ಬೇಗದಲಿ ॥
ಒಡೆಯಗಾಯುಷವಿದ್ದುದಾದೊಡೆ
ಬಿಡದೆ ಕರೆತಹೆನೆಂದು ಮಾರುತಿ
ಕೆಡೆದ ಹೆಣನೊಳಗರಸಿ ಕಂಡನು ಹೊತ್ತು ಹರಿತಂದ ॥ ೨೭ ॥

ಲೇಸು ನೀನುಳಿದೊಳ್ಳಿತಾಯಿತು
ಆಸೆಯಿನ್ನೆಮಗುಂಟು ಹೇಳುವೆ
ಘಾಸಿಯಾದ್ಯೆ ತಂದೆ ಬೇಸರದುಸುರು ಬೇಗೆನಲು ॥
ಓಸರಿಸಿ ವೇದನೆಯ ಸೈರಿಸಿ
ಸೂಸುತಿಹ ಕರುಳುಗಳನೊತ್ತುತ
ಸಾಸಿಗರು ತರಲುಳ್ಳರೇಳುಗು ರಾಮು ಪಡೆಯೆಂದ ॥ ೨೮ ॥

ಉರಗರಾಯನ ಹೆಡೆಯ ಮಣಿಗಳ
ತರಲು ಬೇಕೇ ರವಿಯ ಹಸ್ತದ
ಸರಸಿರುಹವನು ತರಲು ಬೇಕೇ ಹರನ ಮುಕುಟದಲಿ ॥
ಮೆರೆವ ಚಂದ್ರನ ತರಲು ಬೇಕೇ
ತರಣಿ ಶಶಿಗಳನೊಮ್ಮೆ ತರಲೇ
ತ್ವರಿತದಲಿ ಬೆಸಸೆನಗೆ ನಾ ತಹೆನೆಂದ ಹನುಮಂತ ॥ ೨೯ ॥

ಹೇಳು ಹೆಳಿನ್ನಾಣೆ ತಡೆಯದೆ
ಹೇಳು ಸೇನೆಯ ನೀನೆ ಹೆತ್ತವ
ಆಳುಗೆಲಸವು ವೀರಹನುಮನದಂಜದುಸುರೆನಲು ॥
ಹೇಳಬಹುದವಸರದ ಕೆಲಸವು
ಮೇಲೆ ಹೋಗಲು ಬಡಗಣದ್ರಿಯ
ಕೂಲದಲ್ಲಿಹುದರಸಿ ತರಲರಿದೆಂದ ಮಾರುತಿಗೆ ॥ ೩೦ ॥

ಮರನು ಮನುಜಾಕಾರ ಬೀಳ್ಗಳು
ನರಗಳಾಕೃತಿ ತೊಗಲ ಪರಿಯೆಲೆ
ಕರುಳಜೊಂಪದವೋಲು ಗೊಂಚಲು ಕಾಯಿ ತಲೆಯಂತೆ ॥
ಬೆರಳ ಪರಿ ಬೇರುಗಳು ನೆತ್ತರ
ಪರಿಯಲಿಪ್ಪುದು ರಸವು ತಾನದು
ಕರೆದೊಡೋಗೊಡುತಿಕ್ಕು ತಿಳಿ ಸಂಜೀವ ಕರಣಿಯನು ॥ ೩೧ ॥

ಮೆರೆಯುತಿಹ ಸಂಜೀವ ಕರಣಿಯ
ಹರಿಯುತಲಿ ಕೌಶಲ್ಯ ಸಾಧಿಸಿ
ಕರೆದೊಡೋಗೊಡೆ ತಿಳಿದು ತರುವುದು ದಿವ್ಯ ತರುವದನು ॥
ಇರುಳು ಸವೆದರೆ ಹೋಗತೀರದು
ಭರದೊಳಣುವಾ ಕೆಲಸ ಸಾಧಿಸಿ
ಮರಳಬಲ್ಲವರುಳ್ಳೊಡಹುದಸದಳವು ಬೆಳಗಾಗೆ ॥ ೩೨ ॥

ಹರಿಯ ಕಡೆಯಣ ಕೆಲಸವಾಗಲಿ
ಇರುಳು ಸವೆಯುವ ಮುನ್ನ ತಹೆ ನಾ
ಹರಿಯ ಕರುಣಕಟಾಕ್ಷವೀಕ್ಷಣಬೊಲವ ನೋಡೆನುತ ॥
ಬಿರುದ ಹನುಮನು ಜಾಂಬವಂತನ
ಕರವ ಹೊಯ್ದನು ಬೆಳೆದನಾಕ್ಷಣ
ಧರಣಿಯದುರಲು ಸುರರುಘೇಯೆನೆ ಜಿಗಿಯಲನುವಾದ ॥ ೩೩ ॥

ಜಲಧಿಗಭಿವಂದಿಸುತ ಧರಣಿಗೆ
ತಳವ ನಾಲ್ಕನುವೂರಿ ಬಾಲವ
ಬೆಳೆಸಿ ಮೇಲಕೆ ನೆಗಹಿ ಬಾಯ್ಬಿರಿದಾರಿ ತೊನೆ ತೊನೆದು ॥
ಬಲಿದು ತನುವನು ಕಿವಿಯ ಮಿಳ್ಳಿಸಿ
ಒಲೆದನಮಮಾ ವೀರ ಹೋ ಹೋ
ಭಲರೆ ವೀರರ ದೇವ ಹಾರಿದರಬುಧಿ ಕಲುಕಿದುದು ॥ ೩೪ ॥

ಆರು ಬಣ್ಣಿಸಬಹುದು ಮರುತನ
ವೀರತನಕದು ಗಣ್ಯವೇ ಖರ
ವೈರಿಯೊಲುಮೆಗದೇನಸಾಧ್ಯವು ತಿಳಿದು ನೋಡುವರೆ ॥
ಹಾರಿದನು ಹದಿನೆಂಟು ಲಕ್ಷವ
ಮೀರಿದನು ಮೂವತ್ತು ಲಕ್ಷವ
ನೂರಯೆಂಬತ್ತೆಂಟು ಲಕ್ಷವ ಹೋದ ಹನುಮಂತ ॥ ೩೫ ॥

ಹರಿಣವೇಗದಿ ವಾಯುವೇಗದಿ
ಸರಳವೇಗದಿ ದೃಷ್ಟಿವೇಗದಿ
ಹಿರಿದು ಮನವೇಗದಲಿ ಹೋಗುತ್ತಿರ್ದ ಹನುಮಂತ ।
ಮೊರೆದುದಂಬರ ಸವೆಯೆ ರಾತ್ರಿಯು
ಸೊರಹಲೇತಕೆ ಮರುತನಾತ್ಮಜ
ಹರಿದು ವನವನು ಹೊಕ್ಕನರಸುತ್ತಿರ್ದನೌಷಧಿಯ ॥ ೩೬ ॥

ಕಳುಹಿರಲು ಜವದಂಡನೆಂಬನ
ತಿಳಿದು ಇಂದ್ರಾರಾತಿ ಮುನ್ನವೆ
ಕೊಳನ ನೀರಿಗೆ ಹಣ್ಣು ಕಾಯಿಗೆ ವಿಷವನೂಡಿದನು ॥
ಇಳೆಗೆ ಗರಳವ ತೊಡೆದು ವನದಲಿ
ಸುಳಿವ ಗಾಳಿಗೆ ಮದ್ದನೂಡಿದ
ಚೆಲುವಿಗೋಸುಗ ಖಗಮೃಗಂಗಳ ಮಾಡಿ ಸುಳಿಸಿದನು ॥ ೩೭ ॥

ಹೊಂಗಲಶದಲಿ ಮೆರೆವ ದೈವಾ
ಲ್ಯಂಗಳಗಣಿತ ನಡುವೆ ಪರುಷದ
ಲಿಂಗ ಮಂಗಳಮಯ ತಟಾಕವು ಸುತ್ತಲುದ್ಯಾನ ॥
ಕಂಗೆ ಸೊಗಯಿಪ ನವಿಲುಗಳ ನಾ
ಟ್ಯಂಗಳೊಪ್ಪುವ ಹಂಸ ಮಾಲಾ
ಭೃಂಗಗೀತವು ಮತ್ತ ಕೋಕಿಲ ಗಿಳಿಗಳೊಪ್ಪಿದುವು ॥ ೩೮ ॥

ಹಲವು ಜಡೆಗಳ ಹೊರೆಯು ಹೊತ್ತಾ
ಖಳನು ಕಪಟದ ಗೊರವನಾಗಿಯೆ
ಹೊಳೆವ ಲಾಕುಳ ಕಾಸೆ ಕರದಲಿ ಜಪದ ಮಣಿಮಾಲೆ ॥
ಬಲು ವಿಷದ ಕಂಕುಳ ವಿಭೂತಿಯು
ಬಲಿದ ದೃಷ್ಟಿಯುಲಿರುಳು ಜಪವನು
ಗಳಹುತಿರ್ದನು ಮಾಯಮಂತ್ರವನಸುರ ಹಲುದೆರೆದು ॥ ೩೯ ॥

ಗುರುಹಿರಿಯರಿವರೆನುತ ಮಾರುತಿ
ಭರದಿ ವೈಯಿಕ್ಕಲು ವಿಭೂತಿಯು
ಹರಸಿ ಕೊಟ್ಟರೆ ಗರಳದುರಿಗದು ಹಣೆಯು ಸುಡುತಿರಲು ॥
ತರುಚರೇಶ್ವರ ಬಳಲಿದೆಯು ಕು
ಳ್ಳಿರುವನಾಂತದಲೆನಲು ಮಾರುತಿ
ಯುರುವ ಥಗೆಯಿಂದುದಕವಾವೆಡೆಯೆನಲು ತೋರಿದನು ॥ ೪೦ ॥

ನಿಲ್ಲುನಿಲ್ಲೆಲೆ ಹನುಮ ಜಲವನು
ಕೊಳ್ಳದಿರು ಮುನಿಯಲ್ಲ ದಾನವ
ಕಳ್ಳ ನಂಬದಿರವನ ಮಾತನು ಬೇಡ ಬೇಡೆನುತ ॥
ನಿಲ್ಲುನಿಲ್ಲೆಂಬಮರ ವಾಕ್ಯಕೆ
ನಿಲ್ಲಲಾರದೆ ಥಗೆಯು ಸೈರಿಸಿ
ಕೊಳ್ಳಲಾರದೆ ವಿಷದ ಮಡುವನು ಹೊಕ್ಕನಾ ಹನುಮ ॥ ೪೧ ॥

ವೋ ವೊ ನಂಜಿನ ಜಲವನಂಜಳಿ
ತೀವಿ ಕುಡಿದರೆ ಗರಳ ನೆತ್ತಿಯು
ನಾವರಿಸಿದುದು ಕಲುಷವೋಕರಿಸಿದನು ಭ್ರಮೆಗೊಂಡು ॥
ಲೋವಿದಂಗುಲಿಯಿಂದ ಮನದಲಿ
ಭಾವಿಸುತ್ತಿರೆ ಗರುಡ ಮಂತ್ರವ
ಜೀವಗಳ್ಳನು ಜಪವ ಬಿಟ್ಟೋಡಿದನು ತವಕದಲಿ ॥ ೪೨ ॥

ಕಾಳರಕ್ಕಸ ಹಿರಿಯು ಬೆಟ್ಟವ
ಮೇಲನೆಗಹುತ್ತಡಕಿ ಕೊಳನನು
ಹೊಳುತಿರೆ ನೆಗಳೊಂದು ಕಾಲನು ಹಿಡಿದು ಕೆಳಗೆಳೆಯೆ ॥
ಶೂಲಿಗೆರಗೆ ಶಿವಾಲ್ಯ ಭಕ್ತನ
ಮೇಲೆ ಬಿದ್ದಂತಾಯ್ತು ನೆಗಳನು
ಸೀಳಿ ಹಿಡಿದನು ಗಿರಿಯನೆಡಗೈಯಿಂದ ನೆಗಹಿದನು ॥ ೪೩ ॥

ದಂಡ ಕೈಗಿರಿ ಕೊಡೆ ಕಮಂಡಲ
ತುಂಡು ನೆಗಳೆಯು ಉಡೆಯ ಕಚ್ಚುಟ
ಚಂಡಿಕೆಯ ಕಿವಿಗೊಗೆವ ಕುಂಡಲ ಬಾಲ ವಾಮನನು ॥
ತೊಂಡ ರಕ್ಕಸ ಮುನ್ನಿನಂತಿರೆ
ಕಂಡು ಹರಿತಂದಪ್ಪಳಿಸಿದರೆ
ದಿಂಡುಗೆಡೆದನು ಕಪಟವಡಗಿತು ಜಪದ ಫಲವಾಯ್ತು ॥ ೪೪ ॥

ಮರುತಭವನಾ ಖಳನ ಸೀಳಿದು
ತಿರುಗುತಿದಿರಲಿ ಕಂಡನೊಬ್ಬಳು
ತರುಣಿಯನು ಮಿಗೆ ಮೆರೆವ ಸಿಂಗರದ ಸುಮಕೋಮಲೆಯ ॥
ಗರಳವುಂಡೆನು ನೆಗೆಳ ಕೊಂದೆನು
ದುರುಳ ದೈತ್ಯನ ಗೆಲಿದೆ ಮತ್ತೀ
ತರುಣಿಯೆಲ್ಲಿಯ ಮಾಯಕಾತಿಯೊ ಬಂದಳೆಲ್ಲಿಂದ ॥ ೪೫ ॥

ಹರಸಿ ಸೇಸೆಯನಿಕ್ಕುತಲಿ ತಾ
ಹರುಷದಿಂದಲಿ ಬಾಲೆಯೆಂದಳು
ಹರಿಯೆ ಕೇಳುವುದೆನ್ನ ವೃತ್ತಾಂತವನು ಬೇಸರದೇ ॥
ಸಿರಿಯು ಭಾಗ್ಯವು ರೂಪು ಯೌವನ
ವರ ವಿಭೂಷಣ ಬಂಧುವರ್ಗವ
ಭರದಲಾಂ ಬಲುಗೇಡಕೊಟ್ಟೆನು ಕರೆದು ಋಷಿಯರನು ॥ ೪೬ ॥

ಕೆರಳಿದರು ನೆಗಳಾಗಿ ಸಾವಿರ
ವರುಷವೆಂದೆನಲಾನು ಭಯದಲಿ
ಚರಣ ಕಮಲವ ಪಿಡಿದು ಬೇಡಿದೊಡಾ ತಪೋಧನರು ॥
ಮರುತಜನ ಕರ ಸೋಂಕೆ ಶಾಪವು
ಹರಿವುದೆಂದರು ಘಟಿಸಿತೆನಗದು
ವರವ ನೀವೆನು ಬೇಡು ಅಪ್ಸರೆಯಾನು ಕೇಳೆನಲು ॥ ೪೭ ॥

ಎನಗೆ ವರ ಬೇರಿಲ್ಲ ಜಾರನ
ತನಯ ರಾಮನ ಪಡೆಯ ಕೊಂದನು
ಜನನಿ ತೋರುವುದೆನಗೆ ಬಲ್ಲರೆ ಮೂಲಿಕೆಯನೆಂದ ||
ನೆನಹು ಬೇಗದಿ ಸಲಿಸುವೆನು ಬಾ
ಯೆನಲು ಬೆಂಬಳಿಯಲ್ಲಿ ನಾಚದೆ
ಹನುಮ ಹೋದೊಡೆ ತೋರಿಹೋದಳು ದಿವ್ಯ ಮೂಲಿಕೆಯ || ೪೮ ||

ಉರಿವುತಿರ್ದುವು ಕೆಲವು ಗಿಡುಗಳು
ಮೆರೆವುತಿರ್ದುವು ಕೆಲವು ಮೂಲಿಕೆ
ಕರೆದೊಡೋಗೊಡುತಿರಲು ಹರುಷದಿ ಹರಿದ ಹರಿತನಯ ||
ಕರ ಕೃಪಣನೊಡವೆಗಳ ವೋಲಾ
ಸುರಪದಂಗಳವೋಲು ಮತ್ತಾ
ಕರ ಮರೀಚಿಕೆಯಂತೆ ತೋರಿತು ಕೈಗೆ ಸೇರದಲೆ || ೪೯ ||

ಉರಿವುತಿಪ್ಪುದ ಕಾಂಬ ದೂರದಿ
ಹರಿದು ಹೋದರೆ ಕಾಣದಿಹ ಪರಿ
ತಿರುಗಿದನು ಬೇಸತ್ತು ಬೆಳಗಹ ಕುರುಹ ಕಂಡಂಜಿ ||
ಗಿರಿಯ ಕಿತ್ತನು ಗಣೆಯ ಗಾಣಿಗ
ತಿರುಗಿ ಕೀಳುವವೋಲು ತಾನೇ
ಅರಸಿಕೊಳ್ಳಲಿಯೆನುತ ಹೊತ್ತನು ಹಿಂದೆ ಮರಳಿದನು || ೫೦ ||

ಹನುಮ ತಾನಿನ್ನೆವರ ಗಾವುದ
ವೆನಿತು ಹೋದನೊ ಹೇಳು ಜಾಂಬವ
ಯೆನುತ ವಿಭಿಷಣನಿರಲು ಕಪಿಗಳ ದೇವ ಗಿರಿಸಹಿತ ||
ಮನದ ವೇಗದಿ ಮುಂದೆ ನಿಂತಿರೆ
ತನುವಿನೊಳಗಸು ಸುಳಿವುತಿದ್ದುದು
ದನುಜಪತಿಯಿದಿರೆದ್ದು ತಕ್ಕಿಸಿಕೊಂಡನೊಲವಿನಲಿ || ೫೧ ||

ಬಳದೆಲಾ ರುದ್ರಾವತಾರವ
ತಳದೆಲಾ ನಮ್ಮರ್ತಿಯಿಲ್ಲವ
ಕಳೆದೆಲಾ ಕರದಿ ಗಿರಿಯನು ತಳೆದೆಲಾ ಭಲರೇ ||
ಹಿಳಿದೆಲಾ ಪ್ರತ್ಯೂಹ ವಲ್ಲಿಯ
ಸೆಳೆದೆಲಾ ದುಷ್ಕೀರ್ತಿ ಕಲುಷವ
ಕಳೆದೆಲಾ ನೀ ಬಳೆದಲಾಯೆಂದಪ್ಪಿದನು ಹರಿಯ || ೫೨ ||

ಬಂದನೇ ಬಲ್ಲಾಳು ಭಲರೇ
ಬಂದನೇ ಬಲ್ಲಾಳು ಮಝುರೇ
ಬಂದನೇ ಜಗದಾಳು ಪೂತುರೆ ಭಲರೆ ಭಾಪೆನುತ ॥
ಬಂದು ಬಿಗಿದಪ್ಪಿದನು ಜಾಂಬವ
ನೊಂದುಗೂಡಿದನೌಷಧಂಗಳ
ತಂದು ಮಂತ್ರದಲೆರೆಯಲೆದ್ದರು ರಾಮಲಕ್ಷ್ಮಣರು ॥ ೫೩ ॥

ಮರಸಿತೇರಿನ ನೋವು ಕಲೆಗಳ
ನರಿಯಬಾರದು ರಕ್ತಮಾಂಸದ
ಸೆರಗು ದೇಹದೊಳಿಲ್ಲ ಸರಳುಗಳುಗುಚಿ ತಮತಮಗೆ ॥
ಮರೆದು ಮಲಗಿರ್ದವರು ತಾವೆ
ಚ್ಚರಿಪ ಪರಿಯಾಯ್ತೊಂದು ನಿಮಿಷಕೆ
ಹರಿದು ಸಿಡಿದಿಹ ಖಂಡ ನರಗಳು ಒಂದುಗೂಡಿದುವು ॥ ೫೪ ॥

ಮದ್ದು ಬೇರೆಲ್ಲರಿಗೆ ಮಾಡುವೊ
ಡಿದ್ದ ದಿನಗಳು ಸಾಲದೆನುತವೆ
ಮದ್ದನಣುವನು ಬಾಲಕೂಡಿಯೆ ಬೀಸಲಾಕ್ಷಣಕೆ ॥
ನಿದ್ದೆಗೈದವರೆದ್ದ ಪರಿಯಲಿ
ಬಿದ್ದ ಕಪಿಭಟರೆಲ್ಲರೆದ್ದುದು
ಹೊದ್ದಿದರ ಹೊರೆವಾತ ಹನುಮನನಪ್ಪಿ ಹರಸಿದನು ॥ ೫೫ ॥

ಹೊಂದಿದವರಸುಗಳನು ಮರಳಿಸಿ
ತಂದೆಯಲ್ಲಾ ನೀನು ಸೇವೆಗೆ
ಬೆಂದೆಯಲ್ಲಾ ತಂದೆ ಬಳಲಿದೆ ಹಲವು ಮಾತೇನು ॥
ಇಂದಿನ ಪ್ರಾಣೋಪಕಾರ
ಕ್ಕೆಂದು ಪ್ರತ್ಯುಪಕಾರವುಂಟೇ
ಎಂದು ಹನುಮನ ಮೌಳಿಯನು ನೊಸಲಿಟ್ಟು ಮನ್ನಿಸಿದ ॥ ೫೬ ॥

ವೀರ ಚಿಂತಾಮಣಿಯೆ ಬಾ ಮದ
ವಾರಣನೆ ಬಾರಯ್ಯ ಸುಭಟರ
ಪಾರಿಜಾತವೆ ಹನುಮ ಬಾರೈ ಮಗನೆ ಬಾಯೆನುತ ॥
ಮಾರುತಿಯ ಬಿಗಿಯಪ್ಪಿ ನಿನ್ನವೊ
ಲಾರು ಹಿತವರು ನಮಗೆ ನಿನ್ನವೊ
ಲಾರು ಸಂಕಟಕೊದಗಿ ತಲೆಗಾಯ್ದವರು ಎನುತಿರ್ದ ॥ ೫೭ ॥

ಮಂಗಳಾತ್ಮಕ ಹರಿ ಸುಷೇಣಂ
ಗಂಗಚಿತ್ತವನಿತ್ತು ವಿಭಿಷಣ
ನಂಗದಲಿ ಕರವಿಟ್ಟು ಬೋಳವಿಸಿದನು ಜಾಂಬವನ ॥
ತುಂಗವಿಕ್ರಮ ನೋಡಿ ಮನ್ನಿಸಿ
ಭಂಗರಹಿತನು ಹನುಮ ನಿನಗಾಂ
ಹಂಗಿಗನು ನೋಡೆಂದು ಕಂಕಣವಿತ್ತು ಮನ್ನಿಸಿದ ॥ ೫೮ ॥

ಇರುಳರಸನುದಯಕ್ಕೆ ಹೆಚ್ಚಿದ
ಶರಧಿಯಂದದಲಾರಿತಿತ್ತಲು
ನೆರೆದ ಮರ್ಕಟ ಸೇನೆ ಸುರಪತಿ ಸುರಿದ ಪೂಮಳೆಯು ॥
ಸುರಸತಿಯರಾಡಿದರು ಪಾಡಿದ
ರಿರುಳು ಸವೆದುದು ಪೂರ್ವ ಗಿರಿಯಲಿ
ತರಣಿ ತಲೆದೋರಿದನು ಮಂಗಳವಾದುದೀ ಧರೆಗೆ ॥ ೫೯ ॥

---

## ೩೦ನೇ ಸಂಧಿ

ಪಲ್ಲ ॥ ತಂದೆಯನು ನೆರೆ ಮಿಕ್ಕ ಕಪಟದ
ಲಿಂದ್ರಜಿತುವೆನಲವನು ಮಾಡಿದ
ನೊಂದುಪಾಯವನವನು ಮಾಯಾ ಸೀತೆಯನು ಪಡೆದು ॥

ಪದ ॥ ಉಪ್ಪವಡಿಸಿದನಸುರ ಪುಂಗವ
ತುಪ್ಪದಲಿ ಪ್ರತಿರೂಪ ನೋಡಿದ
ಮುಪ್ಪುಗಾಣದ ಮುಖವ ನೋಡಲು ಮುಕುರಗಳ ತರಿಸಿ ॥
ಒಪ್ಪುವಧರದ ಸೊಬಗಿಗಾರತಿ
ಯೊಪ್ಪೆ ಜಯ ಜಯರವದ ಜೋಕೆಗೆ
ಉಪ್ಪರಿಗೆ ಜಡಿವಂತೆ ಹರುಷದಲೋಲಗವನಿತ್ತ ॥ ೧ ॥

ಬೆಂಗೆ ಮರಳಿದ ಹಗೆಗಳಿಲ್ಲವು
ಹಿಂಗಿ ಹೋಯಿತುಯೆನುತ ರಕ್ಕಸ
ಪುಂಗವನು ಹರುಷಾಂಬುಪೂರದಿ ಮುಳುಗಿ ಮೈಯುಬ್ಬಿ ||
ಹಂಗಿಗನು ನಾನಾದೆನ್ನೈ ರಣ
ರಂಗಧೀರನೆ ಭಲರೆ ಕಡಿಕಡಿ
ದಂಗಡಿಯಲಡಗುಗಳು ಮಾರಲಿ ವಿಪಿನ ತರುಚರರ || ೨ ||

ಅಸಿಗೆ ತೊಡಕಿದ ಕರುಳ ಜಂಪವ
ಬಿಸುಡುತಂಘ್ರಿಯ ರುಧಿರದಾ ಕೊ
ಗ್ಗೆಸರ ಕಳೆವುತ ಕೈಯ ಹೊಲಸನು ನೋಡಿ ಹೇವರಿಸಿ ||
ಅಸುರ ನಸು ವಾಸನಿಸಿ ಹೇಸುತ
ವಿಷಮ ವಿಕ್ರಮ ವೀರ ದೈತ್ಯನು
ಬಸುರ ಬಂದನ ಹಾರುತಿರೆ ನಡೆತಂದು ಪೊಡವಟ್ಟ || ೩ ||

ಗುಣಿಗಳರಸನು ಬಂದ ಮದವಾ
ರಣನು ಬಂದನು ವೀರ ದೈತ್ಯರ
ಗುಣ ಶಿರೋಮಣಿ ಬಂದ ಮಾಣಿಕ ರತುನ ಬಂದನಲಾ ||
ರಣ ಕೃತಾಂತನು ಬಂದ ಚೆಲುವಿನ
ಕಣಿಯೆ ಬಾಯೆನುತರಸ ಕೈಗಳು
ದಣಿಯಲಪ್ಪಿದ ಬಲದ ಗದ್ದುಗೆಯಿತ್ತು ಮನ್ನಿಸಿದ || ೪ ||

ಕಾಳಗದ ಕೌತುಕದ ಕಥೆಯನು
ಹೇಳು ಹೇಳೆನ್ನಾಣೆ ನಲೆ ಬ
ಲ್ಲಾಳೆ ಬಲ್ಲಹ ಮನ್ಮನೋರಥದೇಳಿಗೆಯನರಿತು ||
ಕೇಳುವೆನು ಕರ್ಣಾಮೃತಂಗಳ
ಹೇಳು ಹೇಳೆನೆ ಮಗನೆ ರಾಮಗೆ
ಸೋಲವೆಂತಾಯ್ತೆನಲು ಕೈವಾರಿಗಳು ಹೊಗಳಿದರು || ೫ ||

ಕಾಲ ಮೊಳಸೆಯಗೊಂಡ ಸಲೆ ಮರು
ಳೋಗುಬ್ಬಸವೊರವೆ ಶಾಕಿನಿ
ಜಾಲ ಗೋನಾಳಿಗಳ ಕೀಲಿಸಿತಮಮ ರಣದೊಳಗೆ ।
ಮೇಳೆಯದ ಮುಂಡಿಗೆಯ ಬದಿಯೊಲು
ಮೋಳೆಯುದ ಕೊಳುಗುಳ ಭಯಂಕರ
ಹೇಳಲೇನದ ಹೋಗಿ ನೋಡಿದೊಡರಿಯಬಹುದರಸ || ೬ ||

ಕೊಂದೆನಾ ದೇವತೆಯು ಕರುಣದ
ಲೊಂದು ಬಾರಿಗೆ ಹರಿಯ ಸೇನೆಯು
ನೆಂದೊಡದು ಹುಸಿಯಾಯ್ತು ಕಪಟದ ಜಯವದೇತರದು ॥
ಕೊಂದವಗೆ ಕೊಲೆಯುಟ್ಟಿದುಳಿವುದೆ
ಹಿಂದೆ ಕೊಂದವರೆದ್ದು ಬದುಕರೆ
ಹೊಂದಿದನು ಹಗೆಯೆಂಬ ನಂಬುಗೆಯಿಲ್ಲ ತನಗೆಂದ ॥ ೭ ॥

ತಲೆಯ ತೂಗುತ ಹತ್ತು ಮುಖದಲಿ
ಒಲಿದು ಮಗನನು ನೋಡಿ ನಲಿವುತ
ಗೆಲಿದನೈ ಸಾಕೆನ್ನ ಕಂದನು ಭಲರೆ ಭಾಪೆನುತ ॥
ಬೆಳೆದ ಹರುಷಾಬ್ಧಿಯಲಿ ರಾವಣ
ತುಳುಕುತಿರಲಂದತ್ತ ಮರ್ಕಟ
ಬಲದಿ ಹೆಚ್ಚಿತು ಬೊಬ್ಬೆಯಬ್ಬರ ದೆಸೆಯನಳ್ಳಿರಿಯೆ ॥ ೮ ॥

ಸುಳಿದ ತುಪ್ಪದಿ ತೋದ ಶಿಖಿಯು
ಜ್ವಳಿಸಿ ಹೆಚ್ಚಿದವೋಲು ಕಪಿಪಡೆ
ಮೊಳಗಿತಯ್ಯಯ್ಯಧ್ವನಿಯದುರಿತು ಗಗನ ಝುಮ್ಮೆಂದಲು ॥
ಜಲಧಿ ಝಾಡಿಸಿತದ್ರಿ ಬಿರಿದುದು
ಖಳನು ಕಂಡುಪ್ಪರಿಗೆಗಡರಲು
ಹೊಳಲು ದಳದುಳಿಯಾಯ್ತು ಸರಿಗಡರಿತ್ತು ಮರ್ಕಟರು ॥ ೯ ॥

ಆವನೆ ರಕ್ಕಸನೈದನೈದನೆ
ಕವಿಯೊ ಕವಿಯೋ ಜುಣುಗಲೀಸದೆ
ತವಕದಲಿ ಕವಿ ಹಾರು ಜಿಗಿ ಜಿಗಿ ಹತ್ತು ಹಿಡಿಯೆನುತ ॥
ತವತವಗೆ ಮರ್ಕಟರು ಮುತ್ತಿದೊ
ಡವನು ಗರ ಹೊಡೆದಂತೆ ಬೆರಗಿಂ
ದಿವಿಜವೈರಿಯು ಮೊಗವ ನೋಡಿದ ಬೆರಳ ಮೂಗಿನಲಿ ॥ ೧೦ ॥

ಸಿಡಿಲು ಹೊಡೆದಂತಾಯ್ತು ಬೆರಗನು
ಕುಡಿದು ತೇಗಿದನಮರರಿಪು ನಡು
ನಡುಗಿ ಕಲುಮರನಾದನಚ್ಚರಿವಟ್ಟು ಚಿಂತಿಸಿದ ॥
ನುಡಿಯಲರಿಯದ ಮೂಗ ನಂಜನು
ಕುಡಿದ ಪರಿ ಮರುಗುತ್ತ ಮಗನಿವ
ಬಿಡದೆ ತಂದನು ಹೋದ ಮಾರಿಯ ತಂದನೆನುತಿರ್ದ ॥ ೧೧ ॥

ಖ್ಯಾತಿಯಲಿ ಕಪಿಭಟರು ಮುತ್ತಲು
ಭೀತಿ ಹೊಡೆದುಪ್ಪರಿಗೆಯೊಳಿಯಲು
ಭೂತವಾಳಿದ ನಿಧಿಯ ಪರಿಯಲಿ ಬಂದ ಕೆಳಕೆಳಗೆ ॥
ಸೀತೆಯೊಲಿದಳು ಹೋದ ರಾಘವ
ಬೂತೆ ನೀನಿಂದೆತ್ತಲೋಡುವೆ
ಪೂತು ನಿಲ್ಲೆನುತರಗನುರಿ ಮೊಗೆದಂತೆ ಮುತ್ತಿದರು ॥ ೧೨ ॥

ಆಹುದು ಮತ್ತೇನೊಬ್ಬನೆನಗೀ
ಸಹಸಿ ಮಗನುಂಟಾದ ಕಾರಣ
ಬಹಳ ಬಲ ನುಗ್ಗಾಯ್ತು ಕಾಣೆನೆ ಮಗನು ಹುಸಿವವನೆ ॥
ಆಹಹ ಹಿತವಹರಾರು ತಮಗಿ
ನ್ನಹಿತ ಪಡೆಸಹಿತಸುವ ಬಿಟ್ಟನು
ರಹಣವಾಯ್ತೆನುತಸುರ ಕೈಗಳ ಹೊಯ್ದು ಗಹಗಹಿಸಿ ॥ ೧೩ ॥

ಕಾದಿ ಗೆಲಿದನು ಹಗೆಯ ಮೇಘನಿ
ನಾದನುಂಟುಂಟಹುದು ಕಂಡುದು
ತೀದುದಿನ್ನೇನಿಲ್ಲ ವಾನರ ಸೇನೆ ಸತ್ತುದಲ ॥
ಬೀದಿವಿಂಡಿನ ಮಾತು ದಿಟವೆಂ
ದಾದರಿಸೆ ಬಯಲಿಂಗೆ ನಾ ಮರು
ಳಾದೆನೆಂದಬ್ಬರವನಾಲಿಸಿ ಬೆಕ್ಕಸಂಬಟ್ಟ ॥ ೧೪ ॥

ಎರಡು ಮುಖದಲಿ ಭೀತಿ ಮತ್ತೊಂ
ದೆರಡು ಮುಖದಲಿ ಧೈರ್ಯ ಮತ್ತೊಂ
ದೆರಡುಮೋರೆಯಲುಗ್ರ ಕೋಪವು ನಗೆಗಳೆರಡರಲಿ ॥
ಎರಡು ಮುಖದಲಿ ಚಿಂತೆ ಮತ್ತಾ
ಬೆರಗು ಪಂಚಾನನ ದಶಾನನ
ವಿರಲು ಬಹುರೂಪುಗಳ ಮೆರೆದುದು ಬಲ್ಲ ಜಾಣರಿಗೆ ॥ ೧೫ ॥

ಅನಿಮಿಷರ ನೆರೆಗೆಲಿದು ದೇವಾಂ
ಗನೆಯರೆಲ್ಲರ ಸೆರೆಯಲಾಳಿದ
ವನವಮುರಿದಕ್ಷನನು ಕೊಂದಾಲಂಕೆಯನು ಸುಟ್ಟ ॥
ಹನುಮನಧಟನು ನೀವೆ ಬಲ್ಲಿರಿ
ಮೊನೆಯೊಳಾತನ ಗೆಲಿದು ಶರಬಂ
ಧನಕೆ ತಂದನ ಕೆಟ್ಟ ನುಡಿವುದು ವಿಹಿತವಲ್ಲೆಂದ ॥ ೧೬ ॥

ಕಡಲ ಕಟ್ಟೆಯ ದಾಂಟಿ ರಾಮನ
ಕಡೆಯ ಕಪಿಗಳು ಸುತ್ತಮುತ್ತಲು
ಪಡೆಯ ನೋಡಲು ಹೋಗಿ ಗಗನದಲಡಗಿ ಬೊಬ್ಬಿರಿಯೆ ॥
ಕೊಡೆಯನೊಂದಂಬಿಂದ ರಾಘವ
ಕಡಿದ ರವಿಸುತ ಹೊಯ್ದು ಮಕುಟವ
ಕೆಡಹುವಂದಿಗೆ ನಾವು ಕಾಣೆವೆ ದೇವರಾತ್ಮನವ ॥ ೧೭ ॥

ಆರು ಕಾದಲು ಬಹುದು ಕಪಿಗಳ
ನಾರು ಭಂಗಿಸಬಹುದು ರಾಮನ
ನಾರು ಗೆಲುವರು ಸತ್ಯಸಂಧನ ಧರ್ಮರೂಪನನು ॥
ವಾರಿಧಿಯನೋರಂಬು ಹೀರದೆ
ವೀರರಾಮನನಥಟ ನಿನ್ನ ಕು
ಮಾರ ಗೆಲಿದುದ ನಾವು ಕಾಣೆವೆಯೆರಡು ಕಣ್ಣೆಯದಲಿ ॥ ೧೮ ॥

ಕಡಿದು ಕುಂಭಿನಿಗೊಡಲ ಬೇಳಿದ
ಪಡೆದು ನಾಗಾಸ್ತ್ರದಲಿ ಕಟ್ಟಿದ
ಬಿಡಿಸಿಕೊಂಡರೆ ಮತ್ತೆ ಕೊಂದನು ನಿನ್ನೆ ಜಗವರಿಯೆ ॥
ಕಡಿದ ತರುವಂಕುರಿತವಾದರೆ
ಕೊಡಲಿಯೇವುದು ಭಾಗ್ಯವಿಲ್ಲದ
ಪೊಡೆಯಗಾಳೇಗುವನು ಕೆಟ್ಟಿನಬಹುದೆ ನಿಜಗಲಿಯ ॥ ೧೯ ॥

ಸತ್ತ ಹಗೆ ಹುಟ್ಟುವನು ಹಿಂಗಿದ
ಕುತ್ತು ಹಿಡಿವುದು ಮತ್ತೆ ನೆಗೆಹಿದ
ಹುತ್ತು ಪನ್ನಗವಾಗಿ ಹರಿವುದು ದೈವಹೀನರಿಗೆ ॥
ಬಿತ್ತೆ ಬೆಳೆಯದು ಬೆಳೆದೊಡಿರನವ
ನೆತ್ತ ತಿರುಗಲಪಾಯ ಬೆನ್ನನು
ಹತ್ತಿಬಹುದಸುರೇಂದ್ರ ಕೇಳೆನುತಿರ್ದ ವಾರಿಮುಖ ॥ ೨೦ ॥

ಹಾಲು ಸೇರದ ರೋಗಿ ಹಸುವಿನ
ಕಾಲು ಕಡಿದರೆ ನೆರೆವುದೇ ಕಡೆ
ಗಾಲದಂದಿಗೆ ಕನಲಿ ದೈವವ ಬೈದು ಫಲವೇನು ॥
ತೋಳ ಬಲುಹಿಲ್ಲದೆ ರಣಾಗ್ರದಿ
ಭಾಳ ದೂರಿದೊಡಹುದೆ ವೀರರ
ವಪೌಳಿ ಮಗನನು ಕೆಟ್ಟು ನುಡಿವರೆ ದೊರೆಯೆ ಕೇಳೆಂದ ॥ ೨೧ ॥

ಕೊಂದ ಚಂದವದೆಂತು ಹೇಳ್ವೈ
ಕಂದ ಹೇವರಿಸದಿರು ದಿಟವೇ
ಕೊಂದುದುಂಟೇ ಸೇನೆ ನಿನ್ನಿರುಳಿನ ರಣಾಗ್ರದಲಿ ।
ಹಿಂದೆ ಮತ್ತಾರುಳಿದುದುಂಟೇ
ಯೆಂದು ಬೆಸಗೊಳೆ ಮರುಗಿ ಸುಯ್ದನು
ಬೆಂದ ಹುಣ್ಣನು ಬೆದಕಲೇತಕ್ಕೆಂದ ನಿಂದ್ರಾರಿ ॥ ೨೨ ॥

ಏಗುವೆನು ಬಯಲಾಯ್ತು ಕಟ್ಟಿದ
ನಾಗಪಾಶವು ಮತ್ತೆ ತಾನದು
ಹೋಗಲಿರುಳಿನ ಮೋಸಗೊಲೆ ಹುಸಿಯಾಯ್ತು ವಿಧಿವಶದೆ ॥
ಮೇಗಣಾಹವಕಂಜೆನೀಗಳು
ಮೂಗನಾದೆನು ನುಡಿಸಬೇಡಿ
ನ್ನೀಗ ಸತ್ತವನೆನ್ನ ಬದುಕನು ಸುಡಲಿ ಹಾಯೆಂದ ॥ ೨೩ ॥

ನೆರೆದ ಸಭೆಯಲಿ ಮಗನ ನೋಡುತ
ಹೊರೆಯುವರ ಕೈ ಹೊಯ್ದು ನಕ್ಕನು
ಮರುಳುಗೊಂಡನು ಮಗನು ಮತ್ತೇನಲ್ಲವೇ ದಿಟಕೆ ॥
ಹರಿಹರಿದು ಹಳುಗಾದನೀತನು
ಗರವು ಹೊಡೆದುದು ಕಡೆಗೆ ಪಾತಕಿ
ಧುರದೊಲುಳಿಯದೆ ಮಾಣ ವಿಭಿಷಣ ಬಲ್ಲೆ ನಾನೆಂದ ॥ ೨೪ ॥

ತಂದೆಯನು ಕೊಲಲಾಗಿ ನರಕವು
ಯೆಂದು ಬಿಟ್ಟೆನು ಮತ್ತೆ ಮೂವರು
ಹಂದೆಗಳ ರಣದೊಳಗೆ ಕೊಲ್ಲದೆ ಹೇಸಿ ನಾ ಬಿಟ್ಟೆ ॥
ಕೊಂದ ಹದನಿದು ಮಾರಿ ಮರಳಿದು
ಬಂದ ಹದನಿದು ಕಾಳುಗಿಚ್ಚಿಂ
ಬೆಂದ ಬೇರಂಕುರಿಸಿ ನಗೆಗೆಡೆಯಾದೆ ತಾನೆಂದ ॥ ೨೫ ॥

ಹೆಡೆಯನುಳುಹಿಯೆ ಫಣಿಯ ಬಾಲವ
ಕಡಿದೆ ಬಿನುಗುಗಳೆಂಟು ಲಕ್ಷವು
ಮಡಿದೊಡೇನದು ಮಡಿಯದಿರ್ದೊಡದೇನು ಪುರುಷಾರ್ಥ ॥
ಕೊಡಲಿಗಾವಿನವೋಲು ತಮ್ಮನ
ಮಡಗಿ ಕರ ಜಡನಾದೆ ಕಡೆಯಲಿ
ಕೆಡಿಸಿದ್ದೆ ಬಲು ರಾಜಕಾರ್ಯವ ನೀನುಪೇಕ್ಷೆಯಲಿ ॥ ೨೬ ॥

ಉಳಿವುದುಳಿಯದೆ ಮಾಣದರಸಾ
ಗೆಲುವೊಡರಿದೆನಲದಜಭವರಿಗಿನ
ಕುಲನನಿಂದೇ ಲಂಕೆಗೊಯ್ದಪೆನೆಂದು ಪೋಗುತಿರೆ ॥
ಚೆಲುವನಂತನ ನಿಜದಿ ಹೋಲುವ
ಹೊಲಬನರಿತೆನು ಸಿಂಹ ನಡುವಿನ
ಲಲಿತ ಪೀತಾಂಬರದಲೆಸೆದಿರೆ ಕಂಡು ಬೆರಗಾದೆ ॥ ೧೭ ॥

ಕೊರಳ ತುಳಸೀ ದಂಡೆ ಭೃಗುವಿನ
ಚರಣಲಾಂಛಿತ ವಕ್ಷ ತೊಳಗುವ
ಕರ ಚತುಷ್ಟಯದಲ್ಲಿ ಶಂಖ ಸುದರ್ಶನಾದಿಗಳ ॥
ಧರಿಸಿ ನಾಭಿಯಲೆಸೆವ ಸರಸಿಜ
ದರಳು ಕಂಗಳ ಸೊಬಗ ಮೂರುತಿ
ಯಿರಲು ಕಂಡೆನು ತಂದೆ ಚಿತ್ತೈಸೆಂದ ನಿಂದ್ರಾರಿ ॥ ೧೮ ॥

ಕೆಲದಿ ನಂದಸುನಂದ ಮೊದಲಾ
ದಲಘು ವೈಷ್ಣವ ಭಕ್ತಜನರಿರೆ
ಜಲಜಲೋಚನೆ ಲಕ್ಷ್ಮಿ ಬಲದಲ್ಲಿರಲು ನೋಡುತಿರೆ ॥
ಹಲವು ಮಾತೇನವನ ಚರಣದ
ಬಳಸಿನಲಿ ಸೌಪರ್ಣನಿದ್ದನು
ತಿಳಿದೆ ನಾ ಜಲಶಾಯಿಯೆಂಬುದ ತಂದೆ ಕೇಳೆಂದ ॥ ೧೯ ॥

ಹಿಡಿದು ನೆಗಹುವೊಡಂಗವಿಸುತಿರೆ
ಕಿಡಿಯನುಗುಳುತ ಹೊಗೆಯ ಸೂಸುತ
ಸಿಡಿಲ ಝುಂಕೆಯ ಪ್ರಳಯಗಿಚ್ಚಿನವೋಲು ಭುಗಿಭುಗಿಸಿ ॥
ಸುಡುತ ಬಂದುದು ಚಕ್ರ ಜುಣುಗುವೊ
ಡೆಡೆಯ ಕಾಣದೆ ದಿಕ್ಕುಗೆಟ್ಟೆನು
ಕಡೆಯ ನೋಡುವೊಡರಿದು ತರಲಳವಲ್ಲವೆಂದರಿದೆ ॥ ೨೦ ॥

ದೇವನಾಗಲೆ ಬೇಕು ರಾಘವ
ದೇವಿ ಜಾನಕಿ ಸಿರಿ ಕಪೀಂದ್ರರು
ದೇವ ಸಂಕುಲವವನ ತಮ್ಮನನಂತ ಬಲಯುತನು ॥
ಈ ವಿಧದ ಸಂಭ್ರಮವು ನಿಜಕೆ
ನ್ನಾವದೇವರಿಗುಂಟು ಆತನೆ
ದೇವ ತನ್ನನುಮಾನವಿದು ದಿಟವರಿಯಬಹುದೆಂದ ॥ ೨೧ ॥

ಜಾನಕಿಯು ಕತದಿಂದ ನೆರೆದುದು
ವಾನರಂಗಳು ಕಡಲ ಬಿಗಿದುದು
ಮಾನವೇಶ್ವರ ಬಂದು ಮುತ್ತಲು ಹೋದ ವಿಭಿಷಣನು ||
ಈ ನಿರೋಧದ ಸತಿಯನೊಯ್ದಾ
ಮಾನವೇಂದ್ರನ ಮುಂದೆ ಕೊಂದರೆ
ತಾನೆ ನಡೆವನುಯೆನುತ ಮನವನು ತುಡಕಿ ನೋಡಿದನು || ೩೨ ||

ಆರು ಹೇಳಿದರೆಲವೊ ಬುದ್ಧಿಯು
ನಾರ ಕೈಯಲಿ ಕಲಿತೆ ಮೋಣೀ
ನಾರಿಗೋಸುಗ ಲಂಕೆ ಹಾಳಹುದಲ್ಲದಾಳುವೆನು ||
ಸಾರು ಫಡ ಹರಿಯಾಗಲಾತನು
ವೀರನಾಗಲಿ ವಿಷ್ಣುವಾಗಲಿ
ಚಾರಿವರಿವೆನು ಬಿಡೆನು ಸೀತೆಯುನೆಂದ ದಶಕಂಠ || ೩೩ ||

ಜಡಿಯಲಾಗದು ತಂದೆ ಕಂಡುದ
ನುಡಿದೆ ನಮ್ಮನು ಸೀತೆಗೋಸುಗ
ಕೆಡಹಿ ಲಂಕೆಯು ಹಾಳು ಮಾಡುವನಲ್ಲದವನಿಜೆಯು ||
ಬಿಡನು ರಾಘವ ಮರಳಿ ಜೀವಿತ
ಪಡೆದು ಸಾವವನಲ್ಲ ನಮಗೆಯೆ
ಕೆಡುಕು ಸೀತೆಯು ಬಿಟ್ಟೊಡಲ್ಲದೆ ಕಡೆಗೆ ಸುಖವಿಲ್ಲ || ೩೪ ||

ಧನ ಕನಕ ಪಶು ಧಾನ್ಯ ಮಿತ್ರರು
ವನಿತೆ ತತ್ಸುತರನುಜ ಪರಿಜನ
ಳಿನಿತರಿಂದವೆ ಸುಖವು ಸಂಭವಿಸುವುದು ಮರ್ತ್ಯರಿಗೆ ||
ಮುನಿದೊಡೀಸನು ಕೆಡಿಸಿದಲ್ಲದೆ
ಮನುಜ ಬಿಡುವವನಲ್ಲ ಕಡೆಯಲಿ
ನಿನಗೆ ಕುಲವನು ಕೂಗೆ ಸುಖವೆಂತಹುದು ಹೇಳೆಂದ || ೩೫ ||

ದೇವಿ ಕುಂಭಿನಿಯಿತ್ತ ವರವನ
ದಾವ ಮೀರಲುಬಹುದು ರಾಘವ
ದೈವ ಬಲದಲಿ ಗೆಲಿದನಲ್ಲದೆ ಮನುಜರಿಂಗಳವೇ ||
ದೈವ ದಾನವರೆದೆಯು ಕೊಂತವು
ಯೇವೆನಮ್ಮನು ಮನುಜ ಲೆಕ್ಕಿಸ
ಸೇವುದುಚಿತ ಸರೋಜ ಗಂಧಿಯು ಛಲಕೆ ತಾವಿಲ್ಲ || ೩೬ ||

ಕಲಿತನಕೆ ಕುಂದಿಲ್ಲ ದೈವದ
ವೊಲುಮೆಗೆಡೆಕಡೆಯಿಲ್ಲ ಧರ್ಮದ
ಬಲಕೆ ಜಗದಲಿ ಪಡಿಯ ಕಾಣೆನು ನೀತಿ ನಡೆಗಳಲಿ ॥
ಗೆಲುವ ಕಾಲದಲೊಂದಧರ್ಮದ
ಬಲಕೆ ಬಲವಿದ್ದೇನು ನಿಷ್ಫಲ
ಗೆಲುವನೊಂದೇ ಧರ್ಮ ಬಲದಲಿ ರಾಮ ದಾನವರ ॥ ೩೭ ॥

ಕನಲಿದನು ದಶಕಂಠನೆಲವೋ
ದನುಜ ಕುಲದಲಿ ಹುಟ್ಟಿದೇತಕೆ
ನಿನಗೆ ತಿಳಿದುದು ಧರ್ಮ ಸಾಕಾಯ್ತಾಯ್ತು ಕೇಳಿದೆನು ॥
ಧನುವ ಬಿಡು ಕಿರಿಯಯ್ಯನೊಬ್ಬನೆ
ಎನಲು ಪಿತನೀ ಕನಲಲಾಗದು
ತನಗೆ ಕಾದುವೆ ಗೆಲವು ಸೋಲವು ನಿಮ್ಮ ಪುಣ್ಯಫಲ ॥ ೩೮ ॥

ಕಾದಲಾರದೆ ಹಂದೆತನದಲಿ
ಬೋಧಿಸುತ್ತಿಹನಲ್ಲ ಕಂಡುದು
ಮೇದಿನೀ ಜನವೆಲ್ಲ ಸತ್ತುದ ಸೇನೆ ನಿಷ್ಕರುಳು ॥
ಹೋದ ವೃತ್ತವ ಕಂಡು ಮುಂದಣ
ಹಾದಿಯೆಂತೆಂದರಿಯ ಬೇಹುದು
ಓದಿ ಮರುಳಾದವನ ತಿಳುಹುವರಾರು ಸಾಕೆಂದ ॥ ೩೯ ॥

ಹೇಳಿ ನೋಡಿದೆನ್ನೆಸೆ ಹಿಂದಿನ
ಜಾಳು ಮಾತಂತಿರಲಿ ರಾಮನ
ಬಾಳದಲೆಯನು ತಹೆನು ಕಪಿಗಳ ಸೀಳಿ ಬಿಸುಡುವೆನು ॥
ನಾಳೆ ತಹೆ ಕಿರಿಯಯ್ಯನನು ನಿ
ನ್ನೋಲಗಕ್ಕೆನಲವನು ಹರುಷದಿ
ಬೀಳುಗೊಟ್ಟನು ಮಗನ ಕಾಳಗಕಂದು ದಶಕಂಠ ॥ ೪೦ ॥

ದನುಜ ವರವನು ಜೇಡೆ ದೇವಿಯ
ಮನೆಯ ಹೊಕ್ಕನು ಹೊಡೆವ ಹರೆಗಳ
ದನಿಗಳವನಿಯ ತುಂಬೆ ರಕ್ಕಸ ನಾಯಕರು ಸಹಿತ ॥
ನೆನೆದ ನೂರ್ಮಡಿ ಕುಳಿಯ ಹೋಮಿಸ
ಲನಲನಾಹುತಿಗೊಂಡು ದಣಿದನು
ತನಗೆ ಕುಂಭಿನಿ ರೂಪುದೋರದಿರಲ್ಕೆ ಚಿಂತಿಸಿದ ॥ ೪೧ ॥

ತರಿದು ಬಿಸುಟನು ಕೋಟಿ ಕುರಿಗಳ
ಕರಿಯು ಹಲವನು ಕೋಣ ಶತಕವ
ಹರೆಯ ವಾದ್ಯವ ಮಾಡಿ ಸುರೆಗಳ ಕೋಟಿ ಹರವಿಗಳ ॥
ಮರೆಯದೊಪ್ಪಿಸುತಿರ್ದ ದೇವಿಗೆ
ಜುರಿತ ನೆತ್ತರ ಕೊಡಗಳೆಲ್ಲವ
ಮರೆದಳೋ ಸಲೆ ಮೋಹದೊರೆದಳೊ ರೂಪುದೋರದಿರೆ ॥ ೪೨ ॥

ಆವ ವಿಪ್ರದ್ರೋಹವೋ ತನ
ಗಾವ ದೈವದ್ರೋಹವೋ ಶಿವ
ಆವ ಪುಣ್ಯವನಳಿಸಿದೆನೋ ನಾನಪರಾಧಿಯೋ ಮೇಣು ॥
ಆವ ಹಿರಿಯರ ಹಳಿದೆನೋ ಮು
ನ್ನಾವ ಧರ್ಮವ ತುಳಿದೆನೋ ಶಿವ
ದೇವಿಯೊಲಿಯಳು ತನಗೆ ಶಿವ ಶಿವ ಪಾಪಿ ತಾನೆಂದ ॥ ೪೩ ॥

ಆವನಾಹುತಿ ವಿಘ್ನನಾದೆನೊ
ಆವ ಗೋದ್ವಿಜರುಗಳ ಶಿಕ್ಷಿಸಿ
ಸಾವಸಂಕಟದಲ್ಲಿ ಬಡವರ ಸಲಹದುಳುಹಿದೆನೋ ॥
ಆವ ನೋಂಪಿಯನಳಿದೆ ವನದಲ
ಪಾವ ಶಿಖಿಯನು ಬಿಟ್ಟೆನೋ ನಾ
ನಾವ ಪಾಪಿಯೊ ಪೂರ್ವದಲಿ ಹಾಯೆಂದನಿಂದ್ರಾರಿ ॥ ೪೪ ॥

ಹಿಂದೆ ಬೇಡುವ ಮುನ್ನ ದೇವತೆ
ಬಂದು ಕೊಡುವಳು ವರವನೇತ
ಕ್ಕಿಂದು ತಡೆದಳೊ ನಾನು ಮಾಡುವ ಭಕ್ತಿಗೂಣೆಯವೇ ॥
ಹೊಂದಿ ಹೋಗಲಿಯಿಂದು ತನುವಿದು
ತಂದೆ ಮೂದಲಿಸಿದನು ಸಭೆಯಲಿ
ಬೆಂದ ಬದುಕಿದು ಸುಡಲಿ ಸಾವುದು ಲೇಸು ಸಮರದಲಿ ॥ ೪೫ ॥

ದಾನವೇಂದ್ರನ ಬಸುರ ಬಂದೀ
ಮಾನವೇಂದ್ರನ ಗೆಲ್ಲಲಾರದ
ಮಾನವಿಲ್ಲದ ಬದುಕು ಬೇಯಲಿ ಇದ್ದು ಫಲವೇನು ॥
ವಾನರಂಗಳ ಕೈಯಲಳಿವುದ
ಕೀ ನಿಕುಂಭಿನಿಗಾಗಿ ತಲೆಯನು
ತಾನೆ ಕಡಿದೊಪ್ಪಿಸುವೆನೆಂದನುವಾದನಿಂದ್ರಾರಿ ॥ ೪೬ ॥

ಹೇಡಿಗಳ ಹೊರವಡಿಸಿ ಕೆಲಬರು
ಬೇಡಬೇಡೆನಲವರ ನೂಕಿಸಿ
ಹೇಡಿಯಾದವರಿರದೆ ಸಾರೆನುತಾರಿ ಪುಟನೆಗೆದು ॥
ಝಾಡಿಸಿದ ಕೂರಲಗ ಖಳ ಧೃತಿ
ಮಾಡಿ ಕಂಗಳಳಳವಿಗುಂದದೆ
ನೋಡಿ ಗೋಣಿನ ಸಂದ ತಡಹಿವ ಬಾಗಿ ಬೊಬ್ಬಿರಿದ ॥ ೪೭ ॥

ಗುಡುಗುಡಿಸಿ ಹರಿತಂದು ಕುಂಭಿನಿ
ಹಿಡಿದು ತೆಗೆದಳು ಕೈಯ ಖಡ್ಗವ
ತಡವಮಾಡದೆ ಬೇಡು ವರವನು ಕಂದ ಮೆಚ್ಚಿದೆನು ॥
ಬಿಡು ಮನೋವ್ಯಥೆ ಬೇಡು ಬೇಡೌ
ಕೊಡುವೆ ನಿನ್ನಂತಪ್ಪ ವೀರರು
ಪೊಡವಿಯೊಳಗಾರುಂಟು ಬೇಡೈ ಕಂದ ವಾಂಛಿತವ ॥ ೪೮ ॥

ಎನಲು ಬಿನ್ನೈಸಿದನು ರಕ್ಕಸ
ಜನನಿಯಿತ್ತಾ ನಾಗಪಾಶವ
ಮನುಜ ಗೆಲಿದನು ನಿಮ್ಮ ವರದಲಿ ಮರಳಿ ನಾ ಗೆಲಿದೆ ॥
ವನಚರಂಗಳು ಸಹಿತ ರಾಮನು
ಪುನಹ ಜೀವಾಪನ್ನನಾದನು
ಮನದಿ ನಾನತಿ ಭ್ರಷ್ಟನಾದೆನು ಮಾನಹತಿಯಾಯ್ತು ॥ ೪೯ ॥

ಮನಮರುಗಿ ಕಪಿಸೇನೆ ಸಹಿತವೆ
ಮನುಜನಬ್ಧಿಯ ದಾಟಿ ಹೋಹಂ
ದನುವ ಕಾಂಬೆನು ಕೊಡಿಸು ಮಾಯಾ ಸೀತೆಯನು ನನಗೆ ॥
ಜನಕಜೆಯ ಹೋಲಿಕೆಯಲೊಂದೆ
ಳ್ಳನಿತು ಕುಂದಿರಲೊಲ್ಲೆನೆಂದೆನೆ
ಮನವೊಲಿದು ಕೊಟ್ಟಳು ನಿಕುಂಭಿನಿ ಹರಸುತಡಗಿದಳು ॥ ೫೦ ॥

## ೩೧ನೇ ಸಂಧಿ

ಪಲ್ಲ ॥ ಕುಂಭಿನಿಯು ವರದಿಂದ ಪಡೆದ ನಿ
ತಂಬಿನಿಯುನಮರಾಳಿ ನಭದಲಿ
ಹಂಬಲಿಸುತ್ತಿರೆ ಕಡಿದು ಬಿಸುಟನು ಹೊಕ್ಕ ಲಂಕೆಯನು ॥

ಪದ ॥ ಸದೆದ ಖತಿಯಲಿ ಸಕಲ ಕಪಿಗಳ
ಮುದದಿ ಹರುಷದ ಮರನಕೊಂಬೆಯ
ತುದಿಯನೇರಿದ ರಥವನಡರಿದನುಬ್ಬಿಕೊಬ್ಬಿದನು ॥
ಇದಿರಲವರನು ಗೆಲುವೆನೆನುತಾ
ತ್ರಿದಶಮರ್ದನ ಸೇನೆ ಸಹಿತವೆ
ಕದನರಂಗವ ಹೊಕ್ಕು ಹೊಡೆಸಿದ ಭೇರಿನಿಸ್ಸಳವ ॥ ೧ ॥

ಇಂದ್ರಜಿತುವಿನ ತೋಟಿ ಬೇಡಾ
ಬಂದ ಸುಭಟನ ತೋಟಿ ಬೇಡಾ
ಬಂದಿಗಾರನ ತೋಟಿ ಬೇಡಾ ರಿಪುವಿದಾರಣನ ॥
ಅಂದಗೆಡಿಪನ ತೋಟಿ ಬೇಡಾ
ತಂದೆಯರಿಗಳ ಗೆಲಿದ ಪರಮಾ
ನಂದ ವೀರನ ತೋಟಿ ಬೇಡೆಂದುಲಿಯೆ ಕಹಳೆಗಳು ॥ ೨ ॥

ಸುರವಿರೋಧಿಯ ತೋಟಿ ಬೇಡಾ
ಧುರವಿರಾಟನ ತೋಟಿ ಬೇಡಾ
ಹರಿಯ ಹಗೆಯನ ತೋಟಿ ಬೇಡಾ ಕಪಟನಾಟಕದ ॥
ಸಿರಿಯಸಿತಗನ ತೋಟಿ ಬೇಡಾ
ಸುರರ ಕೊಲುವನ ತೋಟಿ ಬೇಡಂ
ದಿರದೆ ಹೊಂಗಹಳೆಗಳು ಚೀರಲು ಬಂದನಿಂದ್ರಾರಿ ॥ ೩ ॥

ಪೊಡವಿ ಕೊಡೆ ನೆಗೆದುದೊ ಸುರಾರಿಯ
ಪಡೆಯ ಪದಹತಿ ಧೂಳಿಗಂಗೆಯು
ಮಡುವ ಕಲಕಿತು ಮುಂದೆ ನುಗ್ಗಿತು ಪೆನೆಯ ಹಸರಿಸಿತು ॥
ಒಡನೊಡನೆ ಹೊಯ್ದಾಡಿ ಕಪಿಗಳು
ಹಿಡಿದುದೈ ಸಮರವನು ಕೋಪದಿ
ಜಡಿದು ನೂಕಿದರಿರುಳುಗಳ್ಳನು ಬಂದ ಕಪಿಯೆನುತ ॥ ೪ ॥

ಅಸುರನಣುಗನ ಹಗಲುಗಾಳಗ
ಹೊಸತು ಮಾಯಾವಿದ್ಯಗಳನಿವ
ವಸುಮತೀಶ್ವರನರಿವನೋ ಮೇಣರಿಯದಳಲುವನೊ ॥
ಒಸೆದು ನೋಡುವೆನೆನುತ ಬಳಿಕಾ
ಬಿಸಜಬಾಂಧವ ರಥವ ತಂದಾ
ಗಸದ ಮಧ್ಯದಿ ನಿಲಿಸಿ ಕದನವ ನೋಡುತಿರುತಿರ್ದ ॥ ೫ ॥

ಕೊಲ್ಲು ಕಡಿ ಕಡಿ ಕೆಡಹು ಕೆಡಹಾ
ಕಲ್ಲ ಹೊತ್ತಿರಿ ಇರಿ ಸುರಾರಿಯ
ಹಲ್ಲ ಕಳೆ ಕಳೆ ಬದಿಯ ಮೂಳೆಯ ಮೂಡಿಗೆಯ ಮುರಿಯೊ ॥
ಕಳ್ಳ ಸಿಕ್ಕಿದನೆಲವೊ ಇರುಳಲಿ
ಖುಲ್ಲ ಕೊಂದನು ನಮ್ಮನೆಡಬಲ
ದಲ್ಲಿ ಕವಿ ಕವಿ ಹಿಂದೆ ಹಿಮ್ಮೆಟ್ಟದಿರೆನುತ ಮುತ್ತಿದರು ॥ ೬ ॥

ಕಾಳಗದಲಸುವಳಿದ ರಕ್ಕಸ
ಜಾಳವಮರಾವತಿಗೆ ಬರುತಿರೆ
ನೂಳಿಯರನುಪಚರಿಸೆ ಕಳುಹುವುದೆಂದು ಸುರಪತಿಗೆ ॥
ಹೇಳಲೈದಿದುವೆನಲು ಪದಹತಿ
ಧೂಳಿ ಕವಿದುದು ಸುರರವರೌಳಿಯ
ಮೇಲೆ ಕಾಲಿಡೆ ಕಾಂತಿ ಕದಡಿತ್ತರುಣ ಸಾರಥಿಯ ॥ ೭ ॥

ಸರಳ ಸುರಿವುತ ಕಪಿಗಳಿಡುತಿಹ
ಗಿರಿ ತರುವ್ರಜಗಳನು ಟೊಣೆವುತ
ಕರಿಯ ಮೋಹುತ ಹಯವ ನೂಕುತ ತೇರನೆರಗುತ್ತ ॥
ಅರಿಯ ಸೀಳುತ ಖಳರ ಬೈವುತ
ಬಿರಿದ ಬೀರುತ ಕುತ್ತಿ ಸೆಳೆವುತ
ಎರಡುಬಲ ಹೊಯ್ದಾಡೆ ರಕುತದಲಬುಧಿ ಕಲಕಿದುದು ॥ ೮ ॥

ಕರಿಯ ಸದೆಯೋ ಹರಿಯನೊದೆಯೋ
ಒರಸು ಪತ್ತಿಯ ತೇರು ತೆಕ್ಕೆಯ
ಗಿರಿಯಲಪ್ಪಳಿಸಡಸಿ ಕುಟ್ಟೋ ಹರಿಗೆಯತಿಬಲರ ॥
ಹರಿದು ಕೆಡೆ ಕೆಡೆ ಮುಂದಣಾತನ
ತಿರುಗಿ ಹೊಡೆ ಹೊಡೆ ಹಿಂದಣವದಿರ
ಸರಿಯಗೊಡದಿರು ಫಡಫಡೆನುತೊದರಿದರು ಮರ್ಕಟರು ॥ ೯ ॥

ಹರಿದು ಹಳಚುವ ಹೊಕ್ಕು ಹೋರುವ
ಮುರಿದು ನುಸಳುವ ಮುಂದೆ ನೋಡುವ
ತಿರುಗಿ ತಪ್ಪಿಸಿಕೊಳುತ ಹಿಡಿದೆಳದೆಳೆಸಿಕೊಳುತಿಪ್ಪ ॥
ಧರಣಿಯೆಡೆಗೆಡಲಮಮ ಗಗನಾಂ
ತರದಿ ಕಾದಿತು ಖಳರು ಕಪಿಗಳು
ಬೆರಸಿ ಹೊಯ್ದಾಡಿದರು ಮುಷ್ಟಾಮುಷ್ಟಿ ಯುದ್ಧದಲಿ ॥ ೧೦ ॥

ನಿನ್ನೆ ಮೋಸೊದೊಳಿರುಳು ಕೊಂದಾ
ಕನ್ನಗಳ್ಳನ ತನಯ ನಮ್ಮನು
ಬೆನ್ನಲುಗಿವನು ಬದಿಯ ಮೂಳೆಯ ಮುರಿಯೊ ತಿವಿಯೆನುತ ॥
ತನ್ನ ಮಾಯದಿಮೋಡಲೀಸದ
ರಿನ್ನು ಸಿಕ್ಕಿದ ದಡಿಗನೆನುತವೆ
ಕುನ್ನಿಗಳ ಹಿಡಿಯೆನುತ ರಣದೊಳಗಟ್ಟಿಯಾಡಿದರು ॥ ೧೧ ॥

ಕದನದಲಿ ಕೈಮಾಡಿ ಕಪಿಭಟ
ರೊದಗಿ ಮುರಿದರು ತೇರು ಲಕ್ಷವ
ನೊದೆದು ಕೊಂದರು ಕರಿಯ ಲಕ್ಷವ ತುರಗಪಂಕ್ತಿಗಳ ॥
ಮುದದಿ ಮದಗಜವೆರಡು ಲಕ್ಷವ
ಸದೆದು ಕೆಡಹಿದರಮರವೈರಿಯ
ಹೃದಯ ಕಂಪಿಸೆ ಕಾಳುಗಿಚ್ಚಿನವೋಲು ಖತಿಗೊಂಡ ॥ ೧೨ ॥

ದಡಿಗ ತೇರನು ಮುಂದೆ ನೂಕಿದ
ಬಡ ವನೌಕಸ ಪಡೆಗೆ ಬಿಲ್ಲನು
ಹಿಡಿದು ಜೇವಡೆಗೈಯ್ಯಲಮರರು ಸರಕ ಕಟ್ಟಿದರು ॥
ನಡುಗಿದನು ಸುರನಾಥನಂತಕ
ಕೆಡೆದ ನೈಋತಿ ಸೆಡೆದ ವರುಣನು
ಹಿಡಿದ ಪಾಶವಬಿಟ್ಟನಮಮಾ ದನುಜನಂಜಿಕೆಗೆ ॥ ೧೩ ॥

ಸೆಳೆದ ಚಾಪವನಸ್ತ್ರಸಂತತಿ
ತಳರುಗಿಡಿಗಳನುಗುಳೆ ಕೋಪದಿ
ತುಳಿಸಿದನು ತೂಳಿದನು ಹಿಡಿದನು ಹಿಂಡಿ ಹೀಳಿದನು ॥
ಎಲವೊ ಕೋಡಗಗಳಿರ ಸಾಯದೆ
ತೊಲಗಿ ಫಡಫಡಯೆನುತ ರಕ್ಕಸ
ಹಿಳುಕಹಿಳುಕನು ಹಳಚುತಿರ್ದನು ಹೆಸರ ನಾಯಕರ ॥ ೧೪ ॥

ರಣದ ಭೂತಪ್ರೇತಗಳಿಗೌ
ತಣವ ಮಾಡಿದೆ ನಿಮ್ಮ ಮಾಂಸದಿ
ದಣಿದು ನಾಯ್ನರಿ ಹದ್ದು ಕಾಗೆಗಳೆನ್ನ ಹರಸಿದುವು ॥
ಬಣಗು ಕೋಡಗಿಗಳಿರ ನಮ್ಮೊಳು
ನೆಣಸಬಂದಿರೆ ಮತ್ತೆ ಭಂಗವ
ನೆಣಿಸಿ ನೋಡದೆ ಮಾನವುಂಟೇ ಕಾನ ಕಪಿಗಳಿಗೆ ॥ ೧೫ ॥

ನಳನ ಪಡೆಯನು ತುಳಿಸಿ ನೀಲನ
ಬಲವ ಹೊಯ್ದನು ಗಂಧಮಾದನ
ದಳವನೋಡಿಸಿ ಗವಯನಾಳನು ಗಂಡುಗೆಡಿಸಿದನು ॥
ಖಳನ ತೇರಿನ ವಹಿಲ ಗತಿಗಳ
ತಿಳಿಯಲರಿದಾಯ್ತು ಮನು ಸುತ್ತಲು
ಸುಳಿವ ಚಕ್ರದ ವೋಲು ಕಾಣಲುಬಂದುದಯ್ಯಯ್ಯ ॥ ೧೬ ॥

ಸರಳು ಮೂರರಲೆಚ್ಚು ಪನಸನ
ಬಿರಿಯಲೆಂಟಂಬಿನಲಿ ತಿಮಿರನ
ನಿರದೆ ತಾರಕನೆಂಬ ವೀರನನಾರು ವಿಶಿಖದಲಿ ॥
ಎರಡು ಶರದಲಿ ಕೇಸರಿಯನೀ
ರೆರಡುರಲಿ ನೆರೆ ಕುಮುದನೆಂಬನ
ಸುರದಿಶಾಪಟ ಹತ್ತು ಶರದಿಂದೆಚ್ಚ ದಧಿಮುಖನ ॥ ೧೭ ॥

ತೊರೆದನಸುವ ಗವಾಕ್ಷ ವಿಂಗೆ ಮೈ
ಮರೆದ ಹಂಪನು ಕಂಪನೊರಗಿದ
ಗುರಿಗೆ ಕಾಯುವ ತೆತ್ತ ಗಹಗುಹ ಬಿದ್ದ ಹೊರಳಿದನು ॥
ಒರೆವ ಲೋಹಿತ ಹರಿವ ಕರುಳಿನ
ಬರತ ಬಂಧದ ಹರಿವ ರಕುತದ
ತೊರೆಯ ಮಾಡಿದನಸುರನೊಂದೇ ನಿಮಿಷ ಮಾತ್ರದಲಿ ॥ ೧೮ ॥

ಉರಿಗೆ ತುಪ್ಪವತೋರಿದಂತಾ
ಸುರದ ಕೋಪದಿ ಚಿಗಿದು ಜಾಂಬವ
ಹರಿದು ಹಿಡಿದನು ಖಳನ ರಥವನು ತುಡುಕಿ ಬೀಸಿದನು ॥
ಧರಣಿಗುರುಳಲು ಖಡುಗದಿಂದವೆ
ಬಿರಿಯಲಪ್ಪಳಿಸಿದೊಡೆ ತಲೆ ಜ
ರ್ಜರಿತವಾಯಿತು ಬೀಳು ಫಡ ಮುದುಗರಡಿ ಬೀಳೆಂದ ॥ ೧೯ ॥

ಚಾರಿವರಿದನು ಪಡೆಯ ಸೀತಾ
ಚೋರನಾತ್ಮಜ ಮುಂದೆ ಬರುತಿರೆ
ವೀರನಂಗದನಡ್ಡಗಟ್ಟಿದ ನಿಲ್ಲು ನಿಲ್ಲೆನುತ ॥
ತೋರ ಬೆಟ್ಟದಲಿಟ್ಟೊಡಾ ಥುರ
ಧೀರ ಮುಟ್ಟಿಯಲವನ ಗೆಲಿದವಿ
ಚಾರಿ ಕೋಡಗ ನಿಲ್ಲು ನೀನೇ ಕಾದುವವನೆಂದ ॥ ೨೦ ॥

ತರುಚರಂಗಳ ವೀರ ಕಾಡಿನ
ಮರದ ತುದಿಗೊಂಬೆಯಲಿ ಮೆರೆವುದು
ಮರುಳು ಮರ್ಕಟ ಸೊಕ್ಕಿ ಸೊರಹಿದೆ ನಿನ್ನ ಹವಣೇನು ॥
ತೆರಳು ತೆರಳನುವಾಗು ಹೋಗೆನು
ತೆರಡು ಶರದಲಿ ಬದಿಯನೆಚ್ಚನು
ಕೆರಳಿ ಪುನರಪಿ ಹತ್ತು ಶರದಿಂದೆಚ್ಚು ಬೊಬ್ಬಿರಿದ ॥ ೨೧ ॥

ಇವನದಾರೆನಲಾ ವಿಭೀಷಣ
ದಿವಿಜದಲ್ಲಣ ಜೀಯ ಕಾದುವ
ನಿವನು ಸಾವನ್ನೆವರ ಸವೆಯನು ಸಮರದಲಿ ನಿಪುಣ ॥
ಇವಗೆ ಹನುಮನ ಬೆಸಸ ಬೇಕವ
ರಿವರಲಾಗದು ಎನಲು ನಸುನಗು
ತವನಿವಲ್ಲಭ ನೋಡಲೆದ್ದನು ಸಮರಗಂಭೀರ ॥ ೨೨ ॥

ಭವನ ಕೋಪವ ತಾಳಿ ಹರಿತಹ
ಪವನತನಯನ ಕಂಡನಸುರನು
ಇವನ ಕಾಳಗದಲ್ಲಿ ಗೆಲಲಸದಳವು ಬಲು ಭಟನು ॥
ಇವಗೆ ಮಾಯವೆ ಪಥ್ಯವೆನುತಾ
ಹವವ ಬಿಟ್ಟಡಗಿದನು ಬಲುಹಿಂ
ತವಕದಿಂದೆಳೆತಂದ ಮಾಯಾ ಸೀತೆಯನು ರಣಕೆ ॥ ೨೩ ॥

ಅಡಗಿದಸುರನ ಕಾಣನನಿಲಜ
ಪೊಡವಿಪತಿಯೆಡೆಗೈದಲಾಕ್ಷಣ
ದಡಿಗ ಮಾಯಾ ಸೀತೆಯನು ಮುಡಿವಿಡಿದು ನೆಗಹಿದನು ॥
ಜಡಿದು ಘರ್ಜಿಸುತೆಂದನಿವಳನು
ಕಡಿದು ಹಾಯ್ಕುವೆನೀಗ ರಾವಣಿ
ಘುಡಿದು ಬಿಡುವರ ಗಂಡನೆಂದನು ನಭದಲಿಂದ್ರಾರಿ ॥ ೨೪ ॥

ಕಂಡು ಮರ್ಕಟನಿವಹ ಕಳವಳ
ಗೊಂಡು ಮರುಗಿದುದಕಟ ಸಾಯಸ
ಗೊಂಡು ಕಡಲನು ದಾಂಟಿ ಲಂಕೆಯ ಮುತ್ತಿ ಕದನದಲಿ ॥
ತೊಂಡ ದೈತ್ಯರ ಕಾದಿ ನೊಂದೆವು
ಭಂಡುಮಾಡಿದನಸುರ ಮಾಯಕೆ
ದಂಡು ಮಾಡದೆವೆಂದು ವಾನರ ಸುಭಟರಳಲಿದರು ॥ ೨೫ ॥

ಗಿಳಿಯು ಮರಿ ಮಂಜರನ ಬಾಯಿಗೆ
ಸಿಲುಕಿದಂದದಿ ಹರಿಣ ಬೇಡನ
ಬಲೆಗೆ ಬಿದ್ದಂತಸುರನಳವಿಗೆ ಸಿಕ್ಕಿ ಬಸವಳಿದು ॥
ಬಳಲಿ ಬಾಡಿದ ಮುಖವು ಮಡತನ
ಕೊಲೆವ ಹೆಮ್ಮುಡಿಯೊರೆತ ನಯನವು
ಮಲಿನವಸ್ತ್ರದ ನಾರಿ ಶೋಕವ ಬಿತ್ತಿದಳು ಧರೆಗೆ ॥ ೨೬ ॥

ಸಾಸಿಗನು ಮಗುಳಿಂದ್ರಜಾಲವ
ಬೀಸಿದನು ಸಲೆ ಕಣ್ಣುಕಟ್ಟಿದ
ನೇಸು ಮಾಯವೊ ಶಿವಶಿವಾಶಿವ ದೈವದೂರರಿಗೆ ॥
ವೈಶಿಕದ ವಿದ್ಯೆಯಲಿ ರಾಮನ
ಘಾಸಿಮಾಡಿದ ಕುಂಭಿನಿಯ ಹೊಸ
ಕೂಸ ತೋರಿದ ಬಾಯಬಿಡುತಿರಲಸುರರಿಪು ಕಂಡ ॥ ೨೭ ॥

ಎಸುವ ಕೈಯನು ಮರೆದ ನರಹರಿ
ಯಸುರ ಮಾಯೆಗೆ ಮರುಳುಗೊಂಡನು
ಬಿಸಜಗಂಧಿಯ ಕುರುಹ ನಡಿಗಡಿಗರಸನೀಕ್ಷಿಸಿದ ॥
ಹೊಸ ಕುಟಿಲ ಕುಂತಳದ ಕಾಮನ
ಮಸೆದ ಖಂಡೆಯದಂತೆ ತೋರುವ
ಹುಸಿಯಯೆಸಕಕ್ಕಸುರರಿಪು ಬೆರಗಾಗಿ ಚಿಂತಿಸಿದ ॥ ೨೮ ॥

ಹುಸಿಯು ಚಾವಡಿ ಮೋಸದರಮನೆ
ಪಿಸುಣದಾಲಯ ಹುರುಡಿನಾಗರ
ಯೆಸೆವ ಕುಟಿಲದ ಮಾಟ ಮಾಯದ ಮಂತ್ರಕಧಿದೈವ ॥
ದಸಿಯ ದಂಡಿಗೆ ದೋಷದಾಲಯ
ವಿಷದ ಸುಳಿವು ಕ್ಷುದ್ರ ದೇವತೆ
ಯೆಸದಳವನೀಸುತೆಯ ಹೋಲುವೆಗಧಿಕತರವೆನಿಸಿ ॥ ೨೯ ॥

ಬಿಡುಬಿಡೆಲೆ ಪಾತಕಿಯೆ ಹೆಂಗುಸ
ಹಿಡಿದು ಕೊಲುವುದೆ ನಿನ್ನ ಪೌರುಷ
ಗಿಡುವ ಬಗ್ಗಿಸಲಾರದಳಲಿಗೆ ಬಡಿಗೆ ಕೊಂಡಂತೆ ॥
ಮಡದಿ ಸಾಯಲಿ ಮೇಣು ಉಳಿಯಲಿ
ಕಡೆಗೆ ನಿನ್ನೀ ಕುಲದ ಬೇರನು
ಕಡಿವೆ ಶೂಲಿಯು ಮರೆಯಹೊಕ್ಕರು ಕೊಲ್ಲದಿರೆನೆಂದ ॥ ೩೦ ॥

ಮಡದಿಗೋಸುಗ ಕಾದಿ ಸಾಯದಿ
ರಡವಿ ಕೋಡಗಿಗಳನು ಕೊಲ್ಲದಿ
ರೊಡಲುವುಳಿದರೆ ಹತ್ತು ಸಾವಿರ ಸತಿಯ ತರಬಹುದು ॥
ಕಡೆಗೆ ಹೆಂಡಿರನಿತ್ತು ವಾಯಕೆ
ಮಡಿದ ರಾಘವನೆಂದು ಲೋಕ
ಕ್ಕಿಡೆಯ ಮಾಡುವೆನಲ್ಲದಬಲೆಯ ಬಿಡುವುದಿಲ್ಲೆಂದ ॥ ೩೧ ॥

ಮಡದಿಯಾಶೆಯ ಬಿಟ್ಟು ಹಿಂದಕೆ
ನಡೆ ಜಗತ್ರಯದೊಳಗೆ ಸತಿಯರ
ಹಿಡಿದುತಹೆನೊಲುವವರ ಕೊಲ್ಲುವೆನೊಲ್ಲದಿದ್ದವರ ॥
ಕಡಿದು ಬಿಡುವೆನು ನಿನ್ನ ಸೀತೆಯ
ಬಿಡುವುದುಂಟೇ ನಿಲ್ಲದೀಕೆಯ
ಕಡೆಯ ಕಂಡೆಲೆ ಹೋಗು ನೋಡುವುದೆಂದನಿಂದ್ರಾರಿ ॥ ೩೨ ॥

ಹಿಂದೆ ನಮ್ಮನರಣ್ಯನೆಂಬನ
ಕೊಂದ ಹಗೆ ಮತ್ತಿವಳ ಹರಿಬವು
ವೊಂದುಗೂಡಿತು ನಿಮ್ಮ ವಂಶವ ಸವರಲೆಂದಾನು ॥
ಬಂದ ಹದನಿದು ಇಂದು ಸೀತೆಯ
ತಂದುಕೊಟ್ಟೊಡೆ ಹಿಂದೆ ಹೋಗೆವು
ಕೊಂದುಕೂಗದೆ ಹಗೆಯು ಹಿಂಗದುಯೆಂದ ರಘುರಾಯ ॥ ೩೩ ॥

ಇಂದು ಸೀತೆಯ ಸೆರೆಯ ಬಿಡಿಸದೆ
ಹಿಂದಣಾರ್ತರ ಹರಿಬಕೆಮ್ಮನು
ಕೊಂದೊಡಲ್ಲದೆ ಮರಳೆಯದು ದಿಟ ನೀನು ಹುಸಿವವನೇ ॥
ಇಂದು ನಮ್ಮೊಳು ತೊಡಚಿ ಕಪಿಗಳ
ಕೊಂದು ಹೋದಪೆ ನೀನು ತಪ್ಪದೆ
ಯೆಂದು ತಂಬುಲ ಸೂಸೆ ನಕ್ಕನು ದನುಜ ಗಹಗಹಿಸಿ ॥ ೩೪ ॥

ಎಲವೊ ಕೇಳ್ಪೊಡಹುಟ್ಟಿದಾತನ
ಕೊಲೆಗೆ ಹಂಗಿಗನಾಗಿ ಮನುಜನ
ಬಳಿಯ ಬೆಂಬಳಿಯಾಗಿ ಹರಿಬಕೆ ಬಂದ ಕಪಿ ನಿನ್ನ ॥
ಬಲುಹು ತೋರುವ ಕಾಲವಿದು ನಾ
ಕೊಲುವೆನೀಕೆಯನೆಲವೊ ಬಾರಾ
ಚಲನಸಂಭವ ನೀನು ಕಾಯ್ದರೆ ನಿಜದ ಬಂಟನಲ ॥ ೩೫ ॥

ದನುಜ ಖಡ್ಗವ ಜಡಿದು ಮಾಯಾ
ವನಿತೆಯನು ಮುಡಿವಿಡಿದು ನೆಗಹಿದ
ವನಚರಂಗಳು ಗೋಳುಗುಡುತಿರಲಸುರ ಬೊಬ್ಬಿರಿದ ॥
ಜನಕಜಾಪತಿ ಮೋಹದಿಂದವೆ
ಧನುವ ಮರೆದೀಕ್ಷಿಸುತಲಿರ್ದನು
ದನುಜ ಸಮ್ಮೋಹನಕೆ ಹರಿಮರುಳಾದನಚ್ಚರಿಯೆ ॥ ೩೬ ॥

ಹೊಳೆವ ನಯನೋಪಾಂಗವಲಗುವ
ಮೊಲೆಯ ಮೇಲುದು ಜಾರೆ ಬಡ ನಡು
ಬಳುಕೆ ಕಂಗಳು ಜಲವ ಮಿಡಿವುತ ದನುಜನಳವಿಯಲಿ ॥
ಎಲೆಲೆ ರಘುಪತಿಯೆನ್ನ ರಕ್ಕಸ
ಕೊಲಲುಪೇಕ್ಷಿಸಬಹುದೆ ಕರುಣಾ
ಜಲಧಿ ಕಾವುದನಾಥೆಯಾನೆಂದಳಲಿದಳು ತರಳೆ ॥ ೩೭ ॥

ಎಲೆ ರಘೂತ್ತಮ ಎಲೆ ನೃಪಾಗ್ರಣಿ
ಎಲೆ ಮದೀಯ ಪ್ರಾಣವಲ್ಲಭ
ಖಳನು ನಿರ್ದಯದಿಂದ ಕೊಲುವನು ರಮಣ ನೀನಿರಲು ॥
ಲಲನೆಗೀ ವಿಧಿಯಾಯ್ತು ಸೆರೆಯಲಿ
ಹಲವು ತಿಂಗಳು ನವೆದು ಬಳಲಿದೆ
ಕೊಲೆಯ ಮಾಣಿಸಲಾಗದೇ ಗತಿಯಾರು ನನಗಿನ್ನು ॥ ೩೮ ॥

ತೊಳಲಿದೆನು ನಿಮ್ಮೊಡನೆ ವಿಪಿನದಿ
ಬಳಲಿ ಸಾಯಸಗೊಂಡು ಮತ್ತೀ
ಖಳನ ಸೆರೆಯಲಿ ತಾಪವಟ್ಟೆನು ನೀನೆ ಗತಿಯೆಂದು ॥
ಗಳಿಗೆ ಶತಯುಗವಾಗಿ ನೂಕಿದೆ
ಹಲವು ಮಾತೇಕೆನ್ನ ಪುಣ್ಯವು
ಫಳಿಗೆ ಬಂದುದು ಹರಸಿ ಕಟ್ಟಿದ ಕುರಿಯೊ ನಾನಕಟ ॥ ೩೯ ॥

ಮಿಡುಕಿದಳು ಹವ್ಮೈಸಿದಳು ಬಾ
ಯ್ಬಿಡುತ ಜೊಂಪಿಸುತಳಲಿ ಮರುಗುತ
ಪೊಡವಿಪತಿ ತಲೆಗಾಯಲಾಗದೆ ಪಾಪಿ ತನ್ನವನು ॥
ಬಿಡದೆ ಹೆಂಗೊಲೆಗಂಡುಪೇಕ್ಷಿಪ
ಪೊಡವಿಪತಿಗಳದಾರು ಬಿಲ್ಲನು
ಹಿಡಿಯಲೇತಕೆ ಹರಿಬಕಿಲ್ಲದ ಗಂಡರನು ಸುಡಲಿ ॥ ೪೦ ॥

ಪಟ್ಟಣವನೊಡವಂಟು ಜನನಿಯು
ಬಿಟ್ಟು ನಾರುಡೆಯುಟ್ಟು ಅಣ್ಣನ
ಬಿಟ್ಟು ನಿಲ್ಲದೆ ಬಂದ ನಿನ್ನನು ನಾನು ಮೃಗಕಾಗಿ ॥
ಕೆಟ್ಟನುಡಿದಾ ನಿಷ್ಠುರೋಕ್ತಿಯು
ಬಿಟ್ಟು ಕರುಣಿಸಿ ಕಾಯಲಾಗದೆ
ಸಿಟ್ಟು ಸಾವೆಡೆಗುಂಟೆ ಲಕ್ಷ್ಮಣಯೆಂದಳಿಂದುಮುಖಿ ॥ ೪೧ ॥

ಮಾಯದಲಿ ಖಳ ಕೊಲುವೆನೆಂದೆನೆ
ಕಾಯಲಾಗದೆ ಸಕಲ ಮರ್ಕಟ
ರಾಯರಥಟುಗಳಿದ್ದು ಫಲವೇನಾಯ್ತು ಮಾನಿನಿಯು ॥
ಬಾಯ ಹುಯ್ಯಲು ಕಿವಿಗೆ ಸೊಗಸೇ
ಸಾಯಸಂಗಳಲೊದಗದಿಪ್ಪುದು
ಪಾಯವೇಯೆಂದೊರಲುತಿರ್ದಳು ನಾರಿ ಗೋಣಿಡುತ ॥ ೪೨ ॥

ದೇವ ದನುಜರ ಕೊಲುವ ದೇವರ
ದೇವ ನೀ ಪತಿಯಾಗಿರಲು ಎನ
ಗೀ ವಿಧದ ಕೊಲೆಯಾಯ್ತು ಪೂರ್ವಾರ್ಜಿತದ ಕರ್ಮವಿದು ॥
ಕಾವನಬಲೆಯ ಹರಿಬದಲಿ ತಾ
ಸಾವನಲ್ಲದೆ ಬಿಡನು ಹೆಂಡಿರ
ನಾವ ಪಾಪದ ಫಲವೊ ಗಂಡಗೆ ಕರುಣವಿಲ್ಲಾಯ್ತು ॥ ೪೩ ॥

ಹಲವ ಹಲುಬಲು ಕೇಳಿ ರಘುಪತಿ
ಸೆಳೆದ ಚಾಪವ ಹನುಮ ಹಾರಿದ
ಹಿಳುಕ ತೊಟ್ಟ ಸುಮಿತ್ರ ತರಣಿಜ ಜಿಗಿದು ಪುಟನೆಗೆದ ॥
ಅಲಗನೊರೆಗಳೆದಸುರನಾ ಕ್ಷಣ
ತಲೆಯನೆರಗಿದನಂತರಿಕ್ಷದಿ
ಎಲೆಲೆ ಶಿವ ಶಿವ ಹೊಡೆದುಬಿಟ್ಟನು ಧರೆಗೆ ಕಡಿ ಬೀಳೆ ॥ ೪೪ ॥

ಬಿಲ್ಲ ಬಿಸುಟನು ರಾಮ ಲಕ್ಷ್ಮಣ
ತಲ್ಲಣಿಸಿದನು ರವಿಜ ಹಲುಬಿದ
ನಿಲ್ಲದವನಿಗೆ ಬಿದ್ದು ಹೊರಳಿದನಣುವ ಶೋಕದಲಿ ॥
ಹುಲ್ಲೆ ಶೂಲವ ಹಾಯ್ದು ಪರಿಯಲಿ
ಮುಳ್ಳು ಬಾವಿಯ ಬಿದ್ದ ಶಿಶು ಪರಿ
ಕಲ್ಲಲೊರಸಿದ ಕಮಲ ಕುಸುಮವ ಹೋಲಿತತಿಬಲರು ॥ ೪೫ ॥

ಅರಸ ಕಾತರನಾಗಿ ಮೈಮರೆ
ದಿರಲು ಕಪಿಪಡೆಯಳ್ಕಿ ತಳೆದುದು
ನೆರೆದು ಬಂದುದು ಶೋಕವಿತ್ತಾ ಲಕ್ಷ್ಮಿಯರಸಂಗೆ ॥
ಉರಿದ ತಾವರೆಯಂತೆ ಬಾಡಿದ
ವಿರಹಪರವಶನಾದ ಮಾಯಾ
ತರುಣಿಯಿಕ್ಕಿದ ಮದ್ದು ತಲೆಗೇರಿತ್ತು ನರಹರಿಯ ॥ ೪೬ ॥

ನುಡಿಯ ಕಪಟದಲವ್ವೆ ಕಾಡಿಗೆ
ಮಡದಿ ಸಹಿತವೆ ನೂಕಿ ಬಿಟ್ಟಳು
ಜಡೆಯ ಹೊತ್ತೆನು ನಾರನುಟ್ಟೆನು ಕಂದಮೂಲವನು ॥
ಬಿಡದೆ ಮೆಲಿದೆನು ಸತ್ಯವೊಂದನು
ಬಿಡೆನು ನಾನೆಂದಿದ್ದೆನಂನಕ
ಮಡದಿ ಸೀತೆಯನೊಯ್ದು ಮಾಯಾ ಮೃಗದ ಬೇಟೆಯಲಿ ॥ ೪೭ ॥

ವಿರಹದಲಿ ಮರುಳಾಗಿ ಕೊಂದೆನು
ನಿರಪರಾಧಿಯ ವೀರ ಬಾಲಿಯ
ತರಣಿಸುತ ನೆರವಾದ ನಮಗತಿ ಸಾಯಸಂಬಟ್ಟ ॥
ಶರಧಿಯನು ನೆರೆ ಕಟ್ಟಿ ರಕ್ಕಸ
ನೆರಡು ಕಣೆಯದಿ ಕೊಲಲು ಮದ್ದಿಂ
ಮರಳಿ ಹುಟ್ಟಿದೆವಬಲೆಯಾಶೆಯದಿಂದು ಬಯಲಾಯ್ತು ॥ ೪೮ ॥

ಸೀತೆ ಬೀತಾನಂದ ಬರತುದು
ಧಾತುಗೆಟ್ಟಿತು ಧೈರ್ಯಗುಂದಿತು
ಮಾತು ಮುಟ್ಟಿತು ಮರವೆ ಸಂಘಟಿಸಿತ್ತು ಮೂರ್ಛೆಯಲಿ ॥
ಭೂತಳೇಶ್ವರ ಮೈಯ್ಯ ಮರೆದಿರ
ಲಾತತೂಕ್ಷಣ ಬಂದು ವಿಭಿಷಣ
ನೇತಕೀ ವ್ಯಥೆಯಕಟ ಮಾಯೆಯಿದರಿಯಳಾಯೆಂಧ ॥ ೪೯ ॥

ದನುಜಪತಿ ನುಡಿದಾಶೆ ಮಾತಿಗೆ
ಜನಪನಾಲಿಸಿ ಅರಸ ನಿಮ್ಮಯ
ವನಿತೆಯಲ್ಲಿದು ಮಾಯೆ ನೋಡುವುದೆಂದು ರಘುಪತಿಗೆ ॥
ನೆನೆಸಿಕೊಡೆ ಮುದ್ರಿಕೆಯ ಮಹಿಮೆಯ
ನೆನೆದು ಮುಟ್ಟಿದ ಕಾಣದಾದನು
ಕನಸಕಂಡಂತಾಯ್ತು ಮಾಯಾ ಸೀತೆ ಬಯಲಾಯ್ತು ॥ ೫೦ ॥

ಆರು ಕೊಲಬಹುದವನಿಜೆಯ ನಿಂ
ದ್ರಾರಿಗಳ ಪಾಡೇನು ಕೊಲುವೊಡೆ
ಮಾರಮಥನಂಗರಿದು ಸೀತೆಯ ಲೋಕ ಮಾತೆಯನು ॥
ವೀರ ಬೀಸಿದಯಿಂದ್ರಜಾಲಕೆ
ಧೀರಗೆಡುವರೆ ತಂದೆ ನೀನವಿ
ಚಾರಿ ರಾಘವ ಖಳನ ಮಾಯೆಯನರಿಯಲಾಯೆಂದ ॥ ೫೧ ॥

ನಂಬಲಾರದೆ ರಾಮ ಹಲವನು
ಹಂಬಲಿಸಿ ಹನುಮಂತದೇವನ
ನಂಬುಜಾಕ್ಷಿಯ ನೋಡ ಕಳುಹಿದೊಡಸುಕೆ ಬನಕಾಗಿ ॥
ಕುಂಭದೊಳಗಣ ಸೊಡರಿನಂತಾ
ಅಂಬುಜಾಕ್ಷನ ರಾಣಿಯಿರೆ ಹರಿ
ಸಂಭವನು ಹರಿತಂದು ಹೇಳಲು ಸಂತಸಂಬಟ್ಟ ॥ ೫೨ ॥

ಅರಿಯ ಮಾಯೆಗೆ ರಾಮ ಮೂಗಿನ
ಬೆರಳಲಡಿಗಡಿಗೊಲೆದ ಮುಕುಟವ
ಹರಹರಾ ಖಳನೆನಿತ ಕಲಿತನೊ ಕಪಟನಾಟಕವ ॥
ಅರಿದರಿದು ಖಳಮಾಯೆಯಿಂದವೆ
ಮರುಳುಮಾಡಿದನಿಂದು ನಮ್ಮನು
ಧರಣಿಪತಿ ವಿಭಿಷಣನ ಮೊಗವನು ನೋಡಿ ನಗುತಿರ್ದ ॥ ೫೩ ॥

ಹರುಷ ಹಬ್ಬಿತು ವೀರ ಹೊರೆದುದು
ಸರಸ ಹೆಚ್ಚಿತು ವಿರಸ ಹರಿದುದು
ಬಿರಿದು ಬೆಳೆದುದು ವಿಜಯಲಕ್ಷ್ಮೀರಮಣ ರಾಘವಗೆ ॥
ಅರಳ ಮಳೆ ಸೂಸಿದುದು ನಭದಲಿ
ಸುರರ ದುಂದುಭಿ ಮೊಳಗಲಾರಿತು
ನೆರೆದ ಮರ್ಕಟ ಸೇನೆ ನಲಿದುದು ಸುಖದ ಸುಗ್ಗಿಯಲಿ ॥ ೫೪ ॥

ಧುರದೊಳಳಿದಮರಾರಿಮುಖ್ಯರ
ಶರಧಿಯೊಳು ಬೀಸಾಡುತಿಪ್ಪರು
ನೆರೆದ ಕಪಿಗಳು ದಿನದಿನಂಪ್ರತಿ ರಾಮನಾಜ್ಞೆಯಲಿ ॥
ಮರಳಿ ಮದ್ದಿಂದವರು ಹುಟ್ಟುತಿ
ಹಿರಿದು ಕಾದುವರೆಂದು ಜಲಚರ
ನೆರವಿ ದಣಿದುದು ತಿಂದು ಹರಸುತ ರಾಘವೇಶ್ವರನ ॥ ೫೫ ॥

---

## ೩೨ನೇ ಸಂಧಿ

ಪಲ್ಲ ॥ ಮರುತನಂದನ ಸುಟ್ಟ ಲಂಕೆಯ
ಮರಳಿ ಮಯ ನಿರ್ಮಿಸಲು ಪುನರಪಿ
ತರುಚರಂಗಳು ಸುಟ್ಟು ಕೂಗಿದುವಮಮ ಸಂಭ್ರಮವೇ ॥

ಪದ ॥ ಹರನನಾರಾಧಿಸಿ ವಿಭೂತಿಯ
ಧರಿಸಿ ಗುರುಚರಣಕ್ಕೆ ವಂದಿಸಿ
ಸುರರು ಜಯ ಜಯಯೆನಲು ರಾಘವನಿತ್ತನೋಲಗವ ॥
ತರುಚರೇಂದ್ರರು ಸುತ್ತಲಿರುತಿರ
ಲರಸ ತಮ್ಮನ ನೆಮ್ಮಿ ನುಡಿಸಿದ
ಕರಡಿಯೊಡೆಯನ ದನುಜನನುಜನ ತರಣಿನಂದನನ ॥ ೧ ॥

ಮಲೆತು ನಿಂದುದು ದುರ್ಗ ಕಪಿಗಳಿ
ಗಳುಕದಿದೆ ಹೊರವಂಟು ಕಾದುವ
ಖಳರಿಗೆಡೆಕೆಡೆಯಿಲ್ಲ ತೀರದು ಕಡಲ ತೆರೆಯಂತೆ ॥
ತಳುವದೀಗಲೆ ಮುತ್ತಬೇಕೆನ
ಲಲಘು ಸಾಹಸಿಗೆಂದನೊಬ್ಬನು
ಸಲೆ ಬೃಹಸ್ಪತಿಯಣುಗ ಜ್ಯೋತಿರ್ಮುಖನು ಶಾಕುನವ ॥ ೨ ॥

ಸಂಗರಕೆ ಹೆಂಗಳ್ಳ ದನುಜಗೆ
ಮಂಗಳನ ಬಲವಿಲ್ಲ ತೊಡಚಲು
ಭಂಗ ತಪ್ಪದು ಸ್ವಾಮಿದ್ರೋಹಿಗೆ ಕೇಡುಗಾಲವೆನೆ ॥
ಇಂಗಳದ ಮನೆಯಹುದು ಕಪಿ ನೀ
ಲಂಗೆ ನೇಮವನಿತ್ತು ಕಳುಹಿಸಿ
ಬೆಂಗೆ ಬಲವನು ಹೇಳಿ ಲಂಕೆಯ ಮರಳಿ ಸುಡಲೆಂದು ॥ ೩ ॥

ಸೂಡಿಮಂಗಳ ಮಾಡಿ ದೇವರು
ನೋಡಬೇಕು ವಿನೋದದಂದವ
ಬೀಡು ನೆರ ಬೇಸಗೆಯಲೆರಡೇ ಗಳಿಗೆ ನೀಲಂಗೆ ॥
ನಾಡಮಾತೇಕೆನಲು ರಘುಪತಿ
ಕೂಡೆ ಕೈವೀಸಿದನು ಸೇನೆಗೆ
ಮಾಡಿದರು ಕೈಗೊಳ್ಳಿ ನೀಲನ ತಂದೆ ಹರಸುತಿರೆ ॥ ೪ ॥

ಕೋಟಿಯೆಪ್ಪತ್ತೇಳು ಸಾವಿರ
ನೀಟಗೊಳ್ಳಿಯಲೊಮ್ಮೆ ದನುಜರ
ಸೂಟಿಯಲಿ ಸುಡಲೆಂದು ಒಂದೇ ಲಗ್ಗೆವೊಮ್ಮನವು ॥
ನೋಟಕರಿಗುತ್ಸವವು ರುದ್ರರ
ಲಾಟಲೋಚನದಲ್ಲಿ ಕುರುಹಿನ
ಬೇಟ ತಂದಂತಿರಲು ದೆಸೆದೆಸೆ ಕೊಳ್ಳಿ ಬೆಳಗಿದುವು ॥ ೫ ॥

ಅಗಳ ಹರಿಯುರುಬೆಗಳು ಸುತ್ತಲು
ನಗಚರಂಗಳು ಕವಿದುವವಮಾ
ಬಗಿದು ಸುಟ್ಟರು ಕೇರಿಕೇರಿಯ ಬೇಗೆಗಿಂಬಾಯ್ತು ॥
ಹೊಗೆಯ ಮಯುವೋ ನಭದಲಮರರ
ನಗೆಯ ಮಯುವೋ ಹತ್ತು ತಲೆಯವ
ನಗಿದು ಬೊಬ್ಬಿಡುವಂತೆ ಸುಟ್ಟರು ಪುರವನೊಳಹೊಕ್ಕು ॥ ೬ ॥

ಕೊಳ್ಳಿ ಬಾಲದಿ ಸುಟ್ಟ ಹನುಮನು
ವುಳ್ಳುದೆಲ್ಲವ ಹಿಂದೆಯಿದುಮುರ
ಗೊಳ್ಳಿಯಾಯಿತು ಏನ ಹೇಳುವೆನೊಟ್ಟು ಸುಡುತಿಹುದ ॥
ತಳ್ಳಳಿಸಿ ದಶಕಂಠ ನೇಮಿಸೆ
ನಿಲ್ಲದಸುರಾನೀಕ ಕವಿದುದು
ಕೊಳ್ಳಿ ಕಾಳಗ ಕಣ್ಗೆ ಕೌತುಕವಾಯ್ತು ಕಾಂಬರಿಗೆ ॥ ೭ ॥

ಗಂಧ ಕಸ್ತುರಿಯಗರು ಧೂಪವು
ಬೆಂದ ಪರಿಮಳ ತುಂಬಿತಭ್ರವ
ನೊಂದು ಕಿಚ್ಚಿನಲೋಡಲಾಗದೆ ನಿತ್ತು ಬೆಚ್ಚಿದರು ॥
ಬೆಂದ ಬದುಕಾಯ್ತಸುರರಿಗೆ ಹೊಗೆ
ಮುಂದೆ ದಳ್ಳುರಿ ಹಿಂದೆ ಕಪಿಗಳು
ಕೊಂದು ಕೂಗುತ್ತಿರ್ದೊಡಾನುವರಾರು ಕಾಳಗವ ॥ ೮ ॥

ಬೆಂದುವಿಭತತಿ ತುರಗ ಸಂತತಿ
ಬೆಂದುವಾಯುಧ ಕಣಜ ಬೊಕ್ಕಸ
ಬೆಂದುವರಮನೆ ಶಾಲೆಯಂಗಡಿ ಠಂಕಸಾಲೆಗಳು ॥
ಬೆಂದವಸುರನ ರಾಣಿವಾಸದ
ಮಂದಿರಂಗಳು ಹಲವು ದೇವರ
ಬಂದಿಶಾಲೆ ವಿಚಿತ್ರ ಕರಣಿಕ ಮಂತ್ರಿ ಕೇರಿಗಳು ॥ ೯ ॥

ಉರಿಗೆ ಗರಹೊಡೆದಂತೆ ದನುಜರು
ತಿರುಗಿಬೀಳುತ ಕೆಮ್ಮಿ ಸೀನುತ
ಪುರವೊ ನೋಡಲ್ಲಲ್ಲ ಮಾರಿಯು ಬೆಳೆದ ಕುಮ್ಮರಿಯು ॥
ಶರಧಿ ಮಧ್ಯದೊಳುಂಟಿ ಕುಮ್ಮರಿ
ಮರುಳೆ ಲಂಕಾಪುರಿಯು ಕಾಣಾ
ತರುಚರಂಗಳು ಸುಟ್ಟುದೆಂದುದು ಭುವನಜನ ನೋಡಿ ॥ ೧೦ ॥

ಕೆಂಡದಟ್ಟುಳಿಯಾಯ್ತು ಸುಡುತಿಹ
ದಂಡಿ ತಾನಿದು ಹೊಸತು ಹೋಮದ
ಕುಂಡ ಲಂಕಾನಗರಿ ದನುಜರ ತಲೆಗಳಾಹುತಿಯು ॥
ಕೊಂಡು ಕಪಿಗಳು ಬೇಳಲಂದಿನ
ಲುಂಡು ದಣಿದನು ವಹ್ನಿ ಶರಧಿಯು
ಕೆಂಡ ಬೊಬ್ಬುಳಿಯಂತೆ ನೆಗೆದುದು ಭೋರುಭೋರೆನುತ ॥ ೧೧ ॥

ಹಗೆಗಳಟ್ಟುಳಿ ಹೊರಗೆ ಮನೆಗಳ
ಹೊಗಲು ದಳ್ಳುರಿಗಾರುನಿಲುವರು
ಉಗುಳಬಾರದು ನುಂಗಬಾರದು ಸಂಕಟದ ಪರಿಯ ॥
ಹೊಗೆಯ ಹೊದರಿನ ನೆಗೆದ ದಳ್ಳುರಿ
ಹಗೆಯ ತುದಿಯುಪ್ಪರಿಗೆಗೈದಿತು
ಜಗದ ಕಂಟಕರೆಲ್ಲ ನಿಮಿಷದೊಳೊಂದುಗೂಡಿದರು ॥ ೧೨ ॥

ಹರಿಯೊ ಹರಿಯೋ ಹುಯ್ಯೊ ಕಪಿಗಳ
ಉರಿಯ ನಂದಿಸು ಕವಿಯು ಕೆಡಹೋ
ತಿರುಹು ಗುಂಡಿನಲಿಕ್ಕು ಕವಿಕವಿಯೆನುತ ದಾನವರು ॥
ಶರಧಿಯುದಕದಲುರಿಯ ನಂದಿಸಿ
ಪುರವ ಹೊರವಡಿಸಿದರು ರಾವಣ
ತಿರುಗಿ ಮಕ್ಕಳ ಮೊಗವ ನೋಡಿದರೆದ್ದರತಿ ಬಲರು ॥ ೧೩ ॥

ಬಲದ ತೋಳರ್ಚಿಸುವುದಾತಗೆ
ಬಲದ ಪೆಂಡೆಯು ಬಲದ ಕಂಕಣ
ಬಲದ ಕಾಲದು ಗಂಡು ತಾನೆಡಗಾಲು ಹೆಣ್ಣೆಂಬ ॥
ಉಳಿದ ಬಾಣವದೇಕೆ ಹಗೆಗಳ
ತಲೆಯ ಕೊಂಬೆನು ಮೂರು ಸರಳಲಿ
ಛಲವು ತನಗೆಂದಾ ನಿಕುಂಭನು ಭಾಷೆಯನು ಕೊಟ್ಟ ॥ ೧೪ ॥

ಮೀನುಮುಳ್ಳಲಿ ಸತ್ತ ತಮನವ
ಹೇನಿನಂತುಗುರಲಿ ಹಿರಣ್ಯಕ
ಹೀನ ಮಹಿಷಾಸುರನು ಸಾಯನೆ ಹೆಣ್ಣ ಕೈಯಲ್ಲಿ ॥
ದಾನವೇಂದ್ರರು ಕಂಡ ಕಲಿಗಳು
ಸೂನುಗಳ ಗಡ ನಿನ್ನಿನಸುರರಭಿ
ಮಾನಹೀನರುಯೆಂದು ಶಕ್ವರಿ ಘುರಕೆ ತಾನೆದ್ದ ॥ ೧೫ ॥

ಚಿತ್ತವಿಸು ಹಿರಿಯಪ್ಪ ರಾಘವ
ನೆತ್ತಹೋದನೊ ಹಂದೆಯೆನಿಸುವೆ
ಮೊತ್ತ ಸಹಿತವೆ ಕರಡಿಕಪಿಗಳ ಕೊಂದು ಬರುಗೈವೆ ॥
ಸತ್ತರೆಂಬಾ ಸುದ್ದಿಯನು ನಿನ
ಗಿತ್ತೊಡಲ್ಲದೆ ಮರಳಿ ಬಾರೆವು
ಮಿತ್ತು ದೇವತೆ ಹರಸುವಂತಿರಲಾವು ಮಾಡುವೆವು ॥ ೧೬ ॥

ದನುಜ ತಮ್ಮನ ಮಕ್ಕಳಧಟಿಗೆ
ಮನದ ದುಗುಡವ ನೂಕಿ ಹರುಷದಿ
ತನಯರನು ತೆಗೆದಪ್ಪಿ ರಣದಲಿ ವಿಜಯಿಯಾಗೆನುತ ॥
ಅನುವರಾಂತಕೆ ನೇಮವೀಯಲು
ಕನಕಮಯ ರಥ ತುರಗ ಪತ್ತಿಯ
ಮೊನೆಯ ಸುಭಟರ ಕೂಡಿ ಕಾಳಗಕೈದಿದರು ಸುತರು ॥ ೧೭ ॥

ಏಳು ಸಾವಿರ ಭದ್ರದಂತಿಗ
ಳೇಳು ಲಕ್ಷದ ಹರಿಗೆ ರಾವುತ
ರೇಳು ಲಕ್ಷವು ಕನಕರಥ ಕಾಲಾಳುಗಳಗಣಿತವು ॥
ಹೇಳಲರಿಯೆನು ಭಟರ ಭೇರಿಯು
ಜಾಳದಬ್ಬರ ಜಗವ ತುಂಬಿತು
ಆಳುಗಳ ಬಲ್ಲಹರು ಹೊಕ್ಕರು ಸಮರ ಮಂಡಲವ ॥ ೧೮ ॥

ಕಂಡು ಕಪಿಗಳು ಕೊಲ್ಲು ಕೊಲ್ಲೋ
ತೊಂಡ ದೈತ್ಯರ ಬಸುರ ಬಗಿ ಬಗಿ
ದಿಂಡುಗೆಡಹೋ ಕಲ್ಲ ಹೊತ್ತಿರಿ ಮರದಲಪ್ಪಳಿಸು ॥
ಗುಂಡ ಸುರಿವುತ ನೂಕು ನೂಕಿರಿ
ಯಂಡ ಮುರಿಮುರಿಯೆನುತ ಮರ್ಕಟ
ತಂಡ ಕವಿದುದು ಬೈದು ಮೂದಲಿಸುತ್ತ ದಾನವರ ॥ ೧೯ ॥

ಎಡದಲಾನೋ ಬಲದಲಾನೋ
ಹಿಡಿಯೊ ಮುಖ್ಯರನೊರಸೊ ಮಿಕ್ಕರ
ಕೆಡೆಯೊ ಕರಿಗಳನೊದೆಯೊ ಹಯಗಳ ಮುರಿಯೊ ತೇರುಗಳ ॥
ಅಡಸಿ ತಿವಿ ತಿವಿ ಬದಿಯ ಮುಂದಲೆ
ವಿಡಿದುಯೆಳೆಯೆಳೆ ಹಿಂದೆ ಮೆಟ್ಟೆದಿ
ರಡಿಯನೆಂದಾರಿತ್ತು ಮುತ್ತಿತು ವೀರ ಮರ್ಕಟರು ॥ ೨೦ ॥

ಎಲವೊ ಕವಿ ಕವಿ ಮುಂದಣಾತನ
ತಲೆಯ ಹರಿಯಿಸು ಹಿಂದೆ ಕರಡಿಯ
ಬಳಗ ಹೊಯ್‌ಹೊಯ್‌ಯೆಡದಲಾಂತರ ಹೊಯ್ದು ಕೆಡಕೆಡಹು ॥
ಉಳುಹದಿರಿ ಕೈಗಾಯ್ದು ಬಿಡದಿರಿ
ಯೆಲುವ ಗದೆಯಲಿ ಹಿಟ್ಟುಗುಟ್ಟೋ
ಹಳುರೆ ಹಳುರೇ ರಾವು ರಾವುರೆಯೆಂದು ಖಳರುಲಿಯೆ ॥ ೨೧ ॥

ಇಟ್ಟಿಯಿಂದಿರಿ ಶೂಲದಿಂದಿಡು
ಮೆಟ್ಟಿ ಮುಂದೈತಪ್ಪ ಕಪಿಗಳ
ಪಟ್ಟಿಸದಲಿಡು ಹಿಂದೆ ಕಾಣಾ ಪಾಪಿ ತೊಲತೊಲಗು ॥
ಬೆಟ್ಟಬರುತಿದೆ ಮುಂದೆ ಹೊಯ್‌ಹೊಯ್
ಮೆಟ್ಟು ಹಿಂದಟ್ಟೆಡದಲವುಕುವ
ಹೊಟ್ಟುಗಳ ಹೊಯ್ಯೆನುತ ರಣದೊಳಗಟ್ಟಿಯಾಡಿದರು ॥ ೨೨ ॥

ಮಣಿರಥವ ಮುರಿದಿಡುತ ರಣದಲಿ
ಕುಣಿವ ಕುದುರೆಯು ಸದೆದು ಕಂಗಳ
ಹಣುಗಿ ಕಾಲನು ಮೆಟ್ಟಿ ಸರ್‍ಪನೆ ಸೀಳಿ ಬಿಸುಡುತ್ತ ॥
ಒಣಮರದೊಳಪ್ಪಳಿಸಿ ದುನುಜರ
ಹಣೆಯು ಬರಹವ ತೊಡೆದು ರಣಶಾ
ಕಿಣಿಯುರರವಟ್ಟಿಗೆಯು ರಕ್ತದಿ ತಣಿದು ಹರಸುತಿರೆ ॥ ೨೩ ॥

ಕ್ಷುಭಿತವಾರಿಧಿಯಂತೆ ಹೆಚ್ಚಿತು
ರಭಸ ಕಡಿವಿರಿದಾಡಿ ಸತ್ತುದು
ಉಭಯ ಬಲದಲಿ ಭಟರು ಕುಣಿಕುಣಿದಟ್ಟಿ ಕೆಡವುತಿರೆ ॥
ನಭದಿ ನೋಡುವರಖಿಳ ಪಿತೃಸ
ನ್ನಿಭರ ಘೂರ್ಮಿತ ಘೋಷ ಶೂಲಿಯು
ಸಭೆಗೆ ಕೇಳಲು ಬಂದುದಯ್ಯಯ್ಯಮಮ ಸಂಭ್ರಮವೇ ॥ ೨೪ ॥

ಕೆಲರು ನೊಂದಿತು ಕೆಲರು ಹೊಂದಿತು
ಕೆಲರು ಬಿದ್ದರು ಕೆಲರು ಕೆಡೆದರು
ಕೆಲರು ಮುಗ್ಗಿತು ಕೆಲರು ತಗ್ಗಿತು ಕೆಲರು ಒರಗಿದರು ॥
ಕೆಲರು ಹಾಯಿತು ಕೆಲರು ಹೋಯಿತು
ಕೆಲವರೋಡಿತು ಕೆಲವರಡಗಿತು
ಕೆಲರು ಪಡೆದರು ವೀರ ಸಿರಿಯುಕಟಾಕ್ಷವೀಕ್ಷಣವ ॥ ೨೫ ॥

ತುರಗ ಹರಿದುವು ತೇರು ಮುರಿದುವು
ಕರಿಗಳೊರಗಿದುವಸುರ ವೀರರು
ಧರಣಿಗುರುಳಿತು ಹರಿಗೆ ಹರಿದುವು ಕವಚ ಸೀಳಿದುವು ॥
ಸುರಗಿ ಸವೆದುವು ಶೂಲ ಮುರಿದುವು
ಸರಳು ಸೋತಿತು ಕೊಂತ ಕೊಂಕಿತು
ಬಿರಿದು ಬೀತುದು ಹೊಡೆವರಿಲ್ಲಪೆ ವಾದ್ಯ ಮುಗಿಯಿತ್ತು ॥ ೨೬ ॥

ಎರೆಯನಿಲ್ಲದ ಕಾಂತೆ ಸೊಬಗನು
ಮೆರೆದ ಪರಿಯಲಿ ದೈತ್ಯ ವೀರರು
ಬರಿದೆ ಸತ್ತುದು ಸಾಮಿಗೋಸುಗ ರಣದೊಳೊಗ್ಗಾಗಿ ॥
ಕರೆಮನದ ರಕ್ಕಸರು ಹರಣವ
ತೊರೆದು ಮಹಿಯಲಿ ಹತ್ತು ಕೋಟಿಗ
ಳೊರಗಿದುವು ದೊರೆಯಲ್ಲಿಗೈದಿದನೊಬ್ಬ ದೂರಿಡಲು ॥ ೨೭ ॥

ಹೊದರುಗಣ್ಣಿನ ತೆಕ್ಕುತಿಹ ಕಿ
ಬ್ಬದಿಯ ಬಸುರಿಂಗೊಲೆವ ಕೇಶದ
ಯೆದೆಯ ಗುಡುಗುಡು ನಡುವಂಗದ ಬೆವರುವಾನನದ ॥
ಕುದಿವ ಚಿತ್ತದ ಧೃಡತೆಗುಂದಿದ
ಪದವ ಬತ್ತಿದ ಬಸುರ ಚಿಂತಾ
ಹೃದಯ ನೋಡುತ ಮರೆಯಹೊಕ್ಕನು ದೈತ್ಯ ದಲಪತಿಯ ॥ ೨೮ ॥

ಏಳು ದೇವಾರಾತಿಯಿಂದಿನ
ಕಾಳಗದ ಪರಿ ಹೊಸತು ನಿಮ್ಮಡಿ
ಯಾಳುತನಗಳು ಕಡೆಗೆ ಹಾಯದು ಬೇಗ ರಾವಣನ ॥
ಪಾಳೆಯಕೆ ಮರುಳುವುದುಯೆಲ್ಲಾ
ಗೂಳೆಯವನೊಡಗೊಂಡು ಲಂಕೆಯ
ಹಾಳುಮಾಡುವರಹುದು ಬಿಡರೀ ಕಪಿಗಳಲ್ಲದಿರೆ ॥ ೨೯ ॥

ಕೇಳಿ ಕೋಪಾಟೋಪದಲಿ ಖಳ
ಮೌಳಿ ದಟ್ಟಿಸಿ ಜರೆದನೆಲವೋ
ಸೀಳು ಬಾಯನು ಓಡುವೆಡೆಯನು ಕಂಡೆ ಯಾವಲ್ಲಿ ॥
ಖೂಳ ಫಡ ಸಾರೆನುತ ನೂಕಿದ
ನಾಳುಗಳ ಬಲ್ಲಹನು ಕದನದ
ಕಾಳಭೈರವ ಕುಂಭಕರ್ಣನ ಮಗನು ಖತಿಗೊಂಡು ॥ ೩೦ ॥

ಬೇಗದಲಿ ನಿಜ ತೇರನಟ್ಟಿದ
ಹೋಗಿ ಮರ್ಕಟಗಳಿರ ಸಾಯದೆ
ಹೋಗಿ ನಾರ್‌ಸಾರೆಲವೊ ನಿಮ್ಮನು ಮುಟ್ಟೆ ತಾನೆಂದ ॥
ಬೇಗ ಬರಹೇಳತ್ತೆಯಾ ಕಿವಿ
ಮೂಗನರಿದಾ ಮಾನವೇಂದ್ರನ
ನಾಗ ನೋಡುವೆನೆನುತ ಕಪಿಗಳ ಜರೆವುತ್ತೈತಂದ ॥ ೩೧ ॥

ಸಿಡಿಲ ಪರಿಯಲಿ ಭುಜವ ಹೊಯ್ದವ
ತೊಡಚಿ ಸುರಿದನು ಸರಳ ಸಾರವ
ಕಡಿದನೆಡದಲಿ ಬಲದಲಿರಿದನು ಮುಂದೆ ಸವರಿದನು ॥
ಒಡೆದುದಾ ಕಪಿ ಥಟ್ಟು ದೈತ್ಯನ
ಕಡುಹ ಕಂಡೋಡಿತ್ತು ವಾನರ
ಪಡೆ ದಿಗಂತಕ್ಕೋಡತೊಡಗಿತು ಬಿಟ್ಟ ಸೂಠಿಯಲಿ ॥ ೩೨ ॥

ಬೆರಳ ತುದಿಮೊಸೆಯಲಿ ರಾಘವ
ತಿರುವಿ ಭಕುತನ ಮುಖವ ನೋಡಲು
ಧುರಕೆ ಬಂದವ ಕುಂಭಕರ್ಣನ ಮಗನು ಹಿಂದಿಪ್ಪ ॥
ತರಳನೆನ್ನ ಕುಮಾರ ಶಕ್ವರಿ
ಸಿರಿಯು ನೀಗಿದ ಪಾಪಿಯೆಂದೆನೆ
ಕರೆದು ಕಾಣಿಸು ಕಾವೆನೆಂದನು ದಾನವಧ್ವಂಸಿ ॥ ೩೩ ॥

ದೇವ ನಿಮ್ಮನು ಕೂಡಿ ಸುಖಿಸುವ
ಸಾವನಲ್ಲದೆ ಸಿರಿಯು ಬಯಸೆನ
ದಾವ ಪಾಪಿಯೊ ನಾನು ಮಗನೀ ಶಕ್ವರಿಯುಪಡೆಯೆ ॥
ಕಾವ ಮನ ನಿಮಗುಚಿತ ಮುಕ್ತಿಯು
ನೀವುದೇ ಕರ್ತವ್ಯವೆನಲಾ
ದೇವನೆಡದಲಿ ನೋಡಲಿದ್ದನು ವೀರ ದಧಿಮುಖನು ॥ ೩೪ ॥

ಜಲಜಲೋಚನ ನೋಡುತಿದ್ದನು
ಬಲದಲಂಗದ ನಮರರಿಪುಗಳ
ತಲೆಯ ಬರಹವ ತೊಡೆವ ಪರಿಯಲಿ ಹರಿದುಬರುತಿರಲು ॥
ಖಳನು ಕಂಡನು ಸಾರುಸಾರೈ
ತೊಲಗು ಮರ್ಕಟ ಸಾರು ಸಾರೆನು
ತಲಘು ಸಾಹಸಿ ಸುರಿದ ಸರಳನು ಸೇನೆ ಮೆದೆಗೆಡೆಯು ॥ ೩೫ ॥

ಅರಗಿನರಮನೆಗುರಿಯುಬಿಟ್ಟಂ
ತರಚಿ ದಾನವ ವನಚರಂಗಳ
ಸರಳ ಮಳೆಯಲಿ ತೋದನದ್ದಿದನವುಮ ಮುಳುಗಿಸಿದ ॥
ಧರೆಗೆ ಮೆದೆಗೆಡೆದಿರ್ದ ಕಪಿಗಳು
ಉರುಳುತಿರ್ದುದು ವೀರ ದಧಿಮುಖ
ನುರವನೊಂದಂಬಿಂದ ಜಾಳಾಂದರವ ಮಾಡಿದನು ॥ ೩೬ ॥

ಪಡೆಯು ಮೋಹವ ಬಿಟ್ಟನೇಕೊ
ಒಡೆಯುನಕಟಾಯೆಂದು ಪಡೆ ಬಾ
ಯ್ಬಿಡಲು ದಧಿಮುಖನೊಂದು ಹೆಗ್ಗೊಂಬುಳ್ಳ ಹೆಮ್ಮರನ ॥
ಹಿಡಿದು ಕೆಡಹುತ ಹರಿದುಬಂದನು
ಹೊಡೆಯೆ ರಥ ನುಗ್ಗಾಯ್ತು ರಕ್ಕಸ
ಹಿಡಿದ ಚಾಪವ ಮುರಿದ ಕಪಿವರ ಮುರಿದು ಬೀಸಾಟ ॥ ೩೭ ॥

ಮರಳಿ ಹಿಡಿದರೆ ಚಾಪವಿಲ್ಲಾ
ಯ್ತುರರೆ ದಧಿಮುಖ ಮರನ ಹವಣಿಸೆ
ಶಿರವ ಗದೆಯಿಂದಪ್ಪಳಿಸಿದರೆ ಬಿದ್ದ ದಧಿಮುಖನು ॥
ನೊರೆಗಳುಕ್ಕಲು ಬಾಯಿ ಮೂಗಿನೊ
ಳರರೆ ನೆತ್ತಿಯ ಬೆಸುಗೆ ಬಿರಿದುದು
ಹೊರಳಿದನು ಹಮ್ಮೈಸಿ ದಧಿಮುಖ ರಕ್ತಮುಖನಾಗಿ ॥ ೩೮ ॥

ಆರಿದನು ಖಳ ವೀರ ರಕ್ಕಸ
ಮಾರಿ ಧೈರ್ಯದಲೆದ್ದು ಮೆಲ್ಲನೆ
ಸೋರುತಿಹ ಲೋಹಿತವನೊರಸುತ ಕಂಗಳೆರಡರಲಿ ॥
ಕಾರಿದನು ಕಿಡಿಗಳನು ನಿಲು ನಿಲು
ಚೋರ ಹೋಗದಿರೆನುತ ದಧಿಮುಖ
ಹಾರಿ ತಿವಿದರೆ ಮುಷ್ಟಿ ಬೆನ್ನಲಿ ಕಂಡುದಯ್ಯಯ್ಯ ॥ ೩೯ ॥

ಕರುಳು ಚೆಲ್ಲಿತು ಮಹಿಗೆ ಬೆನ್ನಲಿ
ವೊರಗಿ ಸೈರಿಸಿ ನೊಂದ ದೈತ್ಯನು
ಕೆರಳಿ ತಿವಿದರೆ ಹಾರಿ ಬಿದ್ದನು ಹಿಂದೆ ದಧಿಮುಖನು ॥
ಮರಳಿ ತಿವಿದರೆ ದೈತ್ಯನೆದೆ ಜ
ರ್ಜರಿತವಾಯಿತು ನೆತ್ತಿ ಝುಮ್ಮೆಡೆ
ತಿರುಗಿ ಬಿದ್ದನು ಕರೆದೊಡರಿಯ ನಿಕುಂಭನಸುಗಳೆದ ॥ ೪೦ ॥

ಆಯೆನುತ್ತಂಗದನು ಶಕ್ವರಿ
ನೋಯೆ ಹೊಡೆಯಲು ಹಲ್ಲು ಚೆಲ್ಲಿತು
ಬಾಯೊಳುಕ್ಕುವ ರುಧಿರಕಂಗದ ನೊಂದ ಬೆರಗಾಗಿ ॥
ಕಾಯ ಕಂಪಿಸುತೆದ್ದು ಫಡಫಡ
ಸಾಯೆನುತ್ತೆರಗಿದನು ಕಪಿ ಪೂ
ರಾಯದಿಂದವೆ ಖಳನ ನೆತ್ತಿಯನೊಡೆದ ಮರದಿಂದ ॥ ೪೧ ॥

ಹರಿಯ ಕರುಣ ಕಟಾಕ್ಷವೀಕ್ಷಣ
ಸಿರಿಗೆ ಭಾಜನನಾದನಂಗದ
ಹಿರಿದು ಮೋಹದಲರಸನಪ್ಪಿದ ವೀರ ದಧಿಮುಖನ ॥
ಸುರರು ಸುರಿದರು ಸುಮನಸಾರವ
ಹರುಷಗೊಂಡನು ರಾಘವೇಶ್ವರ
ಪರಮ ಮಂಗಳ ಮೂರ್ತಿ ಸಂತೈಸಿದನು ವಿಭಿಷಣನ ॥ ೪೨ ॥

## ೩೩ನೇ ಸಂಧಿ

ಪಲ್ಲ ॥ ವೀರಕಂಠಾಭರಣ ದೈತ್ಯ ಕು
ಮಾರ ಸಂಗರಮಲ್ಲ ಬಿರೆತನು
ಮಾರಿಮುಖ ಪರಬೊಮ್ಮನೆನಿಸಿದ ರಾಮಚಂದ್ರನನು ॥

ಪದ ॥ ಇತ್ತ ಶಕ್ವರಿ ಕುಂಭಕರ್ಣನು
ಹೆತ್ತ ತನಯ ನಿಕುಂಭನಳಿಯಲು
ತತ್ತ ಬವರದಲೇನು ಫಲವೆಂದೆನುತ ರಾವಣನು ॥
ಚಿತ್ತ ದುಗುಡದಲಿರಲು ಕಪಿಗಳು
ಸುತ್ತಮುತ್ತಲು ಪುರವ ಸುರಕುಲ
ಮೃತ್ಯು ಮಾರೀಮುಖನು ಬಂದಿಂತೆಂದ ದಶಮುಖಗೆ ॥ ೧ ॥

ಕೇಳು ರಾವಣ ತನ್ನ ಭಾಷೆಯ
ಕಾಳಗದಲರಿಭಟರ ಬಸುರನು
ಸೀಳಿ ಬಿಸುಡುವೆ ಕರಡಿ ಕಪಿಗಳ ಕೊಂದು ಬರುಗೈವೆ ॥
ತಾಳದಿರು ದುಗುಡವನು ತನ್ನನು
ಬೀಳುಗೊಡು ಕರಿತುರಗರಥವನು
ಮೋಳವಿಸುವೆನು ಕಾದಿ ಗೆಲುವೆನು ರಾಘವೇಶ್ವರನ ॥ ೨ ॥

ಎನಲು ಮಾರೀಮುಖನ ಮಾತಿಗೆ
ದನುಜರಾಯನು ಮೆಚ್ಚಿ ನೇಮಿಸೆ
ಕನಕರಥಕರಿತುರಗ ಸೇನಾಜಾಲನನು ಕೂಡಿ ॥
ದನುಜ ಬಲ್ಲಹಗೆರಗಿ ನಿಂತಿರೆ
ಕನಕ ನಿಸ್ಸಳ ಭೇರಿ ಮೊಳಗಲು
ವನಿತೆಯರು ಸಿಂಗಾರದಾರತಿಯೆತ್ತಲಸುರಂಗೆ ॥ ೩ ॥

ಹಾರುವರ ಹರಕೆಗಳನಾನುತ
ವೀರಪಾಠಕರೊಲವ ಸಲಿಸುತ
ನಾರಿಯರು ನಲವಿಂದ ಮುತ್ತಿನ ಸೇಸೆಗಳ ತಳಿಯೆ ॥
ಕಾರ ಮೇಘದ ಸಾರಿಯಂದದಿ
ತೋರ ಘಟೆಗಳ ತುರಗ ತತಿಯಲಿ
ಪೂರಿ ತಾ ಹೊರವಂಟ ಳಂಕೆಯ್ಯ ಬಡಗ ಬಾಗಿಲಲಿ ॥ ೪ ॥

ಅಟ್ಟಿದನು ರಘುರಾಯನಲ್ಲಿಗೆ
ಭಟ್ಟರನು ದನುಜಾದಿನಾಥನು
ದಿಟ್ಟರವದಿರು ಬಂದು ಹೊಕ್ಕರು ಹರಿಯು ಪಾಳೆಯುವ ॥
ಸೃಷ್ಟಿಪಾಲಕ ದೇವ ದನುಜಘರ
ರಟ್ಟ ಜಯು ಜಯುಯೆಂದು ಹೊಗಳುತೆ
ಮುಟ್ಟಿ ಬಿನ್ನೈಸಿದರು ಹರಿಯುವಧಾರು ಜೀಯೆನುತ ॥ ೫ ॥

ಮಾನವೇಶ್ವರ ನೀನು ನೋಡಲು
ದಾನವಾಗ್ರಣಿಯುವನು ನಿನ್ನಯು
ಸೇನೆ ಬಲುಹೇ ಕಾನ ಕೋಡಗವೇನು ಮಾಡುವುದು ॥
ಆನಲರಿದವನೊಡನೆ ಸೆಣಸಲು
ಹಾನಿ ತಪ್ಪದು ಮರದ ಕೀಲನು
ವಾನರನು ಕಳೆದಳಿದ ಪರಿಯುಹುದರಸ ಕಡೆಯುಲ್ಲಿ ॥ ೬ ॥

ಕಲ್ಲುಗುಂಡಿನಲಿಡಲು ದಾನವ
ಮಲ್ಲರಳುಕುವುದುಂಟೆ ವಾನರ
ರೆಲ್ಲ ಬಡಿಗೆಯು ಮುರಿದೊಡಂಜಲು ಪಶುಗಳೇ ಖಳರು ॥
ಬಿಲ್ಲ ಹಾಯಿಕಿ ಭಂಗವಡುವುದು
ಬಲ್ಲತನವೇ ತೆರಳು ಹಿಂದಕೆ
ಭಲ್ಲುಕರ ಪೌರುಷವ ನಂಬಿಯೆ ಕೆಟ್ಟೆಯುಕಟೆಂದ ॥ ೭ ॥

ದನುಜರಟ್ಟಿದ ಕನಸ ಕಂಡರೆ
ನೆನಸಿನಲಿ ನರರಂಜುತಿಪ್ಪರು
ದನುಜರೆಂಬಾ ಮಾತಿಗಿದಿರೇ ಲೋಕವೆಲ್ಲವನು ॥
ಮುನಿದು ನುಂಗ ಸಮರ್ಥರಿದಿರೇ
ಬಿನುಗು ವಿಭಿಷಣ ಹೆಕ್ಕಳಿಸಿದರೆ
ಜನಪ ನಂಬಲು ಬೇರು ಹುತ್ತಿಗೆ ನಂಬಿದಂತಹುದು ॥ ೮ ॥

ಹಾವ ನೋಡದೆ ಹುತ್ತ ಕೆಣಕಲು
ಸಾವುದಲ್ಲದೆ ಗೆಲುವುದುಂಟೇ
ಗಾವಿಲರ ನುಡಿ ಕೇಳಿ ತಾ ಮರುಳಹರೆ ಬಲ್ಲವರು ॥
ಈ ವನೌಕಸ ಕಾದಿ ಗೆಲಿದರೆ
ದೈವವಿಲ್ಲಾ ಬಳಿಕ ಖಳರಿಗೆ
ಬಾವಿಯುಲಿ ಹರಿ ಬಿದ್ದ ಪರಿಯುಲಿ ನಿಮಗೆ ಮಾಡುವರು ॥ ೯ ॥

ವೀರ ವಿಕ್ರಮಶೌರ್ಯದಾಗರ
ಭಾರಿಯಾಳಧಟುಗಳ ಬಂಟಂ
ಕ್ರೂರಕರ್ಮನು ಕೊಂದೊಡಲ್ಲದೆ ಮರಳ ತೊಡಚಿದರೆ ॥
ಧೀರರೆಂಬಗ್ಗಳಿಯರೊಳು ಪರಿ
ವಾರವಾತಗೆ ಕೋಟಿ ಹತ್ತೆನೆ
ಮಾರಿಮುಖನೆಂಬವನು ಬಂದವ ರಾವಣನ ಮಂತ್ರಿ ॥ ೧೦ ॥

ಇಂದುಧರಗಂಗಯಿಸ ತೀರದು
ಬಂದು ಕೌತುಕದಾಳು ನೆರೆದುದು
ಇಂದು ಗೆಲಿದರೆ ಮುಂದು ಜಗದಲಿ ಸೋಲೆ ನಿಮಗಿಲ್ಲ ॥
ಹಿಂದೆಮೆಟ್ಟದೆ ಕಾದಿ ರಣದಲಿ
ಕೊಂದು ಕಳೆವಂಗವಣೆಯುಳ್ಳೊಡೆ
ತಂದೆ ಹಿಡಿ ಹಿಡಿ ಬಿಲ್ಲ ಜಡೆಗಳ ಕಟ್ಟು ಖರೆಯುದಲಿ ॥ ೧೧ ॥

ಎನಲು ನಸುನಗುತರಸಸಿತ್ತನು
ದನುಜ ಭಟರಿಂಗಂಗಚಿತ್ತವ
ಮನವು ದಣಿವಂತಸುರರಾಸ್ಯವ ನೋಡಿ ಹರುಷದಲಿ ॥
ಅನುವರಾಂತದಿ ಕಾದಿ ಸಾವುದು
ಜನಪ ಧರ್ಮವು ಗೆಲಲಿ ಸೋಲಲಿ
ದನುಜ ಸುಭಟನ ಬೇಗ ಬರಹೇಳೆಂದು ಕಳುಹಿದನು ॥ ೧೨ ॥

ಬೀಸಿದರು ಕೈಗಳನು ಬಲವಾ
ರಾಶಿ ಮೇರೆಯ ಮೀರಿದಂತಿರೆ
ಆಸುರದ ಭಟರವುಕಿ ಹಿಡಿದರು ಚೂಣಿಗಾಳಗವ ॥
ಘಾಸಿಯಾದುದು ಧರಣಿ ಕುಸಿದುದು
ವಾಸುಕಿಯ ಕೊರಳೋಳಿ ನೆಗೆದುದು
ಕೇಸರದ ಕೆಂಧೂಳಿ ಕಪಿ ರಾಕ್ಷಸರ ಖುರಪುಟಕೆ ॥ ೧೩ ॥

ಬಿಸಿಲು ಬೀತುದು ಭಾನುಮಂಡಲ
ಮುಸುಕೆ ಅಂಬುಧಿ ಕದಡೆ ಭಗಣಗ
ಳಿಸೆಯೆ ತಮ್ಮೊಳು ಹೊಲಬನರಿಯದೆ ಕಾದಿತುಭಯಬಲ ॥
ಎಸಲು ಕಪಿಯೆಂದಸುರರಸುರರ
ಮುಸುಡ ತಿವಿದರು ಕಪಿಯ ಕಪಿಗಳು
ಹಸನಗೆಟ್ಟುದು ಘಾಸಿಯಾದುದು ಸೇನೆ ವಹಿಲದಲಿ ॥ ೧೪ ॥

ಹರಿಗೆ ಕಡಿತಲೆ ಕೊಂತ ಶೂಲದ
ಲೆರಗುತಿರ್ದರು ಖಳರು ಕಪಿಗಳು
ಮುರಿದು ಹೆಮ್ಮರ ಕಲ್ಲುಗುಂಡುಗಳಿಂದ ಕವಿದಿಡಲು ॥
ತರುಬಿ ಕಾದಲು ಚೂಣಿ ಮುರಿದುದು
ದೊರೆಗಳಿಗೆ ಮುಟ್ಟಿತ್ತು ಹುಯ್ಯಲು
ಹರಿಯು ಮನವರಿತೆದ್ದರಾಗಳು ಹನುಮ ಜಾಂಬವರು ॥ ೧೫ ॥

ಒಂದು ದೆಸೆಯಲಿ ಹರಿದ ಪವನಜ
ನೊಂದು ಕಡೆಯಲಿ ಕವಿದ ಜಾಂಬವ
ಹಿಂದು ಮುಂದಿಕ್ಕೆಲದ ಸೇನೆಯ ತಿವಿದು ಕೆಡಹುತ್ತ ॥
ಒಂದೆರಡು ಲಾಗಿನಲಿ ಮಾರುತಿ
ಕೊಂದ ಸುಭಟರ ಹಲವು ಪರಿಯಲಿ
ಮುಂದೆ ಕೈಯಲಿ ಹಿಂದೆ ಚರಣದಿ ಬಾಲ ದಂಡೆಯಲಿ ॥ ೧೬ ॥

ಮರನ ಮುರಿಮುರಿದಸುರ ಸೇನೆಯ
ಮರುತನಂದನನೊಂದು ಕೋಟಿಯ
ಕರಿಯು ಕರಿಯಿಂ ಸದೆದು ಕೊಂದನು ಮತ್ತೆ ಕೋಟಿಯನು ॥
ಎರಡು ಚರಣದಲೊದೆದು ಕೊಂದನು
ತುರಗ ಲಕ್ಷವ ಸುತ್ತಿ ಬಾಲದಿ
ಧರಣಿಗೊಗೆದೊಗೆದಸುರ ಪಂಕ್ತಿಯ ಕೊಂದ ಹನುಮಂತ ॥ ೧೭ ॥

ಇತ್ತ ಜಾಂಬವ ಸೀಳಿ ಬಿಸುಟನು
ಹತ್ತು ಸಾವಿರ ತುರಗವನು ಕರಿ
ಹತ್ತು ಸಾವಿರ ತೇರ ತಳಪಟಮಾಡಿ ರಣದೊಳಗೆ ॥
ಮತ್ತೆ ಕಾಲಾಳಯುತವನು ಮುರಿ
ದೊತ್ತಿ ಕೆಡಹಿದ ಕಂಡು ರಕ್ಕಸ
ನಿತ್ತಲಿತ್ತಲು ತಿರುಗು ಫಡ ಮುದುಗರಡಿ ತಿರುಗೆಂದ ॥ ೧೮ ॥

ಎಲೆಯಿದೇತಕೆ ಬಂದೆ ರಣದಲಿ
ಕೆಲಸವಾವುದು ನಿನಗೆಯಿತ್ತಲು
ಹೊಲಬುದಪ್ಪಿದೆ ಕಾನಿದಲ್ಲಾ ಹೋಗು ವನದತ್ತ ॥
ಎಲವೊ ಕಾವಲು ಕೈದುವಿಲ್ಲಾ
ಕೊಲಲು ನಿನ್ನನದಾವ ಹೆಸರುಂ
ಟೆಲವೊ ಸಾರಿದೆ ಹಣ್ಣುಗರಡಿಯೆ ಸಾಯದಿರು ಹೋಗು ॥ ೧೯ ॥

ಕೆಲಸ ನಿನ್ನನು ಕೊಲ್ಲುವೆನಗೆಲಿ
ಗಳಹ ಕೈದುಗಳಿಮಗೆ ನರಹರಿ
ಯೊಲವು ತೋಳೆಯು ಹಿಂಡು ಕವಿದರೆ ಕರಿಗೆ ಕಳವಳವೇ ॥
ತೊಲಗದಿದಿರಾಗೆಲವೊ ರಕ್ಕಸ
ಹಳಿಯ ಕರಡಿಯ ಕೈಯ ಪರಿಯನು
ಹಳಚಿ ನೋಡೆನುತಾರಿ ಭುಜವನು ಹೊಯ್ದು ಸಿಡಿಲಂತೆ ॥ ೨೦ ॥

ಸೇವೆಯಿಂದವೆ ಬಸುರ ಹೊರೆವುದು
ಜೀವಿತಂಗಳನುಂಡು ರಣದಲಿ
ಸಾವುದಧನುರ ಪಂಥ ನಿನಗೇನಿಲ್ಲಿ ಕರ್ತವ್ಯ ॥
ಆವ ತೊಡರಿಲ್ಲದೆ ನಿರರ್ಥಕ
ನಾವು ಬಪ್ಪುದು ಕಡೆಯ ಕಾಲಕೆ
ನಾವು ಕೊಲುವೊಡಕೀರ್ತಿ ಹೆಣನನು ಹೊಯ್ದು ಹೆಸರುಂಟೆ ॥ ೨೧ ॥

ಬಣಗು ರಕ್ಕಸ ಕೇಳು ನಮ್ಮನು
ಹಳಚಿ ಗೆಲಿದರೆ ಮತ್ತೆ ಸೊರಹೈ
ಹೆಣನನಿರಿಯದ ಬಂಟನಿರಿವನೆ ಜೀವವುಳ್ಳವರ ॥
ಅಣಕ ಸೇರದೆನುತ್ತ ಜಾಂಬವ
ಹಣುಗಿ ಹರಿಯಲು ದನುಜ ಬಲು ಕೂ
ರ್ಗಣೆಯ ತೊಟ್ಟೆಸೆ ಬಸುರ ಘಟ್ಟಿಗಿದಂಬು ಹಾರಿತಲಾ ॥ ೨೨ ॥

ಒಡಲು ನೊಂದಾ ಕೋಪದಿಂದವೆ
ಕಡುಗಿ ಕಟ್ಟಳವಿಯಲಿ ಹಾರಿದ
ಹೊಡೆದು ಕೆಡಹಿದ ಖಳನ ರಥದಿಂದವನಿಮಂಡಲಕೆ ॥
ಗುಡುಗುಡುಸಿ ಕೆಡೆದೊತ್ತಿ ಕಾಲ್ಗಳ
ತುಡುಕಿ ಸರ್ರನೆ ಸೀಳಿ ಬಿಸುಟನು
ಒಡನೆ ಮುನ್ನಿನವೋಲು ಕೂಡಲು ಕಂಡು ಬೆರಗಾದ ॥ ೨೩ ॥

ಎದ್ದು ದಾನವನೆಡದ ಪಾದದೊ
ಳೊದ್ದ ಜಾಂಬವನೊಡಲ ಮಾಂಸದ
ಲದ್ದಿ ಹೋದುದು ಚರಣವಮುಮಾ ಖಳನ ಬಲುಹೆನಿತೊ ॥
ಬಿದ್ದು ಹೋಗೆನುತಸುರಭಟ ಮಿಂ
ಡೆದ್ದು ಗದೆಯಲಿ ಶಿರವನೆರಗಲು
ನಿದ್ದೆ ಕವಿದಂತಾಯ್ತು ಜಾಂಬವ ಮೂರ್ಛೆಯಲಿ ಸಂದ ॥ ೨೪ ॥

ಆಯಿತೇ ಮದುಗರಡಿ ನಿನ್ನಸು
ಬೀಯಿತೇ ಘಡ ಮರ್ಕಟಂಗಳು
ಸಾಯಬೇಕೇ ಬನ್ನಿ ಬೇಗದಲೆನುತ ಮಾರಿಮುಖ ॥
ಗಾಯವಡೆದಾ ಹುಲಿಯು ತೆರದಲಿ
ಬಾಯಲಬ್ಬರಿಸುತ್ತ ಬರುತಿರೆ
ವಾಯುನಂದನ ಹರಿದುಬಂದನು ದನುಜ ನಗುತಿರ್ದ ॥ ೨೫ ॥

ಹೆಂಡಿರನು ಮಕ್ಕಳನು ಗೋವಿನ
ಹಿಂಡ ಪರರೊಯ್ವಾಗ ಸಾವನು
ಗಂಡ ವೀರನು ನಿನಗಿದಾವುದು ಹೇಳಿದಿನಿತರಲಿ ॥
ಹೆಂಡಿರಿಲ್ಲಾ ಮಕ್ಕಳಿಲ್ಲಾ
ಕೊಂಡ ಜೀವಿತವಿಲ್ಲ ಸಾಯಲು
ಭಂಡ ನಿನಗೇತಕ್ಕೆ ಕಾಳಗವೆಂದ ಮಾರಿಮುಖ ॥ ೨೬ ॥

ತೊಂಡ ಕೇಳ್ಳೆ ನಿನಗೆ ಸತಿಯರು
ಹೆಂಡಿರಾಗಿಯು ಮಕ್ಕಳಾಗಿಯು
ಹಿಂಡು ಗೋಧನವಿದ್ದು ನೀವೇ ಮತ್ತೆ ಬೇರಿಲ್ಲ ॥
ಕೊಂಡಿಹೆವು ಜೀವಿತವ ಕೆಲರಲಿ
ಉಂಡು ತೀರಿತು ಮತ್ತೆ ಆರಸುತ
ಕೊಂಡುಕೊಳ್ಳಲು ಬಂದೆನೆಲವೋ ನಿನ್ನ ಜೀವಿತವ ॥ ೨೭ ॥

ನೀನಲಾ ಕೊಲುವಾತ ದಿಟ ದಿಟ
ಹೇಳು ಹೇಳೇನೇನ ತಪ್ಪದೆ
ದಾನವೇಂದ್ರನ ತನುಜ ಕಟ್ಟಲು ಹಲ್ಲುಗಿರಿವುತ್ತ ॥
ನೀನಲಾ ಪುರದೊಳಗೆ ಮೆರೆದವ
ಮಾನವುಳ್ಳವನಹುದು ತಪ್ಪದು
ಕಾನ ಕೋಡಗ ಸೊಕ್ಕಿ ಸಾಯದಿರೆಲವೊ ಮರಳೆಂದ ॥ ೨೮ ॥

ಗುಡುಗುಡಿಸಿ ಹರಿತಂದು ತೇರನು
ತುಡುಕಿ ಸರ್ರನೆ ತಿರುಹಿಯಂಬರ
ಕಿಡಲು ಹಾರುತ ಯೋಜನಾಂತರದಿಂದ ದಾನವನು ॥
ಮಿಡಿದು ಪುಟನೆಗೆದಾರಿ ಗದೆಯಲಿ
ಹೊಡೆದನಾ ಹನುಮಂತನಂಗವ
ಕೆಡಿಯು ಗಡಣಗಳುದುರುತ್ತಿರ್ದುವದೇನ ಬಣ್ಣಿಸುವೆ ॥ ೨೯ ॥

ತೇರು ತಳಪಟವಾಗಿ ಬಿದ್ದುದು
ಮಾರುತಿಯು ಹೆಣಗಿದನು ಮತ್ತಾ
ಮಾರಿಮುಖನೆಂಬವನು ಕಾದಿದ ಮಲ್ಲಯುದ್ಧದಲಿ ॥
ಸಾರುಸಾರೆನುತಟ್ಟಿ ತಿವಿವು
ತ್ತಾರುತಾರುತ ಹಿಡಿದು ಹೋರಲು
ಭಾರಿಯಾಳಿನ ಕದನ ಕೌತುಕವಾಯ್ತು ಕಾಂಬರಿಗೆ ॥ ೩೦ ॥

ಬಿರುದರಿಬ್ಬರ ಖುರಪುಟಂಗಳ
ಭರಕೆ ಹುಡಿಹುಡಿಯಾಯ್ತು ಸೇನೆಗ
ಳೆರಡು ತೆಗೆದುದು ಬಿಲ್ಲು ಸಾವಿರದಳತೆಯಲಿ ನಿಂದು ॥
ನೆರೆದು ನೋಡಲು ಮೇಲೆ ದೇವರು
ಹಿರಿಯ ಪುಷ್ಪಕವೇರಿ ರಾವಣ
ಭರದಿ ನೋಡುತ್ತಿರ್ದನಿಬ್ಬರ ಸಮರ ಸಂಭ್ರಮವ ॥ ೩೧ ॥

ಅದುವೆ ಲಾಗದ ವಹಿಲ ಮತ್ತೀ
ನದು ಚಡಾಳಿಕೆಯದುವೆ ಪೌರುಷ
ಅದುವೆ ವೇಗವು ಅದುವೆ ಪಂಥವು ಪೂತು ಮಝುಯೆನುತ ॥
ಸದಮಳದ ಬಲು ವೀರರಿಬ್ಬರ
ಕದನ ಕಂಪಿಸಿತಜನಜಾಂಡವ
ಮದನಮರ್ದನ ನೋಡಿ ಮೆಚ್ಚಿದನಿವರ ಕಾಳಗವ ॥ ೩೨ ॥

ಬಿಗಿಯೆ ಬಿಡಿಸುವ ಬಿಡೆಸೆ ಬಿಗಿವನು
ತೆಗೆಯಲೋಡುವ ನೋಡಲಟ್ಟುವ
ಹೊಗಲು ಹೊಗುವನುಯೆಳೆಯಲೆಳೆವನು ಹೆಣಗೆ ಹೆಣಗುವನು ॥
ಅಗಿದಗಿದು ಸುಬ್ಬಿಕ್ಕಿ ಹಣುಗುತ
ನಗಚರೇಶ್ವರ ಕಾದುತಿರೆ ಮಾ
ಜಗವುಘೇಯೆನೆ ಹೋರುತಿರ್ದರು ಮುಷ್ಟಿ ಯುದ್ಧದಲಿ ॥ ೩೩ ॥

ದಡಿಗ ಮುಷ್ಟಿಯ ತಿರುವಿ ತಿವಿದರೆ
ಸಡಲಿ ನವ ಸಂದುಗಳು ಮಾರುತಿ
ಕೆಡೆದ ನಿಮಿಷಕೆ ಮತ್ತೆ ಧೈರ್ಯದಲೆದ್ದು ಕೋಪದಲಿ ॥
ಕಡುಗಿ ತಿವಿದರೆ ಮುಷ್ಟಿ ಕಂಡುದು
ದಡಿಗ ದೈತ್ಯನ ಬೆನ್ನಲಮಮಾ
ಕೆಡೆದ ನಾ ಖಳ ಕರೆದೊಡರಿಯನು ಮತ್ತೆ ಕಂದೆರೆದ ॥ ೩೪ ॥

ಮತ್ತೆ ಧೈರ್ಯದಲೆದ್ದು ರಕ್ಕಸ
ಸುತ್ತು ಸೂಸುವ ಕರುಳ ಹಿಡಿದೊಳ
ಗೊತ್ತಿ ಭಲರೇ ಕಪಿಯೆ ಪೂತುರೆ ಜಟ್ಟಿ ಬಾಯೆನುತ ॥
ಹತ್ತೆ ಕೆಡೆದಿಹ ಗದೆಯುಲಣುವನ
ನೆತ್ತಿಯನು ಬಲುಹಿಂದ ಹೊಡೆದೊಡೆ
ಹತ್ತು ತಲೆಯುವ ಹೊಡೆದ ಗಾಯುವ ನೆನೆದು ಜೊಂಪಿಸಿದ ॥ ೩೫ ॥

ದನುಜ ವೀರನು ಭಲರೆ ಮೆಚ್ಚಿದೆ
ನೆನಲು ಬಾಲವ ಬೆಳಸಿ ತಂದನು
ಮನದ ವೇಗದಿ ಬಾಗಿಲುಕ್ಕಿನ ಲಾಳವಿಂಡಿಗೆಯ ॥
ಹನುಮ ಸರ್ರನೆ ತಿರುಗಿ ಹೊಡೆದರೆ
ದನುಜ ಮುಂಗೈಯೊಡ್ಡಿ ತಡೆದನು
ಹನುಮ ವೀರನೊ ದನುಜ ವೀರನೊಯೆಂದುದುಭಯಬಲ ॥ ೩೬ ॥

ಉಕ್ಕಿನಲಿ ಶತಧನುವಿನಳತೆಗೆ
ರಕ್ಕಸನು ಮಾಡಿಸಿಹನಸುಕೆ ವ
ನಕ್ಕೆ ರಕ್ಷಣೆಗೆಂದು ತೊಡಿಸಿದಲಾಳವಿಂಡಿಗೆಯ ॥
ಲೆಕ್ಕವಿಲ್ಲದ ಭಟರು ಬಲುಹಿಂ
ದಿಕ್ಕಿ ಸೆಳೆವುತ್ತಿರಲು ಮಾರುತಿ
ಚಕ್ಕನೊಯ್ಯನೆ ತಿರುಗಿ ಹೊಡೆದಾಡಿದನು ದಾನವರ ॥ ೩೭ ॥

ಅದನು ಮುಂಗೈಯೊಡ್ಡಿ ತಡೆದಾ
ತ್ರಿದಶರಿಪುವುರಿದೆದ್ದು ತನ್ನಯ
ಗದೆಯುಲಪ್ಪಳಿಸಿದನು ಮರುತನ ಮಗನ ಮಸ್ತಕವ ॥
ಅದುರಿ ನೆತ್ತಿಯ ಬೆಸುಗೆ ಬಿಟ್ಟುದು
ಹೃದಯ ಕಂಪಿಸಿ ಹನುಮ ನೊಂದನು
ಮದನಮರ್ದನ ನೋಡಿ ಮೆಚ್ಚಿದನಿವರ ಕಾಳಗವ ॥ ೩೮ ॥

ಎರಗಿದನು ಗದೆಯಿಂದ ದಾನವ
ನೊರಗಿದನು ಹನುವಂತನಾತನ
ಶಿರವನುಕ್ಕಿನ ಲಾಳವಿಂಡಿಗೆಯಿಂದ ಘಾತಿಯಲಿ ॥
ಎರಗುವನು ಖಳನೊರಗುವನು ಖಳ
ಯೆರಗುವನು ಕಪಿಯೊರಗುವನುಯೇ
ನೊರೆವೆನಿಬ್ಬರ ಬಲುಹ ಶಿವ ಶಿವ ಕಾದಿದರು ಕಡುಗಿ ॥ ೩೯ ॥

ಪೂತುರೇ ಹನುಮಂತ ಚಾಗುರೆ
ಪೂತು ರಕ್ಕಸ ವೀರ ಚಾಗುರೆ
ಪೂತು ಮರುತಜ ಪೂತು ರಕ್ಕಸ ಭಲರೆ ಭಾಪೆನುತ ॥
ಸೀತೆಯರಸನು ಮೆಚ್ಚುತಿರ್ದನು
ಭೀತಿಗೊಳುತಿರಲುಭಯ ಮೋಹರ
ಕಾತರಿಸದೆರಗಿದನು ಮಾರುತಿ ಮಾರಿಮುಖನೊಡನೆ ॥ ೪೦ ॥

ಚಿತ್ತಗುಂದರು ಸುಭಟರಿಬ್ಬರು
ಮತ್ತೆ ಮಾರುತಿ ಕೆರಳಿ ಹೊಡೆದರೆ
ನೆತ್ತಿ ಬಿರಿದುದು ನೇತ್ರದಲಿ ಸೋರಿದುವು ರಕ್ತಗಳು ॥
ಇತ್ತ ಚೇತರಿಸುತಲಿ ಪುನರಪಿ
ಮಿತ್ತು ಕೆರಳಿದವೋಲು ಹನುಮನ
ನೆತ್ತಿ ಬಿರಿಯಲು ಹೊಡೆಯೆ ಮಾರುತಿ ಬಿದ್ದ ಮೂರ್ಛೆಯಲಿ ॥ ೪೧ ॥

ಒರಲಿದುದು ಕಪಿ ಸೇನೆ ರಾಘವ
ಮರುಗುತಿರ್ದನು ಹತ್ತು ತಲೆಯವ
ನೆರಗಿ ನೋಡುತ ಕೊಲ್ಲುಕೊಲ್ಲೆನುತಿರಲು ಖಾತಿಯಲಿ ॥
ಅರಗುಲಿಗ ಪಡಿ ರಥವನೇರಿದ
ಹರೆಯ ಮೊಳಗಿಸುತಟ್ಟಿ ತೇರನು
ಉರುವ ಸುಭಟರ ಚಾರಿವರಿವುತ ಮುಂದೆ ಬರುತಿರ್ದ ॥ ೪೨ ॥

ಚಲನಸಂಭವ ಬಿದ್ದನುಳಿದವ
ರಳವೆ ಶಿವ ಶಿವಯೆನುತ ಕಪಿಭಟ
ರಳುಕುತಿರ್ದುದು ದೆಸೆಗೆ ಹಸರಿಸಿತಬಲ ಮರ್ಕಟರು ॥
ಹಲವು ಮರಮುಟ್ಟುಗಳ ಗುಂಡಿನ
ಮಳೆಯು ಸುರಿಯಲು ಹಿಟ್ಟುಗುಟ್ಟಿತು
ಖಳ ಶಿರೋಮಣಿ ಬಂದ ಹರಿಯಿದ್ದೆಡೆಗೆ ಸೂಠಿಯಲಿ ॥ ೪೩ ॥

ಭಾಳದಲಿವೋಲಾಡುತಿಹ ನೀ
ಲಾಳಿಯಂದದಿ ಕಿರಿಯ ಜಡೆಗಳು
ಮೌಳಿಯಲಿ ಮಣಿ ಮುಕುಟ ಮೆರೆಯಲು ಮಕರಕುಂಡಲವು ॥
ಬಾಲಚಂದ್ರ ಮರೀಚಿಯಂತೆ ವಿ
ಶಾಲ ದಂತದ ಥಾಳ ಮೆರೆವ ಕ
ಪಾಲ ಕಾಂತಿಯಲೆಸೆವ ದೇವನ ಕಂಡನಾ ಖಳನು ॥ ೪೪ ॥

ಲೋಲ ಪಂಕಜದಳವಿಲೋಚನ
ನೀಲ ಮೇಘಚ್ಛವಿಯ ಮುತ್ತಿನ
ಮಾಲೆ ಕೊರಳಲಿ ಮೆರೆವ ನಳಿದೋಳುಗಳು ಕಮನೀಯ ॥
ಬಾಲ ರವಿಕಿರಣವನು ಹಳಿವ ದು
ಕೂಲದುಡಿಗೆಯ ಚೆಲುವ ದೇವನ
ಕಾಳ ರಕ್ಕಸನಂದು ಕಣ್ಣುಮನ ದಣಿಯೆ ನೋಡಿದನು ॥ ೪೫ ॥

ಕಾಡ ತರುವಿಗೆ ಪರಮಗಂಧವ
ನೂಡದೇ ಮಲಯಜವು ಹರಿಯನು
ನೋಡಿದಾಗಳೆ ಚಿತ್ತ ನಿರ್ಮಲವಾಯ್ತು ದಾನವಗೆ ॥
ಗಾಢ ಹರಷದಲುಬ್ಬಿದನು ಮೈ
ಗೂಡಿ ಪುಳಕಿತನಾಗಿ ನುಡಿದನು
ಮೂಢ ಪಂಡಿತನಾಗನೇ ಹರಿಮಹಿಮೆಗೇನರಿದು ॥ ೪೬ ॥

ಇವನಲಾ ಹರಿಹರ ವಿರಿಂಚಿ
ಪ್ರವರಭೇದದಲೆಸೆವ ದೇವನು
ಇವನಲಾ ವಟಪತ್ರಶಯನದಲೆಸೆವ ಪರಬೊಮ್ಮ ॥
ಅವನಿ ಭಾರಕೆ ದೂರೆ ಸವರಲು
ರವಿಕುಲೇಶ್ವರನಾಗಿ ಬಂದನು
ಇವನನರಿಯ ಭ್ರಷ್ಟ ರಾವಣ ಕೆಟ್ಟನಕಟೆಂದ ॥ ೪೭ ॥

ಈತನನು ಗೆಲಲೆಮ್ಮ ಪೌರುಷ
ವೇತರದು ಸಲೆ ಮೂಢರಾವಿಂ
ದೀತ ಬಂದನು ನಮ್ಮ ತಾನೇ ಕೂಡಿಕೊಳಲೆಂದು ॥
ಸೀತೆಯರಸನ ನಿಲುವ ನೋಡಿ ವಿ
ಧೂತ ಪಾತಕಿಯಾದನಸುರನು
ಸಾತಿಶಯದಲಿ ಹರಿಯ ಮೂರ್ತಿಯ ನೋಡಿ ಮನದಣಿಯೆ ॥ ೪೮ ॥

ಕರಣ ಕದಡಿತು ಕಂಗಳೊರೆತವು
ಕೊರಳ ಸೆರೆಗಳು ಬಿಗಿಯೆ ನೋಡಿದ
ಹರಿಯ ಮಂಗಳಮೂರ್ತಿಯನು ನಿಜ ಭಕ್ತಿಭಾವದಲಿ ॥
ಎರಗಿದನು ಕೆಂಗೋಲ ತೂಗುತ
ಹರಿಯ ಮೂದಲಿಸಿದನು ಸುತಿಗಳ
ನೆರವಿ ಮೆಚ್ಚಲು ಯೋಗಿಗಳು ತಲೆದೂಗಿ ನಗುತಿರಲು ॥ ೪೯ ॥

ದೇವ ಗಡ ನೀ ಲೋಕವೆಲ್ಲವ
ಕಾವೆ ಗಡ ಕೊಲಬಲ್ಲೆ ಗಡ ನಿನ
ಗೀ ವಿಡಾಯುವದೇಕೆ ಕಪಟದ ಮಾನುಷಾಂಗವಿದು ॥
ನಾವು ನಿನಗರಿಗಳೆ ಸಿಧಾನಿಸ
ಲಾವು ಶಿಷ್ಟರು ಮೆಚ್ಚುವರು ನಿನ
ಗಾವ ಯೋಗಿಗಳೆಂದು ಖಳ ಕಳಕಳಿಸಿ ನಗುತಿರ್ದ ॥ ೫೦ ॥

ತಾಯಿಮಕ್ಕಳ ಮುಳಿದು ಕೊಲುವೊಡೆ
ಕಾಯಲಾಪವರಾರು ನೀನೀ
ಸಾಯುಸಂಗೊಳಲೇಕೆ ನಿಜರೂಪಿಂದ ಕಾದಿದರೆ ॥
ಸಾಯರೇ ಖಳರಕಟ ಮಾಯೆಗೆ
ಮಾಯಿಗಳು ಮನಗುಂದುವರೆ ನಿ
ನ್ನಾಯತವ ನಾಬಲ್ಲೆ ಹಿಡಿಹಿಡಿ ಬೇಗ ಶಾರ್ಙವನು ॥ ೫೧ ॥

ನೀನು ದೇವರ ದೇವನೆಂಬುದ
ನಾನು ಬಲ್ಲೆನು ನಮ್ಮ ರಣದಲಿ
ನೀನು ಗೆಲಿದರೆ ದೇವತನ ನಿನಗಹುದು ಜಗವರಿಯೆ ॥
ದಾನವನು ನಾನಾದೆ ಕಾದಲು
ಮಾನವನು ನೀನಾದೆ ಕೊಲುವರೆ
ಹಾನಿ ಯಾರಿಗೆ ಬೇಗ ತೊಡು ತೊಡು ದಿವ್ಯ ಮಾರ್ಗಣವ ॥ ೫೨ ॥

ಕಟಕಿಯೋ ಖಳನೆಂಬ ಮಾತಿದು
ದಿಟವೊ ಮೇಣದನರಿಯಲಾಗದು
ಅಟಮಟಿಗ ಖಳರಿವರ ನಂಬಲು ಬಾರದೆಂದೆಣಿಸಿ ॥
ಕುಟಿಲ ಶಕ್ರನು ದಿತಿಗೆ ಭಕ್ತಿಯ
ನಟಿಸಿ ಗರ್ಭವ ಕೆಡಿಸಿದಂತೆನು
ತಟವಿವಾಸನು ದೈತ್ಯ ಬೆದರಲು ಬಿಲ್ಲನೊದರಿಸಿದ ॥ ೫೩ ॥

ಸೆಳೆದ ವಜ್ರಾವರ್ತ ಚಾಪವ
ಹಿಳುಕ ಹೂಡಿದ ರಾಘವೇಶ್ವರ
ಖಳನು ಕಳವಳಗೊಳಲು ಕವಿದುವು ಬಾಣವಹಿಲದಲಿ ॥
ಚಳಕದಲಿ ಕಡಿಕಡಿದು ರಕ್ಕಸ
ತಲೆಯ ತೂಗಿಸುತಿರ್ದನರಸನ
ಹಲವು ಮಾತೇನವನು ಬೆದರಿಸುತಿರ್ದ ನರಹರಿಯ ॥ ೫೪ ॥

ಎಚ್ಚ ಬಾಣಾವಳಿಯಲಸುರನ
ಮುಚ್ಚಿದನು ಮುಸುಕಿದನು ಹರಿಯನು
ಕಿಚ್ಚು ಮಸಗಿತು ಬಾಣಬಾಣವ ಹಳಚಿ ಕಿಡಿಗೆದರೆ ॥
ಅಚ್ಚುತನ ಬಸುರೊಡೆದು ಸಾಯಕ
ವುಚ್ಚಿತೆಂಬುದೆನಲ್ಕೆ ಕೋಪವು
ಹೆಚ್ಚಿ ತೊಟ್ಟನು ಖಂಡಿತಾಸ್ತ್ರವನಸುರಮರ್ದನನು ॥ ೫೫ ॥

ಕಡಿದನಸುರ ಧ್ವಜಪತಾಕವ
ಕೆಡಹಿದನು ಸಾರಥಿಯ ತೇಜಿಯ
ತೊಡಚಿ ಹಳಚಲು ಖಳನು ಕವಿಕವಿದೆಸುವ ಚಾಪವನು ॥
ಕಡಿಯೆ ಮುಕ್ಕಡಿಯಾಗೆ ಖಡ್ಗವ
ಹಿಡಿದು ಹಲಗೆಯಗೊಂಡ ಕೋಪದ
ಲೊಡನೆ ಹರಿತರೆ ಬೋಳೆಯಲಿ ಕಡಿಗಳೆದ ಖಡ್ಗವನು ॥ ೫೬ ॥

ಮರಳಿ ಕೊಂತವ ಹಿಡಿದು ರಕ್ಕಸ
ನಿರದೆ ಕೆಡೆಕೆಡೆಯೆನುತ ಹರಿತರೆ
ಅರಸ ದಿವ್ಯಾಸ್ತ್ರದಲಿ ಕಡಿದನು ರಕ್ಕಸನ ತಲೆಯ ॥
ಧರಣಿಗುರುಳದ ಮುನ್ನ ಹಿಡಿದದ
ಕೊರಳಲಿಟ್ಟೊಡೆ ದನುಜ ನಿಮಿಷಕೆ
ಕೊರಳು ಕೂಡಿತು ಮುಂದೆ ಮೂದಲಿಸುತ್ತ ಹರಿಕಂದ ॥ ೫೭ ॥

ಅರಸ ಸೈವೆರಗಾಗಿ ಕಡಿದನು
ಮರಳಿ ತಲೆಯನಮೋಘ ಬಾಣದಿ
ಮರಳಿ ಕೂಡಿತು ಮತ್ತೆ ಕಡಿಯಲು ಬಂದು ತಲೆಕೂಡೆ ॥
ಮರಳಿ ಕಡಿಯಲು ಮತ್ತೆ ಕೂಡಲು
ಭರದಿ ಕಡಿಯಲು ಕೂಡುತಿರ್ದುದು
ಹರಿದು ಬಂದಾ ಹರಿಗೆ ಹೇಳಿದನಾ ವಿಭೀಷಣನು ॥ ೫೮ ॥

ಅವಧರಿಸು ತಲೆ ನೂರು ಪರಿಯಿಂ
ದಿವನ ಮುಂಡಕೆ ಬಂದು ಕೂಡುಗು
ಶಿವನ ವರದಲಿ ಬಳಿಕ ಹರಿಯದು ಕೊರಳು ಕಡಿವುದಕೆ ॥
ಅವಯವವು ಶತಖಂಡವಾದರೆ
ತವಕದಿಂ ಕೂಡುವುದು ಪುನರಪಿ
ವಿವರದಲಿ ಗೆಲಬಲ್ಲೊಡಳಿವನು ಪಾವಕಾಸ್ತ್ರದಲಿ ॥ ೫೯ ॥

ಕೇಳು ರಘುಪತಿ ನಿಮಗೆ ಹೇಳುವ
ಕಾಳುಮೂಳನು ನಮ್ಮ ಮರ್ಮವ
ಕೇಳಿಕೊಂಡದರಿಂದ ನಿನಗಿನ್ನಾವ ಹಿರಿಯತನ ॥
ಕಾಲಕರ್ಮದ ಸಾಲ ಮೂಲದ
ಕೀಲ ಬಲ್ಲವನಿಂದು ನೀನೀ
ಖೂಳನೆಂದುದಕೆಮ್ಮ ಕೊಲ್ಲುವುದುಚಿತವಲ್ಲೆಂದ ॥ ೬೦ ॥

ಸಾರೆ ನದಿಯಿರೆ ಬಿಟ್ಟು ಬಾವಿಯ
ನೀರಿಗೆರಗಿದೆ ಮಣಿಯನೊಲ್ಲದೆ
ಹಾರಯಿಸಿ ನೀನೋಡಿ ಗಾಜಿಗೆ ಕೈಯ್ಯನಿಕ್ಕಿದೆಲ ॥
ಭೂರಿ ವಿಷಯುವ ಬಯಸಿ ಮುಕ್ತಿಗೆ
ಸೇರದವನಿಂದಾದೆ ಲಂಕೆಯ
ಮೂರು ಕೂಟದ ಕಲ್ಲನೆಡೆಯೊಳು ಇರಿದುಕೊಳ್ಳೆಂದ ॥ ೬೧ ॥

ಅರಸ ಕೇಳಿದ ನಗುತ ಕೇಡನು
ನೆರೆವನೀತನ ನುಡಿಯ ಬಣ್ಣಕೆ
ಮರುಳುಗೊಂಡರೆ ರಾಜಕಾರ್ಯವು ತಪ್ಪುವುದು ನಮಗೆ ॥
ಹೊರೆಗೆ ರಾವಣ ಬಂದನಾದರೆ
ಹುರುಳುಗೆಡುವುದು ಬೇಗ ತೊಡು ತೊಡು
ಖರೆಯದಲಿ ಬಡಬಾನಲಾಸ್ತ್ರವನೆಂದ ವಿಭಿಷಣನು ॥ ೬೨ ॥

ಎನಲು ಹರಿ ಬಡಬಾನಲವ ತೊಡೆ
ದನುಜ ಕೈದುವ ಬಿಸುಟು ನಿಂದನು
ತನಗೆ ಬಂದುದು ಮರಣವೆಂದೆನುತಾಗ ಕೈಮುಗಿದು ॥
ಮನದೊಳಗೆ ಭಾವಿಸುತಲಿರ್ದನು
ಸನಕ ಕಪಿಲಾದಿಗಳು ಕಾಣದ
ಚಿನುಮಯನ ನಿಜರೂಪನಮಳಾನಂದ ಬುದ್ಧಿಯಲಿ ॥ ೬೩ ॥

ಉರಿ ಚಡಾಳಿಸಿ ಕೆಂಡಗೆದರುತ
ಬರಲು ದೆಸೆಗಳು ಕರಿಕುಪಡೆದುದು
ವೊರೆದು ಭುಗಿ ಭುಗಿ ಭೋರುಭೋರೆನುತಸುರ ಮಂತ್ರಿಯನು ॥
ಉರುಹುತಿರ್ದುದು ಬಾಣ ಶಿವ ಶಿವ
ಹರಿನಮೋಜಯ ಜಯತು ಅಘಸಂ
ಹರಿ ನಮೋ ಜಯಯೆನುತ ಬೊಮ್ಮನ ಬೆರಸಿದನು ದೈತ್ಯ ॥ ೬೪ ॥

ಅರಿಯೆ ಭಕ್ತಿಯ ಕಂಡು ರಾಘವ
ಶಿರವ ತೂಗುತ್ತಿರಲು ಸುರಿದರು
ಸುರರು ಹೂವಿನ ಮಳೆಯ ದೇವಿಯರಾಡೆ ನಲವಿಂದ ॥
ಹರನು ಹಾರೈಸುತ್ತಲಿರ್ದನು
ಹರುಷದಲಿ ನಾರದನು ಕುಣಿದನು
ನೆರೆದ ಮರ್ಕಟ ಸೇನೆಯಾರಿತು ಸುಖದ ಸುಗ್ಗಿಯಲಿ ॥ ೬೫ ॥

---

## ೩೪ನೇ ಸಂಧಿ

ಪಲ್ಲ ॥ ಪುಣ್ಯವಿಲ್ಲದ ಪುರುಷ ಮೆದ್ದೊಡೆ
ಬೆಣ್ಣೆ ಹಲ್ಲನು ಕಳೆದ ಪರಿಯಲಿ
ಹಣ್ಣು ಮಾಡಿದ ನೀಲನಿಂದ್ರಾರಿಯನು ರಣದೊಳಗೆ ॥

ಪದ ॥ ಕಳನೊಳಗೆ ಕಾಲಸ್ವರೂಪನು
ಗೆಲಿದನೈ ಬಲು ಮಾರಿಮುಖನನು
ಖಳನು ಕಾದುವ ಪರಿಯ ನೋಡುವೆವಿನ್ನು ನೂಕೆನುತಾ ॥
ಕುಲುಲುಗುಟ್ಟುತ ಕವಿದು ಮುತ್ತಿತು
ಹೊಳಲ ಮನೆಗಳ ಸುಡುತ ನೀಲನ
ದಳ ಮಹಾರ್ಣವವೊಂದು ಕಡೆಯಲಿ ಕರಡಿ ವೋಹಿದುವು ॥ ೧ ॥

ಹೊಡೆದು ದೈತ್ಯರ ತಲೆಯ ಮುರಿವುತ
ಹಿಡಿದು ಸುರರನು ಸೆರೆಯ ಕಳೆವುತ
ಸುಡುತ ಸೂರೆಯಗೊಳುತ ಕವಿದುದು ನಾಲ್ಕು ಮುಖದಲ್ಲಿ ॥
ದಡಿಗ ಹೊರವಡು ಕಳ್ಳ ಹೊರವಡು
ಅಡಗಿ ಕಾದುವ ಹಂದೆ ಹೊರವಡು
ಕಡುಹ ಕಾಂಬೆವು ಹೊರವಡೆಂದಬ್ಬರಿಸಿ ಮುತ್ತಿದುದು ॥ ೨ ॥

ಅಳಿದ ಮಾರೀಮುಖನು ಕಪಿಗಳು
ಕಲಿಗಳಾದರು ನೋಡಿರೈ ಶಿವ
ಖಳರು ನಾವಿನ್ನಾವ ಸದರವೊ ಕೋಡಗಿಗಳಿಂಗೆ ॥
ಎಲಲೆ ಕಪಿ ಕಪಿ ಮರ್ಕಟಂಗಳ
ತಲೆಯ ಮುರಿಮುರಿಯೆನುತ ರಕ್ಕಸ
ಬಲವು ಕವಿದುದು ನಿಮಿಷ ಮಾತ್ರದಲಸುರನಾಜ್ಞೆಯಲಿ ॥ ೩ ॥

ಪೊಡವಿ ಪದಹತಿಗಳುಕೆ ಹೆಡೆಗಳ
ಕೊಡಹುತಿರ್ದನನಂತ ದಿಕ್ಕರಿ
ಸೆಡೆವುತಿರ್ದುದು ಕೂರ್ಮ ಕುಪ್ಪಳಿಸಿದನು ತಳದಲ್ಲಿ ॥
ದಡಿಗ ಸೇನೆಯ ವನಚರಂಗಳ
ಪಡೆಯ ಭಾರಕಜಾಂಡ ಘೀಳಿಡೆ
ಮೃಡನ ಕಿವಿ ಝುಮ್ಮೆಡಲು ಮೊಳಗಿತು ವಾದ್ಯನಿರ್ಘೋಷ ॥ ೪ ॥

ಅತ್ತಲಿಂದ್ರಾರಾತಿ ಹೊರವಡೆ
ಹತ್ತು ದೆಸೆ ತಳ್ಳಳಿಸುತಿರ್ದುದು
ಪತ್ತಿ ಹಯ ರಥದಂತಿಯಗಣಿತವೇನನುಸುರುವೆನು ॥
ನೆತ್ತಿ ಬಿರಿದುದು ಧರೆಯ ಮೂಲೆಯ
ಹೊತ್ತ ಮದದಂತಿಗಳನಮರರ
ಮೃತ್ಯು ಕಪಿಬಲ ಬೆದರೆ ಬಂದನು ವೀರ ವಿತರಣನು ॥ ೫ ॥

ಕಿತ್ತು ಹೆಗ್ಗಿರಿ ಕಲ್ಲು ಮರಗಳ
ಲಿತ್ತ ಕಪಿಗಳ ಚೂಣಿ ಹಳಚಿತು
ತಿತ್ತಿರಿಯ ಲಗ್ಗೆಗಳು ನೋಟಕ ಜನರ ಕಂಗೆಡಿಸೆ ॥
ಇತ್ತ ಬಾರೆನಲಾ ದುರಾತ್ಮಕ
ನೆತ್ತ ತಿರುಗಿದನೆನುತ ದೇವರ
ಮೃತ್ಯುವಿನ ಪಯಣಕ್ಕೆ ಬೆದರಿತು ನಾಕವಾಸಿಗಳು ॥ ೬ ॥

ಸುರರ ವಂಶಪ್ರಳಯ ಬಂದನು
ಉರುವ ವೀರರ ತಿಲಕ ಬಂದನು
ಹರಿಬಲಾರ್ಣವ ವಡಬ ಬಂದನು ಕಪಟ ನಾಟಕದ ॥
ಗುರುಕುಲಾಗ್ರಣಿ ಬಂಡ ಬಂದನು
ಇರುಳುಗಾಳಗ ನಿಪುಣ ಬಂದನು
ತೈರಳಿ ಕೋಡಗಿಗಳಿರಥೊಂದೊದರಿದುವು ಕಹಳೆಗಳು ॥ ೭ ॥

ಅಟ್ಟಿ ಕಡಿದರು ಖಳರು ಕಪಿಗಳ
ಥಟ್ಟುಗೆಡೆದುದು ರುಧಿರವಾರ್ಧಿಯು
ಕಟ್ಟೆವೊಡೆವಂತಾಯ್ತು ಹೋರಲು ಕೆಡೆದ ಭಟರುಗಳ ॥
ಅಟ್ಟೆಗಳು ಹೊಳಲೇಳೆ ಪಡೆ ನಡೆ
ಗೆಟ್ಟು ಕಾದುವ ಭರವು ನಿಂದುದು
ಸೃಷ್ಟಿಪತಿ ಮುನಗುಂಡೆ ಬಿದ್ದುದು ಬಹಳ ಮರ್ಕಟರು ॥ ೮ ॥

ಕೂಡೆ ರಕ್ಕಸರಟ್ಟಿ ಕಂಗೆ
ಟ್ಟೋಡಿ ಕೆಲಬಲದವರ ತುಳಿದರು
ಹೇಡಿತನದಲಿ ಹೆಸರುಗೊಂಬರೆ ವೀರರಥಟುಗಳ ॥
ಆಡಬಾರದು ಬೆನ್ನ ಬದಿಗಳ
ತೀಡುತೋಡುತ ಮುರಿದು ನೋಡುತ
ಗೂಡುಗೊಂಡಡಗುತ್ತೆ ಕಪಿಬಲ ದೆಸೆಯ ಹಸರಿಸಿತು ॥ ೯ ॥

ಓಲಗದಿ ಕುಳಿತಿದ್ದ ಲಕ್ಷ್ಮೀ
ಲೋಲ ಕಂಡನು ಖಳರ ಬಲವನು
ಮೇಲುಮೇಲಾಕ್ರಮಿಸಿ ಬರುತಿಹ ಖಳರ ತಿಂಥಿಣಿಯು ॥
ಆಳುಗಳ ಬಲ್ಲಹನು ಕದನ
ಕ್ಕೇಳುತಿರಲೆದ್ದೆರಗಿ ಸಭೆಯಲಿ
ನೀಲ ಬಿನ್ನಹಮಾಡೆ ಲಾಲಿಸುತಿರ್ದ ಜಗದೊಡೆಯ ॥ ೧೦ ॥

ದೇವ ನಿಮ್ಮ ಕೃಪಾವಲೋಕನ
ಕಾವುದೆಮ್ಮನು ಖಳರ ಗೆಲುವರೆ
ದೇವ ನೀ ಪರಿಯಂತವೇತಕೆ ಹಗಲುಗಾಳಗಕೆ ॥
ನಾವು ಸಾಕೆನಲರಸ ನೇಮಿಸೆ
ಪಾವಕನ ಸುತನೆರಗಿ ದೈತ್ಯರ
ಜೀವ ಝುಮ್ಮೆಡೆ ಭುಜವ ಮಿಗೆ ಹೊಯ್ದೆದ್ದನಾ ನೀಲ ॥ ೧೧ ॥

ಏತಕೋಡುವಿರೆಲವೊ ನಿಲಿ ನಿಲಿ
ಭೂತುಗೆಡದಿದಿರಾಗಿ ಕಾದದೆ
ಮಾತಿನುಗ್ಗಡಕಿದುವೆ ಪೌರುಷ ಕದನ ಪಟುಗಳಿಗೆ ॥
ಕೋತಿಗಳ ಕಾಳಗಕೆ ಕಲಿಗಳು
ಕಾತರಿಸುವರೆಯೆನುತ ರಕ್ಕಸ
ನಾಥ ಬೈವುದ ಕೇಳಿ ನೀಲನು ನಡೆದ ಮೋಹರಕೆ ॥ ೧೨ ॥

ನೀಲಲೋಹಿತ ರುದ್ರನಂದದಿ
ಬಾಳ ಕೋಪವ ತಾಳಿ ನೀಲನು
ಖೂಳ ನಾಯ್ಗಳಿಗಿಂದು ಗೆಲವೇ ಅಹಹ ನರಿ ಸೊಕ್ಕಿ ॥
ಊಳುವಂತಿದೆ ಕೂಗುವಂತಿದೆ
ಸೀಳು ಬಾಯನು ರಾಮನಾಳಿಗೆ
ಸೋಲುವುಂಟೇಯೆನುತ ನಡೆದನು ನೀಲ ಮೋಹರಕೆ ॥ ೧೩ ॥

ಅಟ್ಟಿ ರಣದಲಿ ಕರಿಯು ಸೇನೆಯು
ಧಟ್ಟುಗೆಡೆದಿಹ ಕರಗಳಿಂದವೆ
ಹಿಟ್ಟುಗುಟ್ಟಿದ ತುರಗ ತುರಗದಿ ಬಲವ ಬರುಗೈದ ॥
ಇಟ್ಟನಾನೆಯನಾನೆಯಿಂದವೆ
ಘಟ್ಟಿಸಿದ ರಥ ರಥದಿ ತುರಗವ
ಮೆಟ್ಟಿ ಸೀಳಿದ ನೀಲ ಕಾಲನ ಬಸುರ ತುಂಬಿಸಿದ ॥ ೧೪ ॥

ಮರನ ಮುರಿದಿಟ್ಟಸುರ ಸೇನೆಯು
ನೊರಸಿ ಕಾಲಲಿ ಬಾಲದಿಂದವೆ
ಉರುಳನಿಕ್ಕುತ ಹೆಸರ ವೀರರ ಸದೆದು ವಹಿಲದಲಿ ॥
ತಿರುಹಿದನು ಖಳ ಪಡೆಯು ಕೋಪದಿ
ಉರಿದು ಕಿಡಿಕಿಡಿವೋಗಿ ನೀಲನು
ಕೆರಳಿ ಕೊಂಪನು ಬಾಯ್ಗೆ ಬಂದುದು ಬೆರಳು ಕೆಲಕೆಲರ ॥ ೧೫ ॥

ಉರಿವ ಕಿಚ್ಚನು ಗಾಳಿಯಟ್ಟಲು
ಮೊರೆದು ಲೋಕವ ಸುಡುವ ಪರಿಯಾ
ಯ್ತುರರೆ ನೀಲನ ಖುರಪುಟಂಗಳ ತಾಳಲಸುರರಿಗೆ ॥
ತರಹರವು ನಾ ಕಾಣೆ ಲಂಕಾ
ಪುರದ ಬಾಗಿಲ ತನಕ ಅಟ್ಟಲು
ಕೆರಳಿ ಪಡಿಬಲವಾಗಿ ಬೆಂಬತ್ತಿದರು ಪಟುಭಟರು ॥ ೧೬ ॥

ಅಕಟಕಟ ಬಲು ಮಾರಿಮುಖನಿರೆ
ನಿಖಿಳ ಕೋಡಗ ಖಳರನೀಪರಿ
ವಿಕಟಚೂರ್ಣವ ಮಾಡಬಲ್ಲುದೆಯೆನುತ ರಾವಣನು ॥
ಸಕಲ ದನುಜರ ನೋಡಿ ಮರುಗಲು
ಭಕುತ ವತ್ಸಲನಾಳ ಕೈಯಲಿ
ಮುಕುತರಾದರು ಮೂರುಸಾವಿರ ಮಕುಟವರ್ಧನರು ॥ ೧೭ ॥

ಓಡುವವರಿಂಗಭಯು ಹಸ್ತವ
ನೀಡಿ ಸಂತೈಸುತ್ತ ಸಾರಥಿ
ಹೇಡಿಯಾಗದೆ ರಥವ ಹರಿಸೆಮ್ಮಾಳುತನ ಧನುವ ॥
ನೋಡು ಬಳಿಕೆನುತಮರರಿಪು ಕೈ
ಮಾಡಿ ನೂಕಿದರಮರರಂಜಲು
ಕೂಡೆ ಕಪಿಪಡೆ ಬೆದರೆ ಮೊಳಗಿತು ವಾದ್ಯದಬ್ಬರವು ॥ ೧೮ ॥

ದಲವ ಕೊಂದೀ ಕಪಿಯು ಜೀವವ
ಕೊಳದೊಡಾನಿಂದ್ರಾರಿಯೇ ಫಡ
ತಲೆಯುಲುಸುರುಳನ್ನೆವರ ಸಾಲದೆ ಬಂದ ಪರಿಭವವು ॥
ಕಲಹದಲಿ ಗೆಲವಿಲ್ಲ ತೊಡಚಿದ
ರೆಲವೊ ನಾಯುವೆ ಹೋಗು ಸಾರಿದೆ
ತೊಲಗು ನೀ ಬಡ ಕಪಿಯೆ ಸಾರೆನುತಿರ್ದನಿಂದ್ರಾರಿ ॥ ೧೯ ॥

ಎಲವೊ ದಾನವಮಲ್ಲ ವೀರರ
ಕುಲಶಿರೋಮಣಿ ನೀನು ನಾವೀ
ಹುಲುಕಪಿಗಳೆಮ್ಮೊಡನೆ ಕಾದಲು ಸರಸ ವಿರಸವಲ ॥
ಗೆಲಲು ಸೋಲಲು ಹೆಸರದಾವುದು
ಹಳಚೆ ಹೊಸ ಪರಿಯುಹುದು ದೊರೆ ನೀ
ಬಲುಹುಗೆಡದಿರು ಮರಳು ರಕ್ಕಸಯೆಂದ ನಾ ನೀಲ ॥ ೨೦ ॥

ಮರಳುವೆನೆ ಫಡ ನಾಯೆ ಬೆನ್ನಲಿ
ಕರುಳನುಗಿಯದೆ ನಿನ್ನ ರಾಮನ
ಕೊರಳ ಕೊರೆಯದೆ ತರಣಿ ತನಯನ ಕೊಲ್ಲದಿಂದಾನು ॥
ತಿರುವನೊದರಿಸಿ ಸರಳ ನಾರವ
ಸುರಿದರಂಬರಕಡಸಿ ಕವಿದುವು
ತರುಚರೇಂದ್ರನ ಮುತ್ತಿ ಮುಸುಕಿತು ನಿಮಿಷಮಾತ್ರದಲಿ ॥ ೨೧ ॥

ಹೋಯಿತಿನ್ನೇನಕಟ ನೀಲನು
ಬೀಯವಾದನು ಖಳನ ಬಾಣಕೆ
ಕಾಯಲೀಗಳು ಕರೆ ಬೇಗದಲೊಡೆಯ ರಾಘವನ ॥
ಈಯಘಾಟದ ಸರಳ ಕಡಲಲಿ
ವಾಯುದಲಿ ಕಪಿಯೆದ್ದನೆದ್ದನು
ಸಾಯಲಟ್ಟಿದನೇ ರಘೂತ್ತಮಯೆಂದುದಮರಗಣ ॥ ೨೨ ॥

ಕೊಂದೊಡಲ್ಲದೆ ಮರಳಿಯದನೀ
ನಿಂದು ಹೆಚ್ಚಿನಲೇಕೆ ಸುಮನಸ
ವೃಂದವರಿಯದೆ ನಿನ್ನ ಪೌರುಷಕಾವುದೂಣೆಯವು ॥
ಇಂದು ನಮ್ಮೊಳು ಕಾದಿ ಗೆಲಿದರೆ
ಹಿಂದಣಘಟುಗಳೆಲ್ಲ ಸಫಲವು
ಯೆಂದು ಹರಿಗೆಯವೋಲು ಹಿಡಿದನು ತೇರ ಗಾಲಿಯನು ॥ ೨೩ ॥

ಮೊರೆದು ಗಿರಿಗಿರಿಗುಟ್ಟಿ ನೀಲನು
ಹರಿದು ಹೊಕ್ಕನು ತೇರ ತಳಕು
ಪ್ಪರಿಸಿ ಮಗುಚಲು ದನುಜನಡಿಮೇಲಾದುದಾ ರಥವು ॥
ಎರಡು ಮೋಹರ ಕೌತುಕಂಬಡೆ
ಗಿರಿಯ ತೋರದಿ ಬೆಳೆದು ರಥವನು
ಹೊರಳಲೀಸದೆ ಮೆಟ್ಟಿನಿಂದಿರಲಸುರ ಖತಿಗೊಂಡ ॥ ೨೪ ॥

ಕೆರಳಿ ದಾನವ ತೇರನೆತ್ತುವ
ಚರಣದಲಿ ಕಪಿ ಕೆಳಗೆವೊತ್ತುವ
ಮರಳಿ ನೆಗಹುವ ದನುಜ ವಾನರನೊತ್ತುವನು ಮಹಿಗೆ ॥
ಹೊರಳಿ ಸಿಡಿಮಿಡಿಗೊಂಡು ದಾನವ
ನೆರಡುಗಳಿಗೆಗೆ ಬಲುಹಿನಿಂದವೆ
ಹರನ ಗಿರಿಯನು ತಂದೆ ನೆಗಹಿದವೋಲು ಮಗುಚಿದನು ॥ ೨೫ ॥

ಅಸುರ ಕೋಪದಲುಕ್ಕಿ ತೇರಲಿ
ಸಸಿನೆ ಹೂಡಿದ ಕೈದುವೆಲ್ಲವ
ದೆಸೆದೆಸೆಗೆ ಚೆಲ್ಲಿರಲು ಕಂಬುಗೆಯಲ್ಲಿ ತುಂಬಿದನು ॥
ಮುಸುಡ ಕಾಣದೆ ಕೋಡಗವನಾ
ಅಸುರನರಸಿದ ನೀಲನಾ ಖಳ
ನೆಸುವ ತೇರಿನ ತಳದಲಡಗಿದ ಚಿಕ್ಕ ರೂಪಿನಲಿ ॥ ೨೬ ॥

ಕಾಣೆ ಕೋಡಗವೆತ್ತಲೋಡಿತೊ
ಮಾಣಲೆಲವೋ ಸೂತ ತೇರನು
ಹೂಣಿ ಹೊಡೆ ಹೊಡೆ ರಾಮನಲ್ಲಿಗೆ ಬೇಗ ಹೊಡೆಯೆನುತ ॥
ಬಾಣಗಳ ಸುರಿವುತ್ತ ಕಪಿಗಳ
ಪ್ರಾಣವನು ಕೊಳುತಿರಲು ತುರಗದ
ಗೋಣ ಬಿಗಿದನು ನೀಲನಿತ್ತಲು ಬಾಲದುರುಳಿನಲಿ ॥ ೨೭ ॥

ಮೇಲೆ ದೈತ್ಯನ ಕುದುರೆಗಳ ಹಿಂ
ಗಾಲಿಗೆರಡೆರಡುರುಳ ನಿಕ್ಕಿದ
ನೀಲ ಸೂತನ ಕೊರಳ ಬಿಗಿದನು ಬಾಲದಗ್ರದಲಿ ॥
ಆಲಿಗಳು ತಿರುಗಿತ್ತು ಸಾರಥಿ
ಕೋಲ ಮರೆದುಬ್ಬಸದಿ ನಿಗುಚಿದ
ಕಾಲುಕೈಗಳನಿಂದ್ರಜಿತು ಕೆರಳಿದನು ಸಾರಥಿಯ ॥ ೨೮ ॥

ಬಿಲ್ಲ ಕೊಪ್ಪಿನಲಿರಿದು ಚಾಪಟ
ಮಲ್ಲ ನಿಂದ್ರಾರಾತಿ ಬೈದನು
ಎಲ್ಲಿ ಸೂತನ ಮಗನೆ ರಥ ನಡೆಗೆಟ್ಟುದೇಕೆನಲು ॥
ಕೊಳ್ಳಲಾರೆನು ಕೊರಳ ಬಿಗುಹಿನ
ಬಳ್ಳಿ ಘನವೆಂದೆನ್ನಲರಿಯದೆ
ತಳ್ಳಳಿಸಿ ಕೈ ಸನ್ನೆ ಮಾಡಲು ಕಪಿಯ ಖಳ ಕಂಡ ॥ ೨೯ ॥

ಖಂಡೆಯವ ಸೆಳೆದೆರಗೆ ನೀಲನು
ಕಂಡು ಬಾಲವ ಬೇಗ ತೆಗೆಯಲು
ದಿಂಡುಗೆಡೆದುದು ತುರಗ ಕೊರಳಡಿಯಾಗಿವೊರಲುತಿರೆ ॥
ಕಂಡು ರಕ್ಕಸ ಶೂಲ ಕಿಬ್ಬದಿ
ಗೊಂಡ ಪರಿಯಲಿ ಮರುಗುತಿದ್ದನು
ರಂಡೆಯಾಸೆಗೆ ರಮಣಿಯುಂದವ ಕೆಡಿಸಿದಂತಾಯ್ತು ॥ ೩೦ ॥

ದಾಡೆಗುಟ್ಟುತ ಗದೆಯಲೆರಗಿದ
ಕೋಡಗವ ಫಡ ಬೀಳು ಬೀಳೆನ
ಲೋಡಿ ತಪ್ಪಿಸಿಕೊಂಡು ಜುಣುಗಿದ ಮೋಹರವ ಬಗಿದು ॥
ಕೂಡೆ ಸೂತನ ನೋಡಿ ತೇಜಿಯ
ಹೂಡಿ ಕುರುಹನು ಹಿಡಿದು ನೀಲನ
ನೋಡೆ ಕಾಣದೆ ರಥವನಟ್ಟಿದ ಸರಳ ಸುರಿವುತ್ತ ॥ ೩೧ ॥

ವಾಯುದಲಿ ಕೋಡಗಕೆ ಸರಳನು
ಬೀಯಮಾಡಲದೇಕೆ ನಡೆ ನಡೆ
ರಾಯ ರಾಘವನೆಡೆಗೆ ರಥವನು ಬೇಗ ಹೊಡೆಯೆನಲು ॥
ವಾಯುವೇಗದಿ ರಥವ ನಡೆಸಲು
ವಾಯುಸಖಸುತ ಕಿರಿದು ರೂಪದಿ
ಘಾಯದಸುರನ ಬೆನ್ನ ಸಾರಿದ ನಿಮಿಷ ಮಾತ್ರದಲಿ ॥ ೩೨ ॥

ಎರಡು ಕೈಯಲಿ ದೈತ್ಯ ತನಯಗೆ
ಸರಳನೀಡುವ ಖಳರು ಕಂಗೆಡೆ
ಕರದ ಸನ್ನೆಯಲವರನಂಜಿಸಿ ತಾನೆ ಸರಳುಗಳ ॥
ಎರಡು ಕೈಯಲಿ ನೀಡುತಿರ್ದನು
ಭರದಿ ರಕ್ಕಸನೆಸುತಲಿರ್ದನು
ತಿರುಗಿ ನೋಡದೆ ಹಿಂದೆ ಕಪಿಗಳ ಕಾಳಗೆಡೆವುತಿರೆ ॥ ೩೩ ॥

ಆರು ವೀರರು ನೀಲನೋ ಸುರ
ವೈರಿಯೋ ಮಝು ಭಾಪು ಸರಳಿನ
ವಾರಿನಿಧಿ ಹರಿದಂತೆ ಕಣೆಕಣೆ ಹಳಚಿ ಕಿಡಿಗರೆದು ॥
ತೀರಿಸಿತು ತಿರುಗಿಸಿತು ಕೆಡೆಯಿತು
ಚಾರಿಸಿತು ಕಡಿಕಡಿದು ಮರ್ಕಟಿ
ಮಾರಿಯಾ ಖಳ ಕೊಂದ ಸೇನೆಯ ತನ್ನ ಕೈದಣಿಯೆ ॥ ೩೪ ॥

ಸರಳ ಹೂಳಿದ ನಳನ ಬಸುರಲಿ
ಶರಭನೊಡಲೊಳಗಂಬ ಬಿತ್ತಿದ
ಭರದಿ ಗವಯನ ಗಂಡುಗೆಡಿಸಿದ ಬಗಿದ ನಡುಬೆನ್ನ ॥
ಹುರುಳುಗೆಟ್ಟನು ಗಂಧಮಾದನ
ಧರಣಿಗುರಳಿದ ಮೈಂದ ಕೇಸರಿ
ಕರುಳು ಕಾರಿದ ಗವಯನಂಗದಗೇರು ಘನವಾಯ್ತು ॥ ೩೫ ॥

ಆವ ವಹಿಲವದಾವ ಚಳಕವ
ದಾವ ಲಘುಸಂಧಾನ ಪಟುತನ
ವಾವ ನಿಪುಣನೊ ಶಸ್ತ್ರ ವಿದ್ಯದಿ ಸುಲಭನೈ ಭಲರೆ ॥
ರಾವಣನ ತೆಗೆಯಿವನ ಮುಂದಿ
ನ್ನಾವ ವೀರನು ಗೆಲ ಸಮರ್ಥನು
ಈ ವಿಡಾಯವದಾರಿಗಿಹುದೆನುತಿರ್ದನಾ ನೀಲ ॥ ೩೬ ॥

ಮರೆದೆಲಾ ನಾನಿಲ್ಲಿ ಬಂದುದ
ನರುಹ ಬೇಕೆನುತಾಗ ನೀಲನು
ಗರಿಯ ಮುಂದಕೆ ಮಾಡಿ ನೀಡಿದ ಕೆಲವು ಸರಳುಗಳ ॥
ಕೆರಳಿ ರಕ್ಕಸ ಹಿಂದೆ ನೋಡಿದ
ಖರೆಯ ನಿಂದುದು ಮಾರಿಯಂದದ
ಥರಿಯ ಕಪಿಯನು ಕಂಡು ಬೆಕ್ಕಸವಟ್ಟನಾ ದನುಜ ॥ ೩೭ ॥

ನಾವು ಕಾಣೆವು ಇವನು ತಾನಿ
ನ್ನಾವ ಕಡೆಯಲಿ ಬಂದು ಸಾರ್ದನೊ
ದೈವವೀತಂಗಿರಿವ ಮನವನು ಕೊಡದೆ ಕಾಯಿತೆಲ ॥
ಏವೆನೆಂದಸುರೇಂದ್ರ ಮರುಗಲು
ದೇವಸಂತತಿ ಹೊಗಳುತಿರ್ದುದು
ಆವ ವೀರನೊ ನೀಲನೆದೆಗೆಚ್ಚೆಂತುಟೋ ಭಲರೆ ॥ ೩೮ ॥

ಇದಿರಲಾಂತನ ಬಹುವಿಕಾರದಿ
ಬೆದರಿದಂತಿರೆ ಹಲ್ಲು ಗಿರಿವುತ
ಬದಿಯ ತುರಿಸುತ ಬಾಲದಿಂದೆಡಗೈಯಲೊಂದಿಸುತ ॥
ತುದಿಗೆ ಮೊದಲಿಗೆ ಹಾರಿ ಹಣುಕುತ
ಕದಪನಲುಗುತ ಕಿವಿಯ ಮಿಳ್ಳಿಸಿ
ಬಿದಿರಿ ತುಟಿಯನು ಹುಬ್ಬನಿಕ್ಕುತ ತೊಡೆಯ ಹೊಸೆವುತ್ತ ॥ ೩೯ ॥

ದಡಿಗ ಬಿಲ್ಲನು ಬಿಸುಟು ನೀಲನ
ತೊಡಚಿ ಹಿಡಿದನು ಹೋರಿ ಪೊಡವಿಗೆ
ಕೆಡೆದ ರಕ್ಕಸ ಮೇಲೆ ಬಿದ್ದನು ನೀಲನಡಿಯಾದ ॥
ಒಡನೆ ಮುಗುಚಲು ದೈತ್ಯನಡಿಯಲಿ
ಮಿಡುಕುತಿರ್ದನು ಶಿಲೆಯ ತಳದಲಿ
ಕೆಡೆದ ಜಂಬುಕದಂತೆ ಹೊರಳಿದನೊಂದು ಗಳಿಗೆವರ ॥ ೪೦ ॥

ಹೊಡೆಮುರಳಿ ಖಳನೇಳುವಂನಕ
ತೊಡಚಿ ಕೈಕಾಲುಗಳ ಬಾಲದ
ಲಿಡಿದು ಕಟ್ಟಿದ ಮತ್ತೆ ಕೊರಳಿಂದುರುಳನಿಕ್ಕಿದನು ॥
ಬಿಡದೆ ಬಿಗಿದರೆ ಬಿಡಿಸಲಾರದೆ
ಒಡಲಿನುಬ್ಬಸದಿಂದ ಕಂಗಳ
ಬಿಡಲು ಹಲುಗಿರಿವುತ್ತ ನೀಲನು ಜಗವ ನಗಿಸಿದನು ॥ ೪೧ ॥

ಜೋಹು ಬಿರುಬಿರು ಕಣ್ಣ ಕೆಂಪಿಗೆ
ಜೋಹು ನಿನ್ನೀ ಬಾತ ಬಸುರಿಗೆ
ಜೋಹು ಜೋಹೀ ಬಡಿವ ಕೈಕಾಲುಬ್ಬಸಂಗಳಿಗೆ ॥
ಬೇಹ ಭಟ ನೀನೆಲವೊ ಸ್ವಾಮಿ
ದ್ರೋಹಿ ಕಾದುತ ಕಟ್ಟುವೊಡೆದರೆ
ಜೋಹು ಜೋಹೀ ಹೋಹೆ ಹಾಹಾಯೆಂದ ನಾನೀಲ ॥ ೪೨ ॥

ಪಾವಕಿಯು ಪಟುತನವ ಬಣ್ಣಿಸ
ನಾವನಿಂದ್ರಾರಿಯನು ಗೆಲುವನು
ದೇವ ದನುಜರ ಹಿಂಡು ಸೆರೆಗಳ ಮಾಡಿಯಾಳಿದನ ॥
ಏವುದೀ ಮಗನಧಟು ಕಲಿಗಳ
ದೇವನೀ ಕಪಿಯೆಂದು ಹೊಗಳಿದ
ರಾವಣನ ಮಗ ಮತ್ಸರಂಗಳ ಬಿಟ್ಟು ಪರಿಣಮಿಸಿ ॥ ೪೩ ॥

ಒಂದು ಕಡೆಯಲಿ ವೀರ ರಸ ಮ
ತ್ತೊಂದು ಕಡೆಯಲಿ ಹಾಸ್ಯದಬ್ಬರ
ವೊಂದು ಕಡೆಯಲಿ ಸರಸವಿರಸವದೇನ ಬಣ್ಣಿಸುವೆ ॥
ಇಂದ್ರಜಿತುವನು ಬಾಲದಿಂದವೆ
ಹೊಂದೆಗಟ್ಟಿದ ನೀಲ ತಾ ಮನ
ಗುಂದಿ ವಿಭಿಷಣ ಹರಿದು ಬಂದನು ಕಂಡನೀ ಹದನ ॥ ೪೪ ॥

ಭಾಪುರೇ ಕಲಿ ನೀಲ ನಿನಗಿಂ
ದೀಪರಾಕ್ರಮವಿಲ್ಲದಿದ್ದೊಡೆ
ತಾಪಗೊಂಬುದು ಲೋಕವೀತನ ದೆಸೆಗೆ ಕಂಗೆಟ್ಟು ॥
ಚಾಪವೀತನ ಕೈಯಲಿದ್ದೊಡೆ
ಆ ಪಿನಾಕಿಗೆ ಗೆಲುವೊಡಸದಳ
ಪಾಪಕೆಳಸಿಯೆ ಕೆಟ್ಟನಲ್ಲದೊಡೀತಗೀ ವಿಧಿಯೆ ॥ ೪೫ ॥

ಕಡುಗಲಿಯೆ ಸಾಕಿವನನಿಂದಿಗೆ
ಬಿಡಿಸು ಹೋಗಲಿ ದೈತ್ಯ ಒಳಲಿದ
ಪೊಡವಿ ನೆರೆ ಬೆರಗಾಗಿ ನೋಡಿತು ನಿನ್ನ ಕಾಳಗವ ॥
ಮಡಿವನಿಲ್ಲಿವ ನಿನ್ನ ಕೈಯಲಿ
ಪೊಡವಿಯೊಳಗಪಕೀರ್ತಿ ಕೈದುವ
ಹಿಡಿಯದಾತನ ಕೊಂದನೆಂಬುದ ಬಿಟ್ಟುಕಳೆಯೆಂದ ॥ ೪೬ ॥

ಬಿಡಲು ಹೇಳುವೆ ನೀನು ಮಮತೆಗೆ
ನುಡಿವ ಹಾಳಿಗೆ ನೀನು ಚದುರನು
ಬಿಡಿಸಿ ಕಳುಹಲು ನಾವು ಬಲ್ಲೆವು ನಮ್ಮ ಪಂಥಗಳ ॥
ಪೊಡವಿಪತಿಯೆಡೆಗೊಯ್ವೆಯೀತನ
ಬಿಡಲಿ ಮೇಣಲ್ಲದೊಡೆ ಕೊಲಿಸಲಿ
ನಡುವಿರುಳು ರಣದೊಳಗೆ ಕೊಂದುದ ಮರೆದುದಿಲ್ಲೆಂದ ॥ ೪೭ ॥

ಛಲವು ಸಾಕೆಲೆ ವೀರ ದನುಜನ
ನೊಲಿದು ಭಂಗವಮಾಡಿ ಬಿಡುನೀ
ಕೊಲುವುದರಿಂದೇ ಕಟ್ಟುವಡೆದಸು ಮಾನವುಳ್ಳವಗೆ ॥
ಕೊಲೆ ಕಣಾ ಸಲೆ ಮಾನಭಂಗವು
ಹಲವು ಮಾತೇನೆಮಗೆ ಸಲದೆನೆ
ಖಳನ ಖಡ್ಗದಿ ನಿಗುಚಿ ಮುಡಿಯನು ಕೊಯ್ದನಾ ನೀಲ ॥ ೪೮ ॥

ಮಸೆದ ನಂಜಿನ ಸರಳನೆಲ್ಲವ
ದೆಸೆದೆಸೆಗೆ ಚೆಲ್ಲಿದನು ದೈತ್ಯನು
ಬಸುರ ಬಂಧದಿ ಗೊರೆವುತಿರೆ ಹೆಡೆಗಟ್ಟಿ ಸಡಲಿಸಿದ ॥
ಮಿಸುಪ ಮಣಿಯನು ಮಕುಟವೊಂದನು
ಹೆಸರಿಗೋಸುಗ ಕೊಂಡು ಬಿಟ್ಟನು
ಮುಸುಕು ಮಂಡೆಯಲಸುರ ತೆರಳಿದ ತನ್ನ ಪುರಕಾಗಿ ॥ ೪೯ ॥

ಇತ್ತ ವಿಭಿಷಣ ಸಹಿತ ಕಪಿಗಳ
ವೊತ್ತ ಹೊಗಳುತ್ತಿರಲು ನೀಲನು
ಚಿತ್ತವಲ್ಲಭನೆಡೆಗೆ ಬಂದೆರಗಿದನು ವಿನಯದಲಿ ॥
ಉತ್ತಮದ ಮಕುಟವನು ಕಾಣಿಕೆ
ಯಿತ್ತು ಶರಣೆನಲಾ ಜನಾರ್ದನ
ನೆತ್ತಿ ತೆಗೆದಪ್ಪಿದನು ನೀಲನ ನಗುತ ಮೋಹದಲಿ ॥ ೫೦ ॥

ನೀಲನೋ ಖಳತನುಜನುದರದ
ಶೂಲನೋ ಖಳ ತಿಂಥಿಣಿಗೆ ಕಡೆ
ಗಾಲನೋ ಮಝು ಭಾಪು ಗೆಲಿದನು ದೈವವೈರಿಯನು ॥
ಬಾಳ ಬಳಲಿದೆ ಕಂದ ಬಳಲಿದೆ
ನೀಲ ಬಳಲಿದೆಯೆಂದು ರಾಘವ
ಮೌಳಿಯನುಯೆದೆಗಪ್ಪಿ ಬೋಳಯ್ಸಿದನು ದಳಪತಿಯ ॥ ೫೧ ॥

---

## ೩೫ನೇ ಸಂಧಿ

ಪಲ್ಲ॥ ದಾವ ಶಿಖಿಯಲಿ ಬೇವುತಿಪ್ಪಾ
ಹಾವು ಗಿಡ ಸತ್ತಳಿದ ಪರಿಯಲಿ
ಮಾವಗೋಸುಗ ಕಾದಿ ಮಡಿದನು ವೀರ ಮಕರಾಕ್ಷ

ಪದ ॥ ನೃಡನ ಪೂಜೆಯ ಮಾಡಿ ನಿಜ ಚಾ
ವಡಿಗೆ ಬಂದನು ಲೋಕಕಂಟಕ
ಬಡತನವು ಬಳಿ ಸರಿಯೆ ಬಳಲಿದ ಕೊರಗಿದಾನನದ ॥
ಕಡು ನಿರೋಧದ ಶಾಂತಿ ಕದಡಿದ
ದಡಿಗನಿದಿರೆದ್ದೆರಗಿ ದುಗುಡವ
ಬಿಡುವುದೇನೆಲೆ ಮಾವ ಕಾಳಗಕೆನ್ನ ಕಳುಹುವುದು ॥ ೧ ॥

ಕೊಡಿಸು ನೇಮವ ರಣಕೆ ತಂದೆಯ
ಕೆಡಹಿದಾತನು ಹೋದನೆನಿಸುವೆ
ಕಡಿದು ಹರಹುವೆ ಮರ್ಕಟಂಗಳ ಮಾತ ಮುಟ್ಟಿಸುವೆ ॥
ಹಿಡಿದು ತರಿಸುವೆ ನಿನ್ನ ತಮ್ಮನ
ತಡವದೇಕೆನಲವನ ನುಡಿಗಳ
ಕಡುಹ ಕೇಳುತ ಮೆಚ್ಚಿ ನೇಮಿಸೆ ಸಮರಮುಖನಾದ ॥ ೨ ॥

ನೃಡನ ಭಾಳದ ಕಿಚ್ಚು ಮುಸುಕುವ
ಬಡಬ ಶಿಖಿಯನು ಕರದಿ ನಂದಿಪ
ತುಡುಕಿ ದಂಡವ ಸೆಳೆವ ಕಾಲನ ಧಿಕ್ಕರಿಸಿ ಕಳೆವ ॥
ಉಡುಗಣಂಗಳ ತರಿವ ಮೃತ್ಯುವ
ಹಿಡಿದು ಮುಂದಲೆ ಎಳೆವ ರಕ್ಕಸ
ಪಡೆಯ ಕೂಡಿದು ರಣಕೆ ಸಿಂಗರಗೈದು ಹೊರವಂಟ ॥ ೩ ॥

ಸತ್ತಿಗೆಯ ಸಾಲುಗಳು ಮೆರೆದುವು
ಮತ್ತವಾರಣ ಹಯವರೂಥವು
ಸುತ್ತ ತುರುಗಿತು ಸಬಳ ಕೊಂತದ ಸುರಗಿಯತಿಬಲರ ॥
ಮೊತ್ತವೊಪ್ಪಲು ಭೇರಿ ರಣವರೆ
ಹತ್ತು ದಿಗುತಟ ತುಂಬೆ ಚೀರುವ
ತಿತ್ತಿರಿಯ ಕಹಳೆಗಳ ರಭಸದಲಸುರ ನಡೆತಂದ ॥ ೪ ॥

ಸೀಲನೊಡ್ಡಿದು ವ್ಯೆಂದ ದಳವಿದು
ಬಾಲಿಯಣುಗನ ನೇನೆಯತ್ತಲು
ಸಾಲು ಸುಭಟರ ಗಂಡ ಹನುಮನ ಪಡೆಯಿದೆಡದಲ್ಲಿ ॥
ಹೇಳಲಿದು ಕಲಿ ಗಂಧಮಾದನ
ಪಾಳೆಯವು ನಳ ಪನಸ ಕೇಸರಿ
ಯಾಳುಗಳ ಬಲವ್ಯೆದಿ ತೋರಲು ದನುಜ ನೋಡಿದನು ॥ ೫ ॥

ಎಂದೊಡಾ ಮಕರಾಕ್ಷನೆಂದನು
ಹಿಂದೆ ಇಂದ್ರಾರಾತಿ ಕೊಂದೊಡೆ
ಹೊಂದಿ ಹುಟ್ಟಿದ ಕೋಡಗಿಗಳಿಗೆ ಧನುವ ನಾಹಿಡಿಯೆ ॥
ತಂದೆಯನು ಕೊಂದಾತ ಬಂದರೆ
ಕೊಂದು ತೋರುವೆ ಕ್ಯೆಯ ಪರಿಯನು
ಯೆಂದು ರಣಲಂಪಟನು ನಡೆಸಿದ ತೇರ ಸೂಠಿಯಲಿ ॥ ೬ ॥

ರಕ್ಕಸರು ಕಪಿಭಟರು ತಮ್ಮೊಳ
ಗುಕ್ಕಿಯಾಡುತ್ತಿರ್ದರಮಮಾ
ಹೊಕ್ಕು ತಿವಿವರು ತಿವಿಸಿಕೊಂಬರು ಎಳೆಸಿಕೊಳುತಿಹರು. ॥
ಮುಕ್ಕುರುಕುವರು ಮುರಿದು ತೆಗೆವರು
ಸೊಕ್ಕಿ ಮೂದಲಿಸುವರು ಹೊಯ್ ಹೊಯ್
ಇಕ್ಕಿ ಇರಿ ಇರಿಯೆನುತ ರಣದೊಳಗಟ್ಟಿಯಾಡಿದರು ॥ ೭ ॥

ಹೋಗು ಹೋಗಡ ಸಾರು ತೆಗೆ ತೆಗೆ
ತಾಗು ತಪ್ಪಿಸಿ ಕೆಡಹು ಕೆಡೆಹಾ
ಲಾಗು ತೋರಿಸು ಹವಣು ಹವಣುರೆ ಕಟ್ಟುಕಟ್ಟವರ ॥
ಬೇಗ ಕವಿ ಕವಿ ಬೆರಸು ತಲೆಯಿರಿ
ಸಾಗು ಮುರಿ ನಿಟ್ಟೆಲುವನರರೆ
ಚಾಗು ಚಾಗುರೆ ಹಳುರೆ ಹಳುರೆನುತಟ್ಟಿಯಾಡಿದರು ॥ ೮

ಗಿರಿಯ ಹೋರುತ ಕಲ್ಲಲಿಕ್ಕುತ
ಮರದಲೆರಗುತ ತಿರುಗಿ ತಿವಿಯುತ
ಉರುಳನಿಕ್ಕುತ ಕೊರಳ ಬಿಗಿವುತ ಸೀಳಿ ಬಿಸುಡುತ್ತ ॥
ಸರಳ ಸುರಿವುತ ಕರುಳ ಬಗಿವುತ
ಬಿರುದ ಬೀರುತ ಕುತ್ತಿ ಸೆಳೆವುತ
ಇರಿಯುತೆರಗುತ ಹೋರಿ ಹಳಚಿತು ಕಪಿ ಖಳಾನೀಕ ॥ ೯ ॥

ಕೆಡೆದುವಯುತ ಘಟಾಳಿ ಹಯತತಿ
ಮಿಡುಕುಗೆಟ್ಟತನಂತ ರಥಗಳು
ಕಡಿವಡೆದುದಗಣಿತವು ಮೆರೆದುದು ಸಮರ ಸಂಭ್ರಮವು ॥
ಬಿಡದೆ ಬಸಿವೇರುಗಳ ರಕುತದ
ಕಡಲು ಕಡಲನು ಕಲಕೆ ಕಾಗೆಯು
ಗಡಣ ನಾಯ್ನರಿ ಹದ್ದು ಭೂತ ಪ್ರೇತ ನೆರೆದಣಿಯೆ ॥ ೧೦ ॥

ಮಡಿದ ಸೇನೆಯ ಕಂಡು ಮೀಸೆಯ
ತುಡಿಯ ತಿರುವುತ ಕನಲಿ ಚಾಪವ
ಬಿಡದೆ ಜೇವಡೆವುತ್ತ ಬಂದನು ಮುಂದೆ ಮಕರಾಕ್ಷ ॥
ನಡೆಸು ಸಾರಥಿ ರಥವ ರಾಘವ
ನೆಡೆಗೆ ಹೊಯ್ ಹೊಯ್ ಹೊಟ್ಟುಗರನೆನು
ತಡಸಿ ಕಪಿಗಳ ತುಳಿಸಿ ಸುಭಟರ ಮೂದಲಿಸುತಿರ್ದ ॥ ೧೧ ॥

ಮುಂದೆ ಬರುತಿಹ ಭಟರ ಬರವಿಗೆ
ಮಂದಹಾಸದಲಸುರ ನೋಡಿದೊ
ಡೆಂದ ವಿಭಿಷಣ ಮಾಯಕಾತಿಯ ಹರಿಬಕಡಪಿಂದಲಿ ॥
ಬಂದು ಕಾದಿಯೆ ನಿಮ್ಮ ಕೈಯಲಿ
ಹೊಂದಿದಾ ಖರತನುಜನೀತನು
ತಂದೆ ನೀನಲ್ಲದರಿಗಸದಳ ವೀರ ಭಟನೆಂದ ॥ ೧೨ ॥

ಕೇಳಿ ರಘುಪತಿ ಬಪ್ಪ ಖಳಕುಲ
ಮೌಳಿಯಧಟನು ಕಂಡು ಮೆಚ್ಚುತ
ಸಾಲಜಯರವ ಘಂಟಿಯೊಪ್ಪಲು ಬಿಲ್ಲ ಕೈಕೊಂಡು ॥
ಶೂಲಿ ಮನಮುದವೇರಲೇರಿಸಿ
ಕೋಲ ಕೊಂಡಿದಿರಾಗಿ ಬರುತಿರೆ
ಕಾಳ ರಕ್ಕಸ ಬಗೆಯುದೆಯ್ತರುತಿರ್ದ ಸಮ್ಮುಖಕೆ ॥ ೧೩ ॥

ಎಡಬಲಕೆ ಮುತ್ತಿರ್ದ ಕಪಿಗಳ
ಮಿಡುಕಲೀಸದೆ ಧರೆಗೆ ಕೀಲಿಸಿ
ನಡೆದು ಬರುತಿರೆ ಗಿರಿತರುವ್ರಜಗಳನು ಹುಡಿಗಳೆದು ॥
ಬಿಡದೆ ಸೀಳುತ ಕೊಚ್ಚಿ ಬಿಸುಡುತ
ಕಡಿದು ಹರಹುತ ಮರ್ಕಟಂಗಳ
ಪಡೆಯನಟ್ಟಿದ ಹಿಂಡು ದನವಿಗೆ ಬಡಿಗೆಗೊಂಡಂತೆ ॥ ೧೪ ॥

ಮುರಿಮುರಿದು ನೋಡುತ್ತ ಬಡಿಗಳ
ತುರಿಸುತೋಡುತ ಹಲ್ಲುಗಿರಿವುತ
ಗಿರಿಕುಗುಟ್ಟುತ ತೊಡೆಯ ಹೊಸೆವುತ ಮುರಿದು ಬರುತಿಪ್ಪ ॥
ತರುಚರಂಗಳ ನೋಡಿ ನಗುತವೆ
ಬಿರುದ ಶತಬಲಿ ಗಂಧಮಾದನ
ಶರಭ ಮೈಂದಾದಿಗಳು ಕಾದಿತು ಮುಖ್ಯನಾಯಕರ ॥ ೧೫ ॥

ಬೆಟ್ಟ ಮರ ಕಲುಗುಂಡುಗಳ ತಂ
ದೊಟ್ಟಿ ದನುಜನ ಕಾಳುಗೆಡಿಸಲು
ಮಿಟ್ಟೆಯಲಿ ಸದೆಗುಟ್ಟಿ ಸಾರ್ ಸಾರೆನುತ ಬಳಿ ಸಲಲು ॥
ಬಿಟ್ಟ ನಾಯಕರಿಂಗೆ ಮೂರನು
ಯಿಟ್ಟ ಪಾಯಕರಿಂಗೆ ನಾಲ್ಕನು
ಥಟ್ಟು ಗೆಡಹಿದನೇನನೆಂಬೆನು ಪಡೆಯ ಬರುಗೈದ ॥ ೧೬ ॥

ಹೇರಿದನು ಶತಬಲಿಯ ಕರುಳನು
ಕಾರಿಸಿದನಂಗದನ ಕುಮುದನು
ಚೀರಿ ಬಿದ್ದನು ಮೈಂದ ಮಲಗಿದ ಗವಯ ಗತಿಗೆಟ್ಟ ॥
ಜಾರಿಬಿದ್ದನು ಪನಸ ದಧಿಮುಖ
ದೂರುಗೆಡಿಸಿದ ನಳನು ಮುಗ್ಗಿದ
ಚಾರುವೋದನು ನೀಲನೀ ಪರಿ ಭಟರ ಕೆಡಹಿದನು ॥ ೧೭ ॥

ಅಸುರ ಕುವರನ ತೋಟಿ ಬೇಡಾ
ದೆಸೆಯನುಳ್ಳನ ತೋಟಿ ಬೇಡಾ
ವಿಷಮ ವೀರನ ತೋಟಿ ಬೇಡಾ ರಣಪಿಶಾಚರಿಗೆ ॥
ಹೊಸತನೀವನ ತೋಟಿ ಬೇಡಾ
ಕುಸುರಿದರಿವನ ತೋಟಿ ಬೇಡೆಂ
ದೆಸೆದವಿಕ್ಕೆಲದಲ್ಲಿ ತಿತ್ತಿರಿ ಕಹಳೆಯಬ್ಬರಿಸಿ ॥ ೧೮ ॥

ಓಡಿ ಬಹ ಪಡೆಗಭಯ ಹಸ್ತವ
ನೀಡಿ ಸಂತೈಸುತ್ತ ನಾರಿಯ
ತೀಡಿ ಜೇವಡೆಗೈದು ಸಿಡಿಲಂತೆರಗೆ ರಾಘವನು ॥
ನೋಡಿ ನಿಂದನು ದೈತ್ಯನಿದಿರಲಿ
ಕಾಡ ತೊಳಗುತೆ ಕಲ್ಪವೃಕ್ಷವ
ಬೇಡನೀಕ್ಷಿಸಿದಂತೆ ದಾನವ ಕಂಡ ನರಹರಿಯ ॥ ೧೯ ॥

ತಿರುಗು ತಿರುಗಿತ್ತಿತ್ತಲೆಲವೋ
ತರುಚರಂಗಳ ಮೇಲೆ ನಿನ್ನಯ
ಭರವ ತೋರದಿರೆಸುವ ಕೈದೋರೆನಗೆ ಕಂಗೆಡದೆ ॥
ಮರುಳೆ ಹೆಕ್ಕಳ ಸಾಕು ಸಾಕಂ
ತಿರಲಿ ನಡೆ ಫಡಯೆನಲು ಕೇಳುತ
ಕೆರಳಿ ದಾನವ ಹರಿದು ಬಂದನು ಕಂಡ ರಘುಪತಿಯು ॥ ೨೦ ॥

ಅರಸುವೊಡವೆಯನೆಡಹಿ ಕಾಂಬಂ
ತುರುವ ಬಯಕೆಯದೆನಗೆ ಸಾರ್ದದು
ಕೊರೆವೆ ಗಂಟಲ ಬಳೆಯ ಬಸುರಿನ ಬಿಸಿಯ ರಕುತವನು ॥
ಎರೆದು ಪಿತೃ ತರ್ಪಣವ ನೀಡುವೆ
ಉರುವ ತಂದೆಯ ರಿಣವ ಕಳೆವೆನು
ಅರಿಯ ಬಹುದೀಗೆನುತ ರಕ್ಕಸ ಸುರಿದ ಕೂರಲಗ ॥ ೨೧ ॥

ಅಸುರನೆಚ್ಚ ಶರಾಳಿ ದಿಕ್ಕಿನ
ವಿಸರ ತುಂಬಿತು ದೆಸೆಯ ಮುಸುಕಿತು
ವಸುಧೆಯಂಬರ ತುಂಬಿ ಮುಸುಕಿತು ಬಿಸಲ ದಿನಮಣಿಯ ॥
ಹೆಸರ ಬಲ್ಲರೆ ಹೇಳಿ ಕೇಳುವೆ
ಬಿಸಿಲು ಕರಿದೋ ಬಿಳಿದೊ ಹೇಳೆನೆ
ಹೊಸತು ಮಾಡಿದ ಬಾಣವೃಷ್ಟಿಯನಮಮ ಸಂಭ್ರಮವೆ ॥ ೨೨ ॥

ಅಸುರ ಪಡೆ ಯಾವಲ್ಲಿ ಕಪಿಗಳ
ಬೆಸಗೊಳೋ ರಘುರಾಯನೆಲ್ಲಿಹ
ಯೆಸುವಸರಳನಿತುಂಟೆ ತೆಗೆ ತೆಗೆ ಪ್ರಳಯ ಘನ ಮುಗಿಲ ॥
ಮಸೆದ ಸರಳನು ಜಗದ ಕೇಡಿಂ
ಗೊನೆದು ಸುಡುವಂತಾಯ್ತು ಮರ್ಕಟ
ವಿಸರ ಮುರಿದೋಡಿತ್ತು ಸರಳಿಗೆ ಬೆನ್ನನೊಡ್ಡಿಸುತ ॥ ೨೩ ॥

ಅಸುರಮರ್ದನನಸುರ ಶರಗಳ
ಕುಸುರಿದರಿದನು ಬಸಿಲ ಬೀರಿದ
ನಸುರ ಮರೆಸಿದನರಸ ತೆರೆಸಿದನಸುರ ಮರೆಸಿದನು ॥
ಎಸುವನಸುರನು ಕಡಿವ ನರಹರಿ
ಎಸುವ ನರಹರಿ ಕಡಿವ ರಕ್ಕಸ
ಹೆಸರಿಸುವ ಕವಿಯಾವನಿಬ್ಬರ ವಹಿಲಗತಿಗಳನು ॥ ೨೪ ॥

ಅಳುಕಿದನು ಸೌಮಿತ್ರಿ ವಿಭೀಷಣ
ಕಳವಳಂಗೊಳೆ ಮರ್ಕಟಂಗಳ
ಹೊಲಬುದಪ್ಪಿತು ನೋಡಿ ಮರುಗಿತು ದೇವಸಂದೋಹ ॥
ಖಳನ ಖುರಪುಟ ಬಿರಿಸು ಬಾಣ
ಪ್ರಳಯಮಾಯಿತುಯೆನಲು ನರಹರಿ
ತಲೆಯ ತೂಗುತ ಬೆರಗಿನಲಿ ಮೈಮರೆದ ಪರಿಯಾಯ್ತು ॥ ೨೫ ॥

ಕರದ ಚಾಪವ ಕಾಣಬಾರದು
ಸರಳ ಹಿಡಿವುದ ಬಿಡುವ ಲಾಗುವ
ಸುರರಿಗುಪಮಿಸಲರಿದು ಖಳ ಕಾರ್ಮುಗಿಲ ಹೋಲಿದನು ॥
ಅರಿದರಿದು ಮಝು ಭಾಪು ಮಝುರೇ
ಬಿರುದ ಸಮರಥರೆಂದನಭವನು
ಹಿರಿದು ಮಾತೇನವನು ರಾಮನ ಕಂಗೆಡಿಸುತಿರ್ದ ॥ ೨೬ ॥

ಕಡಲೊಳಗೆ ಕೊಳ್ಳಿಯನು ಸುರಿದರೆ
ಬಿಡದೆ ಕುದಿವುದೆ ಹಿಮದ ಧಾಳಿಗೆ
ವಡಬ ಛಳಿಯೊತ್ತುವುದೆ ನೊರಜಟ್ಟುವುದೆ ಕುಲಗಿರಿಯ ॥
ಕೆಡಹ ಬಲ್ಲನೆ ರಾಮನಸುರನ
ಕಡುಹ ಕಾಂಬನೆ ನಿಮಿಷ ಮಾತ್ರಕೆ
ಕಡಿದು ಬಿಸುಟನು ಮೋಡಗಳೆದಿನನಂತೆ ರಂಜಿಸಿದ ॥ ೨೭ ॥

ಅಡವಿಯಲಿ ಹಿಂದೆಮ್ಮ ತಂದೆಯ
ಕೆಡಹಿದಾತನೆ ಸಿಕ್ಕಿದೆಯಲಾ
ಕಡಿದು ದಿಗುಬಲಿಗೊಡುವೆ ಬಿಡೆ ಬಿಡೆ ಹೋಹೆಯಿನ್ನೆತ್ತ ॥
ಕಡುಹ ನೋಡುವೆ ಸರಳ ಕಡಿ ಕಡಿ
ಬಿಡದೆ ಕರೆ ತೆತ್ತಿಗರನುಳ್ಳರೆ
ಮಿಡುಕಗೊಡೆನೆನುತಸುರ ರಾಮನನೆಚ್ಚ ಮೂವಲಿಸಿ ॥ ೨೮ ॥

ಹಿರಿಯ ತಂದೆಯ ಹರಿಬಕಿದೆ ಕೋ
ಸರಳು ಮೂರನು ಮತ್ತೆ ಕೋ ಕೋ
ಕಿರಿಯ ತಂದೆಯ ಕೊಲೆಗೆ ನೂರಂಬುಗಳನಿದಕೊಳ್ಳು ॥
ಮರಳಿ ಕೋ ಮುನ್ನೂರ ಪುನರಪಿ
ತಿರುಗಿ ಬೆನ್ನೊಡ್ಡೊಡ್ಡು ತ್ರಿಶಿರನ
ಹರಣಗೊಂಡುದಕಿನ್ನು ಕೋ ಮುನ್ನೂರು ಬಾಣವನು ॥ ೨೯ ॥

ಇದುವೆ ಶಂಭುಕ ವಧೆಗೆ ಕೋ ಮ
ತ್ತಿದುವೆ ಹೊಮ್ಮೃಗ ವಧೆಗೆ ಕೋ ಮ
ತ್ತಿದುವೆ ದನುಜೆಯ ಮೂಗ ಕೊಯ್ದಾ ಸುಭಟತನಕಿದುವೆ ॥
ಇದು ಸುಬಾಹುವ ಹರಣಕೊಂಡುದ
ಕಿದುವೆ ಭವಭೃತಭೇದಭೇದನ
ಕಿದುವೆ ಕೊಳ್ಳೆನುತಸುರ ರಾಮನನೆಚ್ಚು ಮೂದಲಿಸಿ ॥ ೩೦ ॥

ಕಲಿಗಳೆಂಬವರೀತನಾಂತರೆ
ಬಳಿಗೆ ಬಾರರು ದನುಜ ವೀರನು
ಹಲವು ಮಾತೇನವನು ರಾವಣಗೀರ್ವಣಾದಿಗಳ ॥
ಕುಲಶಿರೋಮಣಿ ಖಳಕುಲಾಗ್ರಣಿ
ಕಲಿವರೇಣ್ಯನು ಕಲಿಗಳಧಿಪತಿ
ಭಲರೆ ವೀರರ ದೇವ ಭಾಪೆನುತಿರ್ದುದುಭಯ ಬಲ ॥ ೩೧ ॥

ವಸುಮತೀಶ್ವರ ಕಡಿವ ತೆರಹಿನೊ
ಳಸುರನೆಚ್ಚಂಬಡಸಿ ರಾಮನ
ಬಸುರನುಚ್ಚಳಿಸಿದವು ಹಾಯ್ದುವು ತೋದ ರಕುತದಲಿ ॥
ಒಸರುತಿರ್ದುವು ರುಧಿರ ಕಿಡಿಗಳ
ವಿಸರ ಕಣ್ಣಿಂದುದುರೆ ನರಹರಿ
ಯೆಸೆದ ಕೋಪದಿ ಕಾಲರುದ್ರನ ಕುರುಹಿನಂದದಲಿ ॥ ೩೨ ॥

ಧೀರ ಕೋಪದಲರಸ ಕಡಿದನು
ತೇರು ತುರಗಧ್ವಜವನಸುರನ
ಸಾರಥಿಯ ತರಿದಿಕ್ಕಿ ದನುಜನ ಕರದ ಚಾಪವನು ॥
ಮೂರು ತುಂಡನು ಮಾಡೆ ರಕ್ಕಸ
ಕೂರಲಗು ಹರಿಗೆಯನು ಹಿಡಿವುತ
ಹಾರಿ ಪೊಡವಿಗೆ ಜಿಗಿದು ತಿರುಗಿದ ಹರಿಯ ಸಮ್ಮುಖಕೆ ॥ ೩೩ ॥

ಕೆರಳಿಯಿಕ್ಕೆಲದವರ ಸವರುತ
ಕರುಳ ಚರಣದ ತೊಡಕಲೋಡುತ
ಗಿರಿತರುವ್ರಜಗಳನು ಟೊಣೆವುತ ಬೊಬ್ಬಿರಿವುತಿರಲು ॥
ಅರಸ ದಿವ್ಯಾಸ್ತ್ರವನು ಮಂತ್ರಿಸಿ
ಗುರುವಿನಂಘ್ರಿಯ ನೆನೆದು ತೆಗೆದಿಸೆ .
ಅರರೆ ತಲೆಕಡಿದಟ್ಟಿಹಾರಿತು ಭಟರ ಬೆದರಿಸಿತು ॥ ೩೪ ॥

ಹಾರಿದುದು ಖಳ ಮುಂಡವಭ್ರಕೆ
ಚೀರಿಬಿದ್ದುದು ಕಪಿಗಳಾರಿತು
ನಾರದನು ನಲಿದಾಡೆ ಭೂತಪ್ರೇತ ನೆಗೆವಣಿಯೆ ||
ನಾರಿಯೊಡಗೂಡೆಂದು ಹರಸಲು
ವೀರರಾಮನ ರಣದ ಬಳಲಿಕೆ
ಯಾರೆ ಸುರಿದರು ಕುಸುಮವೃಷ್ಟಿಯ ದೇವಸಂದೋಹ || ೩೫ ||

ಧುರದೊಳಗೆ ಮಕರಾಕ್ಷ ಬೀಳಲು
ಹಿರಿದು ಮನದೊಳಗಳಲಿ ರಾವಣ
ಸುರವಿರೋಧಿಯ ಕಾದ ನೇಮಿಸೆ ಎದ್ದನತಿಬಲನು ||
ಪುರವ ಹೊರವಡೆ ಧರಣಿಯುದುರಿತು
ತೆರಳಿದಂತ್ರೈಲೋಕದೊಡೆಯನು
ತರುಚರೇಂದ್ರರ ಜೀವನೆತ್ತಿಯನೇರಿ ಝುಮ್ಮಿಡಲು || ೩೬ ||

ಹೊಡೆವ ಹರೆ ಹವಣಿಲ್ಲ ಬಿರುಬಿಂ
ಬಡಿವ ನಿಸ್ಸಳ ಭೇರಿ ತಂಬಟೆ
ಕಡಲು ಕದಡಲು ಕಮಠನೊಡಲಿಂಗುಬ್ಬಸವು ಹುಟ್ಟೆ ||
ಪೊಡವಿ ನಡುಗಲು ಬಪ್ಪ ರಕ್ಕಸ
ಪಡೆಯ ಲೆಕ್ಕಿಸಲರಿದು ದೆಸೆದೆಸೆ
ಗಿಡಲು ಕವಿದುವು ರಘುಜನಿಂದ್ರಾರಾತಿಯೆಂದರಿತ || ೩೭ ||

ಅವರಿವರು ಗೆಲಲರಿದು ರಣದೊಳ
ಗಿವನು ಭಾರಿಯ ಸುಭಟನೆಂದಾ
ರವಿಕುಲೇಶ್ವರ ಬಿಲ್ಲ ಜೇವಡೆವುತ್ತ ಬರುತಿರಲು ||
ತವತವಗೆ ಮರ್ಕಟರು ಕವಿದರು
ಪವನಭವ ನಳ ನೀಲನಂಗದ
ರವನ ಮುಕ್ಕುರುಕಿದರು ರಾಘವ ಸರಳ ತೊಡುತಿರ್ದ || ೩೮ ||

ತೊಡುವುದೊಂದೇ ಸರಳು ರಾಘವ
ಬಿಡಲು ಹತ್ತಾಯಿತ್ತು ಶಿರಗಳ
ಕಡಿಯೆ ನೂರಾಯ್ತೆನಲು ಕವಿಕವಿದೆಚ್ಚ ರಘುರಾಯ ||
ಅಡಗಲೀಸದೆ ಇರಿವ ರಕ್ಕಸ
ಹಿಡಿಯೊ ಹಿಡಿಹಿಡಿಯೆನುತ ಮರ್ಕಟ
ರಡಸಿ ಕವಿದರದೇನನೆಂಬೆನು ರಣದ ಸಂಭ್ರಮವ || ೩೯ ||

ಹುಲಿಯು ಗಡಣವ ಗೆಲಿದು ನರಿ ಹೆ
ಕ್ಕಳಿಪ ತೆರದಲಿ ಸಿಂಗ ಜಾತಿಯು
ಬಲುಹುಗೆಡಿಸಿದ ಕಳಭದಂಗವಣೆಗಳ ಹೋಲುತ್ತ ॥
ಕಲಿಗಳಾದೆವು ನಾವು ನವಗಿ
ನ್ನೆಲವೊ ಸರಿಯಾರೆನುತ ಗಂಟಲ
ಬಳೆಯು ಮುರಿ ಮುರಿಯೆನುತ ಮುತ್ತಿತು ವೀರ ಮರ್ಕಟರು ॥ ೪೦ ॥

ಉರುಳುತಿರ್ದುವು ತಲೆಗಳಟ್ಟೆಗ
ಳಿರದೆ ಕುಣಿಕುಣಿದಾಡುತಿರ್ದುವು
ತೆರಳುತಿರ್ದರು ಕಾಲನಾಲಯಕಸುರ ನಾಯಕರು ॥
ಹರಿವುತಿರ್ದುವು ನೆತ್ತರಿಭತತಿ
ಯೊರಲುತಿರ್ದುವು ಹಯಪದಾತಿಗ
ಳರರೆ ಬಣ್ಣಿಸಲರಿದು ಕಪಿಗಳು ಕವಿದು ಕೊಲುತಿರಲು ॥ ೪೧ ॥

ಖಳರ ತಲೆಗಳು ಕಡಿದು ಬಿದ್ದರೆ
ಕೆಲರು ತಲೆಗಳ ಹೊತ್ತುಕಾದುವ
ಖಳರಿಗೆಣಿಕೆಯು ಕಾಣೆ ನರಹರಿಯಂಬು ಬೇಸರಲು ॥
ಕೆಲರು ಬಾಲದಿ ಕೆಲರು ಚರಣದಿ
ಕೆಲರು ಗಿರಿಯಲಿ ಕೆಲರು ಮರದಲಿ
ಕೆಲರು ಕಾಲಲಿ ಸತ್ತು ದುನುಜಾನೀಕ ಬಯಲಾಯ್ತು ॥ ೪೨ ॥

ಶಿರಹರಿದ ದುನುಜೌಘವೊಪ್ಪಿತು
ಸರಸಿಜಾಸನ ಖಳರ ಸೃಜಿಸುತ
ಶಿರವ ವಿರಹಿತವಾಗಿ ಮಾಡಿದನ್ನೈಸೆ ತಪ್ಪಿದನು ॥
ಧುರಕೆ ಬಹ ತವಕದಲಿ ದನುಜರು
ಮರೆದು ಬಂದರು ತಲೆಯ ಮನೆಯಲಿ
ಹರಣ ಶಿರಗಳನುಳಿದು ರಣಕೆಯ್ತಂದ ಪರಿಯಾಯ್ತು ॥ ೪೩ ॥

ರಣದ ಮಧ್ಯದಿ ಕೋಟಿ ರಕ್ಕಸ
ಗಣವು ಬಿದ್ದರೆ ಕುರುಹಿಗೋಸುಗ
ಘಣಲು ಗುಟ್ಟುವುದೊಮ್ಮೆ ರಾಮನ ಬಿಲ್ಲ ಜಯಘಂಟೆ ॥
ಢಣಲು ಢಣ ಢಣ ಧಣಲು ಢಣ ಢಣ
ದಣಲು ಢಣಲೆಂದರ್ಧ ಜಾವದ
ಲೆಣಿಸಲರಿಯೆನು ರಾಮಚಂದ್ರನು ಕೊಂದ ಖಳರೆನಿತೊ ॥ ೪೪ ॥

ವಿತ್ತವೆಲ್ಲವ ಗಣಿಕೆಗೋಸುಗ
ತೆತ್ತ ಪರಿಯಾಯಿತ್ತು ರಕ್ಕಸ
ಸತ್ತು ಹುಡಿಹುಡಿಯಾದ ಸೇನೆಯ ಕಂಡು ಚಿಂತಿಸುತ ॥
ಅತ್ತಲಿತ್ತಲು ನೋಡಿ ಕಪಿಗಳ
ಮುತ್ತಿಗೆಯ ಕಂಡಂಜಿ ತೆರಳಿದ
ಹತ್ತುತಲೆಯವನಣುಗ ತಂದನು ತನಗೆ ನಾಚಿಕೆಯ ॥ ೪೫ ॥

ಓಡಿದನು ಶಕ್ರಾರಿ ಕಪಿಗಳ
ಕೂಡೆ ಬೆನ್ನಟ್ಟೋಡಿ ಫಡ ಫಡ
ಓಡದಿರು ಫಡ ಹಂದೆ ನಿಲು ನಿಲು ಕಾದು ಕಾದೆನುತ ॥
ಕೋಡುಗಲ್ಲನು ಗುಂಡು ಬಡಿಗೆಯ
ಮಾಡಿ ಮುಸುಕಿದರಮಮ ರಕ್ಕಸ
ಹೇಡಿಯಾದನು ಹಗಲುಗಾಳಗ ನೂಕದವ ಹೋದ ॥ ೪೬ ॥

ಮೂಗನಿತ್ತನು ನಮಗೆ ಬಿಡುಬಿಡು
ಮೇಘನಾದನೆವೋಡುವಾತನು
ಹೋಗಲೆಲವೊ ತಡೆಯಬೇಡಪಕೀರ್ತಿಯಿಹುದೆನುತ ॥
ರಾಘವನು ನೇಮಿಸಲು ಕಪಿಗಳು
ಹೋಗಲವನೆಂದುಳಿದು ತಿರುಗಿದ
ಪಾಳೆಯಕೆ ತಾನತ್ತ ತೆರಳಿದನೆಂದು ರಘುರಾಯ ॥ ೪೭ ॥

ಇಂದ್ರಜಿತು ಮುರಿದೋಡೆ ಕಪಿಸುರ
ವೃಂದ ನಲಿದುದು ಮರೆದೆವೆಮ್ಮಯ
ಹಿಂದಣಾಯಸಗಳನು ಸಾಕಾಯ್ತಾಯ್ತು ಲೇಸಾಯ್ತು ॥
ಎಂದು ನಲಿನಲಿದಾಡುತಿರಲಾ
ನಂದಮೂರುತಿ ರಾಘವೇಶ್ವರ
ಬಂದು ತವಕದಲಿರಲು ಸುರಿದರು ಸುರರು ಹೂಮಳೆಯ ॥ ೪೮ ॥

ಧುರದ ಧೂಳೀಧೂಸರಂಗಳ
ಧುರದ ರಕುತದ ಬಿಂದು ಸಿಡಿಯಲು
ಹರಿ ಗಳವ ತೊಳೆಯಲ್ಕೆ ಅಪರಾಂಬುಧಿಯ ಮುಳುಗಿದನು ॥
ಶರಧಿ ರಕುತದಿ ಕದಡಲಾಚೆಯ
ಪರಿಧಿಗೈದಿದನೆನಲು ದಿನಪತಿ
ಸರಿದನಂದತ್ತತ್ತಲಿಳಿದನು ಮುಂದು ಮುಂದೊತ್ತಿ ॥ ೪೯ ॥

## ೩೬ನೇ ಸಂಧಿ

ಪಲ್ಲ ॥ ತಂದೆಯೆಂದುದೆ ವೇದಸಮ್ಮತ
ವೆಂದು ರಣದಲಿ ಕಾದಿ ಮಡಿದನು
ಇಂದ್ರಜಿತು ನಾಕವನು ಹೊಕ್ಕನು ಸಕಲದಳಸಹಿತ ॥

ಪದ ॥ ಇಂದ್ರಜಿತುವಿನ ಕಡೆಯ ಸಮರವ
ನಿಂದು ನೋಡುವೆನೆನುತ ದಿನಪತಿ
ಬಂದನೋ ಮೇಣೆನಲು ಪೂರ್ವಾಚಲದ ಶಿಖರದಲಿ ॥
ಚಂದದಲಿ ತಲೆದೋರೆ ದಶಶಿರ
ನಂದು ತನಯನ ಕರೆಸಿ ನುಡಿದನು
ಜೆಂದ ಬದುಕಿದು ಸುಡಲಿ ರಣಹೇಡಿಗನು ನೀನೆಂದು ॥ ೧ ॥

ಹೋದ ಮಾತಂತಿರಲಿ ಪುನರಪಿ
ಕಾದ ಕಳುಹುವುದೆನ್ನ ರಾಘವ
ತೀದನೆನಿಸುವೆ ಮೇಣು ರಣದಲಿ ನಿನ್ನ ಹಿರಿಯ ಮಗ ॥
ಹೋದನೆನಿಸುವೆನೆನಲು ಖಳಸುರ
ಸೂದನನ ತೆಗೆದಪ್ಪಿ ನಗುತ ವಿ
ನೋದಶೀಲನು ಮಗನ ನೋಡಿದ ಹಲವು ಕಣುದಣಿಯೆ ॥ ೨ ॥

ವಟ್ಟೆಪೀತಾಂಬರವ ಸೊಬಗಿಂ
ದುಟ್ಟು ಬೆರಳಿಗೆ ರತುನ ಮುದ್ರೆಯ
ಸಿಟ್ಟು ನೂಪುರ ಕಡಗ ಕಂಕಣ ಕನಕ ಸೂತ್ರವನು ॥
ತೊಟ್ಟು ತಿಲಕವನಿಟ್ಟು ಖಳ ಜಗ
ಜಟ್ಟಿ ಧನಧಾನ್ಯಾದಿ ವಸ್ತುವ
ತುಷ್ಟಿ ಬಡುವಂದದಲಿ ವಿಪ್ರರಿಗಿತ್ತು ಮನ್ನಿಸಿದ ॥ ೩ ॥

ಹರನನಾರಾಧಿಸಿ ಮಹೀಸುರ
ವರರಿಗೆರಗಿದ ವೀರ ಪಾತಕ
ನೆರವಿಗುಡುಗೊರೆಯಿತ್ತು ಪರಿವಾರವನು ಮೇಳೈಸಿ ॥
ವರದುಕೂಲವಿಭೂಷಣಂಗಳ
ಹಿರಿದು ಮನ್ನಿಸಿ ಕೊಟ್ಟು ಘುಟಿಕೆಯ
ಧರಿಸಿ ರವಿಯುದಯದಲಿ ಕಾಳಗಕಸುರನನುವಾದ ॥ ೪ ॥

ಆರತಿಯನೆತ್ತಿದರು ಪರಬಲ
ವೈರಿ ಬಾಳೆನುತಪ್ಪಿ ಮುದದಲಿ
ವೀರ ರಾವಣ ಧುರಕೆ ನೇಮದ ವೀಳೆಯವನಿತ್ತ ॥
ತೇರ ಬಲಬಂದೆರಗಿ ಹೂಡಿದ
ವಾರುವಂಗಳ ಚಪ್ಪರಿಸಿ ಸಿಂ
ಗಾರ ಸಿತಗನು ಹೊಳೆವ ಮಣಿರಥವೇರಿ ಹೊರವಂಟ ॥ ೫ ॥

ಖಳತನಯನುಗ್ಗಡಿಸಿ ಹೊಗಳುತ
ಕೆಲದಿ ಸಾ ಹೋಯೆನುತ ಮುಂದಕೆ
ತೊಲಗು ತೊಲಗೆನೆ ಧಿರುರೆ ಪಾಯವಧಾರು ಹೋಯೆನಲು ॥
ಹೊಳೆವ ಸಿಂಧದ ಸಾಲ ಸತ್ತಿಗೆ
ಹಲವು ಜಲ್ಲರಿಯೊಪ್ಪೆ ವೀರರ
ಕುಲಶಿರೋಮಣಿ ಕದನ ಕೋಲಾಹಲನು ಹೊರವಂಟ ॥ ೬ ॥

ಕೊಂಬು ತ್ರಿತಿರಿ ಕಹಳೆ ಗೋಮುಖ
ಚಂಬಕವರೆಯ ಡಕ್ಕೆ ಡಮರುಗ
ತಂಬಟದ ಗಿಡಿಬಿಡಿಯ ವಾದ್ಯದ ಪಳಹ ಡಿಂಡಿಮದ ॥
ತುಂಬು ದನಿ ನಿಸ್ಸಾಳ ಭೇರಿ ಕ
ದಂಬದಬ್ಬರದಿಂದಜಾಂಡವ
ಚುಂಬಿಸುತ್ತಿರೆ ದೇವಕಂಟಕ ಬಂದ ರಣಕಾಗಿ ॥ ೭ ॥

ಕಾಳ ಮೇಘವು ಗಜದ ರೂಪವ
ತಾಳಿದುದೊ ಕೋಲ್ಮಿಂಚಿನಣಲೊಳು
ಕೀಲಿಸಿದ ತೆರನಂತೆ ದಂತದ ಕಾಂತಿ ಥಳಥಳಿಸೆ ॥
ನೀಲಗಿರಿ ಕೈ ಕಾಲ ತಳೆದೀ
ಕಾಳಗವ ನೋಡಲ್ಕೆ ಬಂದುದೊ
ಮೇಲೆ ಮಾವುತ ನಿಚಯವೆಸೆದುದು ತೆಗೆದ ಬಿಲ್ಲಿನಲಿ ॥ ೮ ॥

ಹರಿಯ ಗತಿಯನು ಹಳಿವ ಮದ
ದಿಕ್ಕರಿಯ ಠಿಕ್ಕರಿಗಳೆವ ಸೂರ್ಯನ
ತುರಗವನು ಮರುಳಾಡಿದಿ ಬಲು ಮತ್ಸರಿಪ ಗುರುತನಕೆ ॥
ಹರಿಣ ಮರುತದ ಸರಳ ವೇಗವ
ಹಿರಿದು ಕೊಂಡಾಡುವರು ಜಗದಲಿ
ಘರಿಕಿಸಲು ಮನಕಧಿಕ ವೇಗದಿ ತುರಗ ನೂಕಿದುವು ॥ ೯ ॥

ಪರಬಲಾರ್ಣವದೊಳಗೆ ರತುನದ
ಗಿರಿಗಳಂತಾ ತೇರು ಮೆರೆದುವು
ನೊರೆಗಳಂತೆ ಸಿತಾತಪತ್ರವು ವಾದ್ಯ ನಿರ್ಘೋಷ ॥
ತರಳಭಂಗದವೋಲು ಖಳರಿರೆ
ಕರಿತುರಗಪತ್ತಿಯಲಿ ರತುನಾ
ಕರಗೆ ಮಲೆತುದೊ ದೈತ್ಯರತುನಾಕರನು ಎನಲೆಸೆಯೆ ॥ ೧೦ ॥

ಅರಿ ಭಯಂಕರ ಬಂದ ಬಂದನು
ಪರಬಲಾರ್ಣವ ಬಂದ ಬಂದನು
ಇರದೆ ದನುಜನ ಹಿರಿಯ ಮಗನೈತಂದ ರಣಕಾಗಿ ॥
ಸುರಕುಲಾಂತಕ ಬಂದ ಮಾರಿಯ
ಹೊರೆವ ದಾನಿಲಲಾಮ ಬಂದನು
ತೆರಳಿ ಕೋಡಗಿಗಳಿರಯೆಂದೊರಲಿದುವು ಕಹಳೆಗಳು ॥ ೧೧ ॥

ಹರಿಯ ಗೆಲಿದನ ತೋಟಿ ಬೇಡಾ
ಸಿರಿಯ ಸೊಬಗನ ತೋಟಿ ಬೇಡಾ
ಸುರರ ಸೆರೆವಿಂಡುಗಳನಾಳ್ದನ ತೋಟಿ ಬೇಡೆಲವೊ ॥
ಹರಿಪಡೆಗೆ ಉರಿಮಾರಿಯೆನಿಸುವ
ಬಿರುದ ರಾಯನ ತೋಟಿ ಬೇಡೆಂ
ದಿರದೆ ಹೊಂಗಹಳೆಗಳು ಚೀರಲು ಬಂದನಿಂದ್ರಾರಿ ॥ ೧೨ ॥

ಎರಡು ಚೂಣಿಯ ಭಟರು ಹೊಣಿಸಿ
ಬೆರಸಿ ಹೊಯ್ದಾಡಿತ್ತು ಕಪಿಗಳು
ಕರೆದು ಮೂದಲಿಸುತ್ತ ಬೆರಳಲಿ ತೋರಿ ಬೈಯುತ್ತ ॥
ಬಿರುದ ಕುನ್ನಿಗೆ ಹೆಸರನಿಕ್ಕುತ
ಚರಣದಲಿ ತೊಡಕಿಟ್ಟು ತಂಬುಲ
ದುರುಳಿಯಿಂದಿಟ್ಟಾಡಿ ಕಾದಿತು ಕಪಿಖಳಾನೀಕ ॥ ೧೩ ॥

ತೊಲಗಿರೈ ಬಡ ಕೋಡಗಂಗಳಿ
ತೊಲಗ ಹೇಳೋ ಬಿನುಗು ಬಿಕ್ಕಟಿ
ತೊಲಗಿರೈ ಸಾರ್ಬಟ್ಟೆಗೊಡುತಲಿ ತೊಲಗೆ ತೊಲಗುವುದು ॥
ಹಳುವ ಕಾಳಗ ಬೇಡ ಮಕ್ಕಳ
ಕಲಹ ಹಿರಿಯರ ಮುಟ್ಟದಿಹುದೇ
ಲಲನೆಯುಳಲಿಗನಾವ ಬರಹೇಳವನ ಕಾಂಬೆನಲ ॥ ೧೪ ॥

ಭಾವ ಮೈದುನರಲ್ಲ ಬೆದರಲು
ಗೋವಳರು ನಾವಲ್ಲ ಕಾದಲು
ಸಾವೆಯಲ್ಲದೆ ಗೆಲುವ ಪಂಥಗಳುಂಟೆ ನಮ್ಮೊಡನೆ ॥
ಏವುದಧಟುಗಳೆಲವೊ ಶರದಲಿ
ದೇವರಾಯನ ಹಗೆಯ ಕೆಡಹುವ
ನಾವ ಬರಹೇಳವನ ಸಾಹಸ ಕಾಂಬೆನೆನುತಿರ್ದ ॥ ೧೫ ॥

ಹಣುಗತವೆ ಕೈಗಿರಿಯ ಕಲ್ಲನು
ಟೊಣೆದು ಸಾರ್ಸಾರೆನುತ ಕಪಿಗಳ
ಕೆಣಕಿ ಚತುರಾಹವದ ಕೋವಿದ ದೇವದಲ್ಲಣನು ॥
ಅಣುವ ಮೊದಲಾದವರ ತೃಣವೆಂ
ದೆಣಿಸಿ ಬಗೆಯದೆ ಬಂದ ಸುರಚಾ
ರಣರ ಹಾಹೆಯ ತೊಡರುಪೆಂಡೆಯ ಮೆರೆವ ಖಳಮಲ್ಲ ॥ ೧೬ ॥

ಕೊಳನ ಹೊಕ್ಕಿಭದಂತೆ ಕಪಿದಳ
ದೊಳಗೆ ಸುಭಟರ ಚಲ್ಲವಾಡುತ
ಬಲವನರಿಭಟ ಸುಳಿದು ತುಳಿದನು ಹಿಳಿದು ಹಿಂಡಿದನು ॥
ಕೆಲರು ಕಂಪಿಸೆ ಕೆಲರು ಕಂಗೆಡೆ
ಕೆಲರು ದೆಸೆದೆಸೆಗೋಡೆ ವೀರರ
ತುಳಿಸೆ ಕಬ್ಬಿನ ಗಾಣದೊಳಗಾದಿಲಿಯ ತೆರನಾಯ್ತು ॥ ೧೭ ॥

ಕಾಡ ಕಿಚ್ಚಿನ ಕಡುಹ ತೆಗೆ ತೆಗೆ
ಬಾಡಬಾಗ್ನಿಯ ಮೊಗವ ಬಿಡು ಬಿಡು
ನೋಡಲಿಂದ್ರಾರಾತಿಯುರಿಗಣ್ಣಾಭವನಾಲಿಯನು ॥
ಬೇಡಿ ತಂದಂತಿಹುದು ಕಪಿಸಡೆ
ಯೋಡುತಿರೆ ಕಂಗೆಟ್ಟು ರಾಘವ
ನೋಡೆ ಭಕ್ತನ ಮೊಗವ ಕೈಮುಗಿದೆದ್ದ ವಿಭಿಷಣನು ॥ ೧೮ ॥

ಹಗೆಯ ಕಾಳಗವೆನಗೆ ತನಗೆಂ
ದಗಿದು ಸುಭಟರು ಹೇಳು ಹೇಳೆಂ
ದಗಣಿತಾಸ್ಥಾನದಲಿ ಪಟುಭಟರೆದ್ದು ಬೇಡುತಿರೆ ॥
ಹಗೆಯನಾದರೆ ಕುಂದೆ ಗುಣದಲಿ
ವಿಗಡ ವಿಕ್ರಮ ವೀರ ದೈತ್ಯನ
ಘಗ ಮಹಾಬಲ ಸಾಕು ಸೈರಿಸಿಯೆಂದ ವಿಭಿಷಣನು ॥ ೧೯ ॥

ಭೂತಳಾಧಿಪ ಚಿತ್ತವಿಸು ಖಳ
ಕೌತುಕದ ಕಾಳಗದಿ ಗೆಲುವನು
ಖ್ಯಾತಿಯುಳ್ಳವ ನಿಮ್ಮ ಚಿತ್ತವು ಬಲ್ಲುದಂತಿರಲಿ ॥
ವಾತಜನ ಮೂಲಿಕೆಗೆ ಕಪಿಬಲ
ಚೇತರಿಸಿದುದು ಬೇಡ ತತ್ತರೆ
ಭೂತನಾಥನ ತಡೆವನೆಂದನು ದನುಜ ರಘುಪತಿಗೆ ॥ ೨೦ ॥

ಉಂಟು ಸಂಶಯವಿಲ್ಲ ರಾವಣ
ಗೆಂಟು ಮಡಿಯಿಂದ್ರಾರಿ ರಣದಲಿ
ಬಂಟತನದ ಪರಾಕ್ರಮಂಗಳ ಕಾಣದೇ ಲೋಕ ॥
ಗಂಟಲೊಡೆವಂತರುಣ ವಾರಿಯ
ನೀಂಟದೇ ರಣಭೂತ ಸಂತತಿ
ವೆಂಟಣಿಸಿ ಗೆಲಲರಿದು ತಪ್ಪದುಯೆಂದ ರಘುರಾಯ ॥ ೨೧ ॥

ಖಳನ ಪರಿಯಲಿ ಹೆರಸಿ ಮಕ್ಕಳ
ನೆಲವೊ ಪಡೆದವರುಂಟೆ ಧರೆಯಲಿ
ಹುಳುವಿನಂದದಲನ್ನ ರಸದಲಿ ಜನಿಸಿ ಫಲವೇನು ॥
ಖಳನು ಅಲ್ಪನದಲ್ಲ ವೀರರ
ಕುಲಶಿರೋಮಣಿಯೆಂಬರೆಲ್ಲರು
ಎಲವೊ ಕಂಡೆವು ಸಾಕುಸಾಕೆನುತಿರ್ದ ರಘುರಾಯ ॥ ೨೨ ॥

ಸಲಹಿದರೆ ಸತ್ಪುತ್ರರುಭಯದ
ಕುಲವನುದ್ಧರಿಸುವರು ಹಲವರು
ಇಳೆಗೆ ಭಾರಕರಿದ್ದು ಫಲವೇನುಂಟು ಪಡೆದವರ ॥
ತಲೆಗೆ ನಾಣ್ನುಡಿಗಳನು ತಪ್ಪರು
ಯೆಲವೊ ಯೌವನಗೇಡಿಗಳು ತೆಗೆ
ಖಳ ಸುಭಾಗ್ಯನು ಪುಣ್ಯವಂತನು ಧನ್ಯ ಮಕ್ಕಳಲಿ ॥ ೨೩ ॥

ಹರನ ಬೀಜದಲುದಿಸಿದಾತನ
ನರರು ಗೆಲುವರೆ ಕುಲಮಹೋಧದಿ
ವೆರೆತ ಪತ್ರಕೆ ಬಳಿಯ ನೊರಜಿನೊಳಷ್ಟೆ ಒಡನಾಟ ॥
ಉರಿಯುಮರಿಯೊಡನಾಟ ಒರಲೆಯ
ನೆರವಿಗೇತಕೆ ವೀರ ದೈತ್ಯನ
ಧುರದಲಾನುವೆನೆನುತ ರಘುಪತಿ ಬಿಲ್ಲ ನೋಡಿದನು ॥ ೨೪ ॥

ಅರಸ ಬಿನ್ನಹ ಸುರವಿರೋಧಿಯು
ಹರಿಹರಾದ್ಯರಿಗರಿದು ಗೆಲುವೊಡೆ
ತರುಣಿ ನಿದ್ರಾಭೋಜನಂಗಳ ಹನ್ನೆರಡು ವರುಷ ॥
ತೊರೆದರಣ್ಯದಲಿಪ್ಪ ಮಾನವ
ಧರಣಿಯೊಳಗುಂಟಾದೊಡಾತನ
ಧುರದಿ ಗೆಲಬಹುದುಳಿದ ವೀರರಿಗಹುದೆ ಚಿತ್ತೈಸು ॥ ೨೫ ॥

ಎನಲು ಚಿಂತಿಸುತಿರ್ದ ರಘುಪತಿ
ಮನದೊಳುಮ್ಮಳಿಸುತ್ತ ಬರುತಿಹ
ದನುಜ ಸುಭಟನ ನೋಡುತಿರೆ ಸೌಮಿತ್ರನಿದಿರೆದ್ದ ॥
ಇನಿತು ಸಂಭವಿಸಿತ್ತು ದೈವದೊ
ಳೆನಗೆ ನೇಮುವನಿತ್ತು ಕಳುಹೆನೆ
ನಿನಗಿದೆಂತೈ ತಮ್ಮ ಘಟಿಸಿತು ನಾವರಿಯೆವೆಂದ ॥ ೨೬ ॥

ಪುರದಿ ಬಂದಾ ಚಿತ್ರಕೂಟದ
ಲಿರಲು ತಂದೆನು ಕಂದ ಮೂಲವ
ನರಸನಿದಿರಲಿ ಇರಿಸಲಾರೋಗಣೆಯ ಸಮಯದಲಿ ॥
ಕರೆಯೆ ಹಸಿವಿಲ್ಲಡವಿಯುಲಿ ಫಲ
ಭರಿತವುಣಿಸನು ಮೆದ್ದೆನೆಂದೆನೆ
ಕರುಣಿ ನೀನೆನಗಂದು ನೇಮುವನಿತ್ತೆಲಾಯೆಂದ ॥ ೨೭ ॥

ಒಡನೆವುಂಬಾ ಮೋಹದಿಂದವೆ
ನುಡಿದೊಡೈ ಮರಳುಹರೆ ತಮ್ಮಾ
ಅಡವಿಯುಲಿ ಪಣ್ಫಲವ ಮೆಲುವರೆಯೆಂದು ನೀವೆನಗೆ ॥
ನುಡಿದ ನುಡಿ ಪರಮಾರ್ಥವೆಂದಾಂ
ಹಿಡಿದು ನಡೆಸಿದೆನಿರಳು ನಿದ್ರೆಯು
ತಡೆದು ತಿರುಗಿದೆ ಪರ್ಣಶಾಲೆಯೊಳೆಂದ ಸೌಮಿತ್ರಿ ॥ ೨೮ ॥

ಅಲ್ಲಿ ಮೊದಲಾಗರಸ ನೀವುಂ
ಬಲ್ಲಿ ಎನ್ನನು ಕರೆಯದುಳಿದಿರಿ
ಮೆಲ್ಲದಿರನಿವನೆಂದು ಮೈಮರೆದಿಹಿರಿಯುದರಿಂದ ॥
ಸೊಲ್ಲು ಸುವ್ರತವೆಂದು ಹಸಿದಿಹೆ
ನಿಲ್ಲಿತನಕೆಲೆ ದೇವ ಕೇಳೆನೆ
ತಳ್ಳಳಿಸಿದನು ರಾಮ ಮರುಗಿದ ಹಿಂದ ನೆನೆನೆನೆದು ॥ ೨೯ ॥

ಎನ್ನವೋಲವಿಚಾರಿ ಮಾನಿಸ
ರಿನ್ನು ಮುನ್ನಿಲ್ಲಿಳೆಯೊಳಕಟಾ
ಬೆನ್ನಲೊಡಬಂದವನ ಮರೆದೆನು ಮತಿವಿಹೀನನಲ ॥
ನಿನ್ನ ಕೊಂದವ ನಾನು ಮಾತಿನ
ಭಿನ್ನಭಾವವನರಿಯದಕಟಾ
ಬನ್ನಪಟ್ಟೈ ತಂದೆ ಪಾಪಾಗ್ರಜನು ತಾನೆಂದ ॥ ೩೦ ॥

ಮರುಳಲಾ ಮರೆದನು ಮಹಾತ್ಮನ
ನರಸನರಿಯದ ಬಿಟ್ಟೆಂದಾಯಿತು
ತರುಣ ಧಾವತಿಗಾರ ಹಸುಗಮ್ಮಿರಿಯನು ಸಲಹುತ್ತ ॥
ಚಿರದಿನಂಪ್ರತಿ ಹಸಿದು ಹಾಹಾ
ವರುಷ ಹಲವನು ಕಳೆದೆ ಹಾಯೆ
ನ್ನರಸ ಹಸಿದ್ಯೆ ತಂದೆ ಹಸಿದ್ಯೆ ತಮ್ಮ ಬಳಲಿದೆಲ ॥ ೩೧ ॥

ಶೂಲ ಕಿಬ್ಬದಿಗೊಂಡ ಪರಿ ಭೂ
ಪಾಲ ಮರುಗಿದ ಕೊರಳು ಬಿಗಿದುದು
ಆಲಿ ನೀರೇರಿದುವು ಬರಸೆಳೆದಪ್ಪಿ ಲಕ್ಷ್ಮಣನ ॥
ಮೇಲೆ ಹೊರಳಿದ ರಾಮ ಕಪಿಗಳು
ಕೇಳಿ ಮನದೊಳಗಳಲುತಿರಲಾ
ಮಾಲಲನೆ ಮನಗುಂದೆ ಹೊಸೆದನು ತನ್ನ ತಿಳುಬಸುರ ॥ ೩೨ ॥

ಅರಸ ದೈವಾಧೀನ ಸಚರಾ
ಚರದ ಜೀವರ ಸುಖಸುಚೇತನ
ವೆರಡು ದುಃಖವ ಮಾಣು ಮತಿಮರೆದಿಹರೆ ರಣದೊಳಗೆ ॥
ಅರಿಭಟರ ಗೆಲಲೊಂದುಪಾಯವ
ಕರುಣಿಸಿದನೀಶ್ವರನ ಲೇಸಾ
ಯ್ತರಸ ತಮ್ಮನ ಕಳುಹು ಕಾಳಗಕೆಂದ ಜಾಂಬವನು ॥ ೩೩ ॥

ಮೋಹಕವಸರವಿಲ್ಲ ರಣದಲಿ
ಸಾಹಸಿಯ ಗೆಲಬಲ್ಲ ಕಳುಹೆಲೆ
ಊಹಿಸುವೊಡಳವಲ್ಲನಂತನು ಅತುಲ ಬಲಯುತನು ॥
ಹೋಹಬಲ್ಲವ ನಿನ್ನ ತಮ್ಮನ
ಬಾಹುಸತ್ವವ ನೋಡಿ ದುಗುಡನ
ದಾಹವನು ಮರೆಯೆಂದು ಜಾಂಬವ ಹರಿಯ ತಿಳುಹಿದನು ॥ ೩೪ ॥

ಬಳಿಕ ರಕ್ಷೆಯ ಕಟ್ಟಿ ತಮ್ಮನ
ತಲೆಯಲಭಯವನಿಟ್ಟು ಕೊಟ್ಟನು
ಹಲವು ಮಂತ್ರಾಸ್ತ್ರಗಳನಂಗದ ನೀಲ ಜಾಂಬವರ ॥
ಚಲನಭವ ವಿಭಿಷಣರ ಕರೆದಾ
ನಳಿನನಾಭನು ತನ್ನ ತಮ್ಮನ
ಹಲವು ಮಾತೇಂ ನಿಮ್ಮ ಕೈಯಡೆಗೊಟ್ಟೆ ನಾನೆಂದ ॥ ೩೫ ॥

ತಂದೆ ನೋಡುವುದೆಮ್ಮ ಕಡುಹನು
ಇಂದು ರಣದಲಿ ಬಂದ ಹಗೆಯನು
ಹಿಂದುಮುಂದನು ಮಾಡದುಳಿಯೆನು ನಿಮ್ಮ ಕೃಪೆಯುಂಟು ॥
ಹೊಂದಿದನು ಹಗೆಯಿಳೆಗೆ ಮಿಗೆ ತೆಗೆ
ಯೆಂದು ಹರಿಯಡಿಗೆರಗೆ ಕಪಿಗಳ
ವೃಂದವಾರಿತು ದೇವಸಂತತಿ ಹೊಗಳಲಭ್ರದಲಿ ॥ ೩೬ ॥

ಅಸುರದಳ ಭಾರದಲಿ ಗಗನವ
ಮುಸುಕಿ ನೂಕಿದನಮಮ ನೋಟಕ
ವಿಸರ ನಂಜನು ಕುಡಿದ ಪರಿಯಲಿ ಬಾಯ ಬಿಡುತಿರಲು ॥
ದೆಸೆ ಬಿರಿಯೆ ಬೊಮ್ಮಾಂಡದಡಕಿಲು
ಬೆಸುಗೆ ಬಿಡುತಿರೆ ಭುವನ ಕಂಪಿಸೆ
ಕುಸಿಯಲಾರಿತ್ತುಭಯ ಬಲವೆರಡಬ್ಧಿಯಂದದಲಿ ॥ ೩೭ ॥

ಮೀರಿಬಹ ವಾರಿಧಿಗೆ ಸೇತುವ
ತೋರಿದಂತಾಯ್ತಸುರ ಕವಿ ತರ
ಲೇರಿ ಕಪಿಸಡೆ ಕಲ್ಲು ಗುಂಡುಗಳಿಂದ ಕವಿದಿಡಲು ॥
ಹಾರಿ ಹರಿತಪ್ಪವರ ಜರೆವುತ
ಮೂರು ಲೋಕದ ಗಂಡನೈತರ
ಲೇರಿ ನೋಡಿತ್ತುಭಯ ಬಲ ಗಿರಿಗಹನ ಗಹ್ವರದಿ ॥ ೩೮ ॥

ದೊರೆಯನುಜ ಸೌಮಿತ್ರಿಯೊಬ್ಬನು
ದೊರೆಯ ಹೆಮ್ಮಗ ಇಂದ್ರದಲ್ಲಣ
ಸರಿಸ ಸಂಗರಧೀರರಿಬ್ಬರು ಬಾಹು ಬಲಯುತರು ॥
ತರಹರಿಸ ಬೇಕೆನುತ ಯೋಜನ
ವೆರಡರಳತೆಗೆ ತೆಗೆದು ನಿಂದುದು
ಎರಡು ಮೋಹರ ಮೇಲೆ ಸುರ ನೋಟಕರು ಸಂದಣಿಸೆ ॥ ೩೯ ॥

ಮುಂಡಿಸಿದ ತಿರುವಡೆಯು ಬಲುಹಿನ
ಚಂಡಧಾರಿ ಕಠಾರಿಯುಲುಗಲು
ಗೊಂಡೆಯದ ಚರಣದಲಿ ಮೆರೆದಿಹ ತೊಡರು ಪೆಂಡೆಯದ ॥
ತಂಡತಂಡದ ಜಡೆಯ ಬಿಗಿದನು
ಗಂಡುಗಲಿಗಳ ದೇವ ನೃಪ ಭೇ
ರುಂಡ ವಜ್ರಾವರ್ತ ಚಾಪವ ಸೆಳೆದನೆಡಗೈಯ ॥ ೪೦ ॥

ಗವಸಣಿಗೆ ನೆರೆಗಳೆದು ರಿಪುದಾ
ನವನನೊರೆಗಳೆದಂತೆ ತುಂಬಿದ
ವಿವಿಧ ಬಾಣಾವಳಿಯ ಶಸ್ತ್ರವ ಮುಂಡಿಗೆಯನಲುಗಿ ॥
ರವಿಕುಲಾನ್ವಯಚಂದ್ರ ಸೀತಾ
ಧವನ ತಮ್ಮನು ಕಣನ ಹೊಗುತಿರೆ
ದಿವಿಜರಿಪು ವೀಥಿಗಳನಿಕ್ಕೆಲ ಸಾರಿಸಿದನೆಂದು ॥ ೪೧ ॥

ಮರಳು ಮರಳಲೆ ಮನುಜ ವೀರರ
ಹುರುಳ ನೀನೇಂ ಬಲ್ಲೆ ಮೂಗಿನ
ಲಿರಲು ಸುಳಿವನ್ನೆವರ ಸುರವೈರಿಯನು ಗೆಲಲರಿದು ॥
ಮರಳು ನಿನಗಾವೆಲ್ಲಿ ತಿಳಿ ಸಿ
ಮ್ಮರಸಿ ನಮ್ಮರಮನೆಯೊಳಿರುತಿರೆ
ಮರುಳೆ ಬಳಸ್ಯೆ ನಂಟೆ ಕರೆ ನಿಮ್ಮಣ್ಣ ರಾಘವನ ॥ ೪೨ ॥

ಚೋರ ವಿದ್ಯವು ಸಹಜ ನಿಮಗಾ
ಪಾರದಾರ್ಯವು ನಿಯತ ದಿಟ ದಿಟ
ಹಾರುವಂಗವು ಹಸನು ಕೊಂದೊಡಕೀರ್ತಿ ಕೊಲ್ಲದೊಡೆ ॥
ವೀರತನಕೂಣೆಯವು ಪಾತಕಿ
ಸಾರು ಸಾವಿರ ಮಾತ ಸೊರಹಿದ
ಡಾರು ಮೆಚ್ಚುವರೆಲವೊ ಗಾವಿಲಯೆಂದ ಸೌಮಿತ್ರಿ ॥ ೪೩ ॥

ಇರುಳು ಮೋಸದಲೆಮ್ಮ ಸೇನೆಯ
ನೆರಡು ಕಣೆಯದಿ ಗಲಿದೆನೆಂಬೀ
ಬಿರುದು ಬೇಡಂತಿರಲಿ ಕೌಳಿಕ ಯಾರನಟ್ಟಿಸದು ॥
ಧುರದಿ ಮೂದಲಿಸುತ್ತ ಸುಭಟರ
ನೊರಸಿದವನೇ ವೀರ ಹಿಂದಣ
ಪರಿಯಲೀಗಳು ಗೆಲಿದು ಹೋಗದೆ ಮಾಣೆ ನೀನೆಂದ ॥ ೪೪ ॥

ನರಪತಿತ್ವವ ನೀಗಿ ನೀ ವಾ
ನರಪತಿತ್ವವ ಪಡೆವೆ ಸೇನೆಯು
ತುರಗ ಕರಿರಥಪತ್ತಿಗಳು ಘನವಾಯ್ತು ಸರಿ ನಿಮಗೆ ॥
ಭರತನಡವಿಗೆ ನೂಕೆ ಜಡೆಗಳ
ಧರಿಸಿ ಕಾಡನು ತೊಳಲುತಿಪ್ಪೆಲೆ
ಗೊರವ ಕಾಳಗವೇಕೆ ನಿನಗೆಂದಮರ ರಿಪು ಜರೆದ ॥ ೪೫ ॥

ದೇವರೆಲ್ಲರ ಗೆಲಿದೆ ಕುಂಭಿನಿ
ದೇವಿಯೊಲಿದಳು ನಿನಗೆ ರಣಕಿದಿ
ರಾವನೆಂಬೀ ಹಮ್ಮು ಮುರಿವೆನು ಮರಳಗೊಡೆನಿಂದು ॥
ಆವನನ್ಯಾಯಲಿ ನಡೆವನೊ
ದೈವವೇ ತಾ ಕೆಡಹದುಳಿಯದು
ನೀವು ಕೆಟ್ಟಿರಿ ಸಾಯಲರ್ತಿಯೆ ಕಾದು ಬಾಯೆಂದ ॥ ೪೬ ॥

ಅಸುರ ನಾಯ್ಗಳಿಗಾವ ನೀತಿಯು
ನುಸುರಿ ಫಲವೇನುಂಟು ತೊಳೆದರೆ
ಮಸಿಗೆ ಧವಳಿತೆಯುಂಟೆ ಹಿಡಿ ಹಿಡಿ ಬಿಲ್ಲ ನೀನೆಂದ ॥
ಮಸೆದು ತಳವನು ಕೌಶಿಕನ ಪದ
ವಿಸರುಹಂಗಳ ನೆನೆದು ಭುಜಹೊ
ಯ್ದೆಸೆದು ರಾಮನ ನೆನೆದು ಸರಳನು ಸುರಿದ ಸೌಮಿತ್ರಿ ॥ ೪೭ ॥

ಓಡಿತಮರರು ಸರಳ ಸಾರವ
ನೋಡಲಮ್ಮದೆ ಬೆದರಿ ದಿಗುತಟ
ಝಾಡಿಸಿತ್ತವನೀಧರಂಗಳ ಶೃಂಗ ನುಗ್ಗಾಯ್ತು ॥
ಬೇಡಬೇಡೆನಲಂಬು ಕವಿದುವು
ಆಡಲರಿಯೆನು ಸುರವಿರೋಧಿಯು
ಮೂಡಿ ಮುಸುಕಿತು ಕಡಿದನೊಂದೇಕ್ಷಣದೊಳಿನಿತಂಬ ॥ ೪೮ ॥

ಎಲವೊ ನರನೀನೀಸು ವಿದ್ಯವ
ಗಳಿಸಿ ಬಂದುದಪೂರ್ವ ಹದ್ದಿನ
ತಲೆಯು ಮೆಟ್ಟುವ ಹಾವ ಕಂಡೆವು ಹಲವು ಕಾಲಕ್ಕೆ ॥
ತೊಲಗದಿರು ಕಲಿಯಾಗು ಕರೆ ನಿನ
ಗೊಲುವ ತೆತ್ತಿಗರುಳ್ಳರೆನುತವೆ
ಮುಳಿದು ಸರಳನು ಸುರಿದೊಡಂಬರದರುಣ ಬೆದರಿದನು ॥ ೪೯ ॥

ತೊಡುವ ಬಾಣವ ಕಾಣಬಾರದು
ಹಿಡಿದ ಧನು ಚಾಪಾಕ್ಷರಿಬ್ಬರ
ಕಡುಹ ಬಣ್ಣಿಸಲರಿದು ಖಣಿಖಟಿಲೆಂದು ಶರಶರವ ॥
ಕಡಿವ ಬಿರುದನಿ ಕೇಳಬಂದುದು
ವ್ಯಡನ ಕಿವಿಗುರಿಗೆಂಡವುದುರಲು
ಕಡಿದು ಸವೆಯುವು ಬಾಣವಿಬ್ಬರಿಗವುಮು ಸಮರದಲಿ ॥ ೫೦ ॥

ಭಾಪು ಲಕ್ಷ್ಮಣದೇವ ಭಲರೇ
ಭಾಪು ರಕ್ಕಸ ವೀರ ಚಾಗುರೆ
ಭಾಪುರೇ ಸೌಮಿತ್ರಿ ಭಾಪುರೆ ದೇವದಲ್ಲಣನೆ ॥
ಭಾಪುಭಾಪೆನುತೆರಡು ಮೋಹರ
ವಾ ಪರಾಕ್ರಮಿಗಳನು ಹೊಗಳಿತು
ಕೋಪದಲಿ ತೆಗೆದೆಸುವರವರಾಟೋಪವೊಪ್ಪಿದುದು ॥ ೫೧ ॥

ಎಸಲೆಸುವ ಖಂಡಿಸಲು ಖಂಡಿಪ
ಮುಸಗೆ ಮುಸಗುವ ತೊಡಲು ತೊಡುವಾ
ಎಸುಗೆಗಳ ಬಹು ಚಿತ್ರಗತಿಗಳ ಲಾಗುವೇಗವನು ॥
ಹೊಸತು ಹೊಸತೆನೆ ತೋರುತಿರ್ದವು
ವಿಷಮ ವಿಕ್ರಮ ವೀರ ಲಕ್ಷ್ಮಣ
ಮುಸೆದ ಸರಳುಂಡುಂಡು ತೀರಿತು ದನುಜನೊಡಲಿನಲಿ ॥ ೫೨ ॥

ಅಸುರನಡಿಗಡಿಗೆಚ್ಚ ಭೂಪನ
ಮುಸೆದ ಬೋಳಯುದಿಂದ ನೃಪತಿಯು
ಬಸುರನುಗಿದರೆ ನೆತ್ತರೊಕ್ಕುದು ಚಲ್ಲನಿಕ್ಕೆಲಕೆ ॥
ಅಸುವ ಕೊಂಬುದ ಮರೆದು ಬಸರುನು
ನುಸುಳಿ ಬಿಟ್ಟವು ಬಾಣ ಶಿವ ಶಿವ
ಮುಷೆಯುನೆಣಿಸದೆ ಕಾದುತಿರ್ದನಃ ವೀರ ಸೌಮಿತ್ರಿ ॥ ೫೩ ॥

ಮೆಳೆಯ ಬೇಗೆಗೆ ಬಿದ್ದು ವೊರಕುವ
ಹುಲಿಯು ಪರಿಯಲಿ ಭದ್ರ ಮದಗಜ
ಕುಳಿಯುಬಿದ್ದಳವಳಿಪ ಪರಿ ಭೇರುಂಡ ಬಲು ವಿಷದ ॥
ಮಳೆಗೆ ಸೆಡೆದಂತಾದನಾ ದಶ
ಗಳನ ಹೆಮ್ಮೃಗ ವೀರ ಲಕ್ಷ್ಮಣ
ತಿಲಕನಂಬಿನ ಮಳೆಗೆ ಮತಿಗೆಟ್ಟಳುಕಿ ಮರನಾದ ॥ ೫೪ ॥

ವೀರ ಲಕ್ಷ್ಮಣನಂಬು ಕರುಳನು
ಕಾರುತಿರೆ ಖಳನೆದೆಯು ನೆತ್ತರ
ಹೀರುತಿರೆ ನಡು ಬಸುರು ಬಾದಣವಾಯ್ತು ಬಸವಳಿದ ॥
ಕೂರಲಗ ಕಪಿರಾಯ ರಾಯನ
ಭಾರಿಯನುಜನು ನೆಸುತಲಿರ್ದನು
ಸೋರುತಿರೆ ಬಹುಮುಖದಿ ನೆತ್ತರು ಖಳನ ಕಾಯದಲಿ ॥ ೫೫ ॥

ಸವೆಯದೀತಗೆ ಬಾಣವೆಸುತಿರೆ
ಸವೆಯದಸುರಂಗಂಬು ವಿಕ್ರಮ
ಸವೆಯದಿಬ್ಬರಿಗಧಟು ಪಟುತರವಾಯ್ತು ಕೋಪಾಗ್ನಿ ॥
ತವಕದಲಿ ಕಡಿದೆಸುತ ತೆಗೆವುತ
ಬವರಿಗರು ನೆರೆ ಬಿಗಿದ ಹುಬ್ಬಿನ
ಲವಿರಳಾಸ್ತ್ರದಲಮುಮ ರವಿ ನಡೆಗೆಟ್ಟನಭ್ರದಲಿ ॥ ೫೬ ॥

ಸರಳು ಸವೆಯಲು ದೈತ್ಯ ತೆಗೆದಿಸೆ
ಉರಿ ಚಡಾಳಿಸಿ ಪಾವಕಾಸ್ತ್ರವು
ಮೊರೆದು ಭುಗಿ ಭಗಿಲೆಂದು ಹೊಗೆಯೊವರಿಸಿ ಕವಿತರಲು ॥
ತರಣಿಯಾಸ್ತ್ರವ ಬಿಟ್ಟ ಲಕ್ಷ್ಮಣ
ಹರಹಿತಾಗ್ನೇಯಾಸ್ತ್ರವನು ಖಳ
ಮರಳಿ ಮರುತಾಸ್ತ್ರವನು ಬಿಟ್ಟನು ಮಂತ್ರಕೋವಿದನು ॥ ೫೭ ॥

ಮೊರೆದು ಸುಟ್ಟುರುಗಾಳಿಯಟ್ಟಿತು
ತರಣಿ ತಟತಟ ತೊನೆದ ನಭದಲಿ
ಹರಿಕುಲನು ಹರಿಯಾಸ್ತ್ರವನು ಬಿಡಲಂಬು ಅಪ್ಪಳಿಸಿ ॥
ಹರಿದು ಗಾಳಿಯ ಕುಡಿದು ಫಣಿಗಳು
ಸುರವಿರೋಧಿಯ ನಟ್ಟುತಿರೆ ಮದ
ಕರಿಯ ಬಾಣವ ಬಿಡಲು ಕೇಸರಿಯಂಬ ಕವಿಸಿದನು ॥ ೫೮ ॥

ಹಿರಿದು ಕೆಡೆಕೆಡೆಯೆನುತ ಸಚಿವರು
ವೆರಸಿ ವಿಭಿಷಣನೊಂದು ಕಡೆಯಲಿ
ಕೆರಳಿ ಕವಿ ಕವಿದೆಸುತ ಬಂದೊಡೆ ನಕ್ಕನಿಂದ್ರಾರಿ ॥
ಸಿರಿಗೆ ಮರುಳಾದವರು ಸೋದರ
ಹಿರಿಯರಾಪ್ತರ ಕೊಲುವರೆಂಬುದು
ನಿರುತ ನಮ್ಮನು ಕೊಲಲು ಬಂದ್ಯೆ ತಂದೆ ನೀನೆಂದ ॥ ೫೯ ॥

ಆವನನ್ಯಾಯದಲಿ ನಡೆವನೊ
ದೈವವೇ ಕೆಡಹುವುದು ಕೇಳಾ
ಆವು ಕೊಲುವವರಲ್ಲ ಕೊಲುವವ ನಿನ್ನ ಹೆತ್ತವನು ॥
ಕಾವವನು ಕೊಲಬಗೆಯೆ ನೇವಳ
ಹಾವಿನಂದದಿ ಹರಿವುದರಿತಿರು
ದೈವ ವಿಮುಖಗೆ ತಂದೆ ತಾಯ್ಗಳೆ ಮೃತ್ಯುಮಾರಿಗಳು ॥ ೬೦ ॥

ಸಿರಿಗೆ ಮರುಳಾದವರು ಸೋದರ
ಹಿರಿಯರಾಪ್ತರ ಕರುಣವಿಲ್ಲದೆ
ಮುರಿದು ಮುಕ್ಕುವರೆಂದು ಕಟಕಿಯ ನುಡಿದೆ ನಮ್ಮೊಡನೆ ॥
ತರಳ ಕೇಳುವೊಡಿನಿತು ನೀತಿಯು
ನರಕಿ ತಂದೆಗೆ ದೊರಕದಿಹಪರ
ವೆರಡು ಬಾಹಿರ ಕುರುಡನಿರುಳನು ಬೈದು ಫಲವುಂಟೆ ॥ ೬೧ ॥

ತಂದೆ ತನ್ನೊಡಹುಟ್ಟಿದಾತನು
ಯೆಂದು ಕಾಂಬುದೆ ಧರ್ಮ ಮಾರ್ಗವು
ತಂದೆಯೆಂದುದೆ ಧರ್ಮವೆಂದಾ ತಾಯಿ ರೇಣುಕೆಯ ॥
ಕೊಂದು ಕಳೆಯನೆ ರಾಮನೆನಗಾ
ತಂದೆಯೆಂದುದ ಹೊತ್ತು ನಡೆವೆನು
ಕುಂದು ಹೆಚ್ಚಿನ ಮಾತದೆನಗೇಕೆಂದ ನಿಂದ್ರಾರಿ ॥ ೬೨ ॥

ತಂದೆಯಾಗಲಿ ಗುರುವೆಯಾಗಲಿ
ಕಂದನಾಗಲಿ ಪಾಪಕೆಳಸಲು
ಕೊಂದು ಕಳೆವುದೆ ಧರ್ಮ ಗುರುವನು ಕೊಲ್ಲನೇ ಸುರಪ ॥
ತಂದೆ ಹೇಮಾಕ್ಷನನು ಕೊಲಿಸನೆ
ಹಿಂದೆ ತಾ ಪ್ರಹ್ಲಾದ ನೀನದ
ರಿಂದ ಹಗೆ ಮಗನಲ್ಲ ಮರೆಯೇಕೆಂದ ವಿಭಿಷಣನು ॥ ೬೩ ॥

ಆದುದಾಗಲಿ ನೀನು ಕಲಿಸಿದೆ
ಹಾದಿ ಕೊಲ್ಲದೆ ಹಿಂದೆ ನಾ ಕೆ
ಗಾಯ್ದು ಬಿಟ್ಟೆನು ಇನ್ನು ಮುಂದೆನಗಿಲ್ಲ ಹೊಲ್ಲೆಹವು ॥
ಆದುದಾಗಲಿ ಕೈದು ದಣಿಯಲಿ
ಹೊಯ್ದು ಕೆಡಹುವೆನೆನುತ ಮೇಘನಿ
ನಾದ ಹರಿತರೆ ಕೈಯ ಖಡ್ಗವ ಕಡಿದ ವಿಭಿಷಣನು ॥ ೬೪ ॥

ಕಿಡಿಯನುಗುಳುತ ಮರಳಿ ಚಾಪವ
ತೊಡಚಿ ಸುರಿದನು ಸರಳ ಸಾರವ
ಕೆಡುವ ಕಾಲವು ದೈತ್ಯಗೆಂದುದು ನೋಟಕವ್ರಾತ ॥
ಹಿಡಿದು ಬಿಲ್ಲನು ಕಡಿದು ಮಕುಟವ
ಕೆಡಹಿ ಬಸುರೊಳಗಂಬ ಕೋದನು
ಮಿಡುಕುಗೆಟ್ಟನು ಹಿಂದೆ ಮರಳಿದನಾ ವಿಭಿಷಣನು ॥ ೬೫ ॥

ಕೆರಳಿ ಲಕ್ಷ್ಮಣನೆಸಲು ಸಾರಥಿ
ಶಿರದ ಸಂಚವು ಕಡಿದು ಬಿದ್ದುದು
ತುರಗ ತೂಕಡಿಸಿದುವು ಮಂತ್ರ ಶರಾಳಿಯಡಗಿದುವು ॥
ಕರದ ಧನು ಕಡಿವಡೆಯೆ ರಕ್ಕಸ
ಹುರುಳುಗೆಟ್ಟನು ಹಿಂದೆ ತಿರುಗಿದ
ನರಕದತ್ತಲು ಮನವ ಮಾಡಿದ ಬಿಟ್ಟ ಸೂಠಿಯಲಿ ॥ ೬೬ ॥

ಎಲೆಲೆ ಹರಿ ಹರಿ ಮರುಳೆ ಲಕ್ಷ್ಮಣ
ನಿಲದಿರಡಗಟ್ಟೋಡಲೀಸದೆ
ಖಳನು ಕೈಗುಂದಿರ್ದ ಸಮಯದಲೋಡಿ ಕುಂಭಿನಿಯು ॥
ಬಿಲನ ಹೊಕ್ಕರೆ ಭಾಳನೇತ್ರನ
ಬಳಿಕ ಕೇಂಬನೆ ಕಮಲಜಾಸ್ತ್ರದಿ
ತಲೆಯ ಕೊಳು ಕಲಿಯಾಗು ಕಲಿಯಾಗೆಂದ ವಿಭಿಷಣನು ॥ ೬೭ ॥

ಸುಡಲಿ ಕಂಗೆಟ್ಟೋಡಿದಾತನ
ಕೆಡಹಲೊಲ್ಲೆನು ಹೋಗಲೇದೆನೆ
ಕೆಡಿಸಿ ಕಳೆದೈ ರಾಜಕಾರ್ಯವ ತತ್ತ ಸಮಯದಲಿ ॥
ಅಡಸಿದಾಪತ್ತಿನಲಿ ಹಗೆಯನು
ಕೆಡಹುವುದೆ ನೃಪನೀತಿ ರಾಮನ
ಕೆಡಿಸಿದಾತನು ನೀನು ದಾನವನಲ್ಲ ಬಗೆಯೆಂದ ॥ ೬೮ ॥

ಎನಲು ಹಿಂಚಿತು ಮಾತು ಲಕ್ಷ್ಮಣ
ಕನಲಿ ಓಡುವ ಖಳನನಟ್ಟಿದ
ದನುಜ ನಿಲು ನಿಲು ಹೋಗದಿರು ತಿರುಗೆನುತ ಪಹಿಲಡಲಿ ॥
ಅನಿಮಿಷರು ನಲಿದಾಡೆ ನೆರೆದುದು
ವನಚರಂಗಳು ಕಲ್ಲುಗುಂಡನು
ತನತನಗೆ ಸುರಿಯುತ್ತ ಬೆಂಬೊತ್ತಿದರು ದಾನವನ ॥ ೬೯ ॥

ದನುಜನೋಡುವ ಮನುಜನಟ್ಟುವ
ಮನುಜನೋಡುವ ದನುಜನಟ್ಟುವ
ನೆನಲು ಸರಿಮಿಗಿಲಾಗಿ ಖಳನೃಪರೋಡುತಟ್ಟುತಿರೆ ||
ದನುಜ ಮಿಂಚಿದ ಮನುಜ ಹಿಂಚಿದ
ಮನುಜ ಮುಂಚಿದ ದನುಜ ಹಿಂಚಿದ
ನೆನಲು ದೈವದಸಲಸುರ ಹಿಂಚಿದ ಮನುಜ ಮುಂಚಿದನು || ೭೦ ||

ವೀರಭದ್ರನ ಕೆಣಕಿ ಹೊಗುವರೆ
ಮಾರಿಕವ್ವೆಯ ಮರೆಯನೆಲೆ ಖಳ
ಮಾರಮಥನನ ನೆರೆಯ ಹೊಕ್ಕರು ಬಿಡುವೆನೇ ನಿನ್ನ ||
ಚೋರ ವಿದ್ಯದಲೋಡು ನೋಡುವೆ
ತೀರಿತೆಲವೋ ನಿನ್ನ ದೆಸೆಯೆಂ
ದಾರಿ ಬಾಣವ ಸೆಳೆದೊಡಸುರನ ಮರಣ ಸೂಚಿಸಿತು || ೭೧ ||

ಧರಣಿ ಕಂಪಿಸಿತಭ್ರಮಾರ್ಗದಿ
ತರಣಿ ನಿಷ್ಪ್ರಭನಾದ ಲಂಕೆಯೊ
ಳುರವ ಕೊಳ್ಳಿಗಳುದುರೆ ರಕುತದ ಸೋನೆ ಸುರಿವುತಿರೆ ||
ತಿರುಗುತಿರ್ದುವು ಹದ್ದು ಕಾಗೆಗ
ಳರಿಯ ಜೀವವು ನೆತ್ತಿಗೇರಲು
ಮೊರೆದು ಘೂರ್ಮಿಸುತಿರ್ದುದಂಬುಧಿ ಕದಡಿ ಕುದಿಕುದಿದು || ೭೨ ||

ಕೆನ್ನೆವರೆಗುಗಿದೆಸುತ ಮನದಲಿ
ತನ್ನ ಗುರು ಕೌಶಿಕನ ನೆನೆವುತ
ಯನ್ನ ಮನದಲಿ ಭಕ್ತಿಯುಳ್ಳೊಡೆ ರಾಮನಂಘ್ರಿಯಲಿ ||
ಎನ್ನ ರಾಘವ ಸತ್ಯನಾದೊಡೆ
ಬನ್ನವಡಿಸಿದ ನಾಯ ಹರಣವ
ತಿನ್ನು ತಿನ್ನೆನುತಾರಿ ಬಾಣವ ಬಿಟ್ಟ ಸೌಮಿತ್ರಿ || ೭೩ ||

ಭುಗಿಲು ಭುಗಿಭುಗಿ ಧಗಿಲು ಧಗಿಲೆಂ
ದೊಗೆದುದಳ್ಳುರಿಯುಗಳಲಂಬರ
ಕುಗಿದು ಜಿಗಿದುದು ಮತ್ತೆ ಹರಿದುದು ಲೋಕ ಬೆದರುತಿರೆ ||
ಮೊಗೆದು ನುಕ್ಕಿತು ಕೊರಳ ಕಡಿಯಲು
ನೆಗೆದು ಹಾರಿತು ರುಂಡ ಶೋಣಿತ
ವೊಗುತ ಕುಣಿದುದು ಮುಂಡ ಮುಕುತಿಯ ಕೊಂಡನಸುರೇಂದ್ರ || ೭೪ ||

ಸೋರುತಿಹ ಬಿಸಿನೆತ್ತರಿಂದವೆ
ಚೀರುತಾ ತಲೆ ಬಿದ್ದುದವನಿಗೆ
ಮೂರು ಲೋಕದ ಮಾರಿಬಿದ್ದುದು ಪ್ರಾಣವನು ನೀಗಿ ॥
ಆರಿದುದು ಕಪಿ ಸೇನೆ ಲಕ್ಷ್ಮಣ
ವೀರಸಿರಿಯು ಕಟಾಕ್ಷವಡೆದನು
ಸೋರಿದುದು ಸುಮನೌಘವಮರರ ದುಂದುಭಿಗಳ್ಮೊಳಿಯು ॥ ೭೫ ॥

ಕ್ರೂರತನದಲಿ ಕೊಲಿಸಿ ಚಿಂತಿಸ
ಲಾರುಮೆಚ್ಚುವರೆಲವೊ ವಿಭಿಷಣ
ಸೋರುತಿಹ ಕಂಬನಿಯನುಗುರಲಿ ಮಿಡಿದು ಸೈರಿಸದೆ ॥
ವೀರನಘಟನು ನೆನೆದು ಮನದಲ
ಪಾರ ದುಗುಡವ ತಾಳೆ ಜಾಂಬವ
ಸಾರ ಸಂಗತಿಯಿಂದ ತಿಳುಹಿದನಾ ವಿಭಿಷಣನ ॥ ೭೬ ॥

ಹರುಷದಲಿ ಹೊರೆಯೇರಿ ಮನದಲಿ
ಮುರಿದ ಹೆಕ್ಕಳದಿಂದ ಹೆಚ್ಚಿದ
ಕರುಣದಲಿ ಕಣು ನೆನೆದು ಮುಪ್ಪುರಿಗೊಂಡು ಬಲುಹೇರಿ ॥
ಕರ ದಣಿಯೆ ತಕ್ಕೈಸಿ ಕಂಗಳ
ಬರವು ಹಿಂಗಲು ನೋಡಿ ತಮ್ಮನ
ಹರುಷದಳತೆಯನಂತ ಪರಮಾನಂದಪರನಾದ ॥ ೭೭ ॥

ಹರಿಯ ನೇಮದಲಾ ಸುಷೇಣನು
ಪರಮ ಮೂಲಿಕೆಯಿಂದರೆಲ್ಲರ
ಕೊರೆದ ಖಂಡದ ಹರಿದ ಬಸುರಿನ ಸುರಿದ ಕರುಳುಗಳ ॥
ಮರಳಿ ಮುನ್ನಿನ ಪರಿಯ ಮಾಡಿದ
ಸರಳು ತವತವಗುಗುಚಿಬಿದ್ದುವು
ನಿರಜರಾದರು ಹೊತುದಮರರ ಸುರಮಹೀರುಹವು ॥ ೭೮ ॥

ಹರನ ಪೂಜಿಸಿ ಬಳಿಕ ಷಡುರಸ
ಭರಿತವಹ ಫಲಕಂದ ಮೂಲವ
ನರಸ ಮೋಹದಲನುಜನೊಡನಾರೋಗಣೆಯ ಮಾಡಿ ॥
ಅರಸ ಬಳಲಿದೆ ತಮ್ಮ ಬಳಲಿದೆ
ತರುಣ ಬಳಲಿದೆ ಧುರದಿ ಬಳಲಿದೆ
ಹಿರಿದು ದಿನ ಹಸಿದೆಯಲಾಯೆನುತಿರ್ದ ರಘುರಾಯ ॥ ೭೯ ॥

ಬರಸೆಳೆದು ಬಿಗಿಯಪ್ಪಿ ತಮ್ಮನ
ಶಿರವನಾಘ್ರಾಣಿಸುತ ಬಾರೈ
ವರ ಸಹೋದರ ಕಲ್ಪತರುವೇಯೆಂದು ಬೋಳೈಸೆ ॥
ಹರುಷದಲಿ ಕಪಿಭಟರು ತಮ್ಮಯ
ನೆರೆದ ಬಳಲಿಕೆಯಾರಿತೆಂದರು
ಸುರದಿಶಾಪಟನಳಿಯೆ ರಘುಪತಿ ನಲಿಯೆ ಹರನೊಲಿಯೆ ॥ ೮೦ ॥

---

## ೩೭ನೇ ಸಂಧಿ

ಪಲ್ಲ ॥ ಕಾಳ ರಕ್ಕಸ ಕವಿದು ಹಳಚಲು
ಮೂಲ ಬಲ ಮುನ್ನೂರು ಪದ್ಮವ
ಭಾಳಲೋಚನನಂತೆ ಲಯಿಸಿದನೆಂದು ರಘುರಾಯ ॥

ಪದ ॥ ಅತ್ತಲಸುರನು ಬಿದ್ದ ಬೇಗೆಯು
ಹೊತ್ತಿ ಬಿತ್ತಿದಳಲ್ಕೆ ಬೆಳೆದುದು
ಹತ್ತು ತಲೆಯುವನರಸಿ ಮಂಡೋದರಿಯ ನೇತ್ರದಲಿ ॥
ಮುತ್ತಿನಂತಿರೆ ಕಂಬನಿಗಳಿಳಿ
ವುತ್ತ ಬಿದ್ದಳು ಬಸುರ ಹೊಡೆದಳ
ಲುತ್ತ ಗರುವಿಕೆಗೆಟ್ಟು ಹೊರಳಿದಳಕಟ ಬಾಯ್ಬಿಡುತ ॥ ೧ ॥

ಛಲದ ಭುಜ ಮುರಿಯಿತ್ತು ರಾಕ್ಷಸ
ಕುಲದ ಕುಡಿ ಮುರುಟಿತ್ತು ಹಗೆಗಳು
ನಲಿದು ನಗುವಂತಾಯ್ತು ದೇವಾಸುರರ ಗೆಲಿದವನು ॥
ಹುಲು ಮನುಷ್ಯರ ಕೈಯಲಳಿದನೆ
ಲಲನೆಗೋಸುಗ ಹೆತ್ತ ಮಗನನು
ಕೊಲಿಸಿದ್ದೈ ಹಾ ಪಾಪಿ ಹಾಹಾಯೆನುತ ಮರುಗಿದಳು ॥ ೨ ॥

ಕತ್ತುರಿಯ ಸುಟ್ಟುರುಹಿಯುರಳನು
ಮತ್ತೆ ಮುಕ್ಕಿದ ತಾಯ ಮಾರುತಿ
ತೊತ್ತ ಕೊಂಡನು ಮದುವೆಯಾದನು ತಪ್ತ ಕೋಪದಲಿ ॥
ಕಿತ್ತುಕೊಂಡಾ ನಾಚಿಕೆಗೆ ತಲೆ
ಕುತ್ತಿಕೊಂಡಂತಾಯ್ತು ಮಗಗೇ
ಮಿತ್ತುವಾದನು ತಂದೆ ಮಾರಿಯ ತಂದ ತಾನಿಂದು ॥ ೩ ॥

ಎಣಿಸಿ ಮಾಡುವುದೇನು ತಪ್ಪದು
ಹಣೆಯ ಬರಹವು ಶಿವ ಶಿವಾ ಸದು
ಗುಣಿಯೆ ವೀರರ ಕಣಿಯ ಕಣ್ಣಿಂದಗಲಿದೈ ಮಗನೆ ॥
ಭಣಿತೆಯುಡಗನು ತುಡುಕಿ ಹೆಡೆಯಾ
ಮಣಿಯ ನೀಗಿದ ಹಾವಿನಂತೆಯೆ
ಒಣಗಿದಾಸ್ಯದ ದನುಜ ಗೋಳಿಡುತಿರ್ದ ಬಹುಮುಖದಿ ॥ ೪ ॥

ಗಾಳಿ ಸೋಂಕದ ಸೊಬಗ ಕಾಂತಾ
ಜಾಲ ಕೆದರಿದ ಕೇಶದಿಂದವೆ
ಗೋಳಿಡುತ್ತಿರೆ ಮನೆಯ ಹೊರವಂಟಾಜಿಗೈದಿದರು ॥
ಬಾಲಶಶಿಕಿರಣಕ್ಕೆ ಬಾಡುವ
ಬಾಲೆಯರು ಬಸವಳಿವುತಸುರನ
ಮೇಲೆ ಬಿದ್ದಳುತಿರ್ದರುರಿಯೊಳು ಬಿದ್ದ ಗಿಣಿಯಂತೆ ॥ ೫ ॥

ಸುರಜಿತನ ವಧು ಶುಭ್ರಲೋಚನೆ
ತರುಣಿಯಾಕೆಯ ಬೆನ್ನಲೊದಗುವ
ತರಳೆಯರುಗಳು ಮೂರು ಸಾವಿರ ಸೊಬಗ ಕಾಂತೆಯರು ॥
ಅರಸಿ ಮಂಡೋದರಿ ಮಹಾವಧು
ವೆರಸಿ ಬಾಯ್ಬುಸುರುಗಳ ಬಡಿವು
ತ್ತಿರದೆ ಗೋಳಿಡುತಾಜಿ ಗೈದಿತು ಬಹಳ ಶೋಕದಲಿ ॥ ೬ ॥

ವೀರ ವಿತರಣ ಕೆಟ್ಟೆವೇ ಹಾ
ನಾರಿ ನಯನಾನಂದ ಹಾ ಹಾ
ಮಾರ ಮೂರುತಿ ಹಾ ಮದೀಯ ಪ್ರಾಣವಲ್ಲಭನೆ ॥
ಹಾ ರಮಣ ಹಾ ಪತಿಯೆ ಹಾಯಿ
ನ್ನಾರು ಸಲಹುವರೆಮ್ಮ ದೃಷ್ಟಿಗೆ
ದೂರವಾಧೈ ಕಾಂತ ಹಾ ಕಮನೀಯ ಗುಣನಿಧಿಯೆ ॥ ೭ ॥

ಹೊಳೆನ ತೋಳಿಂದಾರನಪ್ಪುವೆ
ಕಲಶಕುಚಕಿನ್ನೊಲುಮೆಯಡಗಿತೆ
ಕಳೆಗಳನುಭವದರಸ ಹೋದನೆ ಹೋದನೇ ವಿಧಿಯೆ ॥
ಚೆಲುವ ರಮಣನನೊಯ್ದೆಯಕಟಾ
ಮುಳಿದು ಕೊರೆವೈಯೆಮ್ಮ ಗಂಟಲ
ಅಳಲುಗಿಚ್ಚನದೆಂತು ಮರೆವೆಯೆನುತ್ತ ಹೊರಳಿದಳು ॥ ೮ ॥

ಸುರರ ಸೆರೆವಿಂಡುಗಳನಾಳ್ದನೆ
ಸುರಪನಭಿಮಾನವನು ಕೊಂಡನೆ
ಸಿರಿಯುಮಗನಿಂದಧಿಕ ಸೊಬಗನೆ ಪ್ರಾಣವಲ್ಲಭನೆ ॥
ಮರಣವಿಲ್ಲದ ಗಂಡ ದೊರಕಿದ
ಸರಿಯುದಾರೆಮಗೆಂದೊಡೆಮ್ಮನು
ಸುರರ ಸೂಳೆಯುರಣಕವಾಡುವ ಕಾಲವಾಯ್ತೆಂದು ॥ ೯ ॥

ತತ್ತ ಅರಿಗಳ ಕಾಲದಂಡನು
ಮಿತ್ತು ಮಾರಿಯು ಮರಣದೇವತೆ
ಯೆತ್ತಲಡಗಿದೆ ತನ್ನ ವೈಸಿರಿಯಾರಿಗುಪಭೋಗ್ಯ ॥
ಎತ್ತಣಿಂದೀ ಮಾರಿದೇವಿಯು
ಹತ್ತು ತಲೆಯುವ ತಂದು ಕೊಂದನು
ಮಿತ್ತುವಾಗಿಯೆ ಸೀತೆ ಜನಿಸಿದಳೆಮ್ಮ ಪತಿಗಿಂದು ॥ ೧೦ ॥

ಪರಸತಿಯು ಬೇಟದಲಿ ಮಾವನು
ಕೊರಳ ಕೊರೆಸಿದನೆಮ್ಮ ಗಂಡನ
ಮರಳಿ ಮರಳಿದು ರಣಕೆ ಕಳುಹಿದ ಮೋಹವನು ಬಿಸುಟು ॥
ಹರಿಯು ಚರಣವ ಸಾರಿ ಪಡೆಸನು
ಕಿರಿಯ ಮಾವನು ಬಹಳ ಭಾಗ್ಯವ
ಮರಳಿ ಬಿದ್ದೈಯುರಸ ನಮ್ಮಯು ಗೋಣ ಕೊಯ್ದೆಯೆಲ ॥ ೧೧ ॥

ಅತ್ತೆ ಸೊಸೆಯುರ ಬಸುರು ಕಿಚ್ಚಿಂ
ಹೊತ್ತಿ ಹೊಗೆದುದು ಖಳನ ಕುಣಪವ
ನೆತ್ತಿ ಮುಂಡಾಡುವರು ತಕ್ಕೈಸುವರು ತೋಳಿನಲಿ ॥
ಅತ್ತು ಧರಣಿಗೆ ಬಿದ್ದು ಹೊರಳಲು
ಹತ್ತು ತಲೆಯುವ ಬಂದು ಧೈರ್ಯದ
ಲೆತ್ತಿದನು ಸತಿ ಸೊಸೆಯುರಿಬ್ಬರ ಥಗೆಯ ನಭಕೊತ್ತಿ ॥ ೧೨ ॥

ಏಳಿದೇನೌ ಶುಭ್ರಲೋಚನೆ
ಬೀಳುಗೊಡು ಪರಿತಾಪ ಶೋಕವ
ಕೇಳು ರಾಮನ ಕೊಂದು ಕಳೆವೆನು ಮೃಗನ ಮಡಿದಳಲ ॥
ನಾಳೆ ನೋಡುವೆಯೇನು ಜಾನಕಿ
ಗೋಳುಗುಟ್ಟುವ ಹದನವೆನುತವೆ
ಕಾಳ ರಕ್ಕಸ ಹರಿದನಸುಕೆಯು ವನಕೆ ಬೇಗದಲಿ ॥ ೧೩ ॥

ಜಾರೆ ಸವತಿಗೆ ಮುನಿದು ಸಲಹಿದ
ಕೀರ ಶಿಶುವನು ಕೊಲುವ ಪರಿಯೊ
ಹಾರ ತನಗಾದಂತೆ ರಾವಣ ಜಾನಕೀ ವಧುವ ॥
ಕ್ರೂರತನದಲಿ ಕೊಲಲು ಹರಿದನು
ಕೂರಸಿಯನೊರೆಗಳೆದು ಝಳಪಿಸಿ
ಸಾರುಸಾರೆನುತಡ್ಡಬಂದರ ತುಳಿವುತ್ತೈತಂದ ॥ ೧೪ ॥

ತಮ ಶಶಾಂಕನ ನುಂಗಲಾರದೆ
ಕ್ರಮದಲಾರೋಹಿಣಿಯ ನುಂಗಲು
ಭ್ರಮಿಸಿ ಹರಿತಹವೋಲು ರಾವಣ ಮೈಥಿಲಿಯ ಬಳಿಗೆ ॥
ಆಮಮ ಹರಿದನು ರಾಮ ರಕ್ಷಿಸು
ರಮಣ ರಕ್ಷಿಸು ಪತಿಯೆ ರಕ್ಷಿಸು
ಕಮಲಲೋಚನ ಕಾಯು ಕಾಯೆನುತಿರ್ದಳವನಿಸುತೆ ॥ ೧೫ ॥

ರಕ್ಕಸರ ಕೈಗಾಹಿನೊಳಗಾಂ
ಸಿಕ್ಕಿದೆನು ಕರುಣಾಳು ರಕ್ಷಿಸು
ಅಕ್ಕರಿಲ್ಲವೆ ಭಕ್ತವತ್ಸಲನೆಂಬರೈ ನಿನ್ನ ॥
ಇಕ್ಕಲಿಕೆ ಪಶು ಬಲಿಯನೆನ್ನಿವ
ನೊಕ್ಕಿ ಬಂದಪನಾತ್ಮಬಾಂಧವ
ದಿಕ್ಕುಗೆಟ್ಟೆನನಾಥಬಂಧುವೆ ರಕ್ಷಿಸೆನುತಿರಲು ॥ ೧೬ ॥

ಎಲೆಲೆ ಶಿವ ಶಿವ ಹೊಡೆದ ಹೊಡೆದನು
ಜಲಜಗಂಧಿಯನಕಟ ರಾವಣ
ಸಲಹುವವರಾರಿನ್ನು ಶಿವ ಶಿವಯೆನುತ ಬಾಯ್ಬಿಡಲು ॥
ಸಲೆ ಜಗತ್ರಯವೆಲ್ಲ ಗೋಳಿಡೆ
ಖಳನ ಕೈಗಡಹಾಯ್ದು ಖಡ್ಗವ
ಸೆಳೆದುಕೊಂಡನು ಸಚಿವಪತಿ ವಿರುಪಾಕ್ಷನೆಂಬವನು ॥ ೧೭ ॥

ಹಲವು ವೇದ ಪುರಾಣ ಶಾಸ್ತ್ರವ
ತಿಳಿದು ನೀ ಮರುಳಾದೆ ದಿಟ ದಿಟ
ಕೊಲುವರೇ ಸಿರಿಯಂದದವಳನು ಧರ್ಮವೇ ನಿನಗೆ ॥
ಚೆಲುವ ಕಾಮಿನಿಯರನು ಬಲುಹಿಂ
ದೊಲಿಸಲೊಲುವರೆ ಕೊಂದರುಂಟೇ
ಕೊಲುವ ಮಾತಂತಿರಲಿ ಕೇಳ್ಳೈ ಯುಕುತಿಗಳನೆಂದ ॥ ೧೮ ॥

ವೈರಿಯಲಿ ನಾರಿಯಲಿ ನದಿಯಲಿ
ಜಾರೆಯಲಿ ನಯವಿಡಿದು ಕೊಂಬುದು
ಕಾರಿಯವನವ ಬುದ್ಧಿವಂತನು ಕೋಪವೇಗುವುದು ॥
ನಾರಿಯರ ಕೊಂದಾವ ಹೆಸುರುಂ
ಟಾರಃ ಮೆಚ್ಚುವರಿದನು ಬಿಡು ಬಿಡು
ತಾರತಮ್ಯವನರಿಯೆ ಕೇಳ್ಳೈ ಮಾತುಗಳನೆಂದ ॥ ೧೯ ॥

ತನಯನಳಲನು ಸೀತೆಯೊಲ್ಲದ
ಮನದ ಚಿಂತೆಯು ಮನುಜರಿಬ್ಬರ
ತನುವ ತತ್ತರದರಿದು ಹಿಂಗಿಸು ಕಣನ ಮಧ್ಯದಲಿ ॥
ಎನಲು ತಿಳಿದುದು ಕೋಪ ಕಾಹಿನ
ದನುಜೆಯರ ಕರೆದೆಂದ ಸೀತೆಯು
ಮನೆಗೆ ಕರೆತರೆ ನಿಮ್ಮ ಪಾಲಿಪೆನೆಂದು ಖಳ ಹೋದ ॥ ೨೦ ॥

ತನಯನಳಿದಳಲಿಂದ ರಾವಣ
ಕನಲಿ ಕಾಳಗಕೈದೆ ಬೆನ್ನಲಿ
ದನುಜರಕ್ಕಟಿಗರ ಮಹಾ ಪಡೆ ಚಾತುರಂಗದಲಿ ॥
ತನತನಗೆ ಕವಿದೇರಿ ಮುತ್ತಿತು
ವನಚರಂಗಳ ಸೀಳಿ ಬಿಸುಡುತ
ಮುಸಿದು ರಾವಣ ತೇರನಟ್ಟಿದ ವಾಯು ವೇಗದಲಿ ॥ ೨೧ ॥

ಹೊಡೆವ ಹರೆ ನಿಸ್ಸಾಳ ಭೇರಿಯ
ಗಡಣದಬ್ಬರ ಜಗವ ತುಂಬಲು
ಜಡಿದು ಕಪಿಗಳು ಕಲ್ಲುಗುಂಡುಗಳಿಂದ ಕವಿದಿಡಲು ॥
ಬಿಡುವರೇಳುವ ಮುರಿವ ಸಲೆ ಬೊ
ಬ್ಬಿಡುವ ಕೂಗುವ ಗಿರಿಕುಗುಟ್ಟುವ
ಘೊಡೆವ ರಭಸವಲದ್ದಿಹೋಯಿತು ವಾದ್ಯನಿರ್ಘೋಷ ॥ ೨೨ ॥

ದೇವ ಮಗನಳಲಿಂದ ಕಾದಲು
ದೇವಕಂಟಕ ಬಂದ ಮೇಲಿ
ನ್ನಾವುದುಚಿತವು ನೀವೆ ಬಲ್ಲಿರಿ ಕಾಳಗದ ಪರಿಯ ॥
ವೋ ವೊ ಪಡೆ ಮುನ್ನೂರು ಪದ್ಮವು
ರಾವಣನ ಸಮರಕ್ಕೆ ನೆರೆದುದು
ದೇವ ಕೈಮೆಯ ತೋರಬೇಕೆನುತಿರ್ದ ವಿಭಿಷಣನು ॥ ೨೩ ॥

ಬೇಡ ಕಾದುವುದವಳ ಕೊಟ್ಟರೆ
ಬೇಡ ಸಾಕಾನೊಲ್ಲೆನೆಂದೆನೆ
ಬೇಡಿ ಕಾಡುವೊಡೆಮ್ಮ ಬಾಣಗಳವನ ಮಿದುಳುಗಳ ॥
ನೋಡು ನಾಕೀ ಗಳಿಗೆಯೊಳು ಖಳ
ನೋಡುವಂತಾಂ ಮಾಳ್ಪೆನೆನುತವೆ
ರೂಢಿಪತಿಯಡಿಗೆರಗಿ ಭುಜಹೊಯ್ದೆದ್ದ ಸುಗ್ರೀವ ॥ ೨೪ ॥

ದಾನವೇಶ್ವರನವನು ನೋಡಲು
ವಾನವೇಶ್ವರ ನಾನು ತೊಡಚುವೆ
ಮಾನವೇಶ್ವರ ನೀನು ಮೆಚ್ಚಲು ನಾನು ಕಾದುವೆನು ॥
ದಾನವರ ಚತುರಂಗ ಬಲವನು
ವಾನರಂಗಳು ಕವಿವುದೆನುತಾ
ಭಾನುನಂದನ ಕವಿದು ಹಳಚಿದ ದಾನವರ ಪಡೆಯ ॥ ೨೫ ॥

ಕಿತ್ತು ಹೆಮ್ಮರದಿಂದ ಕೆಡೆದನು
ಹತ್ತು ಸಾವಿರ ಮತ್ತ ದಂತಿಯ
ನೊತ್ತಗಟ್ಟಿದ ರಥವ ಮುರಿದನು ಮೂರು ಸಾವಿರವ ॥
ಪತ್ತಿಗಳನೊಂಬತ್ತು ಲಕ್ಷವ
ಕುತ್ತಿ ಹೆಸರಿರದಂತೆ ಮಾಡಿದ
ನುತ್ತಮದ ಹಯವೆರಡು ಲಕ್ಷವ ಕೊಂದ ಸುಗ್ರೀವ ॥ ೨೬ ॥

ಧೂಳು ಕೊಗ್ಗೆಸರಾಯ್ತು ದಾನವ
ಜಾಳ ಹುಡಿಹುಡಿಯಾಯ್ತು ರಾಘವ
ನಾಳು ಕೊಂದನು ಮತ್ತೆ ಹೂಣಿಸಿದಸುರ ನಾಯಕರ ॥
ಹೋಳುಗಳೆದನು ಹೊಡೆದು ಕೊಂದನು
ತೂಳಿ ತುಳಿದನು ಸೀಳಿ ಬಿಸುಟನು
ಆಳುಗಳ ಬಲ್ಲಹನು ಹಾಯ್ದ ಮಹೀಧರನ ಹೊರೆಗೆ ॥ ೨೭ ॥

ರಕ್ಕಸನು ಕಂಗೆಟ್ಟು ಸರಳಲಿ
ಮುಕ್ಕುರುಕಿದನು ತರಣಿ ತನಯನ
ಸಿಕ್ಕಿದನು ಸುಗ್ರೀವ ಕವಿಕವಿಯೆನುತ ಮುತ್ತಿದನು ॥
ಹೊಕ್ಕರೊಮ್ಮುಖವಾಗಿ ರವಿಸುತ
ಲೆಕ್ಕಿಸುವನೇ ಸರಳುಗಿರಳನು
ತೆಕ್ಕವನೆ ತೇಗುವನೆ ಹೊಯ್ದನು ಹಿಡಿದು ದಾನವನ ॥ ೨೮ ॥

ತ್ರಿದಶರಿಪು ಗದಗಂಪುಗೊಳುತಿರೆ
ಪದುಮಮಿತ್ರನ ಪುತ್ರ ದನುಜನ
ಸದೆದನಿಕ್ಕೆಲದಲ್ಲಿ ಮುಕ್ಕುರುಕಿದನು ದಾನವನ ॥
ಇದಿರಲೋಡಿಸಿ ಹಲ್ಲುಗಿರಿವುತ
ಬದಿಯ ತುರಿಸುತ ತಲೆಯ ಮುರಿದೊಡೆ
ತ್ರಿದಶರಾರಿತು ರವಿಜನಧಟನು ಹೊಗಳಿತುಭಯಬಲ ॥ ೨೯ ॥

ಮರಣಮುಖದೊಳಗಾ ಮಹೀಧರ
ವರಿಸೆ ಮುಕ್ತಿಶ್ರೀಯನಿತ್ತಲು
ಹರಿದು ಯುದ್ಧೋನ್ಮತ್ತನತ್ತಲು ಬಂದನಾರುತ್ತ ॥
ತರಣಿಸುತ ನಿಲು ನಿಲ್ಲೆನುತ್ತಿರ
ಲುರುಬಿ ಹರಿದೈತಂದನಂಗದ
ಪಿರಿದು ಹಳಚಿದ ಮಲ್ಲಯುದ್ಧದಲೇನ ಬಣ್ಣಿಸುವೆ ॥ ೩೦ ॥

ಬಿರಿಸಿನಲಿ ಖಳ ತಿವಿದೊಡಂಗದ
ಬಿರಿದು ಬಿಕ್ಕಿದ ಬಿದ್ದನಾಕ್ಷಣ
ಮರಳಿ ಚೇತರಿಸುತ್ತ ಕಿಡಿಕಿಡಿವೋಗಿ ಕೋಪದಲಿ ॥
ತಿರುಗಿ ಮುಷ್ಟಿಯಲಸುರನೆದೆ ಜ
ರ್ಜರಿತವಾಗಲು ತಿವಿದನಮಮಾ
ಧರೆಗೆ ಬಿದ್ದನು ದೈತ್ಯನುಬ್ಬಟೆ ಬೀಯವಾಯ್ತೆಂದು ॥ ೩೧ ॥

ಹರಣ ಹಾರಿತು ಕರುಳು ಸೋರಿತು
ಪಿರಿದು ನಾಚಿಕೆಯಿಂದ ಕಾಲನ
ನೆರವ ಬೇಡಲು ಹೋದ ನಾ ಖಳ ಹೋದನೋಯೆನಲು ॥
ತರಣಿನಂದನನಧಟು ಪಟುವೆಂ
ದುರುದಯಾನಿಧಿ ಮೆಚ್ಚಿ ಕವಿಸುದು
ಶರಧಿಯಂದದಿ ಖಳರು ಮುತ್ತಿತು ರಾಘವೇಶ್ವರನ ॥ ೩೨ ॥

ಒಂದು ಕಡೆಯಲಿ ರಾವುತರು ಮ
ತ್ತೊಂದು ಕಡೆಯಲಿ ತೇರಪಂಕ್ತಿಗ
ಳೊಂದು ಕಡೆಯಲಿ ವಾದ್ಯರಭಸಗಳೊಂದು ಕಡೆಯಲ್ಲಿ ॥
ಮುಂದುವರಿವುತ ಸುತ್ತ ಮುತ್ತಿತು
ಬಂದ ರಾವಣನೆಕ್ಕಟಿಗನರ
ವಿಂದನಾಭನ ತಮ್ಮನಿದಿರಾದನು ಮಹಾಪಡೆಯ ॥ ೩೩ ॥

ಹಿಂಡು ತೋಳಿಗಳ್ಳಿದೆ ಮುತ್ತಲು
ಗಂಡು ಕಂಠೀರವನ ಹೋಲಲು
ಚಂಡಭುಜಬಲ ವೀರ ಲಕ್ಷ್ಮಣನಿದಿರು ದಾನವರು ॥
ಪಿಂಡಿವಾಳದಿ ಕೊಂತದಲಿ ಕೋ
ದಂಡದೆಸುಗೆಯ ಚಿತ್ರ ಗತಿಯಲಿ
ಚಂಡ ದನುಜರು ಮುಸುಕುತಿರ್ದರು ಭರತನನುಜನನು ॥ ೩೪ ॥

ಧನುವನೇರಿಸಿ ಮಸೆದ ಸರಳಲಿ
ದನುಜ ಸೇನೆಯ ಸವರುತಿರ್ದನು
ದಿನಕರಾನ್ವಯ ನೃಪಶಿರೋಮಣಿಯನುಜನೊಲವಿನಲಿ ॥
ಧನುವನಸ್ತ್ರವ ಕವಚ ಸೀಸಕ
ಕನಕರಥದಳಪತ್ತಿ ತುರಗವ
ಮುನಿದು ತತ್ತರದರಿದು ಬಿಸುಡುತ್ತಿರ್ದ ಬೇಸರದೆ ॥ ೩೫ ॥

ಅದಿರಿತವನಿಯು ದೇವಸಂತತಿ
ಬಿದಿರಿದುದು ರಥಬಿದ್ದು ಧರಣಿಗೆ
ಮೇದೆಗಳಾದುವು ಪತ್ತಿ ತಳಪಟವಾಯ್ತು ಕಳವಳಿಸಿ ॥
ಕುದುರೆ ಕೊಂಕಿದುವಮಮ ರಕುತದ
ನದಿಗಳಾದುವು ತಾಳಿ ತೆಂಗಿನ
ತುದಿಯನೇರಿತು ಹದ್ದು ಕಾಗೆಯು ರಕುತ ಕುಡಿಯಲಿಕೆ ॥ ೩೬ ॥

ಕರುಳನುಗಿಯುಗಿ ಮಿದುಳ ತಿನು ತಿನು
ನರನ ನೆತ್ತರ ಹೀರು ಹೀರೆನು
ತರರೆ ಕರೆವನು ಶಸ್ತ್ರದಂತ್ಯವದಾರ ಕರ್ಣಗಳೊ ॥
ತೆರಳು ತೆರಳೆನುತಟ್ಟಿ ರಾವಣ
ಸುರಿದ ಮುಮ್ಮೊನೆ ಬಿಟ್ಟ ಸರಳನು
ಸುರಳಿ ಸುರಿದನು ಕಂಕಪತ್ರಸಿತಾಸಿತಂಗಳನು ॥ ೩೭ ॥

ಎಲವೊ ತಿರುಗಿತ್ತಿತ್ತಲೆನುತವೆ
ಹಲಗೆ ಚರ್ಮವಕೊಂಡು ವಿಭಿಷಣ
ಖಳನ ಹಳಚಿದನೊಂದು ಮುಖದಲಿ ಮಂತ್ರಿಗಳು ಸಹಿತ ॥
ಕುಲವಿನಾಶನು ಕಾದ ಬಂದನೆ
ಸಲೆ ಕೃತಘ್ನನು ರಣಕೆ ಬಂದನೆ
ಕುಲವಿದೂಷಣ ಬಂದನೇ ರಣಕೆಂದ ರಾವಣನು ॥ ೩೮ ॥

ಕುಲವಿನಾಶಕ ನೀನು ಸೀತೆಯ
ಜಲಜನಾಭಗೆ ಕೊಡದ ಕಾರಣ
ಕುಲವಿದೂಷಣ ನೀನು ಪರಸತಿಗಳುಪಿದದರಿಂದ ॥
ಸಲೆ ಕೃತಘ್ನನು ನೀನು ಮಕ್ಕಳ
ಕೊಲಿಸಿದದರಿಂ ಬುದ್ಧಿ ನೀತಿಯ
ತಿಳಿಯದದರಿಂದೆನುತ ಮೂದಲಿಸಿದನು ವಿಭಿಷಣನು ॥ ೩೯ ॥

ಕಟ್ಟಿದನು ರಘುನಾಥ ಲಂಕೆಯ
ಪಟ್ಟವನು ನಿನಗಾಯ್ತು ರಾಜ್ಯವು
ಕೆಟ್ಟವಾಯ್ತಿನ್ನೆಮಗೆ ಕೊಡಿಸಾ ಕಡೆಯ ಮನೆಯೊಂದ ॥
ನೆಟ್ಟನುಸುರುವೆ ನೀನು ದೊರಕಿದೆ
ನಟ್ಟಿ ಕಡಿವೆನು ಹಂತ ಹಂತವ
ನಿಟ್ಟೆಲುವ ನೆರೆ ಮುರಿವೆನೆನುತವೆ ಹಲ್ಲುಗಡಿವುತಿರೆ ॥ ೪೦ ॥

ನಿನಗೆ ರಾಘವ ದೇವ ಕೊಡುವನು
ಮನೆಯನಂತಕನೂರ ಹೊರಗೆನೆ
ಕನಲಿ ಸಾವಿರ ಸರಳ ಸುರಿದನು ಮೋಹವನು ಬಿಸುಟು ॥
ಅನಿತುವನು ಹಲಗೆಯಲಿ ಟೊಣೆದನು
ಜನಪ ರಾಘವನೊಂದು ಕಡೆಯಲಿ
ದನುಜರಾಯನ ಬಂದು ತಾಗಿದನಿತ್ತ ತಿರುಗೆಂದು ॥ ೪೧ ॥

ಕೇಳು ಕೈ ನಿನಗೆರಡು ನಿನ್ನಯ
ಪಾಳೆಯಗಳಿಗದೊಂದು ಮತ್ತೀ
ಖೂಳ ನಾಯನು ಸೀಳಲೊಂದಾ ಲಕ್ಷ್ಮಣಂಗೆರಡು ॥
ಏಳು ಜಗಕೀರೇಳು ಸಾಲದೆ
ಕೇಳು ಮರುಳಾದೆಯಲ ರಾಘವ
ಗಾಳುಗನ ನುಡಿ ಕೇಳಿ ಕದನವ ತೊಡಚಿ ನೀ ಕೆಟ್ಟೆ ॥ ೪೨ ॥

ಎಲವೊ ನಿನಗಿಪ್ಪತ್ತು ಕೈಗಳು
ಸಲೆ ಸಹಸ್ರವು ಕಾರ್ತವೀರ್ಯಗೆ
ಬೆಳೆದ ತೋಳ್ಗಳ ರಾಮ ಕಡಿಯನೆ ಕೊಡಲಿಗಡಿತದಲಿ ॥
ಹಲವು ಬಾಯಲಿ ಬಗುಳುತಿಪ್ಪವ
ಗೆಲಿದೊಡಲ್ಲದೆ ಮರಳೆ ದಿಟ ದಿಟ
ಎಲುಗಳಿಲ್ಲಾ ನಿನ್ನ ನಾಲಿಗೆಗೇನು ಬಿನ್ನಣವು ॥ ೪೩ ॥

ಕನಲಿ ರಘುಪತಿ ದನುಜ ಹಿಡಿದಿಹ
ಧನುವ ಹತ್ತನು ಕಡಿಯೆ ವಿಭಿಷಣ
ಮುನಿದು ತುರಗವ ಹಾಯ್ದುಕೊಂಡನು ಧ್ವಜವ ಸೌಮಿತ್ರಿ ॥
ಮನದ ವೇಗದಿ ಕಡಿದ ಸೂತನ
ದನುಜನವುಡನು ಕಡಿವುತಾಕ್ಷಣ
ತನಗೆ ಚಂಡಿಕೆಯಿತ್ತ ಶಕ್ತಿಯ ನೆನೆದು ತುಡುಕಿದನು ॥ ೪೪ ॥

ಕೆರಳಿ ಕೆಡೆಕೆಡೆಯೆನುತ ಶಕ್ತಿಯ
ತಿರುಹಲುಡುಗಣ ತಿರುಗುತಿದ್ದುವು
ಸುರಿವುತಿದ್ದುವು ಕೆಂಡ ಹೊಗೆ ಹೊಡೆಯಿತ್ತು ಮೂಜಗವ ॥
ಬರೆ ಸುಮಿತ್ರ ವಿಭೀಷಣರು ಹಾ
ಸುರರು ಕಂಗೆಟ್ಟೋಡಲತ್ತಲು
ಹುರುಳುಗೆಟ್ಟಿತು ಮರ್ಕಟರು ಸುಗ್ರೀವ ಮೊದಲಾಗಿ ॥ ೪೫ ॥

ಮರುತ ಬಾಣದಿ ಕಡಿದ ರಾಘವ
ನುರುವ ಶಕ್ತಿಯನೊಂದನನ್ನಕ
ಶರಣನೆಡೆಗೈತಪ್ಪ ಶಕ್ತಿಯ ಕಂಡ ಸೌಮಿತ್ರಿ ॥
ಹರಿದು ತಾನೊಡವೊಕ್ಕ ಭೃತ್ಯನ
ಹೊರೆಯಬೇಕೆನುತೆದೆಯನಾಂತನು
ಉರವನುಚ್ಚಳಿಸಿತ್ತು ಬಿದ್ದನು ರಾಮ ರಾಮೆನುತ ॥ ೪೬ ॥

ಅರಿತಮರಾರಿಗಳು ಕವಿದುದು
ಮೇರೆದಪ್ಪಿದ ವಾರ್ಧಿಯಂದದಿ
ವೀರ ರಾಮನ ಮೇಲೆ ಮುತ್ತಿತು ಮುಸುಕಿತೇನೆಂಬೆ ॥
ಕಾರ ಮೇಘವು ಕವಿದು ಮುತ್ತಿದ
ಸೂರಿಯನವೋಲೊಂದು ಚಣದಲಿ
ವೀರ ರಾಘವ ತೊಡಚಿದನು ಸಮ್ಮೋಹನಾಸ್ತ್ರವನು ॥ ೪೭ ॥

ಬಿಡಲು ರಕ್ಕಸ ಪಡೆಯುನವನಿಗೆ
ಕೆಡಹುತಿದ್ದುದು ನಿದ್ದೆ ಖಳ ತಾ
ಕಡಿಸಿ ಕಂಗೆಟ್ಟೋಡಿ ಲಂಕಾಪುರವ ತಾ ಹೊಕ್ಕ ॥
ಪೊಡವಿಪತಿ ಬೇಸರದೆ ದೈತ್ಯರ
ಕಡಿದು ಸವೆಯದೆ ಪಡೆಯ ನೇಮಿಸಿ
ಕೆಡೆದ ತಮ್ಮನ ಬಳಿಗೆ ಬಂದಡಗೆಡೆದ ಶೋಕದಲಿ ॥ ೪೮ ॥

ಅರಿತು ಮಾರುತಿ ತಂದ ಮದ್ದನು
ಪರಮ ಮಂತ್ರವ ಜಪಿಸಿ ಬೇಗದಿ
ವರಸುಷೇಣನು ತೆಗೆದು ಲಕ್ಷ್ಮಣನೇರಿನೊಳಗೆರೆಯೆ ॥
ಉರುವ ಶೂಲವು ಉಗುಚಿಬಿದ್ದುದು
ಹೆರಣ ಹಸರಿಸಿ ಕಣ್ದೆರೆದೆ
ಚ್ಚರಿತು ವೈಮುರಿದೆದ್ದು ನೋವನು ಮರೆದನಾಕ್ಷಣಕೆ ॥ ೪೯ ॥

ಖಳರಸೈದಿತು ಚಿಂತೆ ಸಂತಸ
ವಳಿದಿತಿತ್ತಲು ರವಿಕುಲೋತ್ತಮ
ಚೆಲುವ ತಮ್ಮನನಪ್ಪಿ ಪರಮಾನಂದಪರನಾದ ॥
ಸುಲಭವೆನೆ ಸುಮನೌಘ ಸುರಿದುದು
ಮೊಳಗುತಿದ್ದುದು ದೇವದುಂದುಭಿ
ಜಲಜಬಾಂಧವನಪರವನಿತೆಯು ಸೆರಗ ತುಡುಕಿದನು ॥ ೫೦ ॥

---

## ೩೮ನೇ ಸಂಧಿ

ಪಲ್ಲ ॥ ವೇದವಿಕ್ರಮ ಮಾಡಲರ್ಥದಿ
ಬೂದಿಯಾದುದು ಖಳನ ಹೋಮವು
ಮಾಧವನ ಮರಿಯಾನೆ ಕೆಡಿಸಿದ ವೀರ ಹನುಮಂತ ॥

ಪದ ॥ ದುರಿತದಲ್ಲಣ ದುಷ್ಟಮರ್ದನ
ಪರಮಸುಖದಿಂದತ್ತಲಿರೆ ಸಂ
ಗರದಿ ಭಂಗಿತನಾಗಿ ರಾವಣ ಸಭೆಯನೈದಿರಲು ॥
ಧರೆಯನೀಕ್ಷಿಪ ನೆಟ್ಟ ದೃಷ್ಟಿಯ
ಕೊರಳು ಕುಸಿದಿಹ ದುಗುಡದಿಂದವೆ
ಕರವ ಗಲ್ಲದಲಿಟ್ಟು ಬಿಸುಸುಯ್ಯುತ್ತ ಕುಳಿತಿರ್ದ ॥ ೧ ॥

ಗರುಡ ಮೆಟ್ಟಿದ ಫಣಿಯವೋಲ್ದ
ಳ್ಳುರಿಯ ಬಿದ್ದಾ ಕಳಭನಂದದಿ
ದುರುಳ ದಾನವ ಮುಸುಕಿ ಚಿಂತಿಸಿ ಮೂಗನಾಗಿರಲು ॥
ಮರುಗಿ ಬುದ್ಧಿಯ ಹೇಳಬಂದಳು
ಹಿರಿಯ ಮೋಹದ ರಾಣಿ ಸೊಬಗಿನ
ತರುಣಿ ಸರ್ವಾವಯವ ಸುಂದರಿ ಭಾಗ್ಯ ವಾರಾಶಿ ॥ ೨ ॥

ದೆಸೆಯ ಪರಿಮಳ ಸುಮುಸುಗಂಧದ
ಲೆಸೆವ ರತುನಾಭರಣ ಕಾಂತಿಯ
ನೊಸಲ ತಿಲಕದ ಕೊರಳ ಹಾರದ ಕಡಗ ಕಂಕಣದ ॥
ಬಿಸಿಲ ಮುಸುಳಿಸುವಂಗ ಕಾಂತಿಯ
ಲಸುರ ರಾಯಸ್ಥಾನವೊಪ್ಪಲು
ಬಿಸುರುಹಾಕ್ಷಿಯು ಬಂದಳಸುರನ ಹೊರಗೆ ವಿನಯದಲಿ ॥ ೩ ॥

ಹರುಷ ಮುಖವನು ಬಿಟ್ಟು ಚಿಂತೆಯ
ಕರೆದು ಮನ್ನಿಸಲೇತಕರಸಾ
ದುರುಳತನವಾರಿಂಗೆ ಪಥ್ಯವು ದಿಟ ವಿಚಾರಿಸಲು ॥
ಮರುಳಹರೆ ಮತಿವಂತರಾದವ
ರುರಿದು ಕೆಡದವರಾರು ಜಗದಲಿ
ತರುಣಿಯರಿಗಾರಾರು ಕೆಡರು ವಿಚಾರಿಸುವುದೆನಲು ॥ ೪ ॥

ಒಂದೆರಡು ಕುರುಹುಗಳ ಕಂಡೇ
ಮುಂದುವರಿಯುರು ನೀತಿವಂತರು
ಒಂದೆರಡುಕುರಹಲ್ಲ ನೋಡಲು ಹಲವು ಕುರುಹಾಯ್ತು ॥
ಇಂದುವದನೆಯ ಮದುವೆಯಲಿ ನೀ
ಹಿಂದೆ ಹೊರಳಿದೆ ಧನುವ ಮುರಿದನು
ಕೊಂದು ಕಳೆದ ಸುಬಾಹು ತಾಟಕಿಯರನು ನೆನೆಯರಸ ॥ ೫ ॥

ಹಕ್ಕಿಗೊಕ್ಕಣ್ಣಾಯ್ತು ತಿಕ್ಕೆಗೆ
ಸಿಕ್ಕಿದಾತನ ತೋಳುದರಿದನು
ಚಕ್ಕುಲಿತೆಯಲಿ ಕಮಲವದನೆಯ ತುಡುಕಿದಾ ಖಳನ ॥
ಇಕ್ಕಡಿಯ ಮಾಡಿದನು ಕಪಟದಿ
ಹೊಕ್ಕ ಮಾರೀಚನನು ಕೊಂದಾ
ರಕ್ಕಸರ ಕಾಲಾಗ್ನಿರುದ್ರನ ಬಲುಹ ನೀನರಿಯು ॥ ೬ ॥

ಕಾಳುಗಿಚ್ಚನು ಮನೆಗೆ ತಹರೇ
ಕಾಳಕೂಟದ ವಿಷದ ಸರ್ಪನ
ಹೇಳಿಗೆಯ ಕೈದುಡುಕಲೆಳಸಿದೊಡಲ್ಲಿ ಸುಖವುಂಟೆ ॥
ಶೂಲವೇರಲು ನಡೆವ ಚೋರನ
ಹೋಲುವುದು ತತ್ಪೂರ್ವವೀಕೆಯು
ಮೇಳ ಲೇಸಲ್ಲೊಲುವಡೀಕೆಯ ಬಿಟ್ಟು ಕಳುಹೆಂಬೆ ॥ ೭ ॥

ಕೇಳು ಲಂಕಾಪತಿಯೆ ನೀತಿಯ
ಕಾಳಸರ್ಪನ ಹೆಡೆಯ ನೆಳಲಲಿ
ಬಾಳಲೆಳಸಿದ ಭೇಕನಂತಿಹುದನ್ಯ ಸತಿ ಬೇಟ ॥
ಗಾಳಿಗೊಡ್ಡಿದ ಸೊಡರ ಪರಿಯಿದು
ಕೇಳಿದರಿಯಾ ಪರರ ಹೆಂಡಿರ
ಮೇಳದಲಿ ಲೇಸುಂಟೆ ಇಹಪರಕೀರ್ತಿಗದು ಘನವೆ ॥ ೮ ॥

ಅರಸ ಕೀರ್ತ್ಯಪಕೀರ್ತಿಯೆಂಬುದು
ಯೆರಡು ಆಚಂದ್ರಾರ್ಕವುಳಿವುದು
ಹಿರಿಯರನ್ವಯದಲ್ಲಿ ಹುಟ್ಟಿದ ವೇದಶಾಸ್ತ್ರವನು ॥
ಮರುಳು ರಾವಣನೋದಿ ಕಡೆಯಲಿ
ಹರಿಯ ರಾಣಿಗೆ ಸೋತು ಕೊರಳನು
ಕೊರೆಸಿಕೊಂಡನುಯೆಂಬ ದುರ್ಯಶವಹುದು ಬಿಡು ಸತಿಯ ॥ ೯ ॥

ಅರಸ ಕೇಳಿಹಪರದ ಕೀರ್ತಿಯ
ಹೊರೆಸನುತ್ತಮ ಮಧ್ಯಮನು ತಾ
ಬರಿಯ ಪರವನು ಬಯಸುವಾತನು ನೀಚನಿಹಸುಖಕೆ ॥
ಮರುಳುಗೊಂಬವ ಸೀತೆಯಿಂದಿಹ
ಪರವು ಕೆಡುವುದು ಕೇಳು ಸೀತೆಯ
ನುರಿಯ ಕಂಡ ಪತಂಗ ಹೆಕ್ಕಳಗೊಂಡ ಪರಿಯಹುದು ॥ ೧೦ ॥

ಹಸಿವು ಘನವಾಯ್ತೆಂದು ಕುಡಿವರೆ
ವಿಷವ ಬೇಗೆಯನಿಕ್ಕೆ ಹಿಡಿವರೆ
ರಸವ ನೀರಡಿಕೆಗೆ ಮರೀಚಿಕೆಯಿಂದ ತಣಿವಹುದೇ ॥
ವ್ಯಸನಿಗಿಹಪರ ಸೌಖ್ಯವುಂಟೇ
ಮಸಣದಲಿ ಮಾಂಗಲ್ಯವುಂಟೇ
ಅಸುರ ಮಾನವಿಯರಿಗೆ ಮೇಳವೆ ಪತಿಯೆ ಬಿಡು ಸತಿಯ ॥ ೧೧ ॥

ನಿರುತ ಸುಖವನು ಪುಣ್ಯವನುತಾ
ನೆರಡ ಗಳಿಸುವ ನೀತಿವಂತನು
ಬರಿಯ ಪುಣ್ಯವ ಬಯಸುವಾತನು ಮಧ್ಯಮದ ಪುರುಷ ॥
ಎರಡುಯಿಲ್ಲದೆ ಬರಿಯ ಸುಖದಲಿ
ಹೊರಳುವವ ತಾನಧಮ ನಿನಗೀ
ಬರಿಯ ದುರ್ಯಶವುಳಿವುದಲ್ಲವೆ ದಿಟ ವಿಚಾರಿಸಲು ॥ ೧೨ ॥

ಕಟ್ಟಳಿದು ಬಲವೆಲ್ಲ ಹೋಯಿತು
ಕೊಟ್ಟು ಕಾಂಬುದು ಲೇಸು ಸೀತೆಯ
ಮುಟ್ಟಿದರೆ ವಿಷದಂತೆ ಸುಡದಿರದವಳ ಕೂಟವದು ॥
ನೆಟ್ಟನುಂಬರೆ ಕಾಳಕೂಟವ
ಪಟ್ಟಣದೊಳವಳಿರಲು ಶೂಲಿಯು
ದಿಟ್ಟಗಿದಿರಾದಂಗಜಾತನ ಗಾಡಿ ನಿನಗಹುದು ॥ ೧೩ ॥

ಗಂಡುತನ ನಿನಗುಳ್ಳೊಡಾಕೆಯ
ಗಂಡನಹ ರಘುರಾಯನಿದಿರಲಿ
ಕೊಂಡು ಬಂದೊಡೆ ವೀರವಲ್ಲವೆ ತಿರಿವ ಗೊರವಾಗಿ ॥
ಕಂಡ ಕಂಡವರೆಲ್ಲ ನಗುತಿರೆ
ಮುಂಡೆಯರ ಮುಖಸಿರಿಯ ತಾಳಿದು
ಕೊಂಡುಬಂದುದು ಭಂಗವಲ್ಲವೆ ಪತಿಯೆ ಬಿಡು ಸತಿಯ ॥ ೧೪ ॥

ಸಲಹಿದಾತಂಗಾಗಿ ಗೋದ್ವಿಜ
ರಳಿವ ತೆರ ಸಲೆ ಕಾದಿ ಮಡಿದೊಡೆ
ಉಳಿವುದುತ್ತಮ ಕೀರ್ತಿ ವೀರಸ್ವರ್ಗಪದವಹುದು ॥
ಕಳವು ಹಾದರವೆರಡರಲಿ ತಾ
ನಳಿದವಂಗಪಕೀರ್ತಿ ನರಕದೊ
ಳಿಳಿವನಲ್ಲದೆ ಸಗ್ಗಸುಖವಿಲ್ಲೆಂದಳಿಂದುಮುಖಿ ॥ ೧೫ ॥

ಒಂದು ಶರದಲಿ ಬಾಲಿ ಮಡಿಯನೆ
ಒಂದು ಶರದಲಿ ತಾಳೋ ತರಿಯನೆ
ಒಂದು ಶರದಲಿ ವರುಣ ಮಣಿಯನೆ ಕಪ್ಪವನು ತೆತ್ತು ॥
ಒಂದು ಶರದಲಿ ಕೊಡೆಯು ಕಡಿಯನೆ
ಕೊಂದು ಕೆಡಹನೆ ನಿನ್ನ ಕರುಣಾ
ಸಿಂಧು ರಾಘವ ಕಾಯ್ದುಕೊಳ್ಳನೆ ತಮ್ಮ ವಿಭಿಷಣನ ॥ ೧೬ ॥

ಸತ್ಯವನು ನೆರೆ ಸಲಿಸೆಲನುಜಂ
ಗಿತ್ತ ರಾಜ್ಯವನೆಲ್ಲ ರಾಘವ
ನೊತ್ತದಸುರರನಿಂತು ಕೊಂದವರುಂಟೆ ಪೂರ್ವದಲಿ ॥
ಚಿತ್ತಜಾರಿಯು ಗಿರಿಯು ಬಲುಹಿಂ
ಕಿತ್ತ ಗರ್ವವನಿಲ್ಲಿ ಮಾಡದೆ
ಇತ್ತು ಕಾಂಬುದು ಲೇಸು ಸೀತೆಯನೆಂದೊಡಿಂತೆಂದ ॥ ೧೭ ॥

ಕದನದಲಿ ಖಳರಳಿದುದಗಣಿತ
ತ್ರಿದಶರೆನ್ನನು ನಗುವ ಪರಿಯಾ
ಯ್ತುದರ ಹವಣೇಂ ಕಾಗೆಗೋಗರವಾದ ನಿಂದ್ರಾರಿ ॥
ಬದುಕಿ ಫಲವೇನಿನ್ನು ಕೇಳಿಲೆ
ಸುದತಿ ರಣದಲಿ ಕಾದಿ ಸತ್ತರೆ
ವಿದಿತ ಮೋಕ್ಷವು ಗೆಲಿದೊಡುತ್ತಮ ಕೀರ್ತಿಯಹುದೆಂದದೆ ॥ ೧೮ ॥

ಇಂದುಧರ ಮುಝುಪೂತು ರಾವಣ
ಯೆಂದು ಹೊಗಳಲು ಬೇಕು ಸುರಪತಿ
ಬೆಂದೆವಾರೆವು ಕೆಟ್ಟೆವಕಟೆಂದಜಗೆ ಮೊರೆಯಿಡುತ ॥
ಹಿಂದೆ ಹತ್ತಲು ಬೇಕು ರಾಮನ
ನಿಂದು ತೆಗೆದಿರುಳೋಟ ಕೋಡಿಪೆ
ನೆಂದು ಬೇಗದಿ ಮಾಡಹೇಳಿದ ಕೊಂಡ ಮಂಡಲವ ॥ ೧೯ ॥

ಜಲಜಗಂಧಿಯು ತಂದು ರಾಮಂ
ಗಳುಕಿ ರಾವಣ ಮರಳಿ ಕೊಟ್ಟೆನು
ಛಲವು ಸಾಕೆಂದೆನ್ನ ನಗರೇ ಸತಿಯು ನಾ ಬಿಡಲು ॥
ಕಳದ ಮಧ್ಯದೊಳೆನ್ನ ರಾಘವ
ಗೆಲಿದು ಸೀತೆಯು ಕೊಂಡುಹೋಗಲಿ
ಬಲುಹುಗೆಟ್ಟಿಹ ಬದುಕದೇತಕ್ಕೆಂದ ದಶಕಂಠ ॥ ೨೦ ॥

ಕುಲದ ಕೀರ್ತಿಯನುಳುಹಿ ಸತ್ಯವ
ಸಲಿಸಲುಳಿದನು ತಮ್ಮನಾತಗೆ
ಸಲಿಸಿದನು ಹರಿಪದವ ಸಂಧಿಯಲೇನು ಫಲವೆನಗೆ ॥
ಜಲಜಲೋಚನ ಸತ್ವವುಳ್ಳೊಡೆ
ಗೆಲುವನೆನ್ನನು ಮೇಣು ರಾಮನ
ಗೆಲುವೆನಲ್ಲದೆ ಸಂಧಿಗಿಂಥಿಯ ಮಾತ ಮರೆಯೆಂದ ॥ ೨೧ ॥

ತ್ರಿದಶರಿವು ಹೋಮಕ್ಕೆ ಹೊರವಡ
ಲಿದಿರಲೊಬ್ಬನು ಸೀತನೆಂತೆನೆ
ತುದಿಗೆ ಹಾಯದು ಹೋಮವೆಂದೆನಲಸುರ ಬಾಗಿಲಲಿ ॥
ಕದನಗಲಿಗಳ ಕಾಹ ಹೇಳಿದ
ಮದನಹರ ತಾ ಬಂದಡೊಮ್ಮೆಗೆ
ಸದೆಬಡಿದ್ದರೆ ನಿಮ್ಮ ಕೊಲಿಸುವೆನೆಂದ ದಶಕಂಠ ॥ ೨೨ ॥

ಖಳನು ದೇವಿಯ ಬನದ ಬಲದಲಿ
ಬಲಕೆ ಯೋಜನ ಹತ್ತರಳತೆಯು
ಕೆಳಗೆ ಯೋಜನ ಹತ್ತರಳತೆಯ ಭಿತ್ತಿಮಂಟಪವ ॥
ಕೆಲಕೆ ಕಾದಿಹ ಬೂತಪ್ರೇತವು
ಹಲವು ಜಟ್ಟಗ ಮಾಣಿಭದ್ರರು
ಖಳನು ಹೊಕ್ಕನು ಕೋಟಿ ವಿಪ್ರರು ರಾಣಿಸಹಿತಿರುಳು ॥ ೨೩ ॥

ತೊಗಲನೆತ್ತಿ ಪತಾಕೆ ಕಟ್ಟಿದ
ಬಗಿದ ಜಠರಾಗ್ನಿಯನು ಬದಿಗ
ಟ್ಟಿಗೆಯಲುರುಹಿದ ರುಧಿರದಾಜ್ಯವ ತುಂಬಿ ಬಟ್ಟಲಲಿ ॥
ಸಿಗಿದು ಕರುಳನು ಹಾಸಿ ವಿಪ್ರಾ
ದಿಗಳ ಕುಳಿರಿಸಿ ಮುರಿದು ನಿಜ ತೋ
ಳುಗಳ ಸುಶ್ರುವೆಮಾಡಿ ಕಟ್ಟಿದ ನರದ ದರ್ಭೆಯನು ॥ ೨೪ ॥

ಬೆರಳ ಸಮಿಧೆಯ ಮಾಡಿ ತಲೆಯಂ
ಟರಿದು ದಿಕ್ಕಿನಲಿರಿಸಿ ಕೊಟ್ಟನು
ಚರುವ ಮಾಡಲು ದೈತ್ಯ ಮಂಡೋದರಿಗೆ ತಲೆಯೊಂದ ॥
ಅರಿದ ತಲೆಗಳ ದಂತವಕ್ಷತೆ
ಸುರಿವ ರಕ್ತದ ಗಂಧ ದಾಸಣ
ದರಳಮಾಡಿದ ಕಳಿದ ಕಂಗಳನಮರಕಂಟಕನು ॥ ೨೫ ॥

ಇಪ್ಪುದೆಲ್ಲವರು ಬೀಳುತಿರಲುರಿ
ಯೊಪ್ಪದೆಡದೆಸೆಗಂದು ದಕ್ಷಿಣದಿಸೆಗೆ ಚರಿಸಲು
ಬಪ್ಪುದನು ಕೇಡಿನ್ನು ದೈತ್ಯಂಗೆಂದು ಸೂಚಿಸಿತು ॥
ಪುಷ್ಪತಲಿದಾ ಮುತ್ತದಂತಿರ
ಲೊಪ್ಪುತಿರ್ದುದು ಖಳನ ದೇಹವು
ಕುಪ್ಪಳಿಸುತಿರೆ ಕಡಿದು ಬೀಳಿದನಡಗ ಜೇಸರದೆ ॥ ೨೬ ॥

ತೋಳಿರಡು ತಲೆಯೊಂದರಿಂದವೆ
ಬೀಳುತಿದ್ದನು ಖಂಡ ನೆತ್ತರು
ಜಾಳಿಸುತ್ತಿರೆ ಭೂತ ವೇತಾಳಿಯರು ಕಾಯ್ದಿರಲು ॥
ಶೂಲಿಯರಿಯನು ಕಾಲ ತಿಳಿಯನು
ಗಾಳಿ ಸುಳಿಯದ ಠಾವ ಹೊಕ್ಕವ
ಬೀಳುತಿರೆ ಗದಗಂಪುಗೊಂಡುದು ಭುವನ ಭಯ ಮಿಗಲು ॥ ೨೭ ॥

ಆರು ಬಣ್ಣಿಸಬಹುದು ದೈತ್ಯನ
ಮಾರಣದ ಹೋಮವನು ರಕ್ಕಸ
ಮಾರಿಯೆಲ್ಲವ ಬೀಳುಮಾಡಿದ ಬೇಳಿ ಲೋಕವನು ॥
ವೀರ ರಘುಜನ ಪಡೆಯಲೊಗೆದುವು
ಘೋರದುತ್ಪಾತಂಗಳದ ಕಂ
ಡಾ ರಘೂತ್ತಮ ಕರೆದು ಕೇಳಿದನಾ ವಿಭೀಷಣನ ॥ ೨೮ ॥

ಎಲೆ ವಿಭೀಷಣ ಸೌರ ಚಾಪವು
ಹೊಳೆವುತಿದೆ ನಭದಲ್ಲಿ ಸುರಪತಿ
ತಳೆದ ಪರಿವೇಷವನು ಹೋಲಿತು ಭಾನುಮಂಡಲವು ॥
ಜಲಧಿ ಕುದಿಕುದಿದುಕ್ಕುತಿದೆ ಭೂ
ತಳವು ಕಂಪಿಸೆ ಚಿತ್ತ ಕಳವಳ
ಗೊಳುತಲಿದೆ ತಾನೇನು ಕಾರಣ ಬಲ್ಲಡೊಸುರೆಂದ ॥ ೨೯ ॥

ಕಾಳರುದ್ರನ ಕೊರಳ ನಂಜಿನ
ಧಾಳಿಯಂತಿರಲಖಿಲವಾನರ
ಜಾಳ ಕಳವಳಗೊಂಬ ಹದನನು ದೇವ ಚಿತ್ತೈಸು ॥
ಬೀಳುವನು ಖಳ ಕೋಟಿ ಹೋಮುಪ
ನಾಳಿನಮುಗುಳಿವಿಲ್ಲ ಕೇಡಿದು
ಹೇಳಲೇನದ ಹುಟ್ಟುಗೀಕ್ಷಣ ಕೋಟಿ ರಾವಣರು ॥ ೩೦ ॥

ಒಬ್ಬ ದೈತ್ಯನ ಕೊಲಲು ನವುಗಿನಿ
ತುಬ್ಬುಸಂಗಳು ಕೋಟಿ ಹುಟ್ಟಲು
ಹಬ್ಬನಮುಗಹುದಿಂದು ಸಂಶಯುವಿಲ್ಲ ಕೆಡಿಸುವೊಡೆ ॥
ನಿಬ್ಬರದಲಟ್ಟುವುದು ಹನುಮನ
ನುಬ್ಬಿನಂಗದನೊಡನೆನಲು ಹರಿ
ಯೆಬ್ಬಿಸಲು ಹನುಮಾಂಗದರು ಹರಿದೈದಿದರು ಹೊಳಲ ॥ ೩೧ ॥

ಇರುಳುಗತ್ತಲೆಗಳುಕದಗಣಿತ
ಮರುಳು ತಂಡವ ಜರೆದು ಹೊಕ್ಕರು
ಮರುತನಂದನ ಕುಂಭಿನಿಯು ವನದೊಳಗೆ ಅರಸುತಿರೆ ॥
ಹರಕೆಗಳನೊಪ್ಪಿಸುತಲಿರ್ದರು
ಶರಭ ಹರಿ ಶಾರ್ದೂಲ ಕೆಡಗಣವ
ಕುರಿಯ ಕೋಣವ ಕೊಲುವ ದೈತ್ಯರ ಕಂಡು ನಗುತಿರ್ದ ॥ ೩೨ ॥

ಬಿಸಿಯ ರಕ್ತಜಲಾಭಿಷೇಕವ
ನೆಸೆವ ಕರುಳಿನ ಕುಸುಮದಿಂದ
ರ್ಚಿಸುವ ತಲೆಗಳನರಿದರಿದು ನೀವಾಳಿಯೆತ್ತುತಿಹ ॥
ಬಸಿವ ಶೂಲವನಳುಕದೇರುವ
ಹಸಿಯ ತೊಗಲ ಪತಾಕೆಗಟ್ಟುವ
ಒಸೆದು ಕೆಂಡದ ನೀರ ಮೀವರ ಕಂಡ ಕಪಿರುದ್ರ ॥ ೩೩ ॥

ದೇವತೆಯ ಸಾಮರ್ಥ್ಯದಲ್ಲಿಯ
ಹೊವ ಕೊಯ್ದುವನಾಗಳಲ್ಲಿಯೆ
ಸಾವ ಕಲ್ಲನು ಕೀಳೆ ವ್ಯೆಯೆಲುವುಚ್ಚಿ ಬೀಳುವುವು ॥
ಆವನಲ್ಲಿಯು ಹುಲ್ಲ ಕಿತ್ತರೆ
ವೋವೊ ರೋಮಾಳಿಗಳು ಉದುರಲ
ದಾವ ಹೊಗಬಹುದಲ್ಲಿ ಮಾರಿಯಮಠವ ಹೋಲುತಿರೆ ॥ ೩೪ ॥

ಮುರಿದನುಕ್ಕಿನ ಮುಂದಣಗುಸೆಯು
ತರಿದ ವಜ್ರದ ದಾರವಟ್ಟವ
ತೆರೆಯಲವಸರವಾಗಿ ಮಾರುತಿ ಕಿತ್ತು ಬೀಸಾಟ ॥
ಕರೆಮನದ ರಾವಣನ ಬಿಲ ಹೊ
ಕ್ಕರಸೆ ಚರಣ ದ್ವಂದ್ವ ಹೊತ್ತಲು
ಕೆರಳಿವೊದೆದರೆ ಭೂಮಿ ಬಿರಿದುದು ಕೆಂಡದುರಿಗೆದರೆ ॥ ೩೫ ॥

ಅಳವಿಗಳೆವುತ ಬೇಳುತಿಪ್ಪಾ
ಖಳನ ವಿಪ್ರರ ನಡುವೆ ಕಂಡನು
ಕೆಲದಲಿದ್ದರು ದೇವಿಯರು ಪರಿಚಾರ ಭಾವದಲಿ ॥
ಜಲಜಲೋಚನೆ ಮಲ್ಲಿ ಗೋಮುಖಿ
ನಳಿನಿ ಹಸ್ತಿನಿ ಕಮಲಗಂಧಿ
ಪ್ರಳಯಮುಖಿ ರುದ್ರಾಣಿ ಚಂಡಿಕೆ ಮೋಹಿನಿಯರಿರಲು ॥ ೩೬ ॥

ನೆತ್ತರುಕ್ಕುತಿರ್ದುದವನೊಂ
ಬತ್ತು ನಾಳದಿ ಕರುಳ ಜಂಪವ
ಕೆತ್ತಿ ಬೇಳಿದನೆಲುವಿನೆಲುವಿನ ಸಂದುಗಳನರಸಿ ॥
ಉತ್ತಮದ ಸಿದ್ಧಾಷ್ಟಕಂಗಳ
ಸುತ್ತಲಿರಿಸಿದ ಮೂಳೆಯುಡಗಿಂ
ಹೊತ್ತಿದನಲನ ಗಮಲು ಹೊಲಸಿನ ಹೋಮ ಮುಗಿವುತಿರೆ ॥ ೩೭ ॥

ಕೊಂಡದೊಳು ಹೊಳೆಹೊಳೆದು ರಕ್ಕಸ
ತಂಡ ದೇವಿಯ ಶಕ್ತಿ ರುದ್ರನ
ಗಂಡುತನಗಳು ಕೂಡಿ ನಿಮಿಷದೊಳೇಳುವಂತಿರಲುದ ॥
ಕಂಡು ಕಳವಳಿಸುತ್ತ ಬೊಬ್ಬಿಡ
ಲಂಡ ಘೀಳಿಡೆ ಬೊಮ್ಮ ರಕ್ಕಸ
ತಂಡಗಳನೆಳೆದೆಳೆದು ಸುಟ್ಟನು ಹನುಮ ಕೊಂಡದಲಿ ॥ ೩೮ ॥

ರಾಯನಂಗದ ಬಿಲನ ಬಾಗಿಲ
ಕಾಯೆ ನಿಂದನು ಜಪ್ಪಿ ದನುಜರ
ವಾಯುಸುತ ಹೊಡೆಹೊಡೆದು ಕೊಂಡದಲೊಟ್ಟಿ ಸುಡುತಿರಲು ॥
ಹಾಯೆನುತ ಹಾರುವರು ನೊಂದುಪ್ರ
ಥಾಯ ಗೋಳಿಡೆ ಬಗೆಯ ರಕ್ಕಸ
ರಾಯ ಕಂಗಳ ಮುಚ್ಚಿ ಬೇಳಿದನೇಕಚಿತ್ತದಲಿ ॥ ೩೯ ॥

ಒದೆದ ಗೋಂಟಿನ ತಲೆಯುಬಟ್ಟಲ
ಮಧುಪ ಚೆಲ್ಲಿದೊಡರಿಯು ರಕ್ಕಸ
ಮುದದಿ ಪೂರ್ಣಾಹುತಿಯ ಬೇಳಿದೊಡೇಳುವರು ಖಳರು ॥
ಅದು ಸಮೀಪಕೆ ಬಂದುದಕಟೆನು
ತದಕೆ ತಕ್ಕುದ ಕಾಣದಳಲಿದ
ಕದನಗಲಿ ಹನುಮಂತ ಕರೆದೊಡೆ ಬಂದನಂಗದನು ॥ ೪೦ ॥

ಎಲೆಲೆ ರಾವಣರೆದ್ದರೆದ್ದರು
ಇಳಿದು ಹೊಡೆ ಹೊಡೆ ಯೆನುತ ಬೊಬ್ಬಿಡು
ತಿಳಿಯದೋಸರಿಸುತ್ತ ನಿಂತಿರಲತ್ತಲಂಗದನು ॥
ಖಳನ ರಾಣಿಯು ಕಂಡು ಮುಡಿವಿಡಿ
ದೆಳೆದು ಕೆಡಹಿದನುಟ್ಟ ವಸ್ತ್ರವ
ಸೆಳೆದು ಕಿವಿಯೋಲೆಗಳ ತೆಗೆದಾ ಕೊಂಡದೊಳಗಿಟ್ಟ ॥ ೪೧ ॥

ಕೆಟ್ಟೆನೇ ಹಾ ಕೆಟ್ಟೆನೆನ್ನಯ
ಉಟ್ಟ ವಸ್ತ್ರವ ಕಟ್ಟಳವಿಯಲಿ
ನೆಟ್ಟನೆಳೆದುದು ಕಪಿಯಿದಟಾ ಲಜ್ಜೆಗೆಟ್ಟೆನಲು ॥
ಕೆಟ್ಟ ಹೋಮವು ಸುಡಲಿ ಹಾ ಗೋ
ಳಿಟ್ಟೊಡುಸುರದ ಗಂಡನುಂಟೇ
ಕಟ್ಟ ಕಿಚ್ಚಿನಲಿಕ್ಕುವರು ಹಾಯೆಂದೊರಲಿದಳು ರಾಣಿ ॥ ೪೨ ॥

ಸುರರ ಹೆಂಡಿರ ತಂದ ಪೌರುಷ
ಉರಿದುಹೋಯಿತೆ ಕೆಟ್ಟೆನಕಟಾ
ಧರಣಿಜೆಯ ಪತಿಯಿಲ್ಲದೆಡೆಯಲಿ ಕದ್ದು ನೀ ತಂದೆ ॥
ಅರಸ ನೀ ಮುಂದಿರಲು ನನಗೀ
ಪರಿಯ ಪರಿಭವವಾಯ್ತು ಹೆಂಡಿರ
ಪರರಿಗೊಪ್ಪಿಸಿ ಬೇಳು ಬೇಳೊಂದೊರಲಿದಳು ರಾಣಿ ॥ ೪೩ ॥

ಹನುಮ ನೋಡದೆ ಬೊಮ್ಮಚರಿಯುವ
ನೆನೆದು ತಿರುಗಲು ಕಾಳ ರಕ್ಕಸ
ಕನಲಿ ಕಂಗಳ ತೆರೆದ ಹರನುರಿಗಣ್ಣ ತೆರೆದಂತೆ ॥
ವನಿತೆ ಸುಲಿದಿರಲೆದೆಯ ಮೆಟ್ಟಿದ
ವನಚರೇಂದ್ರನ ಕಂಡು ಕೆಡೆ ಕೆಡೆ
ಯೆನುತ ಖಡ್ಗದಲೆರಗಲಿಕ್ಕಡಿಯಾದನಂಗದನು ॥ ೪೪ ॥

ಎಲೆಲೆ ಶಿವ ಶಿವ ಮಾರಿಯಾಯಿತು
ಖಳನು ಕೆಡಿಸಿದ ಕೆಟ್ಟಿವೆನುತವೆ
ಚಳಕದಲಿ ತುಂಡೆರಡ ಕೊಂಡಾ ಬಿಲನ ಹೊರವಂಟ ॥
ಇಳೆಗೆ ನಗೆಗೇಡಾಯ್ತು ಕಂದನ
ತಲೆಯುನರಿದು ನಿಧಾನವೆತ್ತಿದ
ಹಳೆಯ ಕತೆಯಾಯ್ತೆನುತ ಮಾರುತಿ ಬೇಗ ಹರಿತರಲು ॥ ೪೫ ॥

ದೈವದೂರರು ಹೋದ ಹೋದೆಡೆ
ಗಾವಿಪತ್ತುಗಳೈದೆಬಪ್ಪುದು
ರಾವಣನ ಹೋಮವನು ಕಾಣ್ಕೆಲಿ ಹನುಮ ಕೆಡಿಸಿದನು ॥
ಕಾವ ಬಿಸಿಲಿಂಗಳುಕಿ ಪಥಿಕನು
ಓವಿ ತಾಳೆಯ ಮರನ ಸಾರಲು
ನೋವ ಪಡೆಯನೆ ಹಣ್ಣುಬಿದ್ದುದರಿಂದ ತಲೆಯೊಡೆದು ॥ ೪೬ ॥

ಕೆಟ್ಟುದಾತನ ಹೋಮ ತಲೆ ಕೈ
ಹುಟ್ಟಿದುದು ಹರನಿತ್ತ ವರದಲಿ
ದಿಟ್ಟರಾವಣ ಹೋದ ತನ್ನರಮನೆಗೆ ನಾಚುತ್ತ ॥
ಹೊಟ್ಟೆಯೊಡೆದಾ ದುಃಖದಿಂ ಕಡ
ಲಿಟ್ಟು ಕಂಬನಿ ಸುರಿಯೆ ಮಾರುತಿ
ಸೃಷ್ಟಿವಲ್ಲಭನಿದಿರು ತಂದಿರಿಸಿದನು ತುಂಡೆರಡ ॥ ೪೭ ॥

ಏಕೆ ಮಡಿದನು ಹೇಳು ನೀನವಿ
ವೇಕಿಯಲ್ಲೆಂದಾನು ಕಳುಹಲು
ಕಾಕುಮಾಡಿದೆ ಕಿವಿಯ ಪಡೆಯಲು ಕಣ್ಣನಿತ್ತಂತೆ ॥
ಲೋಕವರಿಯಲಕೀರ್ತಿಯೆನಗಾ
ನಾಕಪಾಲನ ಸುತನ ಕೊಲೆಯಿಂ
ದೀಕುಮಾರನಲಿಮ್ಮಡಿಸಿತೆಂದಳಲಿದನು ರಾಮ ॥ ೪೮ ॥

ಕೆಡೆಸಿದೈ ನೀನಿಂದು ಕಂದನ
ಕೆಡಹಿದೈ ನಾ ನಿನ್ನ ಬೆಂಬಳಿ
ವಿಡಿದು ಕಳುಹಲು ಲೇಸು ಮಾಡಿದೆ ಹನುಮಯೆಂದೆನಲು ॥
ತಡೆಯದಿ ವನವಿಚಾರದಿಂದವೆ
ಮಡದಿಯುಡುಗೆಯ ಸುಲಿಯಲಾಖಳ
ಹೊಡೆದೊಡೀವಿಧಿಯಾಯ್ತು ತಪ್ಪದು ಕೊಂದೆ ನಾನೆಂದ ॥ ೪೯ ॥

ಅಲ್ಲದಿರಲಿವ ಸಾವನೇ ನಾ
ಕೊಲ್ಲಲೆಳಸಿದೆನಹುದು ದಾನವ
ಮಲ್ಲ ಕೊಲುವಾಗುಳಿದೆಸಾಯದೆಯೊತನೊಡನಾನು ॥
ಎಲ್ಲವನು ನಾ ನಿಮಗೆ ಮಾಡಿದೆ
ಹೊಲ್ಲಹವಯೆಂದಳಲಿ ಸರ್ಪನ
ಹಲ್ಲು ನಾಟಿದ ಹುಲ್ಲೆಯುರಿಯಲಿ ಬಿದ್ದ ತೆರನಾಯ್ತು ॥ ೫೦ ॥

ಮರುಗುತಮೃತದ ಹಸ್ತದಿಂದ
ಕ್ಕರದಿ ಮುಟ್ಟಲು ಹೋಳು ಕೂಡಿತು
ಮರೆದು ಮಲಗಿದ್ದವರು ಮೈಮುರಿದೇಳುವಂದದಲಿ ॥
ಒರಗಿದಂಗದನೆದ್ದ ಮಸೆಗಳು
ಮರೆದು ರಾಘವನೆಂದ ನುಡಿಗಳು
ಮರೆಯದೆನುತಿರೆ ಸಾರಿಹೊಗಳಲು ರಾಮ ಬೆರಗಾದ ॥ ೫೧ ॥

ಆರು ಸರಿ ಹನುಮಂಗೆ ಸೇನೆಯು
ನಾರು ಕಾಯ್ವರು ಹಲವುನಾಯುದ
ಲಾರು ಹೊಗಬಹುದವನ ಹೋಮದ ಠಾವ ನೋಡುವೊಡೆ ॥
ವೀರತಿಕೆಯನು ನೀವೆ ಬಲ್ಲಿರಿ
ಮೇರೆಗೆಟ್ಟೆನಬಹುದೆ ದೇವರು
ಕಾರಿಯದ ಸಾಧನೆಯಲಾದಪರಾಧವೆಣಿಸುವರೆ ॥ ೫೨ ॥

ಅರಿದೆನಿಪ ಕಾರ್ಯವನು ಮಾಡುವ
ಮರಳಿ ನಿಷ್ಠುರ ನುಡಿಯ ತಾಳುವ
ಬಿರುದ ಸುಭಟರದಾರು ಮಾರುತಿಯಲ್ಲದವನಿಯಲಿ ॥
ತರುಣಿಯನು ನಾಸುಲಿದೊಡಾಕ್ಷಣ
ಕೆರಳಿದಾ ಖಳನೆನ್ನ ಹೊಡೆದನು
ಅರಸ ನೋಡದೆ ಕೆಟ್ಟ ನುಡಿವುದೆ ವೀರಮಾರುತಿಯ ॥ ೫೩ ॥

ಎನಲು ಶೋಕವು ನೂರು ಮಡಿಸಿತು
ಮನದಿ ವೊಡಲೊಡೆವಂತೆ ಮರುಗಿದ
ಮನಕೆ ಬಂದಂತೆಂಬರಲ್ಲದೆ ಸಲೆಗುಣಾವಗುಣ ॥
ಜನಪರೆಣಿಪರೆ ಲೋಕಸಮ್ಮತ
ಯೆನುತ ಕರ ಸಂಕೀರ್ಣವಟ್ಟನು
ಹನುಮ ಕಟ್ಟುಮ್ಮಳವ ತಾಳಿದ ರಾಮನೆಂದುದಕೆ ॥ ೫೪ ॥

ಬಸುರ ಹೊರೆವಾಸೆಯಲಿ ಲೋಗರ
ಬೆಸನ ನಡೆನರೆ ಕಷ್ಟವದರಿಂ
ದಶಗುಣೋತ್ತರ ಕಷ್ಟಯೆಂಜಲ ತಿಂದು ಬದುಕುವುದು ॥
ವಸುಧೆಯೊಳಗವನಿಂದ ಲೆಂಕನು
ದಶಗುಣೋತ್ತರ ಕಷ್ಟನವನಿಂ
ದಶಗುಣೋತ್ತರ ಸೇವೆ ಕಷ್ಟವು ಕಷ್ಟತರವೆಂದ ॥ ೫೫ ॥

ಕುಶಲ ವಿದ್ಯದಿ ಬದುಕುವಾತನು
ವಸುಧೆಯೊಳಗುತ್ತಮನು ಮಧ್ಯಮ
ಕೃಷಿಯು ವಾಣಿಜ್ಯಾದಿ ವೃತ್ತಿಗಳಿಂದ ಜೀವಿಪನು ॥
ಹುಸಿಯು ಗುಣದಲಿ ನರರ ಸಲೆ ಕೀ
ರ್ತಿಸುವನಧಮನು ಸೇವೆಯಿಂ ಜೀ
ವಿಸುವ ಪಾತಕಿ ಧರೆಗೆ ಕಷ್ಟನು ಕಷ್ಟತರವೆಂದ ॥ ೫೬ ॥

ಜಲವ ಕಡೆದದರಿಂದ ಬೆಣ್ಣೆಯು
ಕೊಳಲು ಬಹುದಾಕಾಶ ಮಧ್ಯವ
ಸೆಳೆದು ಕಟ್ಟಲು ಬಹುದು ಬಲುಹಿಂದೆರಡು ಕೈಗಳಲಿ ॥
ಜಲನಿಧಿಯನೀಸಾಡಬಹುದಾ
ನೆಳಲ ಕೂಡಿರಿದಾಡಿಗೆಲಬಹು
ದೊಲಿಸತೀರದು ನೃಪರ ಸೇವೆಯ ಮಾಡಿ ಭೃತ್ಯರಿಗೆ ॥ ೫೭ ॥

ಹೀನ ಸೇವಾವೃತ್ತಿ ಧರೆಯಲಿ
ಶ್ವಾನ ವೃತ್ತಿಯದೆಂತುಟೆಂದರೆ
ಶ್ವಾನ ನಿಜ ಚಾರಿತ್ರ ಸೇವಕನಸ್ವತಂತ್ರಕನು ॥
ಮಾನವೇಂದ್ರನ ಸೇವೆಯನು ಸುಡ
ಲೇನು ಸಿರಿಯಿರಲೇನದಾತಗೆ
ಹೀನ ವೃತ್ತಿಗಳೆಂದು ಮಾರುತಿ ಸುಯ್ದು ಮರುಗಿದನು ॥ ೫೮ ॥

ಸೇವೆಯಲಿ ಬದುಕುವುದರಿಂದವೆ
ಸಾವುದತಿಸುಖವೆನಲು ಕೇಳುತ
ಪಾವನಿಯು ಮೈದಡವಿ ಬಸುರೊಳಗಿಟ್ಟು ಬೋಳೈಸಿ ॥
ನೋವಿನಲಿ ಮುನ್ನರಿಯದೆಂದುದ
ಭಾವಿಸುವರೇ ಭೃತ್ಯರೆನುತಲಿ
ದೇವ ಮಗುಡವ ಬಿಡಿಸಿ ಸಂತವಿಸಿದನು ಮಾರುತಿಯ ॥ ೫೯ ॥

ನನ್ನಿವಂತರ ದೇವ ಬಾರೈ
ಮನ್ನಣೆಯ ಮದಗಜವೆ ಬಾರೈ
ಯೆನ್ನ ಭಕ್ತರ ಕುಲಶಿರೋಮಣಿಯೆನುತ ಮೊಗ ನೋಡಿ ॥
ಮನ್ನಿಸಿದನಣುವನ ಕೃಪಾನಿಧಿ
ಯನ್ನೆವರ ಭೂನಾಥ ರಘುಜಗೆ
ಕನ್ನಡಿಯ ಮುನ್ನೊಯ್ದು ತೋರುವಪೋಲು ರವಿ ಬಂದ ॥ ೬೦ ॥

---

## ೩೯ನೇ ಸಂಧಿ

ಪಲ್ಲ ॥ ದೇವ ರಾಘವಲಕ್ಷ್ಮಣರನೈ
ರಾವಣನು ಕದ್ದೊಯ್ಯಲರಿತದ
ನಾ ವಿಭೀಷಣ ಪೇಳೆ ಪತಿಗಳ ತಂದ ಹನುಮಂತ ॥

ಪದ ॥ ಧರಣಿ ಜಲ ಶಿಖಿ ವಾಯು ಗಗನಕೆ
ಸರಸಿಜದ ಸಂಪಗೆ ದಶಾಂಗದ
ಸಿರಿಯ ಗಂಧದ ಕೇದಗೆಯ ಪರಿಮಳವು ದೊರೆವಂತೆ ॥
ಹರಿಕಥೆಗೆ ಸರಿಗಟ್ಟುತಿದನಾ
ದರಿಸಿದವರಿಹಪರವ ಗೆಲುವೊಡೆ
ಧರೆಗೆ ಸೂರೆಯನಿತ್ತ ವರಕವಿ ಬತ್ತಲೇಶ್ವರನು ॥ ೧ ॥

ಸುರಪುರಕೆ ಹರಪುರಕೆ ಹರಿಯಿಹ
ಪುರಕೆ ಅಳಕಾಪುರಕೆ ಕೋಟವಿ
ಪುರಕೆ ಮರುತನ ಪುರಕೆ ಲಂಕಾಪುರಕೆ ಯಮಪುರಕೆ ॥
ಭರದಿ ವರುಣನ ಪುರಕೆ ಬೊಮ್ಮನ
ಪುರಕೆ ನೂರ್ಮಡಿ ಮಿಗಿಲೆನಿಸಿ ತಾ
ಕರ ಚೆಲುವಿನಿಂದೆಸೆವುದದು ಪಾತಾಳದೊಳು ಲಂಕೆ ॥ ೨ ॥

ಸುತ್ತ ಬಳಸಿದವೇಳು ಕೋಟೆಯು
ಬಿತ್ತರದ ಪ್ರಾಕಾರ ದುರ್ಗವು
ಸುತ್ತಮುತ್ತಿಹರೇನ ಹೇಳುವೆ ವರ ಮುನೀಶ್ವರರು ॥
ಕತ್ತಲೆಯು ಕಂಡರಿಯದಾ ಪುರ
ವೆತ್ತನೋಡಿದೊಡತ್ತ ಬೆಳಕಿನ
ವೊತ್ತ ಪಸರಿಸುತಿಹುದು ದಿನಕರಕೋಟಿ ತೇಜದಲಿ ॥ ೩ ॥

ಕೇರಿ ಕೇರಿಯ ಬಾಗಿಲುಗಳಲಿ
ದಾರವಟ್ಟದ ವಜ್ರಲಹರಿಯು
ತೋರಣಂಗಳ ಮೇಲೆ ರಚಿಸಿದ ಮುತ್ತು ಮಾಣಿಕದ ॥
ಮೇರುವಿನ ತೇಜದಲಿ ಕನಕದ
ತೋರ ಕಲಶವನಂತಕೋಟಿಯು
ಚಾರು ರತುನದಿ ರಚಿಸಿ ಮೆರೆದಿಹುದೇನ ಹೇಳುವೆನು ॥ ೪ ॥

ಇಂದುಕಾಂತದ ಭಿತ್ತಿ ಕೋಟೆಗ
ಳಿಂದಲಾವೃತವಾದ ಬಹು
ಮಂದಿರದ ಸಾಲುಗಳೆಸೆವ ಪರಿಪರಿಯ ಲೋವೆಗಳು ॥
ಚಂದಚಂದದ ವಜ್ರ ಕವಟುಗ
ಳಿಂದ ಕಟ್ಟಿದ ಪಳೆಯ ಗುಡಿಗಳ
ಗೊಂದಣದೊಳೆಸೆದಿಪ್ಪವುಪ್ಪರಿಗೆಗಳಸಂಖ್ಯೆಗಳು ॥ ೫ ॥

ರಸದ ಬಾವಿಯು ಮನೆಮನೆಗಳಲಿ
ಮಿಸುಪ ಚಿಂತಾಮಣಿಗಳಿರುತಿರೆ
ಎಸೆವ ಪರುಷದ ಕಣಿಗಳಗ್ಗದ ವೀಥಿವೀಥಿಯಲಿ ॥
ಮಿಸುಪ ಮಿಸುನಿಯ ತೋರಣಂಗಳ
ಎಸೆವ ಮಣಿಮಾಣಿಕ್ಯ ಕೋಟೆಯು
ದೆಸೆದೆಸೆಯ ಬಾಗಿಲುಗಳೈವತ್ತೆರಡು ಕೋಟಿಗಳು ॥ ೬ ॥

ನಿತ್ಯ ಕರ್ಮಂಗಳನು ಚರಿಸುವ
ನಿತ್ಯದೌಪಾಸನವ ಬೇಳುವ
ನಿತ್ಯ ಮಾಡುವರಗ್ನಿಹೋತ್ರಂಗಳ ಮಹಾಕ್ರತುವ ॥
ನಿತ್ಯ ನಡೆಸುವರಖಿಳ ವೇದ
ಸ್ತುತ್ಯ ಪಾರಾಯಣವ ಶಾಸ್ತ್ರವ
ನತ್ಯಧಿಕ ನಿಟ್ಟಿಯಲಿ ರಾಕ್ಷಸವಿಪ್ರ ಗೃಹಗಳಲಿ ॥ ೭ ॥

ಚರಣಗತಿಗಳ ನೂಪುರಂಗಳ
ಕರದ ವಿವರದ ಕಂಕಣಂಗಳ
ಹಿರಿಯರಿಗೆ ನಮಿಸುತ್ತಲಿರುವಾ ಕೊರಳ ಹಾರಗಳ ॥
ವರಕಥೆಗೆ ಕಿವಿಗೊಡುವ ಓಲೆಯು
ಬೆರಳ ಧರ್ಮಕ್ಕೊಲಿವ ಮುದ್ರಿಯು
ಧರಿಸಿಹರು ಪಾತಾಳ ಲಂಕೆಯು ಪುರದ ನಾರಿಯರು ॥ ೮ ॥

ಆ ಹೊಳಲ ಮಧ್ಯದೊಳಗಿಪ್ಪದು
ತೋಹಿನಿಂ ರಚಿಸಿರುವ ಮಂಟಪ
ಸಾಹಸಿಗಳಧಿದೇವಿ ಮಣಿಮಯ ಮಕುಟ ಕಾಂತಿಯಲಿ ॥
ಮೋಹಿಸಿ ಹೊಳೆಹೊಳೆವ ಜವನದಿ
ಬಾಹುಗಳ ಜಡಿವುತ್ತ ನೋಡುತ
ನೇಹವಲಿ ನೆಲೆಸಿಹಳು ಮುದದಿಂ ಕಂಕಣಾದೇವಿ ॥ ೯ ॥

ದೇವತೆಯು ಬಳಸಿನಲಿ ಮೆರೆದಿಹ
ದೇವಿ ಶಾಕಿನಿ ದೇವಿ ಮುಕ್ತಾ
ದೇವಿ ಯಮುನಾ ದೇವಿ ಭದ್ರಾ ದೇವಿ ಸಹದೇವಿ ॥
ದೇವಿ ಮಂಗಳದೇವಿ ಗೌತಮ
ದೇವಿ ಮಾರುತ ದೇವಿ ಡಾಕಿನಿ
ದೇವಿಯರು ನೆಲೆಸಿಹರು ತಮತಮಗುಗ್ರರೂಪದಲಿ ॥ ೧೦ ॥

ಅಲ್ಲಿಗರಸಾಗಿಹನು ಸುರರಿಗೆ
ಬಲ್ಲಿದನು ಐರಾವಣನು ಜಗ
ವೆಲ್ಲವನು ಗೆಲುವನು ಮಹಾಭುಜಬಲಪರಾಕ್ರಮನು ॥
ಬಲ್ಲಿದನು ತನಗಿಲ್ಲೆನಿಸಿ ಖಳ
ವಲ್ಲಭನು ಸುಖದಿಂದಲಿರುತಿರೆ
ಫುಲ್ಲನಾಭಂಗಸದಳನು ಪಾತಾಳ ಲಂಕೆಯಲಿ ॥ ೧೧ ॥

ಹರನಿಗಂ ಬಲ್ಲಿದನು ಬಲದಲಿ
ಹರಿಯಿಗಂ ಬಲ್ಲಿದನು ಸಿರಿಯಲಿ
ವರಸರಸ್ವತಿಯಿಂದ ಬಲ್ಲಿದನಖಿಳ ವಿದ್ಯೆಯಲಿ ॥
ಸ್ಮರನಿಗಂ ಬಲ್ಲಿದನು ಚೆಲುವಲಿ
ಸುರಪಗಂ ಬಲ್ಲಿದನು ಭೋಗದಿ
ಧರೆಯೊಳೈರಾವಣಗೆಯೆಣೆಯಿನ್ನಿಲ್ಲ ಹೊಗಳುವರೆ ॥ ೧೨ ॥

ಶಿವನ ನಗರಿಗೆ ಧಾಳಿಯಿಡುವಾ
ಜವನ ದಂಡವ ತುಡುಕಿ ಸೆಳೆವಾ
ಧ್ರುವನ ಮಂಡಲಕುರವಣಿಸಿಯಾತನನು ಝಂಕಿಸುವ ॥
ತವಕದಲಿ ವಡಬನನು ಹಿಡಿವಾ
ಭುವನ ಖಂಡಂಗಳನು ಗೆಲುವಾ
ವಿವಿಧ ಶಕ್ತಿಯ ನಾಯಕರವಗೆ ಕೋಟಿ ಸಂಖ್ಯೆಯಲಿ ॥ ೧೩ ॥

ಒಂದು ದಿನ ಐರಾವಣನು ನಡೆ
ತಂದು ದೇವಿಯ ಮನೆಯ ಹೊಕ್ಕನು
ಬಂದು ನಮಿಸಿದ ಕಂಕಣಾದೇವಿಯರ ಚರಣದಲಿ ॥
ನಿಂದು ಕೈದುಗಳಿಂದ ದೇಹದ
ಸಂದುಸಂದನು ಕಡಿಮಕೊಂಡಾ
ನಂದದಿಂ ದೇವತೆಯನರ್ಚಿಸುತಿಪ್ಪರನು ಕಂಡ ॥ ೧೪ ॥

ಮಸೆದಲಗಿನಿಂದಿರಿದುಕೊಂಬಾ
ಬಿಸಿ ರುಧಿರದಭಿಷೇಕ ಮಾಡುವ
ಬಸಿರ ಬಗಿವುತೆ ಕರುಳಿನಿಂ ದೇವತೆಯನರ್ಚಿಸುವ ॥
ಅಸಿಗಳಿಂದಲಿ ಶಿರವನರ್ಪಿಸಿ
ಬಸಿವ ಮುಂಡದಿ ದಂಡ ನಮನವ
ನೊಸೆದು ಮಾಡುವ ದನುಜ ಕೋಟಿಯ ಕಂಡು ಬೆರಗಾದ ॥ ೧೫

ಕರವ ನೊಸಲಿಗೆ ಚಾಚಿ ದೇವಿಗೆ
ಯೆರಗಿ ತನ್ನರಮನೆಗೆ ಬಂದನು
ಹರುಷದಿಂದೋಲಗವನಿತ್ತನು ದನುಜರಾಯರಿಗೆ ॥
ಕರೆಸಿ ಸೋದರದಳಿಯನನು ಕು
ಳ್ಳಿರಿಸಿಕೊಂಡನು ಸಿಂಹಪೀಠದಿ
ಕರ ಚರಣ ಮೊದಲಾದ ಲಕ್ಷಣವರಿತು ಚಿಂತಿಸಿದ ॥ ೧೬ ॥

ನೀಲವರ್ಣದಲೊಪ್ಪುತಿಹ ನಾ
ನೀಲ ಮೇಘಶ್ಯಾಮನಂದದಿ
ನೀಲ ಸುಪ್ರಭೆ ಬೀರುತಿಹುದಾದಿತ್ಯ ತೇಜದಲಿ ॥
ನೀಲಮಯದಾಭರಣದಿಂದವೆ
ನೀಲ ನಿರ್ಮಲನಾಪ್ತನಳಿಯನು
ನೀಲಮೇಘನದೆಂಬ ಬಾಲನು ಸಭೆಗೆ ಹರಿತರಲು ॥ ೧೭ ॥

ಹನ್ನೆರಡು ವರುಷಕ್ಕೆ ನೊಸಲೊಳ
ಗುನ್ನತದ ಪಟ್ಟವನು ಧರಿಸುವ
ಚಿನ್ನ ಲಕ್ಷಣವರಿತು ಐರಾವಣನು ಮನದೊಳಗೆ ॥
ಎನ್ನ ಕೊಂದಿವನೊಡೆಯನಹನೆಂ
ದುನ್ನತದ ದಾನವರ ಕರೆವುತ
ಹೊನ್ನ ಸಂಕಲೆಗಳನು ತೊಡಿಸುವುದೆಂದು ನೇಮಿಸಿದ ॥ ೧೮ ॥

ರಕ್ಕಸರು ಹಿಡಿದೊಯ್ದು ಸೆರೆಯೊಳ
ಗಿಕ್ಕಿದರು ಬಲು ಸಂಕಲೆಗಳನು
ಮಕ್ಕಳಾಟಿಕೆ ಮಾಡಿದನೊಯೆಂದೆನಲು ಪುರಜನರು ॥
ಚಿಕ್ಕವರು ಮೊದಲಾಗಿ ತಮತಮ
ಗುಕ್ಕಿ ದನುಜನ ಬೈಯುತಿರಲಾ
ಇಕ್ಕೆಲದ ದಾನವರ ಕಳುಹಲು ಹರೆದುದೋಲಗವು ॥ ೧೯ ॥

ಇತ್ತ ಲಂಕಾಪುರದೊಳಗೆ ತಾ
ನಿತ್ತನಿರುಳೋಲಗವ ರಾವಣ
ಹತ್ತು ಕೊರಳುಗಳುಡಿವುತಿರ್ದುವು ಹೊತ್ತ ಮುಗುಡದಲಿ ॥
ಮತ್ತೆ ಐರಾವಣನು ಕಂಟಕ
ವೆತ್ತಿ ಬಂದರೆ ತನ್ನ ನೆನೆಯೆಂ
ದಿತ್ತ ಭಾಷೆಯ ನೆನಹು ಬಂದುದನರಿತು ಚಿಂತಿಸಿದ ॥ ೨೦ ॥

ರಾವಣನು ಮನದೊಳಗೆ ಕಲಿಯೈ
ರಾವಣನ ನೆನೆಯಲ್ಕೆ ಅರಿತನು
ಭಾವಿಸಿದ ಬಲು ರಾಜಕಾರ್ಯವಿದಾವುದೆಂದೆನುತ ॥
ಓವಿ ಶೃಂಗಾರವನು ಮಾಡಿದ
ದೇವಿಯನು ನೆನೆದುಟ್ಟ ಪಳಿಯನು
ತಾವರೆಯ ಸಖನಂತೆ ತೊಳಗುವ ಕೈದುವನು ಕೊಂಡ ॥ ೨೧ ॥

ಬಂದು ಕಂಕಣದೇವಿಯರ ಪದ
ಕಂದು ನಮಿಸಿದನಸುರ ಹಗೆಗಳ
ತಂದು ದಿಗುಬಲಿ ಕೊಡುವೆ ನಿಮಗೆಂದೆನುತ ಕೈಮುಗಿದ ॥
ಮುಂದೆ ಬಟ್ಟೆಯನರಿತು ಮೇಲಕೆ
ಬಂದು ಲಂಕಾಪುರವ ಹೊಕ್ಕನು
ಮುಂದುಗೆಟ್ಟಿಹ ದಶಶಿರನವೋಲಗಕೆ ನಡೆತಂದ ॥ ೨೨ ॥

ತೆಗೆದು ತಾಬಿಗಿದಪ್ಪಿ ಕುಳಿರಿಸೆ
ನಗುತ ಕುಶಲ ಕ್ಷೇಮವಾಲಿಸಿ
ಮೊಗವ ನೋಡುತೆ ಕೇಳಲೈರಾವಣನು ರಾವಣನ ॥
ಸೊಗಯಿಸುವ ವಸ್ತ್ರಾಭರಣಗಳ
ತೆಗೆವುತುಚಿತವನಿತ್ತು ಮನ್ನಿಸಿ
ಜಗದಕಂಟಕ ಪೇಳಿದನು ಬಲು ರಾಜಕಾರ್ಯಗಳ ॥ ೨೩ ॥

ಸೀತೆಯೆಂಬಾ ಮದನನಲಗಿಗೆ
ಸೋತು ಸೆರೆಯುನು ತಂದೆನಾಕೆಯು
ಭೂತಳೇಶ್ವರ ರಾಮನೆಂಬವನವಳ ವಲ್ಲಭನು ॥
ಕಾತಿಯಿಂ ತನ್ನನುಜ ವಾನರ
ಯೂಥ ಸಹಿತವೆ ಬಂದು ಕಟ್ಟಿದ
ಸೇತುವನು ಮುತ್ತಿದನು ಲಂಕೆಯನೇನ ಹೇಳುವೆನು ॥ ೨೪ ॥

ಕಾಳಗದಿ ಖಯಖೋಡಿಯಿಲ್ಲದೆ
ಕಾಳರಕ್ಕಸ ಸೇನೆ ಮುಸುಕಿತು
ಹೇಳಲರಿಯೆನು ಬಿದ್ದ ದಾನವಮಂಡಲೇಶ್ವರರ ॥
ತಾಳುವವರಿನ್ನಿಲ್ಲ ಭವರವ
ಮೇಳವಿಸಿದವರೆಲ್ಲ ಬಿದ್ದುದು
ಕೇಳು ಐರಾವಣನೆ ರಣ ವೃತ್ತಾಂತ ವಿಸ್ತರವ ॥ ೨೫ ॥

ಕೇಳು ದಶಶಿರ ಭಾಷೆಯುದನೀ
ರೇಳು ಲೋಕವ ಬೆರಗುಮಾಡುವೆ
ಗೋಳಿಡಿಸುವೆನು ಹಗೆಯ ಸೇನಾನಿವಹವೆಲ್ಲವನು ॥
ಪಾಳೆಯವ ತೆಗೆಸುವೆನು ಬಲು ಬಿ
ಲ್ಲಾಳುಗಳನಿಬ್ಬರನು ತಮದಿಂ
ಜಾಳಿಸುವೆ ನೀ ಸುಖದೊಳಿರುತಿರು ಹಗೆಗಳಿಲ್ಲೆನಿಪೆ ॥ ೨೬ ॥

ನೇಮಿಸಿದ ಕರಿತುರಗರಥ ತಾ
ನಾಮದಸುರರ ಪೇಳಿದರೆ ನಿ
ಸ್ಸೀಮನೈರಾವಣನು ಬಲವೆಲ್ಲೇಕೆ ತನಗೆನುತ ॥
ತಾಮಸದ ಕೈದುಗಳಿನಿಂದಾ
ರಾಮಲಕ್ಷ್ಮಣರೆಂಬ ನರರನು
ಭೂಮಿಯೊಳು ನಿರ್ನಾಮರೆನಿಸುವೆನಿಂದಿನಿರುಳಿನಲಿ ॥ ೨೭ ॥

ಮುದ್ರೆಗಳನೊಲಿವುತ್ತ ನುಡಿದನು
ಭದ್ರದೇಹದ ಭಟನ ಬೀಳ್ಕೊಡೆ
ರುದ್ರರೂಪದ ದೈತ್ಯಬಂದನು ರಾಮನಿದ್ದೆಡೆಗೆ ॥
ನಿದ್ರಿತರನಾಲಿಸುತ ಮೆಲ್ಲನೆ
ವಿದ್ರವಣವನು ಮಾಳ್ಪೆನೆನುತಾ
ಕ್ಷುದ್ರರೂಪವ ತಾಳಬೇಕೆನುತಸುರನನುವಾದ ॥ ೨೮ ॥

ಹಿಂದೆ ಐರಾವಣಗೆ ತನ್ನೊಂ
ದಂದವನು ಧರಿಸಿಪ್ಪ ವಿದ್ಯವ
ನಂದುಕೊಟ್ಟ ವಿಭೀಷಣನು ನಗವಿರಲು ಮನದೊಳಗೆ ॥
ಇಂದು ನೆನೆದ ವಿಭೀಷಣನ ರೂ
ಪಂದ ಗೆಲಬೇಕಿವರನೆನುತವೆ
ಬಂದನಗ್ಗದ ಖಳನು ರಾಮನ ಕಪಿಕಟಕದೆಡೆಗೆ ॥ ೨೯ ॥

ರಕ್ಕಸರ ಭಯಕಂಜಿ ಬಾಲದ
ಲಿಕ್ಕಿರಲು ಕೋಟೆಯನು ಮರುತಜ
ದಿಕ್ಕನೊಡೆದುಚ್ಚಳಿಸಿ ಬೆಳೆದಿರೆ ವಜ್ರ ರೋಮಗಳು ॥
ಚಿಕ್ಕ ನುಸುಳ್ಗಂಡಿಯನು ಮಾಡಿಯೆ
ರಕ್ಕಸರಿಗಸದಳದ ಕಾವಲ
ನಿಕ್ಕಿ ವಾನರ ಭಟರ ಕಾಯ್ದಿರುತಿರ್ದ ಹನುಮಂತ ॥ ೩೦ ॥

ಬಂದು ಐರಾವಣನು ಕೋಟೆಯ
ನಿಂದು ನೋಡಿದ ಬಳಸಿ ಕಟಕವ
ನಂದು ಬೆಳೆದುದು ಮೇಲೆ ತಾರಾಮಂಡಲವ ತುಡುಕಿ ॥
ನಂದಿವಾಹನನಂತೆ ರೋಮವು
ಚಂದ್ರಕೋಟಿಗಳಂತೆ ಹೊಳೆವು
ತ್ರಿಂದುಧರ ಹನುಮಂತನಿರೆ ಖಳ ಕಂಡು ಬೆರಗಾದ ॥ ೩೧ ॥

ಲೋಕದೊಳು ತಾನೊಬ್ಬನೇ ಶಿವ
ನೇಕಮಯನಾಗಿರುವ ತೆರವಿ
ಕ್ವಾಕುಕಿಂಕರನಿರಲು ರಾಮನದೆಷ್ಟು ಘನತರನೊ ॥
ಭೀಕರವ ತಾಳಿದಳು ಭೂಮಿಯು
ಕಾಕು ದೈತ್ಯರ ಭಾರದಿಂದವೆ
ಲೋಕಕಂಟಕ ಶಿಕ್ಷಕರುಯಿವರೆನುತ ಕೈಮುಗಿದ ॥ ೩೨ ॥

ಹೊಳೆವ ಮುಖ ಥಳಥಳಿಸ ಕಾಂತಿಯು
ಲಲಿತ ತುಳಸಿಯ ದಂಡೆ ನಾಮದ
ಚೆಲುವ ರೂಪನ ನೆನೆದ ಕರುವಿಟ್ಟಿರಕದಂದದಲಿ ॥
ಬಳಸುತವೆ ವಿಭಿಷಣನ ರೂಪವ
ಖಳನು ಕೈಕೊಂಡೆಸೆದನಾಕ್ಷಣ
ಜಲಜನಯನನ ನಾಮವನು ನೆನೆವುತ್ತ ನಡೆತಂದ ॥ ೩೩ ॥

ದಿಟ್ಟನಹ ಹನುಮಂತ ಕಂಡನು
ತಟ್ಟನೆಯೆ ಶ್ರೀರಾಮಚಂದ್ರನ
ಬಿಟ್ಟುಬಂದಿರದೇಕೆ ಕಾವಲಿಗಿರಲು ನಾನೆಂದ ॥
ನಟ್ಟಿರುಳು ರಕ್ಕಸರು ಬಂದರೆ
ಮುಟ್ಟಿತಾಗಲು ಬಂಪೆನೆನೆ ಜಗ
ಜಟ್ಟಿ ನುಡಿದನು ವಿಭಿಷಣಗೆ ನೀಬಂದುದನುಚಿತವು ॥ ೩೪ ॥

ನೀವು ರಾಮನ ಸನಿಯವಿರೆ ಮಾ
ಯಾವಿಗಳು ಬರಲರಿದು ಕಟಕದ
ಕಾವಲಿಗೆ ನಾ ಸಾಕು ದೇವರ ಬಳಿಗೆ ಹೋಗೆನಲು ॥
ಕೋವಿದನು ಮಾಯಾ ವಿಭೀಷಣ
ತೀವಿ ರಚಿಸಿದ ಬಾಗಿಲನು ತಾ
ಭಾವಿಸುತವೊಳಹೊಕ್ಕು ಕಂಡನು ರಾಮ ಕಟಕವನು ॥ ೩೫ ॥

ದನುಜತಾ ಸಮ್ಮೋಹನಾಸ್ತ್ರದಿ
ಘನತರದ ಪಾಶಂಗಳಿಂದವೆ
ವನಚರರ ಸೇನೆಯನು ಬಿಗಿದನು ನಿಮಿಷ ಮಾತ್ರದಲಿ ॥
ವನಜಲೋಚನ ರಾಮಚಂದ್ರನು
ಅನುಜ ಲಕ್ಷ್ಮಣ ಸಕಲ ಕಪಿಗಳು
ಕನಸ ಒಳೆವುದ ಕಂಡ ನಿದ್ರಾಮುದ್ರರಾಗಿಹುದ ॥ ೩೬ ॥

ಬಾಲಗಳ ತಲೆದಿಂಬ ರಚಿಸಿಯೆ
ನೀಲಗಿರಿ ಪವಡಿಸಿದ ತೆರದಲಿ
ಕಾಲುಕೈಗಳ ಮುದುಡಿವೊತ್ತೊತ್ತುಗಳಲಿಟ್ಟೆಣಿಸಿ ॥
ಆಲಿಗಳ ನೆರೆಮುಚ್ಚಿವುಸಿರಿನ
ಹೊಯ್ಲಿನಲಿ ಗುರುಗುರಿಸಿ ಗೊರೆವುತ
ಬಾಳ ನಿದ್ರೆಯೊಳಿಪ್ಪ ಕಪಿಗಳ ಕಂಡನಾ ಖಳನು ॥ ೩೭ ॥

ಸುತ್ತ ಮಲಗಿರ್ದಖಿಲ ಕಪಿಗಳ
ಮೊತ್ತ ತಾರಾನಿವಹ ಮಧ್ಯದ
ಲುತ್ತಮದ ಪರಿಪೂರ್ಣ ಚಂದ್ರಮನಂತೆ ತೊಳತೊಳಗಿ ॥
ಮತ್ತೆ ಪವಡಿಪ ರಾಮಲಕ್ಷ್ಮಣ
ರತ್ತ ಚಿತ್ತವನಿತ್ತು ದನುಜನು
ಹತ್ತೆ ಬಂದನು ನೋಡಿ ಬೆರಗಾದನು ಮಹೀಶ್ವರನು ॥ ೩೮ ॥

ಲೋಕವನು ಕುಕ್ಷಿಯಲಿ ಧರಿಸಿಹ
ಲೋಕಲೋಕಂಗಳನು ಚರಿಸುವ
ಲೋಕ ಕೋಟಿಯ ರೋಮರೋಮಂಗಳಲಿ ಧರಿಸಿಪ್ಪ ॥
ಲೋಕ ಕರ್ತೃವೆನಿಪ್ಪ ಮೂರುತಿ
ಲೋಕನಾಥನನಂತರೂಪನ
ಲೋಕದೊಡೆಯನ ತುಡುಕಿ ಹಿಡಿಯಲು ದನುಜಪತಿ ಬಂದ ॥ ೩೯ ॥

ರಾಮಲಕ್ಷ್ಮಣರಿಬ್ಬರನು ನಿ
ಸ್ಸೀಮನೈರಾವಣನು ನೆಗಹಿದ
ತಾಮಸದಲುಬ್ಬುತ್ತ ಕಂಕುಳಲವುಚಿಕೊಂಡವರ ॥
ಆ ಮಹಾಖಳ ನಡೆವ ಭಾರಕೆ
ಭೂಮಿಯಡಿಗಡಿಗೊಲೆಯೆ ಬೇಗನೆ
ಯಾಮವನು ಕಳೆವುತ್ತ ಬಾಗಿಲ ದಾಟಿ ಮುಂದಾದ ॥ ೪೦ ॥

ಗಟ್ಟಿಗನು ಐರಾವಣನು ತಾ
ನಿಟ್ಟಿಸುತೆ ಪಾತಾಳಕಿಳಿದನು
ಘಟ್ಟಿಸುವೆ ತಾನಿವರನೆನುತವೆ ತನ್ನ ಪಟ್ಟಣವ ॥
ದಿಟ್ಟತನದಲಿ ಬಂದು ಹೊಗುತವೆ
ಮುಟ್ಟೆ ಪುರಜನವರಿಯದಿರೆ ಜಗ
ಜಟ್ಟಿ ತಂದಿಳುಹಿದನು ಕಂಕಣ ದೇವಿಯರ ಮುಂದೆ ॥ ೪೧ ॥

ಸಂಕಲೆಯನಿಡಿಸಿದನು ಅಳಿಯನ
ಬಿಂಕದಿಂದವೆ ತರಿಸಿದನು ನಿಃ
ಶಂಕರಹ ಮೂವರನು ದಿಗುಬಲಿ ಕೊಡುವೆನೆಂದೆನುತ ॥
ಕಂಕಣಾದೇವಿಯರ ಮೆಚ್ಚಿಸೆ
ಕುಂಕುಮಾಂಕಿತ ಪುಷ್ಪದಿಂದವೆ
ಕಿಂಕರನು ಬಲು ಮಂತ್ರದಿಂ ದೇವತೆಯನರ್ಚಿಸಿದ ॥ ೪೨ ॥

ಇತ್ತ ರಾಮನ ಕಟಕದೊಳಗೆ
ಚ್ಚೆತ್ತು ಕಣ್ದೆರೆದಾ ವಿಭೀಷಣ
ನೆತ್ತ ನೋಡಿದೊಡತ್ತ ಮಲಗಿದ ಕಪಿಗಳನು ಕಂಡು ॥
ಎತ್ತಿಯೊಲಿದೆಬ್ಬಿಸಿದೊಡೇಳದೆ
ಮತ್ತರಾಗಿಹ ಕೋಡಗಂಗಳ
ವೊತ್ತವನು ಕಂಡಿದುವೆ ವಿಭ್ರಮೆಯೆನುತ ಬೆರಗಾದ ॥ ೪೩ ॥

ರಾಮಲಕ್ಷ್ಮಣರಿಪ್ಪೆಡೆಗೆ ತಾ
ರಾಮ ನಾಮವ ನೆನೆವುತೈತರೆ
ರಾಮಲಕ್ಷ್ಮಣರೀರ್ವರಿಲ್ಲದ ಕಂಡು ಬೆರಗಾದ ॥
ರಾಮರಾಮೆನುತೊದರಿ ಕರೆವುತ
ರಾಮನೆಲ್ಲಿಗೆ ಹೋದನೆನುತ ವಿ
ರಾಮನಾಗಿ ವಿಭೀಷಣನು ಮೊರೆಯಿಡುತ ಚಿಂತಿಸಿದ ॥ ೪೪ ॥

ರಾಮ ಮಂತ್ರ ಸ್ಮರಣೆಯಿಂದಾ
ರಾಮಕಟಕವನೆಬ್ಬಿಸಿದ ನಾ
ರಾಮನಿಂದವೆ ನಾಮಘನವೆನುತಾ ವಿಭೀಷಣನು ॥
ಸೀಮೆಯಿಲ್ಲದ ದುಃಖದಿಂದವೆ
ತಾ ಮನದಿ ಮರುಗುತ್ತ ನುಡಿದನು
ರಾಮಲಕ್ಷ್ಮಣರುಗಳ ಕಾಣೆನೆ ಹಾ ಮಹಾದೇವ ॥ ೪೫ ॥

ಎಂದೊಡಾ ಸುಗ್ರೀವ ಹನುಮರು
ಬಂದು ಕಂಗೆಡೆ ವೀರ ವಾನರ
ವೃಂದ ಗೋಳಿಡುತೊರಲಿ ಬಿದ್ದುದು ಧಾರಿಣಿಯ ಮೇಲೆ ॥
ನೊಂದಳುತ ಕಂಬನಿಯ ಧಾರೆಗ
ಳಿಂದ ನೆನದರು ದುಃಖದಿಂದಲಿ
ಬೆಂದು ಶೋಕಾಂಬುಧಿಯೊಳದ್ದಿತು ಸಕಲ ಕಪಿಕಟಕ ॥ ೪೬ ॥

ಹಾಯೆನುತ ಜಾಂಬವನು ಬಿದ್ದನು
ಬಾಯ ಬಿಟ್ಟೊರಲಿದನು ಹನುಮನು
ಕಾಯವನು ಧರೆಗೆಡಹಿ ಸುಗ್ರೀವಾಂಕ ಬಸವಳಿದ ॥
ಮೈಯ ಮರೆದನು ನೀಲನಂಗದ
ಹುಯ್ಯಲಿಟ್ಟನು ನಟ್ಟನಿರುಳಲಿ
ರಾಯರೆಲ್ಲಿಗೆ ಹೋದರೆಂದೊರಲಿತ್ತು ಕಪಿನಿವಹ ॥ ೪೭ ॥

ತನ್ನ ಪಾದವ ಕರುಣದಿಂದಲಿ
ಯೆನ್ನ ಶಿರದಲ್ಲಿರಿಸಿ ಹರುಷದ
ಲುನ್ನತದಲಾಜಾನುಬಾಹುಗಳಿಂದ ಪ್ಪೆದಡಪಿ ॥
ಪನ್ನಣೆಗಳಿಂ ಕರೆದು ಮೋಹನ
ಲೆನ್ನನೀಕ್ಷಿಸಿ ಪಿಡಿದು ರಕ್ಷಿಪ
ಚೆನ್ನರಾಮನ ಕಾಣೆನೆಂದೊರಲಿದನು ಹನುಮಂತ ॥ ೪೮ ॥

ದುಃಖವನು ನಿಲಿಸಿದನು ಹನುಮನ
ತಕ್ಕವಿಸಿದನು ಹಿರಿಯ ಜಾಂಬವ
ನಿಕ್ಕಿ ಬಾಲದ ಕೋಟೆಯಲಿ ಕಟಕವನು ಕಾಯ್ದಿರಲು ॥
ರಕ್ಕಸರ ಸುಳಿವುಗಳ ಕಂಡೆಯೊ
ಫಕ್ಕನೇ ಪೇಳೆನಲು ನುಡಿದನು
ಚೊಕ್ಕದರಿಯದೆ ಬಿಡುವೆನೇ ಕಂಡೊಡೆ ನಿಶಾಚರರ ॥ ೪೯ ॥

ದಾನವರ ಭಯವುಂಟೆ ಮತ್ತೀ
ಮಾನನಿಧಿ ನಮ್ಮಾ ವಿಭೀಷಣ
ತಾನೆ ತಿರುಗುತ್ತಿರಲು ನೀವೇಕೆನುತ ಕೈಮುಗಿಯೆ ॥
ನೀನು ರಾಮನ ನೆನವುತಿರ್ದರೆ
ದಾನವರ ಭಯವೆಲ್ಲಿ ಹೋಗೆಂ
ದಾನು ಕಳುಹಲು ಬಂದು ಹೊಕ್ಕನು ನಮ್ಮ ಕಟಕವನು ॥ ೫೦ ॥

ಎನಲು ಪೇಳ್ದ ವಿಭೀಷಣನು ತಾ
ದನುಜಹರ ಚರಣವನು ನೆನೆವು
ತ್ತನುನಯದಿ ಪವಡಿಸಿದೆ ಮತ್ತೆಚ್ಚೆತ್ತು ಕಂಡೊಡನೆ ॥
ವನಜಲೋಚನ ರಾಮಚಂದ್ರನ
ನನುಜ ಲಕ್ಷ್ಮಣ ಸಹಿತ ಕಾಣದೆ
ವನಚರರನೆಬ್ಬಿಸಿದೆನರುಹಿದೆ ನಿಮಗೆ ತಾನೆಂದ ॥ ೫೧ ॥

ಈ ಹದನ ವೃತ್ತಾಂತವಲ್ಲದೆ
ಕಾಹಿಗಾಗಿಯೆ ನಮ್ಮ ಕಟಕದ
ಬಾಹಿರಕೆ ಹೊರವಂಟು ಚರಿಸಿದುದಿಲ್ಲ ತಾನೆನಲು ॥
ಆ ಹನುಮ ಕನಲುತ್ತ ನುಡಿದನು
ಈ ಹುಸಿಕತನ ಸಾಕುಯೆನುತವೆ
ಬಾಹುಗಳ ಹಿಡಿದೆಳೆದು ರಾಮನ ತೋರು ನೀನೆಂದ ॥ ೫೨ ॥

ಕೊಂದು ಕಳೆವೆನು ನಿನ್ನನೀಕ್ಷಣ
ಮಂದಮತಿ ನೀ ತೋರು ರಾಮನ
ನೆಂದು ತಮತಮಗೆಲ್ಲ ಕಪಿಗಳು ಭಂಗಿಸುತ್ತಿರಲು ॥
ಎಂದ ಜಾಂಬವ ವಿನಯದಿಂದಲಿ
ಇಂದು ನಮ್ಮ ವಿಭೀಷಣನ ಮತ
ದಿಂದ ಮಾಡಿದ ಮಂತ್ರಮಾಟವಿದಲ್ಲ ಬಿಡಿ ನೀವು ॥ ೫೩ ॥

ಈತ ಹಗೆ ನಮಗಾದನಾದೊಡೆ
ಭೂತಳೇಶ್ವರರಿಬ್ಬರನು ತಾ
ಪ್ರೀತಿಯಲಿ ಕರೆದೊಯ್ದು ಲಂಕಾಪುರವ ಮರೆಹೊಕ್ಕು ॥
ಸೀತೆಯರಸನ ಬಂಧಿಸಸುರ
ವ್ರಾತದೊಳಗಿರುತಿರದೆ ವಾನರ
ಯೂಥವನು ಬೆರಸುವನೆ ರಾಘವನಾಣೆ ಬಿಡಿಯೆಂದ ॥ ೫೪ ॥

ಎನೆ ವಿಭೀಷಣನರಿತು ನುಡಿದನು
ದನುಜನೈರಾವಣನು ಪೂರ್ವದ
ಲನುಪಮದಲೆನ್ನೊಂದು ನಿಜರೂಪವನು ಬೇಡಿದೊಡೆ ॥
ಮನವೊಲಿದು ತಾನಿತ್ತೆನಾತಗೆ
ಧನುಜನೆನ್ನಯ ರೂಪ ಧರಿಸಿಯೆ
ಇನಕುಲೇಶ್ವರರಿಬ್ಬರನು ಕದ್ದೊಯ್ದನದೆ ನಿಜವು ॥ ೫೫ ॥

ಎಂದೊಡಾ ಹನುಮಂತ ದುಃಖದಿ
ನೊಂದು ನಾ ಕೆಡು ನುಡಿದೆ ನಿನ್ನನು
ಇಂದು ಸೈರಿಸಬೇಹುದೀ ಸರ್ವಾಪರಾಧವನು ॥
ಎಂದೊಡೆಂದ ವಿಭೀಷಣನು ನೀ
ನೊಂದು ನುಡಿದುದಕೇಕೆ ಹೊಲ್ಲೆಹ
ಬಂದ ಮಾಯೆಯನರಿಯೆನೆನುತವೆ ತಕ್ಕವಿಸಿಕೊಂಡ ॥ ೫೬ ॥

ಆದಿಪುರುಷನನೊಯ್ದ ದನುಜನ
ಭೇದಿಸುವೆನೀರೇಳು ಲೋಕವ
ನಾದೊಡೆಯು ಹೊಕ್ಕಲ್ಲಿ ಹೊಗುತವೆ ರಕ್ಷಿಸುವೆ ಪಿತನ ॥
ಕಾದಿ ನೊಸಲಕ್ಕರವ ತೊಡೆವೆನು
ಮೂದಲಿಸಿ ಖಳವಂಶವೆಲ್ಲವ
ಮೇದಿನಿಯೊಳಿಲ್ಲೆನಿಪೆ ಪೇಳವನೆಡೆಯ ನೀನೆಂದ ॥ ೫೭ ॥

ಮೆಚ್ಚಿದನು ಮನದಲ್ಲಿ ವಿಭಿಷಣ
ದುಚ್ಚರಿತನಿಪ್ಪೆಡೆಯ ಪೇಳಿದ
ಬೆಚ್ಚುವರು ರಣಧೀರರೆಂಬವರೇನ ಪೇಳುವೆನು
ಮುಚ್ಚರೂಪಂಗಸದಳವು ಹರ
ನೊಚ್ಚತದಿ ಗೆಲಲರಿದು ತಾತ
ನ್ನಿಚ್ಛೆಯಂತಿರುತಿಹನು ಖಳ ಪಾತಾಳ ಲಂಕೆಯಲಿ ॥ ೫೮ ॥

ಅಲ್ಲಿಗೊಯ್ದು ನಿಶಾಚರನು ಭೂ
ವಲ್ಲಭರನಿಬ್ಬರನು ತಮದಲಿ
ಹೊಲ್ಲ ಬಲಿಯಲಿ ಕೊಂದನೋ ಮೇಣುಳುಹಿದನೊ ನೃಪರ ॥
ಬಲ್ಲಿದರಿಗಸದಳವು ಹೊಗುವೊಡೆ
ಫುಲ್ಲನಾಭನ ಕೃಪೆಯು ನಿನಗುಂ
ಟಲ್ಲಿ ಜಯುವಹುದೆಂದು ಪೇಳಿದನಾ ವಿಭೀಷಣನು ॥ ೫೯ ॥

ಲಂಕೆಯೊಳ ಕೋಟೆಯ ಸಮೀಪದಿ
ಬಿಂಕದಿಂದೆಸೆವೊಂದು ಕೊಳದೊಳು
ಪಂಕಜವು ಬೆಳೆದಿಹುದು ಪಾತಾಳದೊಳು ಬೇರೂರಿ ॥
ಶಂಕೆಯಿಲ್ಲದೆ ಹೊಕ್ಕು ಕೊಳನಲಿ
ಪಂಕಜದ ನಾಳದೊಳು ಸರಿದೊಡೆ
ಮುಂಕೊಳುವೆ ಹೊಳೆಹೊಳೆವುತಿಪ್ಪಾ ಮಹಿತಳಾನಗರಿ ॥ ೬೦ ॥

ರಾಮ ನಾಮವ ಮರೆಯದಿರು ನಿ
ಸ್ಸೀಮನಲ್ಲಿಗೆ ಹೋಹುದರಿದಾ
ರಾಮಲಕ್ಷ್ಮಣರಿರುವ ಸುಳಿವನು ಭರದಿ ನೀನರಸಿ ॥
ಸಾಮಭೇದದಿ ಹೊಕ್ಕು ನಗರಿಯ
ನಾಮದಸುರರ ಗೆಲಿದು ಬೇಗದ
ಲಾಮಹಿಮರಿಬ್ಬರನು ನೀ ತಹುದೆಂದ ವಿಭೀಷಣನು ॥ ೬೧ ॥



## ೪೦ನೇ ಸಂಧಿ

ಪಲ್ಲ ॥ ಹೊಕ್ಕು ಕೊಳನೊಳು ದನುಜರೆಲ್ಲರ
ಸೊಕ್ಕಿದ್ದೈರಾವಣನ ಸಹಿತವೆ
ಮುಕ್ಕುರುಕಿ ಪತಿಗಳನು ಮೇಲಕೆ ತಂದ ಹನುಮಂತ ॥

ಪದ ॥ ಆ ವಿಭೀಷಣ ಹೇಳುತಿರೆ ನೆರೆ
ಭಾವಿಸುತ ಹನುಮಂತ ತಾ ಸು
ಗ್ರೀವ ಮೊದಲಾದಖಿಲ ಕಪಿಗಳ ಕೈಯ ಬೀಳ್ಕೊಂಡ ॥
ದೇವ ರಾಮನ ನೆನೆದು ಲಂಕೆಯ
ಕಾವಲವರನು ಮರೆಸಿ ಕೋಟೆಯ
ಕೋವಿದನು ಒಳಹೊಕ್ಕು ಕಂಡನು ತಾವರೆಯ ಕೊಳನ ॥ ೧ ॥

ವರ ರತುನ ಸೋಪಾನದಿಂದವೆ
ಪರಿಮಳಂಗಳ ಪೂರದಿಂದವೆ
ಸರಸಿರುಹದೊಳು ಸಿಕ್ಕ ಮಧುಕರ ಮೊರೆವ ದನಿಯಿಂದ ॥
ಕರೆದುಣಿಪ ಸುಕ್ಷೀರದಿಂದವೆ
ಮರಿ ಖಗಂಗಳ ಉಲುಹಿನಿಂದವೆ
ಸರಸಿ ಮೆರೆದಿರೆ ಕಂಡನಗ್ಗದ ವೀರ ಹನುಮಂತ ॥ ೨ ॥

ಕಂಡನಾ ಕೊಳದೊಳಗೆ ಹೇಮದ
ಪುಂಡರೀಕವನಡರಿ ಹೊಕ್ಕನು
ಗಂಡುಗಲಿ ಹನುಮಂತನಿಳಿದನನಂತ ಯೋಜನವ ॥
ಪುಂಡರೀಕಾಕ್ಷನನು ನೆನವುತ
ಕಂಡನಾ ಕೆಳಗಿದ್ದ ನಗರಿಯ
ಮಂಡೆ ಮುಳಗೋಲಾಡಿ ಹೊರವಡುತಿಪ್ಪ ಸಮಯದಲಿ ॥ ೩ ॥

ವಾರಿಜದ ಕೊಳದೊಳಗೆ ವೀರರ
ದಾರು ಬಂದರೆನುತ್ತ ಹನುಮನ
ನಾರುಭಟೆಯಲಿ ಹಿಡಿದು ನುಂಗಿದ ಮತ್ಸ್ಯವಾನರನು ॥
ಮೇರುಗಿರಿಯಂದದಲಿ ಬೆಳೆದರೆ
ವೀರನುದರದಯೆಲುವು ಮುರಿಯದೆ
ತೋರ ವಜ್ರದ ರೋಮ ಮುರಿಯಲು ಹನುಮ ಬೆರಗಾದ ॥ ೪ ॥

ನಾನು ಬೆಳೆದೊಡೆ ಧರಣಿವಲಯದ
ಮಾನಸೋತ್ತರ ಗಿರಿಗಳೊಡೆವುವು
ಭಾನುಮಂಡಲವದುರುವುದು ಬೊಮ್ಮಾಂಡ ಕುಸಿಯುವುದು ||
ಆನಲಾರವು ದಿಗ್ಗಜಂಗಳು
ಮಾನನಿಧಿಯಿವನಾರೆನುತ ಪವ
ಮಾನತನಯನು ಚಿಂತಿಸುತ ಬೆರಗಾದನೊಡಲೊಳಗೆ || ೫ ||

ಇವನ ಜಠರದಿ ನಾನು ಸಿಲುಕಿದೆ
ರವಿಕುಲರರಿನ್ನೊಯ್ವರಿಲ್ಲೆಲೆ
ತವಕದಿಂ ಕಪಿಕಟಕ ದಾರಿಯ ನೋಡುತಿಹುದಲ್ಲಿ ||
ಕವಿಸಿ ಗೆಲಬಾರದು ಚತುರ್ದಶ
ಭುವನದೊಳಗತಿ ವೀರನಿವ ರಾ
ಘವನೆ ಬಲ್ಲನು ಶಿವ ಶಿವಾಯೆನುತಿರ್ದ ಹನುಮಂತ || ೬ ||

ಹೊಟ್ಟೆಯಲಿ ಸಿಲುಕಿರ್ದು ಬೆದರದೆ
ಮುಟ್ಟಿ ಕಲಿಹನುಮಂತ ನುಡಿದನು
ದಿಟ್ಟನಹೆಯನ್ನಿಂದ ಬಿಲ್ಲಿದನಾರು ನೀನೆನಲು ||
ನೆಟ್ಟನುಸುರಿದ ವಾಯುಸುತ ಜಗ
ಜಟ್ಟಿ ಖಳವನದಹನ ರಘುಜನ
ಪಟ್ಟದಾನೆಯೆನಿಪ್ಪ ಹನುಮನ ಮಗನು ತಾನೆಂದ || ೭ ||

ನೀನು ಹನುಮನ ತನಯನಲ್ಲವು
ಮಾನಿನಿಯರಿಲ್ಲವಗೆ ವಾನರ
ಮೀನ ಜನಿಸಿದ ತೆರನದೆಂತುಟು ಜನನಿಯಿಲ್ಲದಿರೆ ||
ನೀನು ಜನನಿಯ ನೇಮದಿಂದವೆ
ಭಾನುಮಂಡಲಕುರವಣಿಸಲಾ
ಜಾನುಮುಖದಿಂ ಬೆವರು ಸುರಿದುದು ಜಲದಿ ಮಧ್ಯದಲಿ || ೮ ||

ಆದನು ತಿಮಿಯೊಂವರಿಸಿ ನುಂಗಿತು
ಆದರಉದರದಿ ಗರ್ಭ ಬೆಳೆಯಿ
ತ್ತುದಧಿಯಲಿ ಬೆಸಲಾದುದ್ಯೆ ದಿನಕರನ ತೇಜದಲಿ ||
ವದನ ಮತ್ಸ್ಯಾಕಾರ ದೇಹವು
ವಿದಿತ ವಾನರ ರೂಪಿನಿಂದವೆ
ಮುದದಿ ಜನಸಿದೆ ಮತ್ಸ್ಯವಾನರನೆಂಬವನು ತಾನು || ೯ ||

ಮೆಚ್ಚಿದನು ಮನದೊಳಗೆ ಪವನಜ
ನೊಚ್ಚತದಿ ನುಡಿದನು ಕುಮಾರಗೆ
ನಿಚ್ಚಯದಿ ಹೇಳುವೆನು ಕಲಿ ಹನುಮಂತ ತಾನೆಂದು ॥
ಬೆಚ್ಚಿ ಬೆದರುತ ಜಘನ ಸತ್ವದಿ
ಮುಚ್ಚಿದುದರವ ಬೇಗದಿಂದವೆ
ಬೆಚ್ಚಿಯುಗುಳಿದ ಹನುಮನಂಘ್ರಿಯಕೆರಗಿ ಕೈ ಮುಗಿದ ॥ ೧೦ ॥

ಎತ್ತಿದನು ಕರುಣದಲಿ ತನಯನ
ನೊತ್ತಿ ತಕ್ಕೈಸಿದನು ಮೋಹದಿ
ಉತ್ತಮದ ಸಾಹಸವುವುಳಿದರಿಗುಂಟೆ ಹೇಳೆನಲು ॥
ಇತ್ತ ಬಿಜಯಂಗೈದಿರೇನೆನೆ
ಮತ್ತೆ ನುಡಿದನು ಮರುತನಂದನ
ನೊತ್ತಿದಗ್ಗದ ರಾಜಕಾರ್ಯದ ಕಥನವರುಹಿದನು ॥ ೧೧ ॥

ದೇವಿಯರ ಖಳನೊಯ್ದು ಕತದಲಿ
ದೇವ ರಾಘವಲಕ್ಷ್ಮಣರನೈ
ರಾವಣನು ತಾ ಕೊಂಡುಬಂದನು ಮಹಿತಳಾಪುರಕೆ ॥
ಆ ವಿಭೀಷಣ ಪೇಳಿದೊಡೆ ನಾ
ತಾವರೆಯ ನಾಳದಲಿ ಬಂದೆನು
ದೇವದೇವರನೊಯ್ವೆ ಖಳ ವಂಶವನು ಬರುಗೈವೆ ॥ ೧೨ ||

ನಿಮ್ಮ ನುಂಗಿದೆ ನಾನು ತಮದಲಿ
ಹಮ್ಮಿನಲಿ ನುಡಿದೆನ್ನ ನುಂಗುವ
ಬೊಮ್ಮ ರಕ್ಕಸ ಕೋಟಿ ಸಂಖ್ಯೆಗಳಲ್ಲಿ ನೆಲೆಸಿಹುದು ॥
ಬೊಮ್ಮನಯ್ಯನ ಬಲುಹು ನಿಮಗುಂ
ಟೊಮ್ಮೆ ಜಯವಹುದೆನುತ ಬಟ್ಟೆಯ
ಘಮ್ಮನವ ಪೇಳಿದೊಡೆ ನಡೆತಂದನು ಕಪೀಶ್ವರನು ॥ ೧೩ ॥

ಬರುತ ಕಂಡನು ದೂರದಲಿ ದಿನ
ಕರಸಹಸ್ರಪ್ರಭೆಗಳಿಂದವೆ
ಮೆರೆವ ನಗರಿಯ ಕಂಡು ಬೆರಗಾಗುತ್ತ ನಿಂದಿರಲು ॥
ಸರಸಿಜದ ನಯನಂಗಳಿಂದವೆ
ಕರ ಸಲಿಲ ಧಾರೆಗಳ ಸುರಿವುತ
ಲರಿಯ ಪಟ್ಟಣದಿಂದ ಬಹ ದುರುದುಂಬೆಯನು ಕಂಡ ॥ ೧೪ ॥

ತಾಯೆ ನಿನಗೀ ದುಗುಡವೇಕೆನು
ತಾಯುತದಿ ಬೆಸಗೊಂಡನಾಕೆಯು
ಬಾಯಬಿಡುತಲಿ ಹೇಳಿದಳು ತನಗಾದ ಶೋಕವನು ॥
ರಾಯರಿಬ್ಬರ ತಂದ ರಕ್ಕಸ
ರಾಯನೆನ್ನ ಕುಮಾರ ಸಹಿತ
ನ್ಯಾಯದಲಿ ಮೂವರನು ಕೊಂದಪನೆಂದು ಶೋಕಿಸುವೆ ॥ ೧೫ ॥

ಆ ಕುಮಾರಕನೆನ್ನ ಮೋಹದ
ಯೇಕ ಪುತ್ರನದಿರಲು ಅಗ್ರಜ
ಕಾಕುತನದಲಿ ಕೊಲುವೆನೆಂದನು ಹಗೆಗಳೊಡಗೂಡಿ ॥
ಲೋಕದೊಳಗೀ ವ್ಯಥೆಯ ಭರದಿಂ
ಶಾಕಿನೀಜನ ನೋಡಲಮ್ಮದು
ಶೋಕವನು ಹೇಳಿದೆನು ಕೇಳ್ಳೈ ದುಃಖದೀ ಕಥನ ॥ ೧೬ ॥

ಕಂಕಣಾ ದೇವಿಯರ ಮುಂದಕೆ ನಿ
ಶ್ಯಂಕರಹ ಮೂವರನು ಮಲಗಿಸಿ
ಅಂಕೆಯಿಲ್ಲದೆ ಹೊಡೆದು ತಲೆಗಳನರ್ಚಿಸುವೆನೆನುತ ॥
ಶಂಖಿನಿಯೆ ನೀಹೋಗು ಬೇಗದಿ
ಪಂಕಜದ ಕೊಳದಿಂದ ವಾರಿಯು
ಶಂಕಿಸದೆ ನಿಮಿಷದಲಿ ತಾರೆಂದಟ್ಟಿದೊಡೆ ಬಂದೆ ॥ ೧೭ ॥

ಕೊಲುವೆನೈರಾವಣನ ವಂಶವ
ನೆಲದೊಳುರುಳಿಪೆ ನಿನ್ನ ತನಯಗೆ
ವೊಲಿದು ಪಟ್ಟವ ಕಟ್ಟುವೆನು ಪಾತಾಳಲಂಕೆಯಲಿ ॥
ಲಲನೆಯಾಕ್ಷಣ ಕಟಕಿಯಾಡಲು
ಬೆಳೆದ ಹನುಮನು ಕೋಪದಿಂದಲಿ
ಲಲನೆ ಕಳವಳಗೊಳಲು ಮುನ್ನಿನ ರೂಪ ಕೈಕೊಂಡ ॥ ೧೮ ॥

ಮಂಗಳದಿ ದುರುದುಂಬೆ ನೆನೆದಳು
ಸಿಂಗನಹೆ ನಿಜ ದನುಜರಿಪುವಿನ
ಭಂಗ ಭಕ್ತನು ನೀನೆನುತ ಕಪಿವರಗೆ ಕೈಮುಗಿದು ॥
ತುಂಗ ವಿಕ್ರಮ ಕೇಳು ತಮ್ಮೊಳು
ಸಂಗರಕೆ ವೈರಿಗಳು ಬಹರೆಂ
ದಂಗನೆಯರನು ಬಿಡದೆ ದನುಜರು ತೂಗಿ ನೋಡುವರು ॥ ೧೯ ॥

ತೂಗಿ ಬಿಡುವರು ಹೋಗೆ ಪುನರಪಿ
ತೂಗುವರು ಮರಳುತ್ತ ಘನವೆನೆ
ಬೇಗದಲಿ ಸೀಳುವರು ನಾಲ್ವತ್ತೆಂಟು ಬಾಗಿಲಲಿ ॥
ನಾಗಭೂಷಣಗರಿದು ಹೊಗುವೊಡೆ
ನಾಗಭವನದ ಪಟ್ಟಣವನೆಂ
ದಾಗ ಬಿನ್ನಹಮಾಡಿದಳು ದುರುದುಂಬೆ ಹನುಮಂಗೆ ॥ ೨೦ ॥

ತೂಗಿಬಿಡುವರನೊರಸಿ ಬಿಡುವೆನು
ಬೇಗದಲಿ ಐರಾವಣನ ಹಿಡಿ
ದೀಗ ನೊಸಲಕ್ಕರವ ತೊಡೆವೆನು ಸೀನೆಸಹಿತೆನಲು ॥
ರಾಗದಲಿ ದುರುದುಂಬೆ ನುಡಿದಳು
ಬಾಗಿಲನು ಚದುರಿನಲಿ ವೊಳಹೊ
ಕ್ಕಾಗ ನೀ ತೋರಸುರರಿಗೆ ಭುಜಬಲ ಪರಾಕ್ರಮವ ॥ ೨೧ ॥

ಇಂಬುಗೊಡುವೆನು ನಿನಗೆ ನನ್ನೀ
ಕುಂಭದಲಿ ಕರೆದೊಯ್ವೆನೆನಲಾ
ಅಂಬುಜಾಕ್ಷಿಯ ಕೊಡನೊಳಗೆ ತಾ ಹೊಕ್ಕ ಸೂಕ್ಷ್ಮದಲಿ ॥
ಸಿಂಬೆಯಲಿ ಧರಿಸಿದ್ದು ನಡೆಯಲು
ದುಂಬಿ ವೈ ಪರಿಮಳಕೆ ಕವಿಯಲು
ಡಂಬ ದನುಜರು ಬಾಗಿಲಲಿ ನಿಲಿಸಿದರು ಬಾಲಕಿಯ ॥ ೨೨ ॥

ಕೊಡಸಹಿತ ತೂಗಿದರು ಲಲನೆಯ
ನೊಡನೆ ಕಲಿ ಹನುಮಂತ ಬೆಳೆದರೆ
ಕೊಡನೊಡೆದು ತೊಲೆ ಮುರಿದು ಬಿದ್ದುದು ದನುಜಕೋಟಿಗಳು ॥
ಮಡ ಮುರಿದು ಮೊಣಕಾಲ ಸಂದುಗ
ಳುಡಿದು ದೇಹವನರಿಯಬಾರದು
ಕಡಿದು ಖಂಡಗಳಾಗಿ ಹೋದರದೇನ ಬಣ್ಣಿಸುವೆ ॥ ೨೩ ॥

ಬಿದ್ದುದಾ ತೊಲೆಯಿಂದ ದಾನವ
ರೆದ್ದು ಮುಸುಕಿತು ವೀರ ಹನುಮನ
ನದ್ದಳಿಸಿ ಕೋಡಗವ ಕಡಿಕಡಿಯೆನುತ ಮುತ್ತಿದರು ॥
ಒದ್ದು ಕೆಡಹಿದನಿಕ್ಕೆಲದವರ
ನುದ್ದಿ ಬಿಸುಟನು ಮುಂದೆ ಕವಿದರ
ಮದ್ದನರೆವಂದದಲಿ ಬಾಲದಲರೆದ ದಾನವರ ॥ ೨೪ ॥

ಕೊಲುವ ಕೋಡಗವಲ್ಲೆನಲು ಖಳ
ರುಲಿದು ಮುತ್ತಿತು ವೀರ ಹನುಮನ
ಬಳಸಿ ಬತ್ತೀಸಾಯುಧಂಗಳಲಿಡುತೆ ಕವಿತರಲು ॥
ಹೊಳೆವಲಗ ತಪ್ಪಿಸುತ ಕೈದುವ
ಸೆಳೆದು ಭಂಗವ ಮಾಡಿ ಬಿಸುಡುತ
ಖಳರ ತಲೆಗಳನುಡಿದುಬಿಟ್ಟನು ಕೋಟಿ ಸಂಖ್ಯೆಯಲಿ ॥ ೨೫ ॥

ಸಂದುಸಂದನು ತಿವಿವುತಿರಲಾ
ಮಂದರಾಚಲವದುರುತಿರೆ ದಶ
ಕಂಧರಂಗಿವ ಮಿಗಿಲು ನೂರ್ಮಡಿಯೆನುತ ಹನುಮಂತ ॥
ಮುಂದುವರಿದೊಳಹೊಕ್ಕು ದನುಜನ
ಕಂಧರವ ತಿವಿಯಲು ಮಹಾಗಿರಿ
ಯಂದದಲಿ ಬಸವಳಿದು ಸರ್ರನೆ ತಿರುಗಿ ಜೊಂಪಿಸಿದ ॥ ೨೬ ॥

ಎದ್ದು ಹನುಮಂತನನು ತಿವಿದರೆ
ನಿದ್ದೆ ಕವಿವಂದದಲಿ ಮೈಮರೆ
ದೆದ್ದು ಚಣಮಾತ್ರದಲಿ ಕಣ್ದೆರೆದೆದ್ದು ತವಕದಲಿ ॥
ಒದ್ದು ಕೆಡಹುವೆನೆನುತ ಸೀತೆಯ
ಕದ್ದ ಕಳ್ಳನ ಸಖನ ತುಡುಕಲು
ಹೊದ್ದಿ ಹೊಯ್ದಾಡಿದರು ಸುಭಟರು ಚಿತ್ರಗತಿಗಳಲಿ ॥ ೨೭ ॥

ಶಿರವ ನಯನವ ನಾಸ ಕರ್ಣವ
ಕೊರಳ ತಳ ಮೊಳಕಾಲ ಹಸ್ತವ
ಉರುತರದ ಭುಜ ಜಾನು ಜಂಘೆಯ ಗಂಟು ಗಂಟುಗಳ ॥
ಭರದಿ ಮುಷ್ಟಿಯಲೆರಗುತಿರಲಾ
ಬರಸಿಡಿಲಿನಂದದಲಿ ಕೋಪದಿ
ಉರವಣಿಸಿ ಹಳಚಿದರು ಪಟುಭಟರೇನ ಹೇಳುವೆನು ॥ ೨೮ ॥

ಹೊಕ್ಕು ಐರಾವಣನು ಕೋಪದಿ
ತಕ್ಕವಿಸಿ ಕೆಡಹಿದನು ಬೇಗದಿ
ದಿಕ್ಕಿನಗ್ಗದ ಕುಲಗಿರಿಯ ತೆರ ಬೀಳೆ ಕಪಿರಾಯ ॥
ಇಕ್ಕೆಲಕೆ ತಾ ನೂಕಲಾರದೆ
ಬಿಕ್ಕಿ ಬಿರಿವುತ್ತಿರೆ ಕುಮಾರಕ
ನುಕ್ಕಿದನು ಬಿಡಿಸುವೆನೆನುತ ಹರಿತಂದ ಬೇಗದಲಿ ॥ ೨೯ ॥

ಮಗನ ಪ್ರಾಣವನುಳಿಸೆ ಮಾರುತಿ
ಅಘಹರನ ನಾಮವನು ನೆನೆವುತ
ವಿಗಡ ದನುಜನ ಕಾಲು ಕೈಗಳ ಮುರಿವೆನೆಂದೆನುತ ॥
ಬಿಗಿದ ಕಂಗಳ ತೆರೆದು ಮೆಲ್ಲನೆ
ಮೊಗದಿರುಹಿ ದಾನವನ ಕಾಲ್ಗಳ
ನಗಚರೇಶ್ವರ ಮುರಿದು ಕೈಗಳನುಡಿದ ನಿಮಿಷದಲಿ ॥ ೩೦ ॥

ತೋಗ ಶಿರವನು ಮುರಿದು ದನುಜನ
ನಾರುಭಟೆಯಲಿ ಹಿಡಿದು ನೂಕಲು
ಮೇರುಗಿರಿಯಂತೆಸೆದುದಾ ಐರಾವಣನ ಮುಂಡ ॥
ಧಾರೆಗೊಂಡೊಗುತಿಪ್ಪ ನೆತ್ತರು
ವಾರಿನಿಧಿಯಂದದಲಿ ಪರಿಯಲು
ವೀರ ಮಾರುತಿ ನೋಡಿ ಬೆರಗಾದನು ಮಹಾದ್ಭುತವ ॥ ೩೧ ॥

ರಾಮ ನಾಮವ ನೆನೆವುತಾ ನಿ
ಸ್ಸೀಮ ಕಪಿವರನೆದ್ದು ನಿಂತಿರೆ
ಭೀಮಪಾದದ ಮೇಲೆ ಬಿದ್ದಳು ಬಂದು ದುರುದುಂಬೆ ॥
ವಾಮದೇವನು ನೀನು ಉಳಿದ
ಗೀರ್ ಮಹಾಬಲವಿಲ್ಲೆನುತ ತಾ
ಕಾಮಿಸಿದ ಕೊಡುಯೆನ್ನ ಕುವರಂಗಿನ್ನು ಪಟ್ಟವೆನೆ ॥ ೩೨ ॥

ಕರೆ ಕುಮಾರನ ನೆನುತ ಹನುಮನು
ಕರೆಸಿ ರಾಕ್ಷಸ ವಿಪ್ರ ವರರನು
ವರ ರತುನ ಸಿಂಹಾಸನದ ಮೇಲಿರಿಸಿ ತಾನವನ ॥
ಭರದಲಭಿಷೇಕವನು ಮಾಡಲು
ಕರ ಮೆರೆವ ಪಟ್ಟವನು ನೊಸಲಲಿ
ಮರುತನಂದನ ಬಿಗಿದನಾ ಶುಭ ಲಗ್ನದಲಿ ಹರಸಿ ॥ ೩೩ ॥

ಬಂದು ಕಾಣಿಕೆಗೊಟ್ಟು ದಾನವ
ವೃಂದ ಕಂಡುದು ನೀಲಮೇಘನ
ಅಂದದಲಿ ಬಳಿಕೊಡನೆ ಬಂದನು ರಾಘವನ ಹೊರೆಗೆ ॥
ಬಂದು ಚರಣದ ಮೇಲೆ ಬಿದ್ದನು
ನಿಂದು ನೆಗಹಿದನಿಬ್ಬರನು ತಾ
ನಂದು ಧರಿಸಿಯೆ ನಡೆದು ಬಂದನು ಕಲಿ ಕಪೀಶ್ವರನು ॥ ೩೪ ॥

ಕಳುಹಿದನು ಕಪಿ ನೀಲಮೇಘನ
ಬಳಸಿ ಬಟ್ಟೆಯು ಬಂದು ಹೊಕ್ಕನು
ಜಲಜನಾಳವ ತಳದ ಮೇಲಕೆ ಬಂದ ಭರದಿಂದ ॥
ಹೊಳೆವ ಮಿಸುನಿಯು ಕೋಟೆಯೇಳನು
ಕಳೆದು ನಲಿದಾಡುತ್ತ ಬರುತಿರೆ
ನಳ ಪನಸ ಮೊದಲಾದ ಕಪಿಗಳು ಕಂಡುದನಿಲಜನ ॥ ೩೧ ॥

ವಾನರನು ಘನತರದ ತೇಜದಿ
ವೈನತೇಯನ ಹೋಲುತಿರ್ದನು
ಮಾನನಿಧಿ ರಾಘವನು ಹೆಗಲಲಿ ವಿಷ್ಣು ರೂಪದಲಿ ॥
ಭಾನುಕೋಟಿಗಳಂತೆ ಹೊಳೆದಾ
ಜಾನುಮುಖ ಮಂಡಲದ ಕಿರಣದಿ
ಹಾನಿಯಿಲ್ಲದೆ ಬಂದನಿನಕುಲತಿಲಕರೊಡಗೂಡಿ ॥ ೩೨ ॥

ಕಂಡು ದೂರದಿ ವೀರ ವಾನರ
ದಂಡನಾಯಕರಿದಿರುಗೊಂಡರು
ಗಂಡುಗಲಿ ಹನುಮಂತನನು ತವತವಗೆ ತಕ್ಕೈಸಿ ॥
ಕೊಂಡು ಬಂದಿಳುಹಿದನು ಬೇಗದಿ
ಚಂಡ ರವಿಕುಲತಿಲಕರನು ಭೂ
ಮಂಡಲವು ಬೆಳಗುತಿರೆ ನಿದ್ರಾಮುದ್ರರಾಗಿಹರು ॥ ೩೩ ॥

ವಿನಯದಿಂ ಸುಗ್ರೀವ ರಾಯನು
ದನುಜನೈರಾವಣನ ಮರ್ದಿಸಿ
ಇನಕುಲರ ನೀ ತಂದ ವೃತ್ತಾಂತವನು ಹೇಳೆನಲು ॥
ಹನುಮ ತಾ ವಿಸ್ತರದಿ ತಿಳುಹಲು
ವನಚರರು ತಲೆದೂಗುತಿರಲಾ
ದಿನದಪತಿಯುಡರಿದನು ಪೂರ್ವಾಚಲದ ಶಿಖರದಲಿ ॥ ೩೪ ॥

ಇಂದುಮುಖರೆದ್ದರು ಮಹಾಲಸ
ದಿಂದಲರ್ಘ್ಯಂಗಳನು ಕೊಟ್ಟರು
ಅಂದಿನಿರುಳಿನ ಹದನವನು ತಾವರಿಯರೇನುವನು ॥
ಬಂದು ಕೈಮುಗಿದಾ ವಿಭೀಷಣ
ನಂದು ಬಿನ್ನೈಸಿದನು ಹನುಮನು
ಕೊಂದನೈರಾವಣನನಾ ಪಾತಾಳಲಂಕೆಯಲಿ ॥ ೩೫ ॥

ಇಂದಿನಿರುಳಿನ ಹದನವಿನಿತೆನೆ
ಮಂದಹಾಸದಿ ರಘುಜ ಹನುಮನ
ನಂದು ತಕ್ಕೈಸಿದರೆ ಮಾರುತಿ ಶರಣು ಶರಣೆನಲು ॥
ಬಂದನೋಲಗದೊಳಗೆ ವಾನರ
ವೃಂದ ನಲಿನಲಿದಾಡುತಿರಲಾ
ನಂದದಿಂ ವರವಿತ್ತ ರಘುಪತಿ ಬತ್ತಲೇಶ್ವರಗೆ ॥ ೩೬ ॥

---

## ೪೧ನೇ ಸಂಧಿ

ಪಲ್ಲ ॥ ಗಂಡುಗಲಿ ಭೇರುಂಡ ಸಮರೋ
ದ್ದಂಡ ಗಂಡರ ಗಂಡ ರಾವಣ
ಪುಂಡರೀಕಾಕ್ಷನನು ಹಳಚಿದನಂದು ಸಮರದಲಿ ॥

ಪದ ॥ ತರಣಿ ವೈಹಾಯಸವನೇರಿದ
ಕರವ ಬೀಸಿದ ವಿಷ್ಣು ಚರಣದ
ಸರಣಿಯಲಿ ಸರದೆಗೆವ ಗಂಧರ್ವರನು ಖತಿಗೊಳಿಸಿ ॥
ಬರಲು ನಿತ್ಯವ ಸಲಿಸಿ ದಶಶಿರ
ಭರದಿ ಬಂದೋಲಗವನಿತ್ತನು
ಧುರಕೆ ಸಿಂಗರಗೈಯ್ಯುತಿರ್ದನುದಾರ ಸಾಹಸನು ॥ ೧ ॥

ಓರಣದ ಮಣಿಮುಕುಟ ಸೂರ್ಯನ
ತೋರಣಂಗಳವೋಲು ಕುಂಡಲ
ಸಾರ ತಾರಾ ಮಂಡಲಂಗಳ ದಂಡೆಗೈದಂತೆ ॥
ಚಾರು ಕಂಠಾಭರಣ ಮುತ್ತಿನ
ಹಾರ ಕಾಂಚೀದಾಮ ಕಂಕಣ
ವೀರಪಟ್ಟದ ಬಾಹುರಕ್ಷೆಗಳಿಂದ ಖಳನೆಸೆದ ॥ ೨ ॥

ಪೆಂಡೆಯದ ಪಾಪಾಂಘ್ರಿ ಮೆರೆದಿರೆ
ಹಿಂಡು ದೇವರ ಹಾಹೆದೊಡರಲಿ
ಗಂಡುಗಲಿ ವಳಿಯುಟ್ಟು ಮುಂಜೆರಗೆಸೆಯೆ ಕತ್ತುರಿಯ ॥
ಕೊಂಡು ತಿಲಕವನಿಟ್ಟು ಹಣೆಯಲಿ
ಮಂಡಲಾಂಕಿತನಾಗಿ ಮುದದಲಿ
ಖಂಡಪರಶುವಿಗೆರಗಿ ಖಡ್ಗವ ಕೊಂಡು ಝಳಪಿಸಿದ ॥ ೩ ॥

ನಾರಿಯರು ನವರತುನ ತನು ಸಿಂ
ಗಾರೆಯರು ತವತವಗೆ ಪರಿಪರಿ
ಯಾರತಿಗಳ ನಿವಾಳಿಸುತ್ತಿರೆ ವಿಪ್ರ ಸಂದೋಹ ॥
ವೀರನಾಗೆಂದುಲಿದು ಮುತ್ತಿನ
ಸಾರ ಸೇಸೆಯನಿಕ್ಕಲವರನು
ದಾರ ದಾನದಿ ತಣಿಸಿ ನಿಜ ಸಭೆಗಾಗಿ ನಡೆತಂದ ॥ ೪ ॥

ಕರೆಸಿ ದಾನವ ಮಾಂಡಲೀಕರ
ಹರುಷದಿಂದುಡುಗೊರೆಯನಿತ್ತನು
ಪರಿಮಳದ ಘನಸಾರ ಕಸ್ತುರಿ ತಳಿಗೆದಂಬುಲವ ॥
ಭರದಿ ದಿವ್ಯಾಭರಣ ವಸ್ತ್ರವ
ಬಿರುದ ವೀರರಿಗಿತ್ತು ಮನ್ನಿಸಿ
ಭರದಿ ಕವಚವ ತೊಟ್ಟ ಹರಿಬಲಕಾಲ ದಶಕಂಠ ॥ ೫ ॥

ಸಾರಥಿಯ ಬೋಳೈಸಿ ಮನ್ನಿಸಿ
ವಾರುವಂಗಳ ಬೆನ್ನ ತಡೆವುತೆ
ತೇರ ಬಲಬಂದೆರಗಿ ವೀರರ ದೇವನೇರುತಿರೆ ॥
ವೀರಪಟುಭಟರೊಟ್ಟುಗೂಡಿತು
ಸಾರ ತಿರುವೊಡೆ ಬಿಗಿದು ಭುಜ ಹೊ
ಯ್ದಾರಿ ಮೂಜಗದೊಡೆಯ ಕಾಳಗಕಂದು ನಡೆತಂದ ॥ ೬ ॥

ಮೃಡನ ಬಾಳಾನಲವ ಮುಕ್ಕುವ
ವಡಬ ಶಿಖಿಯನು ಕೆದರಿ ನಂದಿಪ
ತುಡುಕಿ ದಂಡವ ಸೆಳೆದು ಕಾಲನ ಠಿಕ್ಕರಿಸಿ ಕಳೆವ ॥
ಉಡುಗಣಂಗಳ ತರಿವ ಮೃತ್ಯುವ
ಹಿಡಿದು ಮೂವಿಧಿಗೊಳಿಪ ರಕ್ಕಸ
ಪಡೆಯು ಕೂಡಿತು ರಣಕೆ ಸಿಂಗರಗೈದುದದ್ಭುತದಿ ॥ ೭ ॥

ಛಲದಿ ಸೀತೆಯ ಕೊಡದೆ ತಮ್ಮನ
ಕಳುಹಿದನು ಕೈವಲ್ಯ ಪದವಿಗೆ
ಕುಲದ ಕೀರ್ತಿಯ ಸಲಹಲುಳುಹಿದನಾ ವಿಭೀಷಣನ ॥
ಕಲಿಗಳಂಕುಶ ರಾಮಚಂದ್ರನ
ನೊಲಿದು ಕೂಡಲು ಬಂದನಾಕ್ಷಣ
ತಿಳಿದು ಮುನಿಗಳು ಕಾಣಲರಿಯದ ಹರಿಯ ಪದತಳಕೆ ॥ ೮ ॥

ಕರಿಯ ಬೃಂಹಿತೆ ಕೇಳಿ ಮದ ದಿ
ಕ್ಕರಿಗಳರಚಿದವಂದು ಕುದುರೆಯ
ಖುರಪುಟಕ್ಕೊಲೆದಾಡಲಹಿಪತಿ ಕಮಠ ಕಳವಳಿಸೆ ॥
ಚರಣಚಾರರ ತೇರಿನಟ್ಟುಳಿ
ಗಿರದೆ ಕಂಪಿಸಿತವನಿ ದಿಗುತಟ
ಬಿರಿಯಿತೆಂಬಂತಾಯ್ತು ಖಳಪಡೆ ನೂಕಲಾ ರಣಕೆ ॥ ೯ ॥

ಆವ ದೆಸೆಯಲಿ ನೋಡ ನೋಡಲು
ರಾವಣನ ಪರಿವಾರ ಮುರಿಮುರಿ
ದಾವ ದೆಸೆಯೀಕ್ಷಿಸಲು ಕರಿ ರಥ ತುರಗ ಸಂದೋಹ ॥
ತಾವರೆಯ ಸಖ ಬಂದು ದೈತ್ಯರ
ನೋವದೀಕ್ಷಿಸಿ ಮರಳುತಿಕ್ಕೆನ
ಲಾವ ಕವಿ ಬಣ್ಣಿಸುವ ರಕ್ಕಸ ಪಡೆಯ ಪಟುಭಟರ ॥ ೧೦ ॥

ಚಂಡ ಭುಜಬಲ ಬಂದನಗ್ಗದ
ಗಂಡ ಜಗದೀಶ್ವರರ ದಾಯವ
ಗೊಂಡು ಹಿಂಸೆಯ ಮಾಡಿದಧಟರ ದೇವನಿದೊ ಬಂದ ॥
ಗಂಡ ಬಂದನು ಸುರರನುರೆಗೋ
ಳುಂಡೆಗೊಳಿಸಿದ ವೀರ ಬಂದನು
ಹಿಂಡು ದೈತ್ಯರ ಕೂಡಿ ದೇವರನಾಳಿದವ ಬಂದ ॥ ೧೧ ॥

ದೇವ ದೇವಘರಟ್ಟ ಜಯ ಜಯ
ದೇವ ಪಂಚಾನನ ದಶಾನನ
ದೇವ ಕದನದ ಕಾಲಭೈರವ ಶಕ್ರಮರ್ದನನೆ ॥
ದೇವ ವಾನರ ಬಲ ಭಯಂಕರ
ದೇವ ಛಲದಂಕರ ಶಿರೋಹರ
ರಾವು ರಾವಣಯೆಂಬ ಭಟ್ಟರ ಬೊಬ್ಬೆಯಬ್ಬರಿಸೆ ॥ ೧೨ ॥

ಹರೆಗಳಗಣಿತ ಭೇರಿ ತಂಬಟೆ
ಮುರಜ ಚಂಬಕ ಕೊಂಬು ತಿತ್ತಿರಿ
ವಿರಜ ಬೊಬ್ಬುಳಿ ಘಂಟೆ ರಣವರೆವೊರಲುತಿಗಲಂದು ॥
ಮರುಗಿ ಲಂಕಾನಗರಿ ಗೋಳಿ
ಟ್ಟೊರಲುವಂತಿರೆ ತಿರುಗಿ ನೋಡಿದ
ಸಿರಿಯು ಹಿಂದಕೆ ಬೀಳುಗೊಟ್ಟನೊಯೆಂಬ ತೆರನಾಯ್ತು ॥ ೧೩ ॥

ಸುರಪದಲ್ಲಣನೆಂಬ ಕಾಲನ
ಶಿರದ ದಡಿಯೆಂದೆಂಬ ಮೃತ್ಯುವಿ
ನುರದ ಕೊಂತವೊಯೆಂಬ ಸುರರೆದೆಶೂಲ ತಾನೆಂಬ ॥
ಅರಿಯ ಹಂತಿಯ ಕೊರಳ ಕರಗಸ
ಧುರದ ಗಂಡರ ದಾವಣಿಯೊಯೆಂ
ಬುರುಬಲಾನ್ವಿತ ಬಿರುದ ವೀರರು ಕವಿದುದಾ ರಣಕೆ ॥ ೧೪ ॥

ಬಿಗಿದ ಬತ್ತಳಿಕೆಗಳ ಕಿವಿವರೆ
ಗುಗಿದ ನಾರಿಯ ಕೈಯ ಚಮರಿಯ
ಹಗಲು ಕೈದೀವಿಗೆಯ ಬಿರುದಿನ ಗಡಣ ವಾರಣದ ॥
ಮೊಗದ ಸಾಲವ ರಣದ ಭೈರವ
ಮಿಗುವ ಭಟಭೇರುಂಡನೆಂದುಗಿ
ದುಗಿದು ತಿತ್ತಿರಿ ಕಹಳೆ ವೀರನ ಬಿರುದ ಬೀರಿದುವು ॥ ೧೫ ॥

ಧುರದಿ ರಾವಣನೊಡ್ಡ ನೋಡಲು
ಪರಮ ಮಂಗಳಮೂರ್ತಿಯಂಗೀ
ಕರಿಸಿ ಸೇವಕ ವರುಣನಿತ್ತಾಭರಣ ವಸನಗಳ ॥
ಹರಿಗಳಿಂಗುಡಲಿತ್ತು ಮಕುಟವ
ಧರಿಸಿ ಕಂಠಾಭರಣ ಹಾರವ
ಸುರುಚಿ ಮುದ್ರಿಕೆ ನೂಪುರಂಗಳನಿಟ್ಟು ರಂಜಿಸಿದ ॥ ೧೬ ॥

ಉಟ್ಟ ಪೊಂಬಟ್ಟೆಯನು ಭಾಳದ
ಲಿಟ್ಟ ಕಸ್ತುರಿ ತಿಲಕ ಕಿವಿಗಳ
ಲಿಟ್ಟ ಒಪ್ಪುವ ಮಕರ ಕುಂಡಲ ಕಾಂಚಿದಾಮವನು ॥
ತೊಟ್ಟು ಕಪಿಪಡೆಗಭಯ ಹಸ್ತವ
ನಿಟ್ಟು ವಾಮಾಂಘ್ರಿಯಲಿ ಪೆಂಡೆಯ
ವಿಟ್ಟು ಸೊಬಗದ ದೇವ ರಣಕನುವಾಗಿ ನಡೆತಂದ ॥ ೧೭ ॥

ಬಂದುದಭವನ ಸತ್ವ ರಾಮಗೆ
ಬಂದುದಜನುರು ಶಕ್ತಿಯಾಗಳೆ
ಹಿಂದಣವತಾರಗಳ ಕುರುಹುಗಳ್ಳೈದಿದುವು ಹರಿಯ ॥
ವೃಂದದಮರರು ರೋಮರೋಮವ
ಬಂದು ಸಾರಲು ಸರ್ವ ಶಕ್ತಿಗ
ಳಿಂದ ನರಹರಿಯೆನೆಯೆ ತೇಜವ ನೋಡಲರಿದಾಯ್ತು ॥ ೧೮ ॥

ಅರಿಭಯಂಕರ ಚಕ್ರ ನಾನಾ
ಪರಮ ಮಂತ್ರಾಸ್ತ್ರಗಳು ರಾಮನ
ಸರಳನೈದಿತು ಗರಿಯನೈದಿದ ಪವನ ಪಟುವಾಗಿ ॥
ನೆರೆದ ಭೂತದ ತಂಡ ಮೂಡಿಗೆ
ಗಿರದೆ ಬಂದುದು ಚಂಡಚಂಡಿಕೆ
ನೆರೆದು ಚಾಮುಂಡಿಯರು ಕೋದಂಡವನು ಸಾರಿದರು ॥ ೧೯ ॥

ಹಣೆಯಲೊಪ್ಪುವ ತಿಲಕ ರತ್ನದ
ಮಣಿಯಲೊಪ್ಪುವ ಕೊರಳ ಪದಕದ
ಢಣಲುಗುಟ್ಟುವ ಘಂಟೆ ಕೊರಳಲಿ ಬಾಲದಗ್ರದಲಿ ॥
ಕುಣಿವ ಕುಡಿ ಬಾಲಂಗಳಭ್ರವ
ನಣೆದು ಭಗಣವ ಚೆಲ್ಲುತಿರಲಾ
ತ್ರಿಣಯ ಬಾಲವತಳೆದು ಕಪಿರೂಪದಲಿ ರಂಜಿಸಿದ ॥ ೨೦ ॥

ಸಿರಿ ಮನೋಹರ ಬಂದ ಬಂದನು
ಸುರರ ತೆತ್ತಿಗ ಬಂದ ಬಂದನು
ಧರಣಿಗುಬ್ಬಸವಾದ ಹೊರೆಗಳನಿಳುಹುವವ ಬಂದ ॥
ಶರಣುವೊಕ್ಕರ ಕಾವ ಬಂದನು
ಗುರುವಿನಂಘ್ರಿಯ ಭಕ್ತಿಯುಳ್ಳವ
ಗರುವ ಬಂದನು ತೆರಳು ರಾವಣಯೆನಲು ಪಾತಕರು ॥ ೨೧ ॥

ದುರಿತದೂರನ ತೋಟಿ ಬೇಡಾ
ಸುರರ ಕಾವನ ತೋಟಿ ಬೇಡಾ
ನರಕನಾಶಿಯ ತೋಟಿ ಬೇಡಾ ಖಳರ ಕೊಲುವವನ ॥
ಕರುಣವಾರ್ಧಿಯ ತೋಟಿ ಬೇಡಾ
ಹರನ ಬಿಲ್ಲನು ಮುರಿದು ಭಕ್ತರ
ಹೊರೆವ ದೇವನ ತೋಟಿ ಬೇಡೆಂದೊರಲಿದುದಮರಚಯ ॥ ೨೨ ॥

ಎರಡು ಮೋಹರ ಕವಿದು ಹಳಚಿತು
ಸುರಗಿ ಕಡಿತಲೆ ಕೊಂತ ಶೂಲದಿ
ತರುಚರಂಗಳು ಕಲ್ಲುಗುಂಡುಗಳಿಂದ ಕವಿದೇರೆ ॥
ಕರಿತುರಗ ರಥ ಪತ್ತಿ ವೃಂದದ
ಖುರಪುಟಂಗಳಲುದಿಸಿ ಧೂಳಂ
ಬರಕೆ ನೆಗೆದುದು ಬಿಸಿಲ ಮುಸುಕಿತು ರವಿಯ ನುಂಗಿದುದು ॥ ೨೩ ॥

ಹಗೆಯ ಕುಲಸಂಹಾರ ಸೂಚನೆ
ಗೊಗೆದ ಬಹಳೋತ್ಪಾತದಂತಿರೆ
ಹಗಲಿನೊಡೆಯನು ಅಡಗಿ ನಕ್ಷತ್ರಾಳಿಯೆಸೆವುತಿರೆ ॥
ನೆಗೆನೆಗೆದು ಹೊಯ್ದಾಡಿ ಕಪಿಗಳು
ಚಿಗುಳಿದುಳಿದುದು ಖಳರು ಕಣವನು
ಹೊಗುವೊಡರಿದಾಯ್ತೇನ ಹೇಳುವೆ ಕಾದುತಿಹ ಭರಕೆ ॥ ೨೪ ॥

ತಗ್ಗಿದುದು ರಣಧೂಳಿ ಕರಿಗಳು
ಮುಗ್ಗಿದುದು ರಣದಲ್ಲಿ ಹಯತತಿ
ಯಗ್ಗಿ ಹೋದುದು ತೇರು ತಳಪಟವಾಯ್ತು ಪಾಯದಳ ॥
ಸುಗ್ಗಿಯಾದುದು ಭೂತಯೂಥಕೆ
ದುಗ್ಗವನು ಬೇತಾಳರೇರಿತು
ಲಗ್ಗೆ ತಗ್ಗಿತು ಹೊಡೆವರಿಲ್ಲದೆ ವಾದ್ಯ ಮುಗಿಯಿತ್ತು ॥ ೨೫ ॥

ಹರಿದು ವೀರರ ದೇವ ಹೊಕ್ಕನು
ಮರುತನಂದನ ಪರಬಲಾಬ್ಧಿಯ
ಕರಿಹಯಂಗಳ ತೇರ ಪಂಕ್ತಿಯ ಬಿಗಿದು ಬಾಲದಲಿ ॥
ಧರಣಿಗಪ್ಪಳಿಸುತ್ತ ಕರದಲಿ
ಚರಣದಲಿ ಹೊಡೆ ಹೊಡೆದು ದೈತ್ಯರ
ಪರಬಲಾಂತಕನಟ್ಟಿ ಕೊಂದುದು ಕೋಟಿ ಹಲವಾಯ್ತು ॥ ೨೬ ॥

ಕುಣಿವುತಿರೆ ಭೂತಾಳಿ ರಣಮುಖ
ಹೆಣನ ಬಣಬೆಯ ಹಕ್ಕಲಾದುದು
ಮಣಿದು ಹೆಮ್ಮರದಿಂದ ಹೊಡೆದಪ್ಪಳಿಸಿ ನೆಗೆಹುತಿರೆ ॥
ಮಣಿ ವಿಮಾನದಿ ಮೋಹಿತಪ್ಸರ
ಗಣಿಕೆಯರು ಗಂಡರಲಿ ತಣಿಯದೆ
ನೆಣಸಿ ತನ್ನವನೀತ ತನ್ನವನೆಂದು ಹಿಡಿದೆಳೆದು ॥ ೨೭ ॥

ನಳನು ಕೊಂದನು ಕೋಟಿ ದೈತ್ಯರ
ಮುಳಿದು ನೀಲನು ಹತ್ತು ಕೋಟಿಯ
ಬಲವದರಿಗಳಿದೆಂಟು ಕೋಟಿಯ ಕೊಂದ ಸುಗ್ರೀವ ॥
ಕಲಿ ಗವಾಕ್ಷನು ಮೂರು ಕೋಟಿಯ
ಬಲುಹಿನಂಗದನೈದು ಕೋಟಿಯ
ನಳವುಗೆಡಿಸಿದ ಗಂಧಮಾದನನೆರಡು ಕೋಟಿಯನು ॥ ೨೮ ॥

ದನುಜ ಪಡೆ ಸಂಹಾರವಾಗಲು
ಕನಲಿ ಕವಿಕವಿದೆಸುತ ರಾವಣ
ಕನಕ ರಥವನು ಮುಂದೆ ನೂಕಲು ಬಂದ ಸೌಮಿತ್ರಿ ॥
ಧನುವನೊದರಿಸಿ ಸರಳ ಸುರಿದಾ
ದನುಜ ರಾಯನನಳವುಗೆಡಿಸಲು
ಮನದಿ ಹೆಕ್ಕಳಿಸುತ್ತ ಗಂಧರ್ವಾಸ್ತ್ರವನು ತೊಟ್ಟ ॥ ೨೯ ॥

ಬಿಟ್ಟೊಡಾ ಮಂತಾಸ್ತ್ರವವನಿಗೆ
ನೆಟ್ಟನಚ್ಚರಿಯಾಯ್ತು ನಿಮಿಷಕೆ
ಹುಟ್ಟಿದರು ರಘುನಾಥ ಲಕ್ಷ್ಮಣ ಕೋಟಿ ಕೋಟಿಗಳು ॥
ಮೆಟ್ಟಿ ಸೀಳೋ ರಾಮುಗೀಮನ
ಥಟ್ಟುಗೆಡಹೋ ಲಕ್ಷ್ಮಣನನೆನು
ತಟ್ಟಿ ಕಡಿಕಡಿದಾಡುತಿರೆ ಖಳ ನೋಡಿ ನಗುತಿರ್ದ ॥ ೩೦ ॥

ಎರಗಲಮ್ಮನುವೊಡನೆ ಹುಟ್ಟಿದ
ಮರುಕದಿಂದಾ ರಾಮ ತಮ್ಮನ
ತರಿದು ಬಿಸುಡನು ಲಕ್ಷ್ಮಣಾಂಕನು ನೆರೆಯಲಣ್ಣನನು ॥
ಮರುಗಿದನು ವಿಭಿಷಣನು ತಾ ಮು
ನ್ನರಿಯೆನಿವನಂತಸ್ತ್ರವನು ಖಳ
ನುರುವ ಕೊಲೆಯನು ಹಣ್ಣಿ ತಂತಮ್ಮೊಳಗೆ ಕಾದಿಸಿದ ॥ ೩೧ ॥

ಅನುಜ ಕೇಳೈ ನಿನ್ನ ರೂಹಿನ
ದನುಜನನು ನೀನರಿದು ಬಿಸುಡೆಂ
ದೆನುತ ರಘುಪತಿ ತನ್ನ ರೂಪಿನ ಖಳರ ತಾ ಕೊಲಲು ॥
ಅನಲವಿಕೃತದಲುದಿತ ಕೆಂಡಗ
ಳನಲದಿಂದಡಗಿದೊಡೆ ನಿಜವುಳಿ
ಗೆನಲು ಖಳಿನಿರೆ ನಿಜದಲುಳಿದರು ರಾಮ ಲಕ್ಷ್ಮಣರು ॥ ೩೨ ॥

ಬಿಸಿಲ ಬೀಜದ ಬಣ್ಣದೊಬ್ಬುಳಿ
ಶಶಿಯ ಬೆಳಕಿನ ಬಣ್ಣವಮಮಾ
ಮಿಸುನಿ ಕೀಳೆಂಪೆಂಬ ಬಣ್ಣದ ಘಂಟೆ ಮೆರೆವುತಿರೆ ॥
ಮಿಸುಪ ಕಿಣಿಕಿಣಿಗೆಜ್ಜೆವುಲಿಯಲು
ಮಸೆದ ಶರ ಧನು ಕವಚ ಖಡ್ಗದ
ವಿಸರ ತುಂಬಿದ ರಥವ ನೋಡಿದ ರಾಮ ಗಳಿಗೆವರ ॥ ೩೩ ॥

ಅವನಿಜೆಯ ತಾಟಂಕ ಭಾಗ್ಯದಿ
ಶಿವಶಿವಾ ಸುರನಾಥನೆನಗಾ
ಹವಕೆ ತಾನೆರವಾಗಿ ಕಳುಹಿದನೇ ಮಹಾರಥವ ॥
ಬವರಕನುವಾಯ್ತಾಯ್ತು ಬಿಟ್ಟರೆ
ದಿವಿಜರಂಜಿಕೆ ಭಾಪುರೆನುತಾ
ರವಿಕುಲೇಶ್ವರನೆಂದ ಮಾತಳಿಯೊಡನೆ ನಸುನಗುತ ॥ ೩೪ ॥

ಧವಳ ವರ್ಣದ ತೇಜಿ ಹೂಡಿದ
ದಿವಿಜವಂದ್ಯನ ರಥವ ಬಲ ಬಂ
ದವನಿವಲ್ಲಭ ನಮಿಸಿ ತೇಜಿಗೆ ಪೂಜೆಯನು ಮಾಡಿ ॥
ರವಿಕುಲಜ ರಥವೇರಿ ಬರುತಿರೆ
ದಿವಿಜರಿಪು ಕಳವಳಿಸುತಿರ್ದನು
ರವಿಗಗೋಚರವೆನಲು ಮಾತಳಿ ಸುಳಿಸಿದನು ರಥವ ॥ ೩೫ ॥

ದಾನವನು ರಥವೇರಿ ಬರುತಿರೆ
ಜಾನಕೀಪತಿ ಕಾಲು ನಡೆಯಿಂ
ದಾನುವುದು ಹಸನಲ್ಲ ರಣದೊಳಗೆಂದು ಸುರನಾಥ ॥
ಯಾನವನು ಕಳುಹಿದರೆ ಬರಲದ
ಭಾನುಕುಲಪತಿಯೇರಿ ಬರಲಾ
ದಾನವೇಶ್ವರ ಬಾಯ ತಂಬುಲ ಸೂಸಿ ನಗುತಿರ್ದ ॥ ೩೬ ॥

ಒಂದು ತಲೆ ತೋಳೆರಡು ನಿನಗೆಲೆ
ಮಂದಮತಿ ರಥವೆರವು ಬಂದುದು
ಒಂದೆರಡು ಮೂರಲ್ಲ ತಲೆ ತೋಳೆನಿತು ನೋಡೆನಲು ॥
ಹಿಂದೆ ನಿಮ್ಮನರಣ್ಯನೆಂಬವ
ಕೊಂದ ಭಂಗವ ನೀನು ಮರೆದಾ
ಎಂದು ರಾವಣ ಕಟಕಿಯಾಡಲು ರಾಮನಿಂತೆಂದ ॥ ೩೭ ॥

ಎಲವೊ ನಿನ್ನೀ ತೋಳು ತಲೆಗಳು
ಹಲವು ಭೂತಕೆ ಬೋನದಂತಿರ
ಲೆಲವೊ ರವಿಕುಲದರಸು ತಾನವ ಕಾದಿ ಮಡಿದನಲ ॥
ಕಲಿ ಕಣಾ ಕಡಿದಾಡಿ ಸಾವುದು
ಕುಲದ ಕ್ಷತ್ರಿಯ ಪಂಥ ನಿನ್ನಂ
ತೆಲವೊ ಹಾರುವನಾಗಿ ಪರಸತಿಗಳುಪಿದವರುಂಟೆ ॥ ೩೮ ॥

ಹೇಡಿಯಾದೊಡೆ ರಣದಿ ಕಾದು
ತ್ತೋಡಿ ಹೋದೊಡೆ ಬಡವನಾರ್ತದಿ
ಬೇಡೆ ಕೊಡದೊಡೆ ಶರಣುವೊಕ್ಕರ ಕಾಯಲಾರದೊಡೆ ॥
ನಾಡ ಗೋಳಿಡಿಸಿದೊಡೆ ಸತ್ಯಕೆ
ಕೇಡ ನಡೆದೊಡೆ ಪರರ ಹೆಂಡಿರ
ನೋಡಿಯಳುಪಿದೊಡಹುದು ಭಂಗವು ಅಗ್ಗಳಿಕೆಯೆಂತು ॥ ೩೯ ॥

ಗಳಹ ನಿನ್ನಧಟುಗಳ ಪಂಥವ
ಸಲೆ ಜಗತ್ರಯ ಬಲ್ಲುದಂತಿರ
ಲೆಲವೊ ಬಾಲಿಯ ಕಾರ್ತವೀರ್ಯಾನ ಬಲದ ಬಾಗಿಲಲಿ ॥
ಹಲವು ಪರಿಯಲಿ ಲಜ್ಜೆಗೆಟ್ಟಾ
ಛಲವ ನಮ್ಮೊಳು ಸೊರಹಲೇತಕೆ
ಹಲರ ಹಂಗಿಗ ನಿನ್ನ ಕೊಂದೊಡೆ ಹೆಸರದೇನೆಂದ ॥ ೪೦ ॥

ಅಹುದು ನಾನತಿ ಭಂಗವಟ್ಟವ
ಸಹಸಿ ನೀನದು ಖರೆಯ ಧರಣೀ
ರುಹದ ಮರೆಯಲಿ ಕೊಂದೆ ಬಾಲಿಯ ಹಳೆಯ ಹೆಣ್ಣೊಂದ ॥
ಗಹನದಲಿ ನಿ ಕೊಂದೆ ಶರದಲಿ
ಮಹಿಮೆಯುಳ್ಳವ ಹಸಿದು ಬಳಲಿದೆ
ಸಹಸಿ ನೀನದು ಖರೆಯ ನಿನ್ನನು ತೆಗಳಲರಿದೆಂದ ॥ ೪೧ ॥

ಮನುಜರೆವಗೆಲ್ಲಿಯದು ಸಾಹಸ
ಧನುವ ಹಿಡಿದನುವಾಗು ಬಾಣದ
ಮೊನೆಯಲಾಡುವ ಮಾತನೆನುತವೆ ತುಡುಕಿದನು ಸರಳ ॥
ನೆನೆದು ಕೌಶಿಕನಡಿಗೆ ವಂದಿಸಿ
ಕನಕಪುಂಖದ ಕಂಕಪತ್ರದ
ಘನದ ಬೋಳೆಯ ನಿಶಿತಧಾರೆಯನರಸ ಸೈಗರೆದ ॥ ೪೨ ॥

ಆದೊಡಿವಕೊಳ್ಳೆಂತುಕೊಳ್ಳೆನು
ತಾ ದಶನಾನನೆಚ್ಚ ರಾಮನ
ನ್ಯೆದು ನೂರು ಸಹಸ್ರ ಲಕ್ಷದ ಕೋಟಿ ಬಾಣಗಳ ॥
ಬೀದಿವರಿದುದು ಬಾಣವಮುಮಾ
ಮೋದಿತಭ್ರುವ ಬಿಸಿಲ ಮುಸುಕಿತು
ಸೇದುತಮರರ ಕಣ್ಣು ಕಟ್ಟಿತು ಕಾಣೆನಾ ರವಿಯ ॥ ೪೩ ॥

ಸರಳ ಸರಳನು ಹಳಚಿ ಕಿಡಿಗಳ
ಸುರಿಯೆ ತಾರೆಗಳಂತೆ ಮೆರೆದುದು
ತರುಚರಂಗಳು ಹಲ್ಲುಗಿರಿವುತ ಹೊಲಬುಗೆಡುತಿರಲು ॥
ಸರಳು ತುರುಗಿತು ತುಂಬಿ ತುಳುಕಿತು
ಹರಿಯ ಮಹಿಮೆಗದೇನು ಗಣ್ಯವು
ಸರಳು ಕಡಿದಂಬರದ ಬಿಸಿಲನು ಧರೆಗೆ ಹರಹಿದುದು ॥ ೪೪ ॥

ತೊಡುವ ಬಿಡುವುದ ಕಾಣಬಾರದು
ಬಿಡದೆ ನೋಡುವ ದೇವಕೋಟಿಗೆ
ಹಿಡಿದ ಧನು ಪರಿವೇಷವಾದುದು ಹೋಲಲರುಣನನು ॥
ಬಿಡುವ ಬಾಣ ಸಹಸ್ರಕಿರಣದ
ಗಡಣ ರಣಗತ್ತಲೆಯ ಹೋಲಿತು
ಪೊಡವಿಪತಿ ನಡು ಹಗಲ ರವಿಯಂತೆಸುವುತೊಪ್ಪಿದನು ॥ ೪೫ ॥

ತೇರು ತೇರಿಂಗೈದೆ ಬಂದುದು
ವಾರುವಂಗಳು ಹಳಚಲೆಳಸಲು
ಸಾರಥಿಗಳಿಗೆ ಸೆಣಸು ಮಸಗಿತು ಮಾತು ಮಾತಿನಲಿ ॥
ಆರಲಡಿಗಡಿಗುಭಯ ಬಲ
ವೀರ ನೃಪಕುಲತಿಲಕರಿಬ್ಬರ
ಪೌರುಷದ ಪಟು ರೌದ್ರರಂಜಿಸಿತ ಸುರರಾಲಿಗಳ ॥ ೪೬ ॥

ಉದಯುದರುಣನಪೋಲು ಮಾತಳಿ
ಕುದುರೆ ಕುಂಕುಮವರ್ಣವಾದುದು
ಪದುಮನಾಭನು ನೀಲ ಲೋಹಿತ ರುದ್ರನಂತಾದ ॥
ತ್ರಿದಶರಿಪುವಿನ ಕವಚ ಬಸುರನು
ಒದೆದು ಕಣೆ ದಿಗುತಟಕೆ ಹಾಯ್ದುದು
ಕದುರೆ ಸಾರಥಿ ರಥವು ತೋಯ್ದುದು ಖಳನ ರಕ್ತದಲಿ ॥ ೪೭ ॥

ಬಿಡಲು ರಘುಪತಿ ತೊಡಲು ದಶಶಿರ
ಬಿಡುವ ಹೋಗುವ ನಡುವೆ ಹಾಯ್ವುದ
ಕೆಡೆಯೆ ಕಾಣದು ಶಸ್ತ್ರದಂತ್ಯವದಾರ ಕರ್ಣಗಳೊ ॥
ನುಡಿಗೆ ತೆರಹಿಲ್ಲಮಾಮು ರಘುಪತಿ
ಕಡುಗಿ ಕವಿ ಕವಿದೆಸಲು ರಕ್ಕಸ
ಕಡಿಯುಲಸದಳವೆನಲು ಕಡಿದನು ರಾಮು ತಲೆದೊಗೆ ॥ ೪೮ ॥

ಧುರದಲ್ಲೈರಾವತವು ದಾಡೆಯು
ಲಿರಿಯಲಾಂ ಲೆಕ್ಕಿನೆನು ಶಕ್ರನು
ಬಿರಿಸಿನಿಂದವೆ ಹೊಡೆದ ವಜ್ರದ ಹೊಯ್ಲ ನಾನರಿಯೆ ॥
ಅರಚಿ ಕೈಲಾಸವನು ನೆಗಹಲು
ಗೊರವ ಕಡುಮುನಿದೊತ್ತಲಿಡೆಯುಲಿ
ಮುರಿದ ಮೊನೆಗಲ್ಲುಗಳನರಿಯೆನು ಬಾಣವೆನಗಿದಿರೆ ॥ ೪೯ ॥

ಎಲವೊ ಕುಂಟಲು ಮೊನೆಯು ಶಕ್ರನ
ಕುಲಿಶವಲ್ಲಿದು ರಜತ ಶೈಲದ
ಕಲುಗಳಲ್ಲಿವು ಮೇಣು ಐರಾವತದ ಕೋಡಲ್ಲ ॥
ಹಳಚಿ ಕಾದಿದ ವೈರಿ ಸುಭಟರ
ತಲೆಯುನರಿದಗ್ಗಳಿಕೆಯುಳ್ಳವು
ಹೊಳೆವ ಕೂರಂಬುಗಳು ನಮ್ಮವು ಹೊಸತು ಕೇಳೆಂದ ॥ ೫೦ ॥

ಕಡುಗಿ ಕೋಪದೊಳರಸ ರಕ್ಕಸ
ಹಿಡಿದ ಚಾಪವು ಹತ್ತು ಕಡಿಯುಲು
ಹಿಡಿದನಾ ಖಳ ಹತ್ತ ಮತ್ತದ ಕಡಿದ ಸಿರಿರಾಮು ॥
ಹಿಡಿದ ರಾವಣ ಕಡಿದ ರಾಘವ
ಹಿಡಿದ ನರಹರಿ ಕಡಿದ ರಕ್ಕಸ
ಕಡೆಗೆ ಸಾವಿರ ಬಿಲ್ಲು ಸವೆದುವು ದೈತ್ಯ ಕಳವಳಿಸೆ ॥ ೫೧ ॥

ತನಗೆ ಚಂಡಿಕೆಯಿತ್ತ ಶಕ್ತಿಯು
ದನುಜನಿಡಲುರಿವುತ್ತ ಬರುತಿರೆ
ಜನಪನಿಕ್ಕಡಿಗಳೆದ ಸಮಯದೊಳುಗ್ರ ಚಾಪದಲಿ ॥
ದನುಜನೇರಿಸಿ ಮರುತ ಬಾಣವ
ಕನಲಿ ಬಿಡೆ ಬಿರುಗಾಳಿಯುಟ್ಟಿತು
ವನಚರಂಗಳನುರಗ ಬಾಣದಿ ರಾಮುನಡ ಗೆಲಿದ ॥ ೫೨ ॥

ಕೆರಳಿಯಾಗ್ನೇಯಾಸ್ತ್ರದಿಂದಿಸೆ
ಉರಿ ಚಡಾಳಿಸಿ ಹೊಗೆಯು ಮುಸುಕಿತು
ವರುಣ ಬಾಣದಿ ತೇದುಬಿಟ್ಟನು ರಾಮನದ ಮರಳಿ ॥
ಉರಗ ಬಾಣವ ಬಿಡಲು ಹೆಡೆಗಳ
ಹರಹಿ ಹಾವಿನ ವಿಸರ ಹಬ್ಬಲು
ಗರುಡ ಬಾಣದಲರಸ ಗೆಲಿದನು ಹೊಗಳಿತುಭಯಬಲ ॥ ೫೩ ॥

ದಿವಿಜರಿಪು ಯಾವ್ಯಾಸ್ತ್ರದಿಂದಿಸೆ
ಭುವನ ತುಂಬಿತು ಜವನ ಜಂಗುಳಿ
ರವಿಕುಲಾನ್ವಯ ರುದ್ರ ಬಾಣವ ಬಿಡೆ ಪಿನಾಕಿಗಳು ॥
ಕವಿದುದಗಣಿತ ನಂದಿವಾಹನ
ರವಿಯ ತೇಜದ ಭಾಳನೇತ್ರರು
ಜವಗಿವರ ನೆರೆ ಸೀಳಲಚ್ಚರಿಯಾಯ್ತು ಸಂಗ್ರಾಮ ॥ ೫೪ ॥

ಬಿಟ್ಟನಾ ಖಳ ಪರ್ವತಾಸ್ತ್ರವ
ಹಿಟ್ಟುಗುಟ್ಟಿದ ವಜ್ರ ಬಾಣದಿ
ಬಿಟ್ಟೋಡವ ಕರಿಯಂಬ ಕೇಸರಿಯಂಬಿನಲಿ ರಾಮ ॥
ಬಿಟ್ಟು ತೂರಲು ತಮದ ಬಾಣವ
ಬಿಟ್ಟೋಡಂಬರ ಮಣಿಯ ಮುಸುಕಿತು
ಸೃಷ್ಟಿಪಾಲಕ ಸೂರ್ಯ ಬಾಣದಿ ಬೆಳಕು ಮಾಡಿದನು ॥ ೫೫ ॥

ಖಳನು ಬಲು ಸಮ್ಮೋಹನಾಸ್ತ್ರವ
ಸೆಳೆಯೆ ತೂಕಡಿಸಿತ್ತು ಕಪಿಪಡೆ
ಹಲವು ಮಾತೇಂ ಮೋಹಗೊಂಡುದು ಕೇಳು ಮೇಲಿರದೆ ॥
ಕಳಚುತಿರ್ದುದು ಕೈಯ ಧನುಶರ
ಜಲಜನಾಭಂಗಾ ವಿಭೀಷಣ
ತಿಳುಹಲಾ ಸಮ್ಮೋಹನಾಸ್ತ್ರವನುಡಿದ ಸಿರಿರಾಮ ॥ ೫೬ ॥

ಆಹಹ ಮರೆದಿರೆ ರಾಮನಾಮವ
ಮಹಿಮೆಯನು ನಿದ್ರೆಯಲಿ ಕೆಡೆವರೆ
ಮಹಿಮೆಯರಿಯಲು ರಾಮ ರಾಘವಯೆನ್ನಿ ನೀವೆನುತ ॥
ರಹಣದಿಂದಲಿ ನುಡಿಯುತೆಲ್ಲರು
ವಿಹಿತ ನಾಮ ಸ್ಮರಣರಾದರು
ಬಹಳ ಮಾಯಾಮೋಹ ಹರೆದುದು ರಾಮ ನಾಮದಲಿ ॥ ೫೭ ॥

## ೪೨ನೇ ಸಂಧಿ

**ಪಲ್ಲ** ॥ ಪೊಡವಿಪತಿ ತಲೆದೂಗೆ ರಣದಲಿ
ಕಡುಗಿ ಕಾದಿಯೆ ಮುಕ್ತಿ ಸಿರಿಯನು
ಪಡೆದು ನೂಕಿದನೆರಡು ಭವಗಳ ಹರಿಯ ವೈರದಲಿ ॥

**ಪದ** ॥ ಬಿಲ್ಲ ಬಿಸುಟೆಪ್ಪತ್ತು ಕೈಯಲಿ
ಬಲ್ಲೆಹಂಗಳ ಕವಣೆ ಕಡಿತಲೆ
ಸಲ್ಲೆಹವು ವರ ಶೂಲ ಪಟ್ಟಿಸದಿಂದಲಿಡುತಿರಲು ॥
ಫುಲ್ಲಲೋಚನನಲಸದನಿತುವ
ನೆಲ್ಲವನು ತಂದೊಟ್ಟುತಿರ್ದನು
ನಿಲ್ಲದಾ ಖಳನಿಡಲು ರಾಘವ ಕಡಿದನಾಕ್ಷಣಕೆ ॥ ॥ ೧ ॥

ಇರಿಯಲೆತ್ತಿದ ಕೈಗಳೆಲ್ಲವ
ತರಿದು ಬಿಸುಟನು ಮರಳಿ ಹುಟ್ಟಲು
ಬೆರಗುಗೊಂಡನು ರಾಮು ಕಡಿದೊಡೆ ಮತ್ತೆ ಕೈ ಹುಟ್ಟಿ ॥
ಕೆರಳಿ ಕಡಿದನು ಖಳನ ತಲೆಯನು
ಅರಸನೀ ಕ್ರಮದಿಂದ ಹುಟ್ಟಲು
ಧರಣಿಗಚ್ಚರಿಯಾಗೆ ಕಡಿದನು ರಾಮು ಬೇಸರದೆ ॥ ೨ ॥

ಮಹಿಮ ಕಡಿದೊಡೆವೊಂದು ತಲೆಯೂ
ಗ್ರಹರ ಹೋಲಿತು ಎರಡ ಕಡಿಯಲು
ವಿಹಿತ ದಿಕ್ಪಾಲಕರ ಮೂರನು ಕಡಿಯೆ ಕುಲಗಿರಿಯ ॥
ಗುಹನ ಪಂಚಾನನ ವಿರಿಂಚಿಯ
ದಹನ ಭೇರುಂಡರನು ಹೋಲಿತು
ಸಹಸದಲಿ ತಲೆ ಹತ್ತ ಕಡಿದೊಡೆ ಹುಟ್ಟತಾಕ್ಷಣಕೆ ॥ ೩ ॥

ಕೆರಳಿ ಹರಿ ಮೂವತ್ತು ಬಾಣದಿ
ಕರಗಳೆಲ್ಲವ ಶಿರಗಳೆಲ್ಲವ
ತರಿದು ಬಿಸುಟೊಡೆ ಮತ್ತೆ ಹುಟ್ಟಲು ಕೂಡೆ ಬಾಣಗಳು ॥
ಮರುಳುಗೊಂಡುವು ಗುರಿಯು ತಪ್ಪಿದೆ
ವರಸ ಕನಲುಗೆನುತ್ತ ಹೋಗುತ
ಬರುತ ಕಡಿವುತ್ತಿರಲು ಮೂಡುತ್ತಿರ್ದವಾಕ್ಷಣಕೆ ॥ ೪ ॥

ನುಡಿಯು ಮಧ್ಯದಿ ತಲೆಯು ಕಡಿದರೆ
ನುಡಿಯು ಶೇಷವನುಲಿವುತಾ ತಲೆ
ಯೊಡನೆ ಮೂಡಲು ಕಡಿದು ಹೋದಂಬುಗಳು ಮಗುಳ್ದಿದಿ ॥
ಕಡಿವುತಿರ್ದುದವು ಮೂಡುತಿರ್ದುದವು
ಬಿಡದೆ ಕಡಿಯಲು ಮತ್ತೆ ಮೂಡಲು
ಒಡೆಯನಲ್ಲಿಗೆ ಬಂದವಾ ಮಂತ್ರಾಸ್ತ್ರ ಬೆರಗಾಗಿ ॥ ೫ ॥

ಅವರಿವರ ಗೆಲಿದಂತೆ ನಮ್ಮನು
ಬವರದಲಿ ಗೆಲ ಬಂದೆ ನನ್ನಯ
ಹವಣನರಿಯದೆ ತೊಡಚಿ ನೀ ಭಂಡಾದೆ ಲೋಕದಲಿ ॥
ಕವಿಕವಿದು ಕಡಿದಾಡಿ ತಲೆಗಳ
ಸವೆಸಿದೊಡೆ ಕಲ್ಪಾಂತರಕ್ಕೈನೆ
ಶಿವನ ವರವಿಲ್ಲಾಯ್ತು ಬಳಲಿದೆ ಸಾಕು ಹೋಗೆಂದ ॥ ೬ ॥

ಕಡಿದ ತಲೆಗಳ ರಾಶಿಯಂಬರ
ದೆಡೆಯ ಕೆಡಿಸಿತು ಗಗನಗಂಗೆಯ
ನಡುವೆ ರಕ್ತದ ಮಡುವು ಜಂಬೂನದಿಯ ತೆರನಾಯ್ತು ॥
ಮೃಡನ ನಂದಿಯ ಬೆಳ್ಪು ಮಸಳಿಸೆ
ಗಡಣದಮರರು ಹೇಸೆ ಮೊನೆ ಕೆಂ
ಗುಡಿಯು ಹೋಲಲಜಾಂಡ ಕುಂಕುಮ ಪಂಕದಂತಾಯ್ತು ॥ ೭ ॥

ಕಡುಹಿನಲಿ ತಲೆ ಹತ್ತನೊಮ್ಮಿಗೆ
ಕಡಿಯೆ ಮೂಡಲು ಮತ್ತೆ ಕಡಿವನು
ಯೊಡನೆ ಮೊಳೆತರೆ ಕಡಿದ ಚಿಗಿತೊಡೆ ಮತ್ತೆ ಹರಿ ಕಡಿದ ॥
ಒಡನೊಡನೆ ನೂರೆಂಟು ಕಣೆಯಲಿ
ಕಡಿದನೀ ಪರಿ ಮತ್ತೆ ಚಿಗುರಲು
ಮೊಡವಿಪತಿ ಬೇಸತ್ತು ಚಾಪವನಿರಿಸಿ ಮಂಡಿಸಿದ ॥ ೮ ॥

ಬಳಲಿ ಮೈಮರೆದಂತೆ ನರಹರಿ
ಯೊಲಿದು ದೈತ್ಯಗೆ ನಿಜವ ತೋರಿದ
ಖಳನ ಪುಣ್ಯವೆ ಕಡೆಯ ಕಾಲಕೆ ಕಂಡನಚ್ಯುತನ ॥
ಚಲುವನಂತನ ಹೋಲಲಾ ರಥ
ಬಲದಿ ಧರಿಸಿಹ ಶಂಕ ಚಕ್ರನ
ತಳೆದ ನಳಿದೋಳುಗಳಲೊಪ್ಪುವ ಹರಿಯನೀಕ್ಷಿಸಿದ ॥ ೯ ॥

ಹೊಳೆವ ಮಣಿಯುನು ಮುಕುಟ ಕಸ್ತೂರಿ
ತಿಲಕ ಕರ್ಣದ ಮಕರಕುಂಡಲ
ಲಲಿತ ತುಳಸೀ ದಂಡೆ ವನಮಾಲೆಗಳ ಪೇರುರದ ॥
ಸಲೆ ಜಗತ್ರಯ ಬೀಜನಾಭಿಯು
ಲಲಿತ ಪೀತಾಂಬರದವುಡುಗೆಯು
ಸುಲಭ ದೇವರ ದೇವನೆಸೆದನು ನಿಜದ ರೂಪದಲಿ ॥ ೧೦ ॥

ರಾವಣನ ಪುಣ್ಯಕ್ಕೆ ಸರಿಯುಹ
ನಾವನೈ ತ್ರೈಜಗದಿ ಶಿವ ಶಿವ
ದೈವದೂರನುಯೆಂಬ ಮೂರ್ಖರ ಬಾಯಿ ಹುಳಿವುದಲ ॥
ದೇವನಂಪ್ರಿಯುವಂತ್ಯಕಾಲದೊ
ಳಾವ ಯೋಗಿಗಳಿಂಗೆ ಗೋಚರ
ಪೋವೊ ಕಣುಮನವಕ್ಕರಡಗಲು ನೋಡಿದನು ಹರಿಯ ॥ ೧೧ ॥

ಹಿಂದೆ ನರಹರಿಯಾಗಿ ಕೂರುಗ
ರಿಂದ ಬಸುರನು ಬಗಿದ ಸಮಯದಿ
ನೊಂದ ಕಶ್ಯಪು ಹರಿಯ ಪದಪಂಕಜವನೀಕ್ಷಿಸುತ ॥
ತಂದೆ ನೀನೀ ರೂಪದಿಂದವೆ
ಬಂದುದನು ನಾನರಿತೆನಾದೊಡೆ
ಹೊಂದುವೆನೆ ಕೈಹತ್ತ ಕೈಕೊಂಡಾನು ಕೊಲದಿಹೆನೆ ॥ ೧೨ ॥

ಎಂದೊಡಾ ಹರಿಯೆಂದ ಕೇಳಿಲೆ
ಕಂದ ಮುಂದಣ ಭವಕೆ ನೀನೀ
ಗೆಂದ ತೋಳಿನ ಸಂಖ್ಯವದರಿಮ್ಮಡಿಯ ಕರ ವರವ ॥
ಕುಂದದಿತ್ತೆನು ಎರಡು ಹಸ್ತಗ
ಳಿಂದ ಕೊಲುವೆನು ನಿನ್ನ ನಾನಂ
ದೆಂದ ಕುರುಹಿಗೆ ಕಡೆಯ ಕಾಲಕೆ ನಿಜವ ತೋರಿದೆನು ॥ ೧೩ ॥

ಎಂದೆನುತ್ತಿರೆ ಮನದ ವೇಗದಿ
ಬಂದಗಸ್ತ್ಯನು ರಾಮಗೆಂದನು
ಹಿಂದೆ ನಿನಗಾದಿತ್ಯ ಹೃದಯುವ ನಾವು ಹೇಳಿದೆವು ॥
ಇಂದು ಭಜಿಸೆನಲೆರಗಿ ಕೈಮುಗಿ
ದಂದು ರವಿ ಮಂಡಲವನೀಕ್ಷಿಸಿ
ನಿಂದು ಜಪಿಸಲು ಕಂಡು ರಾವಣ ಹಿಂದೆ ತಿರುಗಿದನು ॥ ೧೪ ॥

ರಾವಣನು ತಿರುಗುವುದ ಕಾಣುತ
ದೇವರಿಗೆ ಬಂದೆರಗಿ ವಿಭೀಷಣ
ದೇವ ವೈರಿಯ ಬಲದ ವಕ್ಷದಿ ಮತ್ಸ್ಯಲಾಂಛನವು ॥
ಜೀವವಿಪ್ಪೆಡೆಯೆನಲು ಮಾಯಾ
ಭಾವ ಹರೆದುದು ಧನುವ ಕೊಂಡನು
ವೋವೊ ಬಹಳೋತ್ಪಾತವೆಸೆದುದು ಅವನಿಯಭ್ರದಲಿ ॥ ೧೫ ॥

ಗುರು ಚರಣ ಶರಣೆನುತ ದಶರಥ
ಧರಣಿಪತಿ ಹರಸೆನುತ ಕೋಪ
ಸ್ಫುರಿತ ತಾಂಡವ ರುದ್ರನಂದದಿ ಭುಜವನಪ್ಪಳಿಸಿ ॥
ಧರಣಿಸುತೆ ಮುತ್ತೈದೆಯಾಗೆನ
ಲರಿದಿಶಾಪಟಮಲ್ಲ ಬೊಬ್ಬಿರಿ
ದಿರದೆ ಧನುವನು ಪಿಡಿದು ಹೂಡಿದ ಸರಳನಾಕ್ಷಣಕೆ ॥ ೧೬ ॥

ಎಲವೊ ತಿರುಗಿತ್ತಿತ್ತಲೆನುತವೆ
ಜಲಜನಾಭನಮೋಘ ಬಾಣವ
ಸೆಳೆದು ಬಿಡಲಿವಿರಾದ ರಕ್ಕಸನುರವನುಚ್ಚಳಿಸೆ ॥
ತಲೆಗಳುದುರಿದುವನುಮು ಬೊಬ್ಬಿರಿ
ದಿಳೆಗೆ ರಕ್ಕಸ ಹಾರಿ ಬಿದ್ದನು
ಕಳದೊಳಗೆ ಕೈವಲ್ಯಪದವಿಯ ಕೊಂಡನಸುರೇಂದ್ರ ॥ ೧೭ ॥

ದಿವಿಜರಗುಸೆಯನಿಕ್ಕ ತೊಡಗಿತು
ಜವನಪುರವಲ್ಲಾಡ ತೊಡಗಿತು
ಭವನ ಕೂಡುವನೆಂದು ನಡುಗಿತು ರಜತಗಿರಿಯಂದು ॥
ಅವರಿವನ ಹಂಗಿಗನೆ ರಾವಣ
ದಿವಿಜಗಿವಿಜರ ಪುರವ ಬಗೆವನೆ
ಬವರದಲಿ ಬೊಮ್ಮನನು ಬೆರಸಿದ ಯೋಗಿ ಜನ ಹೊಗಳೆ ॥ ೧೮ ॥

ಸರಸಿಜಾಸನ ಹೊಗಳಲಮ್ಮನು
ಸುರರು ಪೂಮಳೆಗರೆಯಲಮ್ಮರು
ಹರನೊಲಿದು ಹಾರೈಸಲಮ್ಮನು ದೇವನಧಟಿಂಗೆ ॥
ಧುರದೊಳಗೆ ರಾವಣನು ಬಿದ್ದೊಡೆ
ಕರ ಶಿರಂಗಳ ಕಡಿದೊಡಾಕ್ಷಣ
ಮರಳಿ ಹುಟ್ಟುವುದೆಂಬ ಭಯದಲಿ ನುಡಿಯಲಂಜಿದರು ॥ ೧೯ ॥

ಪೊಡವಿಪತಿ ಸಿರಿರಾಮ ಕಪಿಪಡೆ
ವೆರಸಿ ಲಂಕೆಯ ಮುತ್ತಿದಾ ದಿನ
ತೊಡಗಿ ಹಗಲಿರುಳಾಗಿ ಕಾದಿತು ದನುಜ ವಾನರರು ॥
ಎಡೆಬಿಡದೆ ವರುಷಾರ್ಧವದರೊಳು
ಮಡಿದ ರಾಕ್ಷಸ ಪಡೆಯನೆಣಿಪೊಡೆ
ಕಡೆಗೆ ಸಾವಿರದೇಳುನೂರಕ್ಷೋಹಿಣೀ ಸೇನೆ ॥ ೨೦ ॥

ಅಳಿದ ರಾವಣನೆನಲು ಗೋಳಿ
ಟ್ಟಳುತ ದೈತ್ಯನ ತಾಯಿ ಪಟ್ಟದ
ಲಲನೆಯಾಕೆಯ ಬೆನ್ನಲೈದಿತು ಚೆಲುವ ಕಾಂತೆಯರು ॥
ಮಳೆಯ ಗಾಳಿಯ ನೆಳಲ ನೇಸರ
ಸುಳುವ ಕಾಣದ ಸುಖಿಗಳಕಟಾ
ತಲೆಯ ಬಿಟ್ಟಳುತಳುತ ಹರಿದರು ರಾಜವೀಥಿಯಲಿ ॥ ೨೧ ॥

ಹೆಂಡಿರಾ ಹದಿನಾರು ಲಕ್ಷದ
ಮುಂಡೆಯರು ಖಳನಟ್ಟಿಗಾಣುತ
ದಿಂಡುಗೆಡೆದರು ಮೇಲೆ ಬಿದ್ದಳುತಳುತ ಹೊರಳಿದರು ॥
ಮುಂಡದಿಂದೊಗುತಿಪ್ಪ ನೆತ್ತರ
ಖಂಡವನು ಸೆರಗಿಂದ ತೊಡೆವುತ
ತುಂಡುಗಳೆದಿಹ ತೋಳು ತಲೆಗಳ ಕೂಡಿ ನೋಡಿದರು ॥ ೨೨ ॥

ತೊಡರನೆಸೆವಾಂಘ್ರಿಯನು ಕೈಯಲಿ
ಹಿಡಿದು ಮುಂಡಾಡಿದರು ಪಟ್ಟದ
ಮಡದಿ ದೇವರ ಹಾಹೆಗಾಣುತ ಮನದಿ ಮರುಗಿದಳು ॥
ಮಿಡುಕಿದಳು ಕಂಗೆಟ್ಟು ಬಸುರನು
ಬಡಿದುಕೊಂಡಳು ಬಾಯ್ಗೆ ಬೀದಿಯ
ಹುಡಿಯ ಹೊಯ್ದಳು ಗೋಣ ಕೊಯ್ದಳು ಪತಿಯೆ ಸದುಗತಿಯೆ ॥ ೨೩ ॥

ಗುರುವದೇತಕೆ ತಿಥಿಯ ಹೇಳನು
ಹರನು ಹರಸಲದೇಕೆ ಬಾರನು
ಸರಸಿಜಾಸನನಕ್ಷತೆಯ ಕೊಡಲೇಕೆ ಬರಲೊಲ್ಲ ॥
ಸುರಪ ಕುಸುಮವ ತಾರನೇತಕೆ
ವರುಣನುದುಕವ ನಡೆಸನಕಟಾ
ಸುರರ ನೆತ್ತಿಯ ಶೂಲ ಮುರಿದುದೆ ಭಾಪುರೇ ವಿಧಿಯೆ ॥ ೨೪ ॥

ನಿರುತಿ ಕಪ್ಪವ ತಾರನೇತಕೆ
ಮರುತನೇತಕೆ ತಾಳವೃಂತವ
ತಿರುಹಲೊಲ್ಲನು ಜವನ ಜಂಗುಳಿ ಕಾಯ ಬರಲೊಲ್ಲ ॥
ತರಣಿಯಂಜದೆ ಬೆಳಗಿದನಲಾ
ಸ್ಮರನ ಕುಂಟಣಿಯಿಲ್ಲ ನೋಡಾ
ಹರಹರಾ ವಿಭಿಷಣನು-ಸಾಧಿಸಿ ಕೊಲೆಯ ತಂದನಲ ॥ ೨೫ ॥

ಹೇಳಿದನು ಮಾರೀಚ ಬುದ್ಧಿಯ
ಹೇಳಿದನು ಘಟಕರ್ಣ ವಿಭಿಷಣ
ಸಾಲೆ ತಿಳುಹಿದಳತ್ತೆಯೆಂದಳು ವಿವಿಧ ನೀತಿಗಳ ॥
ಮೇಲೆ ಹೆಮ್ಮೃಗ ಮಾಲ್ಯವಂತನು
ಬಾಳುವಾಶೆಯೊಳಾನು ಹೇಳಿದೆ
ಕೇಳದಕಟಾ ಪತಿಯೆ ಕೆಡಿಸಿದೆಯೆಂದಳಾ ರಾಣಿ ॥ ೨೬ ॥

ಆದಿನಾರಾಯಣನ ರೂಪದಿ
ಮೂದಲಿಸಿ ರಣರಂಗ ಮಧ್ಯದಿ
ಕಾದಿ ಗೆಲಿದರೆ ದೇವತನವೆಂಬುದನು ಬಿಸುಟು ॥
ಮೇದಿನೀಶ್ವರನಾಗಿ ಕಪಟದ
ಹಾದಿಯಲಿ ಕೊಲಲೇಕೆಯೆನುತವೆ
ಮೂದಲಿಸಿದಳು ರಾಣಿ ರಾಮನ ಕಂಡು ಖತಿಗೊಂಡು ॥ ೨೭ ॥

ಅತ್ತಿಗೆಯ ಜನನಿಯರ ನುಡಿಗೇ
ಳುತ್ತ ಕತ್ತಿತು ಬಸುರು ವಿಭಿಷಣ
ಚಿತ್ತಚಂಚಲನಾಗಿ ಕಳವಳಿಸುತ್ತ ಮೊರೆಯಿಡಲು ॥
ಅತ್ತು ಬಸುರನು ಹೊಡೆದು ಮಾಯದಿ
ಮತ್ತಕಾಶಿನಿಯೆಂದ ಮಾತಿಗೆ
ತಿತ್ತು ಮನವನು ಮೂರ್ಛೆಗೈದಿದನಾ ವಿಭೀಷಣನು ॥ ೨೮ ॥

ಅನುಜ ಜಾಂಬವ ತರಣಿನಂದನ
ಹನುಮ ಮುಖ್ಯರ ಕೂಡಿಕೊಂಡಾ
ವನಜಲೋಚನ ತಿಳುಹಿ ಸಂತೈಸಿದನು ವಿಭಿಷಣನ ॥
ಮನದ ದುಗುಡುವ ಬಿಟ್ಟು ಕಳೆಯಾ
ದನುಜಗಾವುದು ಕೊರತೆ ನೋಡಲು
ಜನಿಸಿದಾತಗೆ ಮರಣ ತಪ್ಪದು ಮರುಗಬೇಡೆಂದ ॥ ೨೯ ॥

ಜಲಜನಾಭನು ಕಂಡು ಚಿಂತಿಸಿ
ತಿಳುಹಿ ದನುಜನ ತಾಯಿಗೆಂದನು
ಅಳಲಿದರೆ ಖಳನೆದ್ದು ಬಹನೇ ಮಾಣಿ ಶೋಕವನು ॥
ಕುಲವನುದ್ಧರಿಸುವನು ಪುತ್ರನು
ಹಲವು ಗುಣಸಂಪನ್ನನದರಿಂ
ದುಳಿದನೀತನ ನೋಡಿ ಮರೆಯೌ ಹೋದ ಕುವರನನು ॥ ೩೦ ॥

ಕುಲಕೆ ಕುಂದನು ತಪ್ಪ ಮಕ್ಕಳು
ಅಳಿದರೆಂದೇ ಶೋಕಗೊಂಬರೆ
ತಿಳಿದು ಹಿರಿಯಳೆ ಮಾಣಿದೇನೌ ನೀನು ಮರುಳಹುದೇ ॥
ಎಲೆ ಸುಲೋಚನೆ ದುರುಳ ರಾವಣ
ತಲೆಗೆ ಹೊಲ್ಲೆಹ ತಪ್ಪನದರಿಂ
ದಳಿದು ಮಾಡಿದ ಲೇಸನೆಂದಾ ಸತಿಯ ತಿಳುಹಿದನು ॥ ೩೧ ॥

ತನಗೆ ಸಹಗಮನಕ್ಕೆ ನೇಮವ
ದನುಜನಗ್ಗದ ರಾಣಿಯುಳಲುತ
ವನಜನಾಭನ ಬೇಡುತಿರಲರವಿಂದಲೋಚನನು ॥
ದನುಜನೊಡನನಲಪ್ರವೇಶವು
ನಿನಗೆ ಘಟಿಸದು ನೀನಯೋನಿಜೆ
ಯೆನುತ ಸಂತೈಸಿದನು ರಾಘವನಾ ಮಹಾಸತಿಯ ॥ ೩೨ ॥

ದನುಜನಟ್ಟಿಯ ಕಂಡು ರಕ್ಕಸ
ವನಿತೆಯರು ಪರಿತಾಪಗೊಳುತಿರೆ
ಮನವ ದುಗುಡವ ಬಿಟ್ಟು ಸಂಸ್ಕರಿಸುವುದು ಬೇಗದಲಿ ॥
ಇನಿತು ತಿಳಿದರು ಮರುಳುಗೊಂಬರೆ
ಯೆನಲು ಕೇಳುತ್ತಾ ವಿಭೀಷಣ
ದನುಜ ವಿಪ್ರರು ಸಹಿತ ವೇದೋಕ್ತದಲಿ ದಹಿಸಿದನು ॥ ೩೩ ॥

ಉದಕ ತಿಲಶ್ರಾದ್ಧಾದಿಕಂಗಳ
ವಿದಿತವೆನೆ ನಡೆಸಿದನು ನಾಕದಿ
ಸದುಗತಿಯು ಸಲುವಂತೆ ನವವಿಧ ದಾನಮಾನಗಳ ॥
ಮುದದೊಳೆಲ್ಲಾ ದ್ವಿಜರಿಗಿತ್ತನು
ಪದುಮನಾಭನ ಭಕ್ತನಂದಾ
ಸದನವನು ಹೊರವಂಟು ಬಂದನು ರಾಮನಿದ್ದೆಡೆಗೆ ॥ ೩೪ ॥

ಚರಣ ಕಮಲಕ್ಕೆರಗೆ ಭಕ್ತನ
ಹರಸುತವೆ ಸಿರಿರಾಮನೆತ್ತಿದ
ಹಿರಿದು ಕರುಣದಿ ಕಂಗಳುದಕವ ತೊಡೆದು ಪ್ರೈಪಡವಿ ॥
ಶಿರದಲಭಯುವನಿಟ್ಟು ಮನದಲಿ
ಬರಿದೆ ಚಿಂತಿಸಬೇಡಯೆಂದಾ
ಸಿರಿ ಮನೋಹರಮೂರ್ತಿ ತಿಳುಹಿದನಾ ವಿಭೀಷಣನ ॥ ೩೫ ॥

ಹರಿಯೆ ನೀನರಿಯದ ವಿಚಿತ್ರವು
ಧರಣಿಯೊಳಗಿಲ್ಲಾದೊಡೆಮ್ಮೊ
ಪುರದ ಸಿರಿಯನು ನೋಡಬೇಕೆಂದಾ ವಿಭೀಷಣನು ॥
ಕರಯುಗವ ಮುಗಿದೆರಗಿ ಜಾಂಬವ
ಹರಿಜ ಹರಿಸುತ ಹರಿಸಖನಸುತ
ವೆರಸಿ ಲಂಕೆಯ ಹೊಕ್ಕ ರಾಘವನನುಜನೊಡಗೂಡಿ ॥ ೩೬ ॥

ಕೇರಿಗಳ ಶೃಂಗರಿಸಿ ರತುನದ
ತೋರಣಂಗಳವೋರಣಂಗಳ
ಸಾರ ಪನ್ನೀರುಗಳ ಚಳೆಯದಿ ಕಲಶ ಕನ್ನಡಿಯ ॥
ಕೇರಿಗಳ ಮನೆಮನೆಯ ಬಾಗಿಲ
ಲಾರತಿಯ ನವರತುನದೊಡಿಗೆಯ
ನಾರಿಯರ ಸಂಗೀತ ಮಂಗಳ ಘೋಷವೆಸೆವುತಿರೆ ॥ ೩೭ ॥

ಹೊಗೆಯನುಷ್ಣವನುಳಿದ ವಹ್ನಿಯ
ಬಗೆಯೊ ತಾಪವನುಳಿದ ದಿನಕರ
ಜಗವೊ ಹಿಮವನು ಬಿಟ್ಟ ಚಂದ್ರನ ಬಿಂಬದೋರಣವೊ ॥
ಜಗವನೆಲ್ಲವನುಂಟುಮಾಡಿದ
ನಿಗಮವಂದ್ಯನ ಬೆರಳು ಬಂದುದು
ಮೊಗಕೆ ಮಕುಟವನೊಲೆದು ರಾಘವ ಕೌತುಕಂಬಟ್ಟ ॥ ೩೮ ॥

ರಾವಣನ ಭವನವನು ಹೊಕ್ಕಾ
ದೇವ ರಾಘವ ಮನದಿ ಮರುಗಿದ
ದೇವಿಗಳುಪಿಯೆ ಸಿರಿಯ ನೀಗಿದನಕಟ ದಶಗಳನು ॥
ಈ ವಿಭವವೀ ಬಲುಹು ಚೆಲುವಿಕೆ
ಯಾವ ದೇವರಿಗಿಹುದು ಜಗದಲಿ
ರಾವಣಗೆ ಸರಿಯಿಲ್ಲ ಶಂಕರನಾಣೆ ದಿಟವೆಂದ ॥ ೩೯ ॥

ನೋಡಿ ದನುಜಾಲಯುವ ಕಪಿ ಬಲ
ಕೂಡಿ ಹೊರವಂಟಸುರಮರ್ದನ
ಬೀಡಿಗೈದಿದ ಮರಳಿ ಮನ್ನಿಸಿ ಮಾತಳಿಯ ಕಳುಹಿ ॥
ಹಾಡಿ ಹರಸುತ್ತಿರ್ದರಮರರು
ನೋಡಿ ನಲಿ ನಲಿದಾಡುತಿರ್ದುದು
ಓಡುಗಳಿತನ ಬಿಟ್ಟುದೆಂದುದು ಹರಿಯ ಕರುಣದಲಿ ॥ ೪೦ ॥

ಓರಣದಿ ಕುಣಿದಾಡೆ ನಾಕದ
ನಾರಿಯರು ಸುಮನೌಘ ವರ ಸುಮ
ಸಾರ ವೃಷ್ಟಿಗಳೆರೆಯೆ ಮೊಳಗಿತು ಶಂಖ ಭೇರಿಗಳು ॥
ಮಾರಪಿತ ನಮಗೊಲಿದ ನಮ್ಮ ಮ
ನೋರಥಂಗಳು ಸಾರ್ದುದೆಂದಾ
ಪೌರ ವನಿತೆಯರೊಲಿದು ತಂದರು ಮಂಗಳಾರತಿಯ ॥ ೪೧ ॥

ಮಂಗಳಂ ಶ್ರೀ ರಾಮಚಂದ್ರಗೆ
ಮಂಗಳಂ ಮುನಿವಂದ್ಯ ಚರಣಗೆ
ಮಂಗಳಂ ಸುರವೌಳಿ ವಂದಿತ ಪಾದ ಪಂಕಜಗೆ ॥
ಮಂಗಳಂ ಮರೆಹೊಕ್ಕ ಶರಣ ಜ
ನಂಗಳಭಿಮತವೀವ ದೇವಗೆ
ಮಂಗಳಾಂಗಿಯರೆತ್ತುತಿರ್ದರು ಮಂಗಳಾರತಿಯ ॥ ೪೨ ॥

---

## ೪೩ನೇ ಸಂಧಿ

ಪಲ್ಲ ॥ ಗರಳ ಸುಧೆ ಪುರಿಶ್ಚೈತ್ಯ ಪಜಹರಿ
ಹರರು ಭೃತ್ಯರು ಸತ್ಯವಂತರಿ
ಗರಿದದಾವುದುಯೆನಲು ಪಡೆದಳು ದೇವಿ ಹರಿಯೊಲಪ ॥

ಪದ ॥ ಇಂತು ಪುರಜನ ಪರಿಜನಗಳಿಗ
ನಂತ ಸುಖಗಳನಿತ್ತು ಕರುಣದಿ
ಕಂತುಪಿತನಂದೊಲಿದು ನೆರೆ ಭೂಭಾರವನು ಇಳುಹೇ ॥
ಸಂತಸವನೀವುತ್ತ ಕಪಿಗಳ
ತಿಂಥಿಣಿಯು ಮಧ್ಯದಲಿ ಕುಳ್ಳಿ
ರ್ದಂತು ಹನುಮನ ಕರೆದು ನುಡಿದನು ದಾನವಧ್ವಂಸಿ ॥ ೧ ॥

ವನಜಲೋಚನ ರಾಮಚಂದ್ರನು
ದನುಜರಾಯನ ಗೆಲಿದನೆಂದಾ
ಜನಕನಂದನೆಗೆನ್ನು ಹೋಗೈ ಹನುಮ ಬೇಗದಲಿ ॥
ಜನರ ನುಡಿಗಾಂ ಖಳನ ಕೊಂದೆನು
ಜನಕಸಂಭವೆಯಿನ್ನು ತನ್ನಯ
ಮನವು ಬಂದಂತಿರಲಿಯೆಂದನು ರಾಯ ರಾಘವನು ॥ ೨ ॥

ಜೀಯೆನುತ ಹರಿದೈದಿ ರಾಮನ
ಜಾಯೆಗೆರಗಿದ ಕೈಯ ಮುಗಿದೆಲೆ
ತಾಯೆ ಬಿನ್ನಹ ರಾಮ ದೈತ್ಯನ ಗೆಲಿದನೆನೆ ಕೇಳಿ ॥
ಆಯುವಂತನೆ ಬಾಳು ದನುಜನಿ
ಕಾಯ ಮಸ್ತಕಶೂಲ ಬಾಳೆನು
ತಾಯತಾಂಬಕಿ ಹರಸೆ ಮಾರುತಿ ಹೇದನ ವಿವರಿಸಿದ ॥ ೩ ॥

ನೆರೆದ ಕಪಿನಾಯಕರ ಕೈಯಲಿ
ಮರಣವಟ್ಟರನೆಣಿಸ ತೀರದು
ಅರಿಯ ಮಗನತಿಕಾಯಯಿಂದ್ರಾರಾತಿಯಿಬ್ಬರನು ॥
ಧುರದಿ ಲಕ್ಷ್ಮಣ ಗೆಲಿದ ಮತ್ತಾ
ದುರುಳ ಸಚಿವನು ಮಾರಿಮುಖನನು
ಉರುವ ರಾವಣ ಕುಂಭಕರ್ಣರ ಗೆಲಿದ ಸಿರಿರಾಮು ॥ ೪ ॥

ಮುನಿದವರ ಹಣೆ ಲಿಪಿಯು ತೊಡೆದನು
ದನುಜಹರನೆನ್ನರಸ ಬಲ್ಲೆನು
ಜನಕಸುತೆಯನು ಹೋಗಿ ನೀನೊಡಗೊಂಡು ಬಾಯೆಂದು ॥
ನಿನಗೆ ನೇಮವನಿತ್ತನೇ ಹರಿ
ಯೆನಲು ನೇಮವನೀಯನಿನ್ನೂ
ಜನನಿ ನೇಮವ ಪಡೆದು ಬಹೆ ನಾನೆನುತ ನಂಬಿಸಿದ । ೫ ॥

ಹಿರಿದು ಸಾಯಸಗೊಂಡು ನಿಮಗಾ
ಗರಿಗಳೆಲ್ಲರ ಕೊಂದು ನಿಮ್ಮನು
ಕರೆಸದುಳಿವನೆ ದೇವಿಯುಮ್ಮಳಗೊಳುವಳೆಂದೆನ್ನ ॥
ಭರದೊಳಟ್ಟಿದನಿಲ್ಲಿ ತಳುವಿದೊ
ಡರಸ ಕನಲುವನೆನಲು ಮಗನೇ
ಹರಿಯ ಚಿತ್ತವ ಪಡೆದು ಕರಸೆನಲೆರಗಿ ಹೊರಪಂಟ ॥ ೬ ॥

ಉರಿದು ನಂದಿದ ಶಿಖಿಯು ಬಗಿವೆ
ಚ್ಚರಿಸಿದಂತಾ ದೇವಿ ಮನದಲಿ
ಮರುಗಿದಳು ಹರಿ ಕೃಪೆಯು ಮಾಡುಗೊ ಮಾಡನೋಯೆಂದು ॥
ಸೆರೆಯೊಳಿನ್ನೆಗ ನವೆದಳೆನುತವೆ
ಕರುಣಿಸುವನೋ ಮೇಣು ಮರೆವನೊ
ಅರಿಯಬಾರದು ದೈವವೇ ಗತಿಯೆಂದಳಿಂದುಮುಖಿ ॥ ೭ ॥

ಹರಿದು ಬಂದಾ ಹನುಮ ಚರಣ
ಕ್ಕೆರಗಿ ಹೊರಳುತ್ತಿರಲು ರಾಘವ
ಕರದಿ ಕರುಣದೊಳೆತ್ತುತೇನೈ ಹನುಮ ಹೇಳೆನಲು ॥
ತರುಣ ಹೇಳೆನ್ನರಸ ಹೇಳೆ
ನ್ನರುಕೃಪಾನಿಧಿ ಹೇಳು ಹೇಳೆನೆ
ಕರವ ಮುಗಿದಾ ಹನುಮ ಬಿನ್ನಹ ಮಾಡಿದನು ಹರಿಗೆ ॥ ೮ ॥

ಅರಸ ಹಿಂದೆನಗೀವೆನೆಂದಾ
ವರವ ಕರುಣಿಸಬೇಹುದೆಂದಾ
ತುರದಿ ನುಡಿದನು ನಿಮ್ಮ ಚರಣವ ಕಾಂಬ ತವಕದಲಿ ॥
ಹರಣ ಮಾತ್ರವು ದೇವಿಗಿಪ್ಪುದು
ಕರೆಸ ಬೇಹುದು ದೇವ ನಿಮ್ಮಡಿ
ಗರವಿದೇ ತನಗೆನಲು ನಗುತೊಡಗೊಂಡು ಬಾಯೆಂದ ॥ ೯ ॥

ಪರಿದು ಹನುಮ ವಿಭೀಷಣಾದ್ಯರು
ಸಿರಿಯ ಚರಣಕ್ಕೆರಗೆ ಬಹಳೈ
ಶ್ವರಿಯವಂತನೆ ಬಾಳು ಕಲ್ಪಾಂತರವ ಹಲವೆನುತ ।'
ಹರಸುತಿರೆ ಹನುಮಂತ ಮುದದಲಿ
ತರಣಿಸುತ ನಳ ನೀಲ ಜಾಂಬವ
ಸರಸಿಜಾಕ್ಷನ ಭಕ್ತರಿವರೆಂದೆನುತ ತೋರಿಸಿದ ॥ ೧೦ ॥

ಜನನಿ ಬಿನ್ನಹವೆನ್ನ ಹಿರಿಯನು
ದನುಜ ಭಾವದಿ ಕೆಟ್ಟು ನುಡಿದುದ
ನೆನೆಯಲಾಗದು ನಿಮ್ಮ ಮನದಲಿ ಸಲೆ ಗುಣಾಗುಣವ ॥
ಕನಕ ಶಿಖಿಯಲಿ ಕಾಸಲೊರೆಯಲು
ವಿನುತ ನಿಜವನು ಬಿಡದ ಪರಿಯಲಿ
ಮುನಿ ಸಮಾಹೃತ ವಂದ್ಯ ಬರ ಹೇಳಿದನು ನಿಮ್ಮವನು ॥ ೧೧ ॥

ಹರ ಸದಾಶಿವ ಕಡು ಕೃಪಾಳುಗ
ಳರಸ ಕರುಣಿಸಿ ಕರೆಯಿಸಿದನೆನೆ
ತರುಣ ಶಶಿ ಪರಿಪೂರ್ಣ ಚಂದ್ರಮನಾಗಳಾದಂತೆ ॥
ಹರುಷದಲಿ ಹೊರೆಯೇರಿ ಹಿಗ್ಗಿದ
ಳರಸಿ ಹೆಚ್ಚಿದಳಣುವ ನಾನೀ
ಪರಿಯಲೈತಹೆ ಪಡೆಯೆ ಹರಿಯ ಕಟಾಕ್ಷವೀಕ್ಷಣವ ॥ ೧೨ ॥

ವರನ ಬಳಿಗೈತರುತ ಮಲಿನವ
ಧರಿಸಲಾಗದು ಶಾಸ್ತ್ರ ವಚನವು
ವರ ವಿಭೂಷಣದಿಂದಲಂಕೃತೆಯಾಗಬೇಕೆಂದು ॥
ಚರಣದಲಿ ಮೈಯಿಕ್ಕಿ ವಿಭಿಷಣ
ಹಿರಿದು ಬೇಡಿದೊಡಾಗಲಾಗಲಿ
ಕೆರಳುವನೊ ಹರಿಯೊಲಿವನೋಯೆಂದಳಿಂದುಮುಖಿ ॥ ೧೩ ॥

ಸರಮೆ ಮಜ್ಜನಕೆರೆಯ ವಸ್ತ್ರಾ
ಭರಣ ಗಂಧವ ತರಿಸಿ ವಿಭಿಷಣ
ಸಿರಿಗೆ ಕೊಡಿಸಿದನುಟ್ಟು ತೊಟ್ಟಾ ಶುಭ್ರ ತೊಡಿಗೆಯಲಿ ॥
ಸಿರಿಯಲಂಕೃತೆಯಾಗೆ ನಾ ಹೋ
ಧಿರುರೆಯೆನುತುಗ್ಗಡಿಸಿ ಸೀತೆಯ
ಸುರುಚಿ ಪಲ್ಲಕಿಯಲ್ಲಿ ಬಿಜಯಂಗೈಸಿ ತರುತಿರಲು ॥ ೧೪ ॥

ಧರಣಿಸುತೆ ಹೊರವಂಟೊಡಾ ವನ
ತರು ಲತಾವಳಿ ಖಗ ಮೃಗಂಗಳು
ಮರುಗುತಿರ್ದುವು ಸಿರಿಯನಗಲಿದೆವಕಟ ಹಾಯೆಂದು ॥
ಪರಮ ಮಂಗಳನಾಮ ಲಕ್ಷ್ಮೀ
ಧರ ಮುರಾರಿ ಮುಕುಂದ ಕರುಣಾ
ಶರಧಿ ರಕ್ಷಿಸೆನುತ್ತ ಬರುತಿರೆ ದೇವಿ ಹರಿಯೆಡೆಗೆ ॥ ೧೫ ॥

ಉರುವ ಪೂಗಣೆ ನಾಟಿ ರಾಘವ
ಬರವ ಹಾರುತ್ತಿರಲು ಜಾನಕಿ
ಬರಲು ಮನವೊಳಸರಿದುದು ಬಹುಳ ಚಂದ್ರಕಲೆಯಂತೆ ॥
ಕರಗಿ ಸೀಕರಿಯಾಯ್ತು ನೇಹವು
ಕರುಣೆ ಕಡಲಾರಿತ್ತು ನೇತ್ರಾ
ತುರನು ದೀಪವ ಕಾಂಬ ಪರಿಯಲಿ ಕಂಡ ದೇವಿಯನು ॥ ೧೬ ॥

ಕಷ್ಟದೆಸೆಯಡಸಿರಲು ಮೋಹದ
ದೃಷ್ಟಿ ಮುಗಿದುದು ಕಮಲ ಕರ್ಣಿಕೆ
ಗಿಷ್ಟವೆನಿಸಿದ ಭಾನು ಬೀದಿಯಲಿರ್ದ ಕಮಲವನು ॥
ಸುಟ್ಟು ಕಳೆಯನೆ ತಾವು ತಪ್ಪಿದೊ
ಡಿಷ್ಟತನ ವಿಪರೀತ ರಾಘವ
ಸಿಟ್ಟುಗೊಂಡನು ಕಂಡು ಕೋಪಿಸುತಡ್ಡಮೊಗನಾದ ॥ ೧೭ ॥

ಸೀತೆ ತೆಂಕಲುಯೆರಗಿ ನಿಂತಿರೆ
ಭೂತಳೇಶ್ವರ ಮುರಿದ ಪಡುವಲು
ಸೀತೆ ಪಶ್ಚಿಮವಾಗಿ ತಿರುಗಲು ದೇವ ನೋಡದಿಹ ॥
ಸೀತೆ ಬಡಗಲು ಎರಗಿ ನಿಂತರೆ
ಭೂತಳೇಶ್ವರ ಮುರಿದ ಮೂಡಲು
ಸೀತೆ ಕಂಡರೆ ರಾಮ ನೋಡಿದ ಮೇಘಮಂಡಲವ ॥ ೧೮ ॥

ಎರೆಯನಿದಿರಲಿ ಸೀತೆ ಕೈಮುಗಿ
ದೆರಗಿ ನಿಂತಿರೆ ಸಕಲ ಮರ್ಕಟ
ರೆರಗಿ ನೋಳ್ಪುದ ಸುತ್ತುಮುತ್ತಲು ಕಂಡು ವಿಭಿಷಣನು ॥
ಜರೆದು ಕಟ್ಟಿಗೆಗೊಂಡು ಝುಂಕಿಸಿ
ತೆರಹುಗೊಡಿ ಸಾಕೆಂದು ನೂಕುತ
ತರುಬಿದರೆ ಹರಿ ಕಂಡು ಕೊಲ್ಲದಿರೆಲವೊ ಸಾಕೆಂದ ॥ ೧೯ ॥

ಮದುವೆ ಮಂಟಪದಲ್ಲಿ ಮೌಂಜೀ
ಸದನದಲಿ ಸಭೆಯಲ್ಲಿ ಸಂಕುಲ
ಕದನ ಪುತ್ರೋತ್ಸವದ ದೆಸೆಯಲಿ ದೇವಯಾತ್ರೆಯಲಿ ||
ಸುದತಿಯರು ಜನಜಾಲವಲಿ ತಿರು
ಗಿದರೆ ಕೊರತೆಗಳಿಲ್ಲ ಕಪಿಗಳ
ಸದೆಯಲೇತಕೆ ನಿಲ್ಲು ನಿಲು ನೀ ನೋಡಲವರೆಂದ || ೨೦ ||

ಮಡದಿಯನು ಇಪ್ಪತ್ತು ಕಣ್ಣಲಿ
ದಡಿಗ ರಾವಣ ಬಿಡದೆ ನೋಡಿದ
ಪಡೆಯನೇತಕೆ ಜಡಿವೆ ನೋಡಿದೊಡೇನು ಕುಂದಿಪಳ ||
ಒಡನೆ ಸಾಯಳು ಸಾಯಲೆಮ್ಮೊಡ
ನೊಡನೆ ಹುಟ್ಟಳು ಹುಟ್ಟಲಿವದಿರ
ಜಡಿಯದಿರು ಪಡೆಯೊಳಗದಾವನು ದ್ರೋಹಿಯಿಲ್ಲೆಂದ || ೨೧ ||

ಹನುಮನೆಮ್ಮಲಿ ತಪ್ಪು ನುಡಿವನೆ
ವನಿತೆ ಕರ ಬಡವಾದಳಾದಳು
ಇನಿತು ದಿನವುಪವಾಸ ಜೀವನಮಾತ್ರವಿದ್ದುದಲ ||
ನೆನಹು ದೊಡ್ಡಿತು ನಮ್ಮ ಹಂಬಲು
ಮನದೊಳುಂಟಹುದಹುದು ಕಾಣೆವೆ
ಜನಕಜಾತೆಗೆ ಹೃದಯದುಮ್ಮಳ ಘನವು ದಿಟವೆಂದ || ೨೨ ||

ನಿನ್ನ ಕಪಟವನರಿತೆ ವನದೊಳ
ಗೆನ್ನನಟ್ಟಿದೆ ಮೃಗದ ಬಳಿಯಲಿ
ಬೆನ್ನಲನುಜನನೊಲ್ಲದಿದ್ದರು ಬೈದು ನೂಕಿದೆಲ ||
ಬಿನ್ನಣದಲೋಡುತ್ತ ದನುಜನ
ಬೆನ್ನ ಹತ್ತಿದೆ ಸಾಕು ನಡೆ ನಡೆ
ನಿನ್ನ ಮನಬಂದತ್ತ ಚಿಂತಿಸಬೇಡ ಹೋಗೆಂದ || ೨೩ ||

ಬೇಡ ಮನದಲಿ ಚಿಂತೆ ಹನುಮನ
ಬೇಡಿಕೊಂಡೊಡೆ ಮುದ್ದು ತಂದಪ
ಕೂಡೆ ದನುಜನನೆತ್ತಿ ಕೊಡುವನು ಸುಖದಲಿರಬಹುದು ||
ನೋಡುವವರಿಗೆ ಕರುಣವಹ ಪರಿ
ಮಾಡುವೀ ಕಾರ್ಪಣ್ಯವೇತಕೆ
ಜೋಡೆ ನಿನ್ನಂತಪ್ಪ ನಾರಿಯರುಂಟೆ ಭುವನದಲಿ || ೨೪ ||

ನಾರಿಯರ ನಂಬಿದರೆ ಕುಲವನು
ನೀರೊಳಗೆ ಹರಹುವರು ಹರಿತಹ
ನೀರು ಕೊರೆವುದು ದಡವನೆರಡನು ಸ್ವೈರ ವೃತ್ತಿಯಲಿ ॥
ನಾರಿ ನರಕಕೆ ದಾರಿ ದುರ್ಜನ
ಕಾರಿ ಕುಲ ಸಂಹಾರಿ ಪುಣ್ಯ ನಿ
ವಾರಿ ಪಾಪಾಚಾರಿಯೆನೆ ತಾನೆಂದಳಾ ಸೀತೆ ॥ ೨೫ ॥

ದೇವ ನೀನೇ ಬಲ್ಲೆಯೆಲ್ಲಾ
ಜೀವರಂತರ್ಯಾಮಿ ಚಿತ್ತದ
ನೋವ ಹೇಳುವೊಡಳವೆ ಮತ್ಕರುಣೋಪತಾಪವನು ॥
ದೇವರರಿಯರೆ ಮುನಿದೊಡೆನ್ನನ
ದಾವ ಸಲಹುವ ತನಗೆ ಗತಿಯಿ
ನ್ನಾವುದಕಟಾ ಬರಿದೆ ಕಾಡದೆ ಕೃಪೆಯ ಮಾಡೆಂಬೆ ॥ ೨೬ ॥

ಕುಡಿಯ ಬಹುದಾ ಬಿಸಲದೊರೆಯನು
ಹಡೆಯ ಬಹುದಾ ಶಶವಿಷಾಣವ
ಬಿಡದೆ ಮಳಲಲಿ ತೈಲವಡಸಲು ಬಹುದುಪಾಯದಲಿ ॥
ಕಡಲನೀಸಲು ಬಹುದು ಮೂಕನ
ನುಡಿಸತೀರುಗು ನಿಮ್ಮ ಚಿತ್ತವ
ಪಡೆವುದೆಂತೋ ದೇವ ಕೃಪೆಮಾಡೆಂದಳೆಂದುಮುಖಿ ॥ ೨೭ ॥

ಅರಸ ಬಿನ್ನಹ ಶಪಥ ಮುಖದಲಿ
ಸಿರಿಗೆ ಶಿಖಿ ಹೊದ್ದಿದರೆ ಬಿಡುವುದು
ಬರಿದೆ ತೊರೆವುದಕೀರ್ತಿ ಬಿನ್ನಹಮಾಡಲಂಜುವೆನು ॥
ಹರಿಯೆಯೆಂದು ವಿಭೀಷಣಾಂಕನು
ಚರಣಕಮಲವ ಪಿಡಿದು ಬೇಡಲು
ಉರಿಯ ಹೊಕ್ಕುರಿಯದೊಡೆ ಬಳಿಕೊಳಗೊಂಬೆ ತಾನೆಂದ ॥ ೨೮ ॥

ಲೇಸುಮಾಡಿದಿರೆನ್ನ ಚಿತ್ತ
ಕ್ಲೇಶ ಬೀತುದು ನಾನು ಬದುಕಿದೆ
ದೋಷಿಯಿರಲಗ್ನಿ ಪ್ರವೇಶವೆ ಸಾಧು ಪಂಥವದು ॥
ದಾಶರಥಿಯನು ಧರ್ಮದೋಷವಿ
ದೂಷಿತೆಯನೊಳಗೊಂಡನೆಂದಿಳೆ
ದೂಷಿಸದೆ ಹನುಮಂತ ಮಾಡಿಸು ಅಗ್ನಿಕೊಂಡವನು ॥ ೨೯ ॥

ಎಂದೊಡಾ ಕಪಿ ವೃಂದ ಕಟ್ಟಿಗೆ
ಯಿಂದ ಕೊಂಡದಲುರಿಯು ಬೆಳಗಿಸೆ
ಮುಂದೆ ದಳ್ಳುರಿ ನಭವನಡರಿತು ಕಂದಿತಂಬರವು ॥
ಇಂದುಮುಖಿ ಬಲವಂದು ಚರಣ
ದ್ವಂದದಲಿ ಪೊಡವಂಟು ಕೈಮುಗಿ
ದೆಂದಳವಧರಿಸರಸ ಕರುಣದೊಳೆನ್ನ ಬಿನ್ನಪವ ॥ ೩೦ ॥

ರವಿ ಹುತಾಶನ ಸೋಮನಂಬರ
ಪವನ ಜಲ ದಿವ ರಾತ್ರಿ ಕಾಲನು
ಭುವನ ಸಂಧಿಗಳೆರಡು ತನ್ನಯ ಹೃದಯದಧಿದೈವ ॥
ಇವರ ವಂಚಿಸಿ ಪುಣ್ಯ ಪಾಪವ
ನವನಿಯಲಿ ಸಲೆ ಮಾಡತೀರದು
ಶಿವನು ಬಲ್ಲನು ದೈವವೇ ಗತಿಯೆಂದಳಿಂದುಮುಖಿ ॥ ೩೧ ॥

ಉಟ್ಟ ಸೆರಗುರಿ ಸೋಂಕೆ ಮುಡಿ ಕಿಡಿ
ಮುಟ್ಟದರೆ ಹಣೆಯಲ್ಲಿ ತಿಲಕದ
ಬೊಟ್ಟು ಬೆವರಿದೊಡಾನು ಪಾತಕಿ ಭುವನ ಜನವರಿಯೆ ॥
ಬಿಟ್ಟು ಕಳೆವುದು ಹೇಮವನು ಪುಟ
ವಿಟ್ಟ ಪರಿಯಾನಾದೆನಾದೊಡೆ
ಸಿಟ್ಟನುಳಿದೊಳಗೊಳ್ಳು ರಾಘವ ಎಂದಳಿಂದುಮುಖಿ ॥ ೩೨ ॥

ನುಡಿಯಬಲ್ಲವಳಹುದು ಬಲ್ಲೆನು
ನಡೆದು ಶಿಖಿಯಲಿ ಹೊಗಲಿ ಲಕ್ಷ್ಮಣ
ಗೊಡವೆ ಬೇಡೆನೆ ಹೇಳಲಾರದೆ ತಮ್ಮನಳುತಿರಲು ॥
ಪೊಡವಿಸುತೆ ಕಾಣುತ್ತ ಕಿಚ್ಚನು
ನಡೆದು ಹೊಕ್ಕಳು ಬೇಗ ಶಿವ ಶಿವ
ಹಡೆದ ತಂದೆಯು ಮನೆಯ ಮಕ್ಕಳು ಹೊಗುವ ತೆರನಾಯ್ತು ॥ ೩೩ ॥

ಗೋಳಿಡುತ ಕಪಿ ಸೇನೆ ಮರುಗಿತು
ಕಾಳುಮಾಡಿದನರಸನೆನುತವೆ
ಹಾಳಿದಲ್ಲಾ ಶಿವನೆಯೆಂದುದು ಲಂಕೆಯುವರೆಲ್ಲ ॥
ಶೂಲಿ ತಲೆದೂಗಿದನು ಸುಮನಸ
ಜಾಲ ಜಯ ಜಯಯೆಂದು ಹೊಗಳೆ
ಜಪ್ವಲೆಯಲಿ ನಿಂದಿರ್ದಳವನೀತನುಜೆ ಸುಖದಿಂದ ॥ ೩೪ ॥

ಬಂದು ವಾರ್ಧಿಯ ಕಟ್ಟಿ ಕಾದಿದೆ
ವಿಂದ್ರಜಿತು ಮಾಯೆಯಲಿ ಹಾವಿನ
ಬಂಧನಕ್ಕೊಳಗಾಗಿ ಮದ್ದನು ತಿಂದು ಬದುಕಿದೆವು ॥
ತಿಂದನೆಲ್ಲರ ಕುಂಭಕರ್ಣನು
ಹಿಂದೆ ಧಾವತಿಗೊಂಡು ಫಲವೇ
ನಿಂದು ಕೆಡಿಸಿದ ರಾಮನೆಂದಳಲಿತ್ತು ಕಪಿ ಸೇನೆ ॥ ೩೫ ॥

ಒಡಲೊಡೆವ ದುಃಖದಲಿ ಲಕ್ಷ್ಮಣ
ಕೆಡಿಸಿದ್ಯೆಯೆನೆ ರಾಮ ನಾಚಿದ
ನುಡಿಯಲರಿಯದೆ ಮರುಳು ಮನುಜರ ಕರುಣಿ ನೀನೆಂದು ॥
ಸುಡುವುದೇತರ ಕರುಣ ಮೂರ್ಖರಿ
ಗೊಡೆಯ ನೀನೆನುತೊರಲಿ ಪೊಡವಿಗೆ
ಕೆಡೆದು ಹೊರಳಲು ರಾಮ ಚಿಂತಾಕ್ರಾಂತನಾಗಿರ್ದ ॥ ೩೬ ॥

ಆ ಕುಕುಸ್ಥ್ಯನು ಸುಪ್ತ ಶೋಕವ
ನೂಕಿದನು ಕಂಬನಿಯ ರೂಪದಿ
ಕಾಕು ಮಾಡಿದನೆಂದು ಮನದೊಳಗಳಲು ಮೀರುತಿರೆ ॥
ನಾಕಿಗಳು ಕಳುಹಿದರು ಮರುತನ
ಸಾಕು ಸಾಕಿನ್ನರಸ ಬಳಲಿದೆ
ಶೋಕವಡಗಲಿ ನೋಡು ನೀನಕಳಂಕ ಚರಿತೆಯನು ॥ ೩೭ ॥

ಮಿಗುವ ದಳ್ಳುರಿಯೊಳಗೆ ನಿಂತಿಹ
ಜಗದ ಮಾತೆಯ ನಿಲುವದೋರಿದ
ಜಗಕೆ ಮಾರುತ ಬಹಳದುರಿಯನು ಬಗಿದು ಮಧ್ಯದಲಿ ॥
ಜಗವುಘೇಯೆನಲಜಸುರೇಂದ್ರರು
ಹೊಗಳಿ ಪುಷ್ಪಾವಳಿಯ ಸುರಿದರು
ನಿಗಮವಂದ್ಯನು ಕಂಡನುರಿಯೊಳಗಿರ್ದ ಮೈಥಿಲಿಯ ॥ ೩೮ ॥

ಪಾವಕನು ನಿಜ ರೂಪದಿಂದಾ
ದೇವಿಯರನೊಡಗೊಂಡು ಬಂದನು
ದೇವ ನೀ ಮರುಳಾದೆ ಮನುಜಾಕಾರವನು ತಳೆದು ॥
ದೇವಿ ಯಾರೆಂದರಿಯಲಾ ನೀ
ನಾವನೆಂಬುದ ಮರೆದೆ ಶಿವ ಶಿವ
ದೈವ ಮಾಯೆಗೆ ಸಂದೊಡುಳಿದವರಳವೆ ನೋಡೆಂದ ॥ ೩೯ ॥

ಲೋಕವರಿಯಲು ಶುದ್ಧೆ ಜಾನಕಿ
ಸಾಕು ಕಾಡದೆ ಕೂಡಿಕೊಳ್ಳಿ
ನ್ನಾಕೆ ಬಳಲಿದಳೆಂದು ಪಾವಕ ಸಿರಿಯನೊಪ್ಪಿಸಿದ ॥
ಈಕೆಯಗ್ನಿಸ್ತಂಭ ಪರಿಣತೆ
ಈಕೆಯಾಕರ್ಷಣವ ಬಲ್ಲಳು
ನಾಕರಿಪುವಿನ ಕಲುಷ ದೂಷಣೆ ಘನವೆ ಹೇಳೆಂದ ॥ ೪೦ ॥

ಮರುಳುಗೊಂಡನು ರಾಮು ನೋಡಾ
ಸಿರಿಯು ಮಾಯಾ ಬಲದಿ ನಿಲುಕು
ತ್ತಿರಿಯ ಹೊಗಿಸಿದಕಾವು ಹರಿಯನು ತಿಳುಹಬೇಕೆಂದು ॥
ಕರಿವದನ ಗುಹ ವೀರಭದ್ರರು
ನೆರೆಯೆ ಪ್ರಮಥರ ಪಡೆಯುಘೋಯೆನೆ
ಹರನು ನಂದಿಯನೇರಿ ಭೂತಳಕಿಳಿದ ಸತಿ ಸಹಿತ ॥ ೪೧ ॥

ಬಂದನಜನಮರೇಂದ್ರನಂತಕ
ಬಂದ ವರುಣನು ಸೂತ ಮಾಗದ
ವೃಂದ ಹೊಗಳಲು ಗುಹ್ಯಕೇಶ್ವರ ಮುಖ್ಯ ಸುರನಿಕರ ॥
ಬಂದುದವರಿವರೆನ್ನದಪ್ಸರ
ವೃಂದ ಮನು ಮುನಿ ಮುಖ್ಯರಿಗೆ ಹರಿ
ವಂದಿಸಿದನುಚಿತೋಪಚಾರದಲವರ ಪೂಜಿಸಿದ ॥ ೪೨ ॥

ಹರನ ನೇಮದಲಾಗ ದಶರಥ
ಧರಣಿಪಾಲನು ದೇವ ಯಾನದಿ
ಧರಣಿಗಿಳಿದನು ಹರಿಯ ತಕ್ಕೈಸಿದನು ಮಮತೆಯಲಿ ॥
ಮರಳುತನವನು ಮಾಡಿ ಸೀತೆಯು
ಹಿರಿದು ಬಳಲಿಸ ಬೇಡ ಸಾಕಿಹ
ಪರದಕೀರ್ತಿಗೆ ಹಿತವೆ ಕಾಡದೆ ಕೂಡಿಕೊಳ್ಳೆಂದ ॥ ೪೩ ॥

ಎಲೆ ಜಗನ್ಮಯ ನಿನ್ನ ನಾಭಿಯ
ನಳಿನದಿಂದಾನಾದೆನದರಿಂ
ಜಲಜಸಂಭವನೆಂಬ ಹೆಸರೆನಗಾಯ್ತು ಪೂರ್ವದಲಿ ॥
ಜಲಶಯನ ನಿನ್ನೊಂದು ಕರುಣದ
ಬಲದಿ ಸೃಷ್ಟಿಯನುಂಟುಮಾಡಿದೆ
ಹಳಿಯ ಹೆಮ್ಮಗ ನಾನು ನಿಮಗೆಲೆ ತಂದೆ ಕೇಳೆಂದ ॥ ೪೪ ॥

ಪಾಲುಗಡಲಲಿ ಫಣಿಯ ಮಂಚದ
ಮೇಲೆ ಪವಡಿಸಿ ಪರಮನೆನಿಸಿದ
ಲೀಲೆಯೆತ್ತಲು ಮನುಜ ಭಾವದ ನಟನೆ ತಾನೆತ್ತ ॥
ಮಾಲತಾಂಗಿಯ ಮಮತೆಯಿಂದ ವಿ
ಶಾಲವಕ್ಷದಿ ಧರಿಸಿ ಮೆರೆವ ಕೃ
ಪಾಳುತನವೇನಾಯ್ತು ಜಯ ಜಯ ಜಯನಮೋಯೆಂದ ॥ ೪೫ ॥

ಎಲೆ ಮುರಾರಿ ಮುಕುಂದ ವೇದವ
ಕಳಲು ತಮನನು ಸೀಳ್ದೆ ಮಂದರ
ಜಲದೊಳಾಳಲು ಕೂರ್ಮ ರೂಪದಿ ಬೆನ್ನಲಾಂತೆಯಲ ॥
ಇಳೆಯನೊಯ್ದನ ಕೊಂದು ಭಕ್ತನ
ಸಲಹೆ ಕಂಭದೊಳೊಗೆದೆ ಕಪಟದಿ
ಬಲಿಯ ದಾನವ ಪಡೆದೆ ನಿನ್ನನು ಮರೆದೆಲಾಯೆಂದ ॥ ೪೬ ॥

ಭಾಪುರೇ ಜಗದೀಶ ತಪಸಿಯ
ರೂಪದಲಿ ತಲೆಗಡಿದೆಯಂದಾ
ಭೂಪರೆಲ್ಲರನಿಂದು ರಾವಣ ಲೋಕವೆಲ್ಲಸನು ॥
ತಾಪಗೊಳಿಸಲು ಬಂದು ದಶರಥ
ಭೂಪನುದುರದಲೊಗೆದು ಮಾನವ
ರೂಪನಾದೈ ತಂದೆ ಮರೆದಾ ನಿನ್ನ ಮಹಿಮೆಯನು ॥ ೪೭ ॥

ಜೋಹವನು ತೊಟ್ಟಾತ ನದರು
ತ್ಸಾಹತತ್ಪರನಾಗಿ ನಿಜವನು
ಮೋಹವೆಡೆವುದೆ ತಂದೆ ಮರೆವರೆ ನಿನ್ನ ಘನತೆಯನು ॥
ದ್ರೋಹಿ ದೈತ್ಯನ ಸೀಳಿದಮರ
ವ್ಯೂಹವನು ತಲೆಗಾಯ್ದೆ ಯೋಗಿ ಸ
ಮೂಹ ನಗದೇ ಮನುಜ ಭಾವವ ಬೀಳುಕೊಡಿಯೆಂದ ॥ ೪೮ ॥

ಧರಣಿ ಹುಯ್ಯಲನಿಡಲು ಬಂದವ
ತರಿಸಿ ದುಷ್ಟರ ಹರಿಸಿ ಲೋಕವ
ಹೊರೆದೆ ಸತ್ಯವ ಸಲಿಸೆ ವನದೊಳಗಾಯ್ತು ಹದಿನಾಲ್ಕು ॥
ವರುಷ ನೀನಿತ್ತವಧಿ ಭರತನು
ಬರವ ಹಾರುವ ಬೇಗಯೋಧಿಗೆ
ತೆರಳು ನಾಟಕ ಸಾಕು ಸತಿಯನು ಕೂಡಿಕೊಳ್ಳೆಂದ ॥ ೪೯ ॥

ತರುಣಿಯರುಗಳಲಾ ಅರುಂಧತಿ
ವರ ಸರಸ್ವತಿಯನಿಬರೀಕೆಯು
ಸರಿಗೆ ಹೋಲಿಸಬಹುದೆ ಪಾತಿವ್ರತ್ಯ ಶೀಲದಲಿ ॥
ಮರುಳಲಾ ರಘುನಾಥ ಸೀತೆಯು
ಖರೆಯದಿಂದೊಡಗೊಳ್ಳು ನೀ ಮನ
ದಿರುಹಿದರೆ ಶಿವನಾಣೆಯೆಂದಳು ಗಿರಿಜೆ ನಸುನಗುತ ॥ ೫೦ ॥

ಒರಲೆಗಳು ದಳ್ಳುರಿಯು ಕಿಚ್ಚಿಂ
ಗೆರಗಬಲ್ಲುವೆ ದನುಜ ಕಂಗಳ
ತೆರೆದು ನೋಡಲು ಬಹುದೆ ಸೀತೆಯು ಲೋಕಮಾತೆಯನು ॥
ಮರೆಯ ಮಾತೇಕಿನ್ನು ದೈತ್ಯರ
ಹೊರಿಗೆಯನು ನೀ ಮರೆದೆ ನಿನ್ನವ
ರರಿಯೆಲಾ ಜಯವಿಜಯರೆಂಬವರೆಂದ ಶಶಿಮೌಳಿ ॥ ೫೧ ॥

ದನುಜನೊಯ್ದಾ ಸತಿಯು ರಾಘವ
ಮನದ ಮೋಹದಿ ಕೂಡಿಕೊಂಡನು
ಯೆನುತ ಲೋಕವು ದೂರುಗೆಂದಾನಿನಿತು ಕಾಡಿದೆನು ॥
ಅನಲನೊಳು ಹೊಗಿಸಿದೆ ಸುರಾಸುರ
ಜನವು ಮೆಚ್ಚಲು ಶುದ್ಧೆಯಾದಳು
ಮನವ ಬಲ್ಲೆನು ಮುನ್ನ ಲೋಕವ ಮೆಚ್ಚಿಸಿದೆನೆಂದ ॥ ೫೨ ॥

ಕಾಡೆ ನಿಮ್ಮಡಿಯಾಣೆ ಸೀತೆಯು
ಕೂಡಿಕೊಂಡೆನು ಇನ್ನು ಸಂಶಯ
ಬೇಡ ಮನದಲಿ ಮೋಹವಿಲ್ಲವು ದಿಟ ವಿಚಾರಿಸಲು ॥
ಆಡುವರು ತಾನಿಲ್ಲ ಮರೆದರಿ
ದಾಡದಂತಿರೆ ಶುದ್ಧೆಯಾದಳು
ಆಡಬೇಡಾನರಿತೆನರಿತೆನು ತಿಳಿದೆ ನಾಕೆಂದ ॥ ೫೩ ॥

ಗಿರಿಶ ಕಮಲಜ ಮುಖ್ಯ ದೇವರು
ಹರಿಯ ಮಂಗಳ ರೂಪ ನೋಡುತ
ವರವ ಕೊಡುವೆವಮೋಘ ದರ್ಶನವಾಗೆ ಮರ್ತ್ಯರರಿಗೆ ॥
ಗರುವ ರಾಘವ ಬೇಡು ಬೇಡೆನೆ
ಕರವ ಮುಗಿದನು ಮುಗುದ ಮೂರುತಿ
ಶಿರವ ತೂಗುತ ಯೋಗಿಜನ ನಗಲರಸ ಬೇಡಿದನು ॥ ೫೪ ॥

ಎಣಿಸಲವರಿಂದೆಮಗೆ ಮಾಡಿದ
ಗುಣಕೆ ತತ್ಪರಿಕೃತ್ಯವಿಲ್ಲಾ
ರಣದಿ ಕಾದಿದೊಡೆಮ್ಮ ಹರಿಬಕೆ ಹರಣವನು ತೊರೆದು ॥
ರಣದೊಳಳಿದವರುಳ್ಳೊಡೇಳಲಿ
ಚಣದೊಳೀಗಳೆ ನಾವಿಹನ್ನಕ
ತೃಣ ಮೊದಲು ತರು ಕಡೆಗೆ ತಾ ಫಲಿಸಿರಲು ಬೇಕೆಂದ ॥ ೫೫ ॥

ಕೊಟ್ಟೆವೆಂದೆನಲಾಗ ಹರಣವ
ತೊಟ್ಟುದೆಡೆಕಡೆಯುಳಿದ ಕಪಿಗಳು
ನೆಟ್ಟನೆದ್ದರು ಕಾಲ ಫಲಸಂಪನ್ನವಾಯ್ತವನಿ ॥
ಸೃಷ್ಟಿ ದಣಿದುದು ನೋಡಿ ಮನದೊಳ
ಗಿಟ್ಟುಕೊಂಡರು ಹರಿಯ ಮೂರ್ತಿಯ
ವಿಷ್ಟವೇಶ್ವರರೆಲ್ಲ ಕಳುಹಿಸಿಕೊಡಲು ಕೈಮುಗಿದು ॥ ೫೬ ॥

---

## ೪೪ನೇ ಸಂಧಿ

ಪಲ್ಲ ॥ ಪರಮ ಮಂಗಳ ಲಕ್ಷ್ಮಿ ಸಹಿತವೆ
ಭರತವಂದಿತ ಪುರವ ಹೊಕ್ಕನು
ಧರಣಿಯನು ಸಲೆ ಪಾಲಿಸುತ್ತವೆ ರಾಮನೊಪ್ಪಿದನು ॥

ಪದ ॥ ಪರಮ ಮಂಗಳ ಮಜ್ಜನವನಾ
ಭರಣ ವಸನಾದಿಗಳ ನೀ ಸ್ವೀ
ಕರಿಸಬೇಹುದು ಸಕಲ ಕಪಿಪಡೆ ಸಹಿತ ಸಿರಿಯೊಡನೆ ॥
ಶರಣ ನಾನಹಡೆನ್ನ ಮೇಲತಿ
ಕರುಣವುಳ್ಳೊಡೆ ತನ್ನ ಮನೆಯಲಿ
ಹರಿಯೆ ಚಿತ್ತೈಸೆಂದು ಬಿನ್ನೈಸಿದನು ವಿಭೀಷಣನು ॥ ೧ ॥

ಎನಗೆ ಭರತನ ಕೂಡ ಮಜ್ಜನ
ವಿನುತ ಭೋಜನವಾಗಬೇಕೆಹುದು
ದನುಜ ಕೇಳಾನೊಲ್ಲೆನನ್ನಕ ಭೋಜನಂಗಳನು ॥
ಜನನಿಯರ ವನಿತೆಯರ ವಸ್ತ್ರಪ
ಕನಕ ಭೂಷಣವಿಲ್ಲದೆನ್ನನು
ನೆನೆದು ಮರುಗುವ ಭರತದೇವನ ಮರೆವೆನೆಂತೆಂದ ॥ ೨ ॥

ಅಣ್ಣ ಬಾರದೆ ಮಡಿಯನುಡೆ ನಾ
ನುಣ್ಣೆನನ್ನೆವರೆಂಬ ಭರತನ
ಕಣ್ಣ ನೀರನು ಕಂಡು ನಾವಿಲ್ಲಿಹುದು ಲಕ್ಷಣವೇ ॥
ಬಣ್ಣ ವಸನವನೊಲ್ಲೆ ವಿಭಿಷಣ
ಹಣ್ಣು ಕಾಯಿಗಳಿಂದ ಕಪಿಗಳ
ಕಣ್ಣಿಗುತ್ಸವವೆಸಗು ಬೇಗದಲೆಂದ ರಘುರಾಯ ॥ ೩ ॥

ವಾನರಂಗಳ ತಣಿಸು ಚಿತ್ತ
ಗ್ಲಾನಿ ಜೇಡೆನಗೆಲ್ಲ ಬಂದುದು
ನೀನು ಮಾಡುವ ಸೇವೆಯಿಂದೆನೆ ದೇವನಾಜ್ಞೆಯಲಿ ॥
ದಾನವೇಶ್ವರನಿಂದ ಮರ್ಕಟ
ಸೇನೆ ತಣಿದುದು ವಸ್ತ್ರಮಣಿ ಗಂ
ಧಾನುಲೇಪನ ಹಾರ ಕನಕಾಭರಣದುಚಿತದಲಿ ॥ ೪ ॥

ರಾವಣನ ಭವನದಲಿ ವಾಣಿಯು
ಮಾವನಿದ್ದನುವೊಂದು ರಾತ್ರಿಯ
ಲಾ ವಿಭೀಷಣನರ್ತಿ ಸಲಲಾ ದೇವಿಯರು ಸಹಿತ ॥
ತಾವರೆಯ ಸಖನುದಿಸೆ ರಾಘವ
ದೇವನೋಲಗವಿತ್ತು ವಿಭಿಷಣ
ದೇವ ನೀ ಸುಖಿಯಾಗಿ ರಾಜ್ಯವ ಮಾಡುತಿಹುದೆಂದ ॥ ೫ ॥

ಎನ್ನೆವರವೀ ಚಂದ್ರ ಸೂರಿಯ
ರನ್ನೆವರವೀ ಧರಣಿ ಸುಖವಿಹು
ದನ್ನೆವರವೀ ರಾಮ ಕಥೆಯಿಹುದವನಿ ಮಂಡಲದಿ ॥
ಅನ್ನೆವರ ಸುಖರಾಜ್ಯ ಸಿರಿ ಸಂ
ಪನ್ನನಾಗೆನುತಭಯವಿತ್ತನು
ನನ್ನಿವಂತರ ದೇವ ಬಾಳೆನುತತುಳ ಸಂಪದವ ॥ ೬ ॥

ಆಳ ನೆರೆದಿಹೆ ನಮ್ಮ ಹರಿಬಕೆ
ಕಾಳುವಾಡಿದೆ ಹಲವು ತಿಂಗಳು
ಕಾಳ ರಕ್ಕಸರೊಡನೆ ಕಾದಿದೆ ಹಿರಿದು ಬಳಲಿದೆಲಾ ॥
ಪೇಳಲೇನದನಿನ್ನು ದನುಜರ
ಕಾಳಗವ ನಿನ್ನಿಂದ ಗೆಲಿದೆವು
ಮಾಳಿಯುವನೊಡಗೊಂಡು ನಿಜ ಪುರಕೈದು ನೀನೆಂದ ॥ ೭ ॥

ಬಿನ್ನವಿಸಲಂಜುವೆನು ದೇವನ
ಲೆನ್ನದೇನ್ನೈ ಹೇಳು ಹೇಳೆನೆ
ಬೆನ್ನಲೈದುತೆ ಬರಲು ಹೇಳುವುದನಿಬರೆಲ್ಲರಿಗೆ ॥
ಇನ್ನು ನಿಮ್ಮಯ ಸೇವೆ ನಿಜ ಸಂ
ಪನ್ನ ಸುಖವದನಗಲಲಾರೆವು
ಬೆನ್ನಲೈದುವೆವೆನುತ ಮೈಯಿಕ್ಕಿದನು ಸುಗ್ರೀವ ॥ ೮ ॥

ಆವ ಜನ್ಮಾಂತರದ ಸುಕೃತದ
ಲೋವಿಕೂಡಿತೊ ನಿಮ್ಮ ಚರಣದ
ಸೇವೆ ಯಾರಿಗೆ ಸುಲಭ ಭಾಪುರೆ ನಮ್ಮ ಪುಣ್ಯಾವಲ ॥
ಏವುದೆಮ್ಮಯ ರಾಜ್ಯ ಸುಖವದ
ನಾವ ಮೂಢನು ಬಯಸುವನು ಕರು
ಣಾವಲೋಕನವೆಮಗೆ ಸಾಕೆಂದೆರಗಿದನು ರವಿಜ ॥ ೯ ॥

ಹಾಲ ಬಯಸುತೆ ತೆರೆದ ಬಾಯಿಗೆ
ಹಾಲಹಲವನುಯೆರೆವರೇ ಕರು
ಣಾಳುತನಕೀ ಮಾತು ಸಲ್ಲದು ದೇವ ನಿಮ್ಮವನು ॥
ಬೀಳುಗೊಡುವರೆ ಹರಣ ನಮ್ಮನು
ಬೀಳುಗೊಡುತಿದೆ ಹಲವು ಮಾತೇಂ
ಹೇಳಲರಿಯೆನು ಅಗಲಲಾರೆವು ನಿಮ್ಮ ಸಿರಿಪದವ ॥ ೧೦ ॥

ದೇವಯಾನವು ಧನಪ ಪುಷ್ಪಕ
ದೇವರಿಂಗಿದು ಯೋಗ್ಯ ಚಿತ್ತವಿ
ಸೀ ವಿಮಾನದಿ ಪುರಕೆ ಬಿಜಯಂಗೈಯ್ಯಬೇಕೆಂದು ॥
ರಾವಣಾನುಜನೀಯೆ ಸೀತಾ
ದೇವಿಯೊಡನಾ ರಾಮನೇರಿದ
ದೇವ ದುಂದುಭಿ ಮೊಳಗೆ ಪರಮನು ಪಯಣಪರನಾದ ॥ ೧೧ ॥

ಹರಿ ನಿರೂಪವನೀಯಲಾ ತರು
ಚರರು ಋಕ್ಷರದೆಲ್ಲರೇರಿತು
ವರ ವಿಮಾನದಲನಿಬರಿಗೆ ಎಡೆಯಿರಲು ಕಮಲಜನು ॥
ವಿರಚಿಸಿದ ಹೊಸ ಸೃಷ್ಟಿಯಂತಿರೆ
ಸಿರಿ ಮನೋಹರಮೂರ್ತಿ ಬೆಸಸಲು
ಭರದಲಭ್ರವನಡರಿ ನಡೆದುದು ದಿವ್ಯ ಪುಷ್ಪಕವು ॥ ೧೨ ॥

ಪಾಡುವರು ಕೆಲರಲ್ಲಿ ಹರಿಯನು
ನೋಡುವರು ನಿಜ ದೃಷ್ಟಿ ದಣಿಯಲು
ಆಡುವರು ತಮ್ಮಿಂದ ಪುಣ್ಯರದಾರು ಲೋಕದಲಿ ॥
ಪಾಡುವರು ಮಂಗಲದ ಗೀತವ
ಕೂಡೆ ತುಂಬುರು ನಾರದರು ಮಗು
ಳೀಡಿಸಿತು ಸುರವಿರಿಂಚಿಯ ಸಭೆಯ ಚೆಲ್ವಿಕೆಯ ॥ ೧೩ ॥

ಹರಿಯ ಕರುಣಕಟಾಕ್ಷವೀಕ್ಷಣ
ಸಿರಿಗೆ ಭಾಜನವಾಯಿತಮಮಾ
ತರುಚರೇಂದ್ರರು ವಿದಿತ ರಾಕ್ಷಸ ಋಕ್ಷನಾಯಕರು ॥
ವರಮುನೀಂದ್ರರು ಸಕಲ ನಿಗಮದ
ನೆರವಿಯೆನಿಸುವ ಬೊಮ್ಮವೆಂತುಟೊ
ದೊರಕಲೆಮ್ಮವೊಲಾರು ಧನ್ಯರು ಭಲರೆ ಭಾಪೆನುತ ॥ ೧೪ ॥

ಬರುತ ಕರುಣಾಳುಗಳ ದೇವನು
ಸರಸಿಜಾಕ್ಷಿಯ ಮೊಗವ ನೋಡುತ
ತರುಬಿ ಕಪಿ ರಾಕ್ಷಸರು ಕಾದಿದ ಕಣವ ನೋಡೆಂದ ॥
ಬೆರಳ ಕೊನೆಯಲಿ ತೋರುತಿದ್ದನು
ಕರುಳುದಂಡೆಯ ರುಂಡಮಾಲೆಯ
ಮರುಳುಗಳು ಕುಣಿದಾಡೆ ಕಂಡಳು ದೇವಿ ರಣಮಹಿಯ ॥ ೧೫ ॥

ನೋಡು ಮೈಥಿಲಿ ವಿಶ್ವಕರ್ಮನು
ಮಾಡಿಸಿದ ಲಂಕಾ ತ್ರಿಕೂಟದ
ಕೋಡುಗಲ್ಲಿನ ನಡುವೆ ಚೆಲ್ವಿಕೆಯಿಂದ ಮೆರೆಯುವುದ ॥
ನೋಡು ಬೆದರದೆ ಮುಂದೆ ಜಾನಕಿ
ನೀಡಿ ಬಿದ್ದಿಹ ಕುಂಭಕರ್ಣನ
ನೋಡು ಯೋಜನಕಾಯದಿವನನು ಕೊಂದೆ ನಾನೆಂದ ॥ ೧೬ ॥

ಸೀತೆ ನೋಡೆಲೆ ನಳನು ಕಟ್ಟಿದ
ಸೇತುವನು ನಿನಗಾಗಿ ಬೇಡಿದೆ
ನೀ ತಡಿಯಲಬ್ಧಿಯಲಿ ಬಟ್ಟೆಯ ಮೂರು ದಿನ ತನಕ ॥
ದೈತೆ ನೋಡೆನುತಿಳಿದು ರಾಘವ
ಸೇತುವನು ಧನುವಿನಲಿ ಖಂಡಿಸೆ
ಆ ತತೂಕ್ಷಣದಲ್ಲಿ ಕಂಡುದು ದಶಶಿರನ ನೆರಳು ॥ ೧೭ ॥

ಏನು ಜಾಂಬವ ತೋರ್ಪುದಿದು ತಾ
ನೇನು ನೆಳಲದು ಸುಳಿವುದೇನಿದು
ಮಾನಸದ ವಿಭ್ರಮೆಯೊ ಸಹಜವೊ ಬಲ್ಲೊಡುಸುರೆನಲು ॥
ಗ್ಲಾನಿಯಾತಕೆ ರಾಮ ಬಿಡು ಬಿಡು
ದಾನವನ ವಧೆಗಿಲ್ಲಿ ಲಿಂಗವ
ನೀನು ನಿರ್ಮಿಸೆ ದುರಿತ ಪರಿಹರವೆಂದ ಜಾಂಬವನು ॥ ೧೮ ॥

ಎಂದು ಋಕ್ಷಾಧಿಪನು ಪೇಳಲು
ಕಂದ ಬಾರೈ ಹೋಗು ಪವನಜ
ಒಂದು ಚಣದಲಿ ತಹುದು ಲಿಂಗವ ಹಿರಿಯ ಕ್ಷೇತ್ರದಲಿ ॥
ಹಿಂದುಗಳೆಯದಿರೆನಲು ಕೈ ಮುಗಿ
ದಂದು ಪೊಡವಂಟೈದಿ ಮಾರುತಿ
ಚಂದದುರಗಾಭರಣ ಲಿಂಗವ ಕೊಂಡು ಬರುತಿರಲು ॥ ೧೯ ॥

ಇತ್ತ ರಘುಪತಿಗಖಿಳ ಬುಧ ಜನ
ವೊತ್ತವಿದು ಸುಮುಹೂರ್ತವೆಂದೆನ
ಲೊತ್ತುತಲಿ ಮಳಲಲ್ಲಿ ಲಿಂಗಾಕಾರವನು ರಚಿಸಿ ॥
ಯುಕ್ತವಹ ಶೋಡಷದ ದಾನವ
ಭಕ್ತಿಯಿಂದಲಿ ಮಾಡಿ ಹಸ್ತದ
ಲಿತ್ತು ನೈವೇದ್ಯವನುವೊಪ್ಪಿಸುತಿರಲು ರಘುರಾಯ ॥ ೨೦ ॥

ಹರನ ನಂದಿಯ ರೂಪವೊಂದನು
ಧರಣಿಸುತೆ ತಾ ನಿರ್ಮಿಸುತ್ತಿರೆ
ಧರಣಿಧರ ತಾನೊಂದು ಭೂರುಹ ಲಿಂಗವನು ಸವೆಯೆ
ವರಕಪೀಶ್ವರರೆಲ್ಲ ರಚಿಸಿದ
ರಿರದೆ ಕೋಟಿಯುಲೊಂದು ಕುಂದದೆ
ಶರಧಿ ತೀರವು ಲಿಂಗಮಯವಾಗಿರಲು ರಂಜಿಸಿತು ॥ ೨೧ ॥

ಉತ್ತಮದ ಲಿಂಗವನು ಧರಿಸಿಯೆ
ಹಸ್ತದಲಿ ಹರಿತನುಜ ತರುತಿರ
ಲಿತ್ತ ಹರಿಯಿದಿರಿನಲಿ ಕಂಡನ ಲಿಂಗ ಕೋಟಿಗಳ ||
ಅತ್ತಲೆನ್ನನು ಕಳುಹಿ ನೀವೀ
ಗಿತ್ತ ಮಾಡಿದ ಮಳಲ ಲಿಂಗವ
ಕಿತ್ತು ಬಿಸುಡುವೆನೀಗ ನೀವದನರಿಯಬಹುದೆಂದ || ೨೨ ||

ಸುತ್ತಿ ಬಾಲದೊಳೆಳೆಯೆ ಭುವನವ
ಕಿತ್ತು ಮಗುಚುವವೋಲಜಾಂಡವು
ಅತ್ತಲಿತ್ತಲು ಜಡಿಯೆ ಮಾರುತಿ ಬಳಲಿ ಬಸವಳಿದ ||
ನೆತ್ತರೊಕ್ಕಿತು ಬಾಯಿ ಮೂಗಿನ
ಲಿತ್ತರದಿ ಕರ್ಣದಲಿ ಕೆಡೆದಿರ
ಲುತ್ತಮೋತ್ತಮಮೂರ್ತಿ ಹಿಡಿದೆತ್ತಿದನು ಕರುಣದಲಿ || ೨೩ ||

ಪ್ರಾಣ ಹದುಳಿಸಿ ರಾಮಚಂದ್ರನ
ಮಾಣದೀಕ್ಷಿಸುತೆಂದ ಕೇಳಾ
ಪ್ರಾಣದೊಡೆಯನೆ ಅತ್ತ ಕಡಸುವುದೆನ್ನ ಲಿಂಗವೆನೆ ||
ಕ್ಷೋಣಿಯಲಿ ಲಿಂಗವನು ನಿರ್ಮಿಸಿ
ಬಾಣಲಿಂಗವ ಕಂಡು ಮೊದಲಲಿ
ಮಾಣದೀಕ್ಷಿಸಲಖಿಲಜಗವಾ ರಾಮ ಲಿಂಗವನು || ೨೪ ||

ಪದುಮಸಖನಪರಾಗ ಕಾಲ
ಕ್ಕಿದುವೆ ಮುಖ್ಯವು ಸಕಲ ಜನಕಿದು
ವಿದಿತ ಗೋಹತಿ ಬ್ರಹ್ಮಹತ್ಯಾದಖಿಳ ಪಾಪಗಳ ||
ಸದೆದು ಭವಕೋಟಿಗಳ ದೋಷವ
ಮುದದಿ ಧರ್ಮಾರ್ಥವನು ಪಡೆವರು
ಯಿದಕೆ ಸಂಶಯವಿಲ್ಲವೆಂಬಾ ಲಿಖಿತವನು ಬರೆದ || ೨೫ ||

ಇಂತು ಲಕ್ಷ್ಮೀಕಾಂತ ಭೂಸುರ
ಸಂತತಿಗೆ ಧನಕನಕ ಗೋಗಳ
ನಂತನನು ಮೇಣುತ್ತಮೋತ್ತಮದಗ್ರಹಾರಗಳ ||
ಚಿಂತೆಯಿಲ್ಲೆನಲಿತ್ತು ಮನಸಿಜ
ನಂತಕನ ಬಲವಂದು ಪೊಡವಂ
ಟಂತರಿಕ್ಷದಲೆಸೆವ ಪುಷ್ಪಕವನ್ನು ನಿರುಕಿಸಿದ || ೨೬ ||

ನೋಡುತಿರೆ ಆಜನಿತ್ತ ಪುಷ್ಪಕ
ರೂಢಿಪತಿಯಿದಿರಿನಲಿ ತಗ್ಗಿತು
ಬೀಡನೇರಿಸಿ ಅನುಜ ಸತಿ ಸಹಿತಾಪ್ತ ಪರಿವಾರ ॥
ಕೂಡಿ ಕುಳ್ಳಿರೆ ಮೇಲೆ ಗಗನದ
ಲಾಡಿ ಪಾಡುವ ಸುರಸಮೂಹವ
ನೋಡಿ ಪರಮಾನಂದ ಮೂರುತಿ ಸೀತೆಗಿಂತೆಂದ ॥ ೨೭ ॥

ಇಲ್ಲಿ ಕಂಡನು ನಮ್ಮ ವಿಭಿಷಣ
ಇಲ್ಲಿ ಬಾಲಿಯ ನಾವು ಕೊಂದೆವು
ಇಲ್ಲಿ ಕಂಡನು ರವಿಜ ನಮ್ಮನು ಹನುಮ ತಾನಿಲ್ಲಿ ॥
ಫುಲ್ಲಲೋಚನೆ ನೋಡು ಹಂಪೆಯು
ಇಲ್ಲಿ ನಿಮ್ಮಯ ವಿರಹದಲಿ ತನು
ತಳ್ಳಳಿಸೆ ತೊಳಲಿದೆನು ಕಾತರನಾಗಿ ಕಾನನವ ॥ ೨೮ ॥

ಸುದತಿ ಕಿಷ್ಕಿಂಧೆಯನು ನೋಡಾ
ಇದುವೆ ಬಾಲಿಯ ಸದನ ಮುಂದಿಹು
ದದುವೆ ಪಂಚವಟಿಯು ದಶಾನನ ನಿನ್ನ ಕಪಟದಲಿ ॥
ಚದುರಲೊಯ್ದನು ಮುಂದೆ ನಮ್ಮನು
ಕದನದಲಿ ಖರ ಕಾದಿದೆಡೆಯಿದು
ಪದುಮಲೋಚನೆ ನೋಡಗಸ್ತ್ಯಾಶ್ರಮವ ನೋಡೆಂದ ॥ ೨೯ ॥

ಎಲೆಗೆ ನೋಡಾ ಚಿತ್ರಕೂಟವ
ತೊಳಗುತಿದೆ ಶರಭಂಗನಾಶ್ರಮ
ಯಲೆಗೆ ನೋಡೌ ಯಮುನೆಯೊಪ್ಪುವಳಸಿತ ವರ್ಣದಲಿ ॥
ನಳಿನನಾಭನ ಚರಣಸೋಂಕಿಂ
ದಿಳೆಯ ಪಾವನ ಮಾಳ್ಪ ಗಂಗಾ
ಜಲ ಮನೋಹರತರವು ನೋಡೆನುತಿರ್ದ ರಘುರಾಯ ॥ ೩೦ ॥

ಬರುತ ಭಾರದ್ವಾಜನಾಶ್ರಮ
ದುರು ಕೃಪಾನಿಧಿಯಿಳಿದು ಮುನಿಪನ
ಚರಣಕೆರಗಲು ಹರಸಿ ಕುಶಲವನಿರದೆ ಕೇಳುತ್ತ ॥
ಕರವ ಮುಗಿದೆಮ್ಮವ್ವೆಯನುಜರು
ನೆರೆ ಸುಖಿಗಳೇ ಧರೆ ಸುಭಿಕ್ಷವೆ
ಪರಿಜನಕೆ ಸಂತೋಷವೇಯೆನೆ ಮುನಿಪನಿಂತೆಂದ ॥ ೩೧ ॥

ಅಸುತೊಲಗಿದೊಡಲಿಂಗೆ ಸುಖ ಸಂ
ತಸವದೆಲ್ಲಿಯದವಮಮ ತಾಯ್ಗಳಿ
ಗುಸುರಲುಂಟೇ ನಿಮ್ಮನಾಳಿದವರಿಂಗೆ ಸಂತಸವ ॥
ಅಸುವ ಹಿಡಿದೆಂತೆಂತೊ ಕಡು ಸಾ
ಯಸದ ವೃತ್ತಿಯ ಧರಿಸಿ ಭರತನು
ವಸುಮತಿಯ ಪಾಲಿಸುತಲಿಪ್ಪನು ದೇವನಾಜ್ಞೆಯಲಿ ॥ ೩೨ ॥

ಸುರವಿರೋಧಿಯ ಗೆಲಿದೆ ಲೋಕದ
ಹೊರೆಯನಿಳುಹಿದೆ ಲೇಸು ಮಾಡಿದೆ
ಕರುಣವತ್ಸಲ ಚಿತ್ತವಿಪುದಘ್ಯೋರ್ಪಚಾರವನು ॥
ವರವ ಕೊಡುವೆನು ಬೇಡು ಬೇಡೆನೆ
ಧರಣಿ ಬಿತ್ತದೆ ಬೆಳೆಯ ಬೇಹುದು
ತರು ಸಸಿಗಳನವರತ ಫಲಭರವಾಗಬೇಕೆಂದ ॥ ೩೩ ॥

ಶುಷ್ಕ ವೃಕ್ಷಗಳೆಲ್ಲ ಪೂತಳಿ
ರುಕ್ಕಿ ಫಲಿಸಲು ಬೇಕನಾರತ
ಮಕ್ಕಳಿಲ್ಲದರಿಂಗೆ ಸಂತತಿಯಾಗುತಿರಬೇಕು ॥
ಕಕ್ಕುಲಿತೆ ಕುಂದೆಡರು ಬಡತನ
ಸಿಕ್ಕು ರೋಗಾದಿಗಳು ಹೊದ್ದದ
ಉತ್ಕಟದ ವರವೀಯಬೇಕೆನೆ ಕೊಟ್ಟನಾ ಮುನಿಪ ॥ ೩೪ ॥

ಉರಿಯ ಹೊಗುವನು ಭರತ ಹೋಗೈ
ಮರುತನಂದನ ನಾವು ಬಂದುದ
ನರುಹಿ ತಮ್ಮನ ತಡೆವುದೆಂದೆನಲಣುವನಡಿಗೆರಗಿ ॥
ಹರಿದು ಹಾರಿದ ಹೋಗುತಾಕ್ಷಣ
ಭರದಿ ನಂದಿಗ್ರಾಮ ಬಾಹ್ಯದ
ಲುರಿವ ದಳ್ಳುರಿಗಂಡು ಚಿಂತೆಯ ತಾಳ್ದ ಹನುಮಂತ ॥ ೩೫ ॥

ದೇವ ಬಪ್ಪುದ ತಡೆದನೆನುತನೆ
ಪಾವಕನ ಹೊಗಲೆಂದು ಭರತನು
ವೋ ವೊ ಕೊಂಡದಲುರಿಯ ಬೆಳಗಿಸೆ ಪುರವು ಮರುಗುತಿರೆ ॥
ಆವುದದು ಕರ್ತವ್ಯವೆನುತನೆ
ಬೇವುತಿರ್ದುದು ಸಕಲ ಪುರಜನ
ಕಾವ ದೈವವ ಕಾಣೆ ನೆರೆದುದು ವೃದ್ಧ ಬಾಲಕರು ॥ ೩೬ ॥

ಪುರಜನವು ಪರಿವಾರ ಪರಿಜನ
ಭರತ ಶತ್ರುಘ್ನರುಗಳರಸಿಯು
ರುರಿಯು ಹೊಗುವುದ ನೆನೆದು ಮನದುಮ್ಮಳದಿ ಬೆಂದಿಹರು ॥
ವರ ಪುರೋಹಿತ ಮಂತ್ರಿಗಳನಾ
ಪ್ತರನು ಬೇಗದಿ ಕರೆಸಿ ಬೇಡಿದ
ನುರಿಯು ಹೊಗುವೊಡೆ ನೇಮವೇ ತನಗೆಂದನಾ ಭರತ ॥ ೩೭ ॥

ಆವ ಭವದಲಿ ಬಂದೊಡೆನಗಾ
ದೇವ ರಾಘವ ಚರಣ ಕಮಲದ
ಸೇವೆಯೇ ನಿಜವಾಗಬೇಹುದು ಹಲವು ಮಾತೇನು ॥
ಪಾವಕನೆ ಕರುಣಿಸುವುದೆನುತವೆ
ರಾವಣಾರಿಯು ತಮ್ಮ ನಿಂದಿರೆ
ದೇವಿಯರು ಕೈಮುಗಿದು ಗಂಧಾಕ್ಷತೆಯ ಪಿಡಿದಿರಲು ॥ ೩೮ ॥

ಉರಿಯು ಕೊಂಡಕೆ ಮೂರು ಸುತ್ತನು
ತಿರುಗಿ ಬಂದನು ಭರತ ಶತ್ರುಹ
ವೆರಸಿ ನಿಂದನು ಮನದಿ ರವಿ ವಂಶವನು ಭಾವಿಸುತ ॥
ಕರುಣವಿಲ್ಲಾ ಹರಿಗೆ ಶಿವ ಶಿವ
ಭರತ ಬಿದ್ದನು ಬಿದ್ದನೆಲೆಯೆಲೆ
ಉರಿಯುನೆನಲಾ ಹನುಮ ದೂರದಿ ಕಂಡು ಬೊಬ್ಬಿರಿದ ॥ ೩೯ ॥

ಬೀಳದಿರು ಬೀಳದಿರು ಶಿವ ಶಿವ
ಕೇಳು ರಾಘವನಡಿಗಳಾಣೆನೆ
ಕೇಳದಾಕ್ಷಣ ಬೀಳುತಿರಲಾ ಹನುಮನಡಹಾಯ್ದು ॥
ಬೀಳುತಿಪ್ಪನ ಹಿಡಿದು ಬಿಡು ಬಿಡು
ಕೇಳು ಮಾತುಂಟೆನಲು ಸಾರ್ ಸಾ
ರೇಳು ರಾಘವನೆಲ್ಲಿ ಕಪಿ ನೀನೆಲ್ಲಿ ಸಾರೆಂದ ॥ ೪೦ ॥

ವೋ ವೊ ಅಣ್ಣನ ಮಡುಹಿ ತಮ್ಮನು
ಭಾವಿಸಲು ರಾಜ್ಯವನು ಮಾಡನೆ
ಸಾವ ಹರೆಯುವೆ ಭರತ ಮರಳೈ ರಾಜ ನೀತಿಗಳ ॥
ನೀವು ಕೇಳದೊಡೇನು ಫಲವಾ
ದೇವ ರಾಘವನುಣ್ಣಲರಿಯದೆ
ತಾವೆ ಕೊಟ್ಟರೆ ನಿಮಗದಹಿತವೆಯೆಂದು ತಿಳುಹಿದನು ॥ ೪೧ ॥

ಕನಲಿ ಕಿವಿಗಳ ಮುಚ್ಚಿ ಶಿವ ಶಿವ
ಯೆನುತ ಘನ ಕೋಪಾಗ್ನಿಯಿಂದವೆ
ವನಚರನ ಸುಡುವಂತೆ ನೋಡಿದ ಮನದ ಮಸೆತದಲಿ ॥
ಜನಪ ನೀತಿಯು ಸಾರು ಸಾರೆನ
ಲನಿಲಸುತ ನಸು ನಗುತ ಕೇಳೊಂ
ದನುನಯುವ ತೋರಿಸುವೆ ರಾಮನನೀಗ ನಿನಗೆಂದ ॥ ೪೨ ॥

ಒಲ್ಲೆನೆನಲೇಕೊಲ್ಲೆ ರಾಘವ
ನೆಲ್ಲಿರುವ ಸನಿಯದಲಿ ತೋರುವೆ
ನಿಲ್ಲು ಮಾರುತಿಯೆನಲು ಸಾಕಾಯ್ತಾಯ್ತು ತಡೆಯದಿರು ॥
ಬಲ್ಲೆ ಕಪಟವನೆನಲು ಹೋಹೋ
ವಲ್ಲಭನ ತೋರಿಸುವೆನೀಕ್ಷಣ
ಸಲ್ಲದೆನಲಾ ಭರತ ದೇವನ ಕೊಂಡು ಪುಟ ನೆಗೆದ ॥ ೪೩ ॥

ಕಂಡನಿದಿರಲಿ ಬಪ್ಪ ತೇಜೋ
ಮಂಡಲದ ಪುಷ್ಪಕವನದರೊಳು
ಪುಂಡರೀಕದಳಾಕ್ಷ ದೇವಿಯುರೊಡನೆ ಬಪ್ಪುದನು ॥
ಕಂಡು ನಂಬಿದ ಭರತ ಬಳಿಕಾ
ಚಂಡ ಮಾರುತಿಯೆಂದ ನುಡಿಗಳ
ಮಂಡೆಯಲಿ ಧರಿಸುತ್ತ ನಡೆದನು ಸಕಲ ಜನಸಹಿತ ॥ ೪೪ ॥

ಇಳಿಯೆ ಹರುಷಾಶ್ರುಗಳು ಸಲೆ ಕಂ
ಗಳಲಿ ಪರಮಾನಂದವಾಗಲು
ನಳಿನನಾಭನು ಸೇನೆ ಸಹಿತಾ ಪುಷ್ಪಕವನಿಳಿದು ॥
ಸೆಳೆದು ಬಿಗಿಯಪ್ಪಿದನು ಭರತನ
ಬಳಿಕ ಶತ್ರುಘ್ನಾದಿಗಳ ಮ
ತ್ತೊಲಿದು ಉಪಚರಿಸುತ್ತ ಸಂಭಾವಿಸಿದನೆಲ್ಲರನು ॥ ೪೫ ॥

ಅಂಗ ಶೃಂಗಾರವನು ಮಾಡಿದ
ನಂಗನಯ್ಯನು ತಮ್ಮದಿರು ಸಹ
ಮಂಗಲೋಚಿತ ರಥವನೇರಲು ಹನುಮನುಗ್ಗಡಿಸೆ ॥
ಅಂಗದನು ಸತ್ತಿಗೆಯು ರಾಕ್ಷಸ
ಪುಂಗವನು ಚಾಮರವ ಢಾಳಿಸೆ
ತುಂಗವಿಕ್ರಮ ಭರತ ಕಟ್ಟಿಗೆವಿಡಿದು ಬರುತಿರ್ದ ॥ ೪೬ ॥

ನಾರಿಯರು.ನವರತುನದಾರತಿ
ಸಾರ ಪನ್ನೀರುಗಳ ಚಳೆಯುದ
ತೋರಣಂಗಳವೋರಣಂಗಳ ಕಲಶ ಕನ್ನಡಿಯು ॥
ವೀರ ವಾಠಕ ವಿಪ್ರ ವರ್ಗದ
ಸಾರದಾಶೀರ್ವಚನ ಸೇಸೆಯು
ಭೇರಿ ನಿಸ್ಸಳ ಧೂಪ ಲಾಜದಿ ಮೆರೆದುದಾ ಸಮಯ ॥ ೪೭ ॥

ಅರಸ ಸುಮುಹೂರ್ತದಲಿ ನಿಜ ಮಂ
ದಿರವ ಹೊಕ್ಕನು ತಮ್ಮದಿರು ಸಹ
ವೆರಸಿ ದೇವಿಯುಡೊಡನೆ ಕಪಿ ರಾಕ್ಷಸರು ಸಹ ಪುರವ ॥
ಸಿರಿಯ ರಮಣನ ವೈಭವಂಗಳ
ಮೆರೆವ ಸಿಂಗಾರವನು ನೋಡುತ
ಹರುಷದೊಳಗೋಲಾಡುತಿರ್ದುದು ಸಕಲ ಜನ ನಲಿದು ॥ ೪೮ ॥

ಬರುತ ಕೈಕೆ ಸುಮಿತ್ರೆ ಕೌಸಲೆ
ಯುರಿಗೆ ನಮಿಸಲುಯೆರಗೆ ತಮ್ಮಯು
ಕರವು ದಣಿವಂತಪ್ಪಿ ನೋಡಿದರಕ್ಷಿ ದಣಿವಂತೆ ॥
ಸುರಿವ ಪರಮಾನಂದ ಬಾಷ್ಪದಿ
ಧರಣಿಜಾತೆಯುನೆತ್ತಿ ಮನ್ನಿಸಿ
ಹರುಷಮಿಂಗೆಯಪ್ಪಿದರು ಹರಸಿದರೊಲವಿನಿಂದೆಲ್ಲ ॥ ೪೯ ॥

ಮೆರೆವ ಮಣಿಭವನವನು ರವಿಜಗೆ
ತೆರವು ಮಾಡಿದ ವಿಭಿಷಣಾಂಕಗೆ
ಗುರುವ ಬೀಡಾರವನು ಕೊಡಿಸುತ ಜಾಂಬವಾದ್ಯರಿಗೆ ॥
ಮರೆಯದೆಲ್ಲರ ನಿಲಿಸಿ ಭರತನು
ಉರುವ ಭಂಡಾರವನು ತರಿಸಿದ
ಒರೆಯೆ ಲಾಲಿಸಲೋದುತಿರ್ದುದು ಕರಣಿ ಸಂದೋಹ ॥ ೫೦ ॥

ಗುರು ವಸಿಷ್ಠಾದಿಗಳು ಮಾಡಿತು
ಹರಿಗೆ ನಿಜ ಪಟ್ಟಾಭಿಷೇಕವ
ಧರಣಿಯಮರರಿಗೆಂಟು ಲಕ್ಷದ ಗೋಪ್ರದಾನವನು ॥
ಅರಸನಿತ್ತ ಹಿರಣ್ಯದಾನವ
ನಿರದೆ ಮೂವತ್ತೆರಡು ಕೋಟಿಯು
ತುರಗ ಕರಿರಥ ವಸ್ತ್ರ ದಾನದಿ ದಣಿದರಾ ದ್ವಿಜರು ॥ ೫೧ ॥

ತರಣಿಯಂತಿಹ ರತುನ ಪದಕವ
ತರಣಿನಂದನಗಿತ್ತ ಮಾಣಿಕ
ವಿರಚಿತಾಂಗವನಿತ್ತನಂಗದಗೊಲಿದು ವಿಭಿಷಣಗೆ ॥
ಸುರುಚಿ ಮುತ್ತಿನ ಹಾರವಿತ್ತನು
ಮೆರೆವ ಕುಂಡಲವೆರಡ ಹನುಮಗೆ
ಧರಣಿಸುತೆ ಲಕ್ಷ್ಮಣರಿಗಂಬರ ಭೂಷಣವನಿತ್ತ ॥ ೫೨ ॥

ಮಾರುತಿಗೆ ಕೊಡಲೆಳಸಿ ಕಂಠದ
ಹಾರವನು ದೇವಿಯರು ತೆಗೆವುತ
ವೀರ ರಾಮನ ಮೊಗವ ನೋಡಲು ನಗುತ ಕೊಡುಯೆಂದ ॥
ಬಾರೊ ಮಗನೇ ಸಿರಿಯೆ ಬಲ್ಲಿದ
ವೀರ ಮದಗಜವೈರಿಯೆನುತಾ
ಹಾರವನು ಕೊರಳಲ್ಲಿ ಹಿಡಿಯೆಂದಿತ್ತಳವನಿಸುತೆ ॥ ೫೩ ॥

ಉಡುಗೊರೆಯನುಚಿತದಲಿ ರಾಘವ
ಕೊಡಿಸುತಿರ್ದನುವೊಬ್ಬರುಳಿಯದೆ
ಪೊಡವಿಸುತೆಯೊಲಿದಂತೆ ತಾನೊಲಿದಂತೆ ಮನ್ನಿಸಿದ ॥
ಬಡವರೆಡವರ ಕಾಣೆ ಸಭೆಯಲಿ
ಕಡಲನೀರ್ದೆಗೆದಂತೆ ಮೆರೆದುದು
ಇಡಿದ ರತ್ನಾಭರಣ ಕಾಂತಿಯುಲಧಿಕ ವಿಭವದಲಿ ॥ ೫೪ ॥

ಸರಸ ಮಜ್ಜನ ಭೋಜನಂಗಳ
ಸುರುಚಿ ರತ್ನಾಭರಣ ದಿವ್ಯಾಂ
ಬರವಿಲೇಪನದಿಂದ ರಾಕ್ಷಸ ಋಕ್ಷವಾನರರು ॥
ಅರಸುಗಳ ಮಂತ್ರಿಗಳ ಹಿರಿದುಪ
ಚರಿಸಿ ಸತ್ಕರಿಸಿದನು ಹರುಷದ
ಶರಧಿಯೊಳಗೋಲಾಡುತಿದ್ದುದು ನಿಖಿಲ ಜನ ನಲಿದು ॥ ೫೫ ॥

ಇಂತು ರಮೆಯು ಮನೋರಥಂಗಳ
ಸಂತಸವನೀವುತ್ತ ಲಕ್ಷ್ಮೀ
ಕಾಂತನೆಸೆದಿರೆ ಸಕಲ ಜೀವರ ಜೀವಚಿಂತಕನು ॥
ಅಂತರಿಕ್ಷವನಡರಿ ಕಿರಣ ದಿ
ಗಂತದಲಿ ರಂಜಿಸಲು ರಘುಪತಿ
ಸಂತಸದೊಳಿದ್ದಖಿಳ ರಾಜೋಚಿತವ ನಡೆಸಿದನು ॥ ೫೬ ॥

ಸಿರಿಯುವಲ್ಲಭನೊಲಿದು ರಾಜ್ಯಾ
ಧ್ವರವನಾನಲು ಕಾಲಭಾಗ್ಯದ
ಭರವ ಬಣ್ಣಿಪನಾವ ಪರಮಾನಂದಮಯವಾಯ್ತು ॥
ಜರೆ ಮರಣ ಶೋಕಾದಿ ಭಯಗಳ
ಮರೆದು ಸುಖಸಂಪನ್ನರಾದರು
ಹೆರಸುತಿರ್ದುದು ರಾಮರಾಜ್ಯದೊಳಖಿಳ ಜನನಿವಹ ॥ ೫೭ ॥

ಇದು ಸದಾಯುಃಕೀರ್ತಿವರ್ಧನ
ಸುದತಿಯರ ಸೌಭಾಗ್ಯ ಸಾಧನ
ಪದುಮನಾಭನ ಚರಿತ ಪಾವನ ದುರಿತಸಂಹರಣ ॥
ಇದು ಸಕಲ ಪೌರಾಣ ವೇದದ
ಹೃದಯ ಮುನಿ ವಾಲ್ಮೀಕಿ ರಚಿತವು
ಇದರ ಮಹಿಮೆಯ ಬಲ್ಲನೀಶ್ವರನುಳಿದ ಮಾತೇನು ॥ ೫೮ ॥

ಮಂಗಳಂ ಮೇದಿನಿಗೆ ಸುರರಿಗೆ
ಮಂಗಳಂ ಕೇಳ್ದರಿಗೆ ಪೇಳ್ದಗೆ
ಮಂಗಳಂ ಸುಜನರಿಗೆ ಸನ್ಮುನಿಜನಕೆ ಭುವನಕ್ಕೆ ॥
ಮಂಗಳಂ ಪತಿಯೊಲುಮೆ ಸತತಾ
ಭಂಗಸಿರಿಯೆಲ್ಲರಿಗೆ ಸೇರಲಿ
ಭಂಗವಿರಹಿತವಾಗಲಖಿಳೈಶ್ವೈರ್ಯವೆಲ್ಲರಿಗೆ ॥ ೫೯ ॥

— ಮಂಗಳಂ —

# ಶಬ್ದಕೋಶ

ಅಕ್ಕರು=(ಅಂಕರು), ಸ್ನೇಹ, ಅತಿ ಬಯಕೆ
ಅಕ್ಕಾಡಿಹೋಗು=ನಷ್ಟವಾಗು, ನಾಶವಾಗು
ಅಕ್ಕೆ=(ಅಳ್ಕೆ), ದುಃಖ
ಅಗಳು=ಅಗೆ
ಅಗಸೆ=ತೈಲ ಕೊಡುವ ಒಂದು ಬೀಜ
ಅಗುಸೆ=ಕೋಟೆಯ ಬಾಗಿಲು
ಅಗ್ಗಳ=ಧಾರಾಳ; ಪೌರುಷ
ಅಗ್ನೀಧ್ರ=ಯಾಗಕರ್ತೃಗಳಲ್ಲೊಬ್ಬ
ಅಘಾಟ=ಆಶ್ಚರ್ಯ
ಅಚ್ಚು=ಅಕ್ಷ(ಅಚ್ಚುಮರ)
ಅಜಿಗಿಜಿ=ನುಜ್ಜುಗೊಜ್ಜು
ಅಟಮಟಿಗ=ಕಪಟಿ
ಅಟ್ಟೊಳಿ=ರಾಶಿ, ಸಮೂಹ
ಅಟ್ಟೆ=ಮೃತ ಶರೀರ, ಶವ
ಅಡಕಿಲು=ಪಾತ್ರೆ
ಅಡಕು=ಎಸೆ
ಅಡಗಲಿಸು=ಅಡ್ಡಕಟ್ಟು
ಅಡಗುಳಿ=ಬಾಗಿಲಿನ ಅಡ್ಡ ಸರಳು, ತಾಳ
ಅಡಸು=ಅಮರು; ಗಾಢಪ್ರವೇಶ ಮಾಡು
ಅಡ್ಡಣಿಗೆ=ಮೂರು ಕಾಲಿನ ಮಣೆ
ಅಣಲು=ದವಡೆ
ಅಣುವ=ಹನುಮ
ಅಣೆ=ಚುಚ್ಚು, ತಾಡು
ಅಣ್ಣೆಗಲ್ಲು=ಕೈ ಮೇಲೆ ಹಾರಿಸಿ ಆಡುವ ಆಟದ ಕಲ್ಲು
ಅದ್ದಳಿಸು=ಬೆದರಿಸು, ನಡುಗಿಸು
ಅಧ್ವರಿ=ಯಾಗದಲ್ಲಿ ಪ್ರಧಾನ ಪಾತ್ರ ವಹಿಸುವವ
ಅನಿಬರು=ಎಲ್ಲರೂ
ಅನ್ನೆವರ=(ಅನ್ನೆಗ), ಅಲ್ಲಿಯ ತನಕ
ಅಬ್ಜ=ತಾವರೆ; ಚಂದ್ರ
ಅಮ್ಮುಗೆ=ಸಾಮರ್ಥ್ಯ
ಅಮ್ಮೆ=ಆಗದು
ಅಯುತ=ಹತ್ತು ಸಾವಿರ
ಅರಗುಲಿಗ=ಧರ್ಮದ್ರೋಹಿ
ಅರ=ಏಣು; ಅರ್ಧವಾದುದು, ಕಡಿ
ಅರಿದು=ಅಸಾಧ್ಯ
ಅರುಪು=(ಅರುಹು), ತಿಳಿಸು
ಅರೆ=ಬಂಡೆ
ಅರ್ಜುನ=ಬಿಳಿ ಮತ್ತಿ ಮರ
ಅರ್ಬುದ=ಇಪ್ಪತ್ತು ಕೋಟಿ
ಅಲಸದೆ=ಆಲಸ್ಯಮಾಡದೆ
ಅವದಿರು=ಅವರುಗಳು
ಅವನೀಧರ=ಪರ್ವತ
ಅವಳಿ=ಜೋಡಿ, ಜತೆ
ಅಳಲು=ದುಃಖ, (ಅಳಲ್ಕೆ)
ಅಳವಳಿಸು=ಕುಂದು; ಮೂರ್ಛೆಹೋಗು
ಅಳವಿ=ಸಾಮರ್ಥ್ಯ, ಶಕ್ತಿ
ಅಳವಿಗ=ಬಲಶಾಲಿ
ಅಳುಪು=ಕಾಮಿಸು
ಅಳ್ಕಿರಿ=ನಡುಗಿಸು
ಅಸಗ=ಅಗಸ
ಅಸುಕೆ=ಅಶೋಕ

ಅಹಿಮಕರ=ಹಿಮವನ್ನು ನಾಶಮಾಡುವ ಸೂರ್ಯ
ಅಂಕಪೀಠ=ತೊಡೆ
ಅಂಕೋಲೆ=ಎಣ್ಣೆಕೊಡುವ ಒಂದು ಬೀಜ
ಅಂಗಚಿತ್ತ=ಉಡುಗೊರೆ
ಅಂಗವಟ್ಟ=ಅಂಗವಿಲಾಸ, ಚೆಲುವು
ಅಂಗವಣೆ=ಪರಿಸ್ಥಿತಿ
ಅಂಗೈಸು=ಕಾದು
ಅಂದ=ಹೋಲುವೆ, ಹೋಲುವ ರೂಪ
ಅಂದಣ=ಪಲ್ಲಕ್ಕಿ
ಆಕೆವಾಳ=ಸಮರ್ಥ
ಆಗತಂಗಳು=ಬರುವಿಕೆ, ಶುಭಾಗಮನ
ಆಗುಳಿಸು=ಆಕಳಿಸು, ಆವಳಿಕೆ ತೆಗೆ
ಆಜಿ=ಯುದ್ಧ; ಯುದ್ಧರಂಗ (?)
ಆತುಕೋ=ಆನು, ಸಹಿಸು; ಕಾದು
ಆಮ್ನಾಯ=ವೇದ, ಆಗಮ
ಆಯತ=ವಿಸ್ತರ; ರೀತಿ
ಆರದೆ=ಸೈರಿಸದೆ
ಆರು=ಬೊಬ್ಬಿರಿ
ಆರೈ=ಆರೈಕೆಮಾಡು, ಕಾಪಾಡು
ಆರೋಗಣೆ=ಭೋಜನ
ಆಲಿ=ಕಣ್ಣಾಲಿ
ಆವರ=ತಾವು, ಸ್ಥಳ
ಆಸರು=ದಣಿವು; ಬಾಯಾರಿಕೆ
ಆಹವ=ಕದನ
ಆಳಿಗೊಳು=ಸಿಟ್ಟಾಗು
ಆಳುಗ=ಆಳು; ಸೇವಕ; ವ್ಯಕ್ತಿ
ಆಳುದೋರು=ಪರಾಕ್ರಮ ಪ್ರದರ್ಶಿಸು
ಆಂತುಕೊ=(ಆತುಕೊ), ಸಹಿಸು
ಆಂಪರೆ=(ಆನುವರೆ), ಸಹಿಸಲು
ಇಕ್ಕೆ=ಆಶ್ರಯ
ಇಕ್ಷ್ವಾಕು ಕಿಂಕರ=ಇಕ್ಷ್ವಾಕು ವಂಶದ ರಾಮನ ಸೇವಕ
ಇಟ್ಟಣಿಸು=ದಟ್ಟೈಸು; ಒಂದರ ಮೇಲೊಂದು ಹೇರು
ಇಡು=ಹೊಡೆ; ಬಡಿ; ತಿವಿ
ಇನತನುಜ=ಸೂರ್ಯನ ಮಗ, ಸುಗ್ರೀವ; ಸೂರ್ಯ ಛಾಯೆಯರ ಮಗ ಶನಿ
ಇರದೆ=ಬಿಡದೆ
ಇರುಹೆ=ಇರುವೆ
ಇಸು=ಬಿಡು, ಎಸು; ಬಾಣಬಿಡು
ಇಷುಧಿ=ಬತ್ತಳಿಕೆ
ಇಳಿ=ಬಿಡು
ಇಂಗಡಲು=ಪಾಲ್ಗಡಲು
ಇಂಗೋಲು=ಮದನ ಬಾಣ
ಇಂದುಧರ=ಶಿವ
ಇಂದ್ರನಂದನ=ವಾಲಿ
ಉಗಿದುಬಿಡು=ಸೆಳೆದುಬಿಡು
ಉಗು=ಒಗೆ, ಎಸೆ
ಉಗ್ಗಡ=ಆಧಿಕ್ಯ
ಉಗ್ಗಡಿಸು=ನಡುಗಿಸು, ಕಂಪಿಸು
ಉಚ್ಚಳಿಸು=ಬಿರಿದು ಹೊರಹೊಮ್ಮು
ಉಟ್ಟಲು=ಉಟ್ಟ ವಸ್ತ್ರ
ಉಡಿ=ಮುರಿ
ಉಡುಗಣೇಶ್ವರ=ಚಂದ್ರ, ಉಡುಪತಿ
ಉದಧಿ=ಸಮುದ್ರ
ಉದ್ಗಾತೃ=ಯಜ್ಞಮಂತ್ರಗಳನ್ನು ಹಾಡುವವ
ಉಪಾಯನ=ಉಡುಗೊರೆ, ಕಾಣಿಕೆ
ಉಪ್ಪವಡಿಸು=ಎಚ್ಚರವಾಗು; ಎಬ್ಬಿಸು
ಉಪ್ಪರಿಸು=ನೆಗೆ, ಹಾರು
ಉಬ್ಬೆದ್ದು=ಬೀಗಿ, ಹಿಗ್ಗಿ
ಉಮ್ಮಳ=ದುಃಖ
ಉರಲಿ=(ಉರುಳಿ)ರಾಶಿ; ಚಂಡು; ಪಾತ್ರೆ
ಉರವಣಿಸು=ಸಂಭ್ರಮದಿಂದ ಸಾಗು.

ಉರಿಮಾರಿ=ಸುಡುವ ಮಾರಿ
ಉರುವ=ಶ್ರೇಷ್ಟ
ಉಲುಕು=ಅಲುಗು, ನಡುಗು
ಉಲೂಕಲ=ಧೂಪ, ಗುಗ್ಗುಳ
ಊಡು=ಉಣಿಸು
ಊಣೆಯ=ಕೊರತೆ
ಋಕ್ಷ=ಕರಡಿ
ಎಕ್ಕಟಿಗ=ಏಕಾಂಗ ವೀರ
ಎಕ್ಕಸಕ್ಕ=ಯುದ್ಧಾತದ್ವ
ಎಕ್ಕೆ=ಅರ್ಕ, ಒಂದು ಸಸ್ಯ
ಎಚ್ಚ=ಎಸೆದ
ಎಡೆಕೆಡೆಯಾಡು=ನಡುವೆಯೇ ಓಡಾಡು
ಎರಕೆ=(ಎರಂಕೆ), ರೆಕ್ಕೆ
ಎಲು=ಎಲುಬು, ಅಸ್ಥಿ
ಎಸಕ=ಎಸೆಯುವಿಕೆ; ತೋರಿಕೆ
ಎಸಲು=ಎಸೆಯಲು
ಎಸು=ಬಾಣಬಿಡು
ಏಕದೇಶ=ಒಂದೇ ತಾವು, ಒಂದೆಡೆ
ಏಗುವೆ=ಏನು ಮಾಡುವೆ
ಏಡಿಸು=ಹಂಗಿಸು, ಹೀಯಾಳಿಸು
ಏನುವನು=ಏನನ್ನೂ
ಏರಂಡ=ಹರಳು ಗಿಡ
ಏವೆ=ಏನು ಮಾಡಲಿ
ಏಳಿಲು=ಹೆಚ್ಚಿಕೆ; ಅಭ್ಯುದಯ
ಐದು=ಬರು, ಆಗಮಿಸು
ಐದೆ=ಚೆನ್ನಾಗಿ
ಐವಡಿ=ಐದು ಮೊನೆಗಳ ಬಾಣ
ಐಸಲೇ=ಅಷ್ಟೇಯೇ
ಒಗೆ=ಜನಿಸು
ಒಗ್ಗಾಗಿ=ಒಂದುಗೂಡಿ
ಒಚ್ಚಡ=ಕ್ರಮ; ಪ್ರಕಟ
ಒಟ್ಟಿಲು=ಗೂಡು; ರಾಶಿ
ಒಡ್ಡೀಸು=ಬೋನು
ಒಪ್ಪಂಬಡು=ಶೋಭೆಗೊಳು
ಒಪ್ಪಿಡಿ=ಒಂದು ಎಳೆ
ಒಲು=ಒಲಿಯು
ಒಳ್ಳೆ=ನೀರ ಹಾವು
ಒಂದುವನು=ಒಂದನ್ನೂ
ಓತು=ಪ್ರೀತಿಸಿ
ಓತುಗ=ಬೆಕ್ಕು
ಓರೆಗೈ=ಸೇವೆಮಾಡು
ಓವಿ=ಪ್ರೀತಿ
ಓಸರಿಸು=ಸಮಾಧಾನಪಡಿಸು
ಕಕ್ಕಡೆ=ಆಯುಧ ವಿಶೇಷ
ಕಚ್ಛಪ=ಆಮೆ
ಕಚ್ಚುಟ=ಕೌಪೀನ, ನಡುವಸ್ತ್ರ
ಕಟ್ಟಿಗೆ=ದಂಡ, ರಾಜದಂಡ
ಕಟಕಿ=ಪರಿಹಾಸ, ಮೂದಲೆ, ಕೊಂಕು ನುಡಿ; ಮೋಸ
ಕಡಿಕನೆ=ಥಟ್ಟನೆ, ತ್ವರೆಯಿಂದ
ಕಡಿತಲೆ=ಒಂದು ಬಗೆಯ ಕತ್ತಿ; ಗುರಾಣಿ
ಕಡಿವಡೆ=ಸಂಹರಿಸು
ಕಡುಗು=ಕೋಪ
ಕಡುಜುರು=(ಕಡುದುರು), ಕಣಜಲು
ಕಣೆಯ=ಪ್ರಸಂಗ; ಸಂದರ್ಭ
ಕತ=ಸಂದರ್ಭ, ಪ್ರಸಂಗ
ಕತ್ತರಿವಾಣಿ=ತೀಕ್ಷ್ಣ ವಿಷ ದ್ರವ
ಕತ್ತು=ಉರಿ, ಹೊತ್ತು
ಕದಂಬ=ಸಮೂಹ; ಒಂದು ವಾದ್ಯ
ಕನಕ=ಕುಜ; ಹಿರಣ್ಯ ಕಶ್ಯಪು
ಕಪ್ಪಡಿ=ಬಾವಲಿ
ಕಮ್ಮಟ=ಠಂಕಸಾಲೆ
ಕರ=ವಿಶೇಷ
ಕರುವಿಡು=ಎರೆ

ಕರಿಕು=ಸುಟ್ಟು ಕಪ್ಪಾಗು
ಕರಿಕೋದ=ಕರಿಕಿ ಹೋದ
ಕಲಾಪ=ನವಿಲಿನ ಬಾಲ
ಕವಟು=ಕಪಾಟು, ಕವಾಟ
ಕಳಭ=ಆನೆಮರಿ; ಪೋತ
ಕಳಕಳ=ಕೋಲಾಹಲ
ಕಂಕಪತ್ರ=ಬೆಳ್ಳಕ್ಕಿಯ ಗರಿಯುಳ್ಳ ಶರ
ಕಂಬುಗೆ=ರಥಗುಪ್ತಿ; ಆಯುಧ ತುಂಬಿಸುವ ಸ್ಥಳ
ಕಾಣಿ=ನಾಣ್ಯ; ಏರು ಪೇರು
ಕಾರ್ಣ್ಮೆ=ಶೌರ್ಯ
ಕಾತಿ=ಖತಿ, ಕೋಪ
ಕಾದಲ=ಇನಿಯ
ಕಾನು=ಕಾನನ
ಕಾಲುತೊಡಕು=ಸಂದಿಗ್ಧ ಸ್ಥಿತಿ; ಅಡಚಣೆ
ಕಾವು=ಮರದ ಹಿಡಿ; ತೊಟ್ಟಿಲ ಹಗ್ಗ
ಕಾವ್ಯ=ಕವಿ, ಶುಕ್ರ
ಕಾಹು=ಕಾವಲು
ಕಿತ್ತಡಿ=ಹೆಜ್ಜೆಗೆ ನಿರ್ಬಂಧ; ವ್ರತ
ಕಿರಾತಾಧಿಪ=(ಇಲ್ಲಿ) ಗುಹ
ಕಿರಿದೆಡೆ=ತುಸು ದೂರ
ಕೀರಶಿಶು=ಹಸುಗೂಸು, ಹಾಲುಣ್ಣುವ ಮಗು
ಕುಕ್ಕುರ=ನಾಯಿ
ಕುಕ್ಕುರಿಸು=ಮುದುಡಿ ಕುಳಿತುಕೊ
ಕುಣಪ=ಶವ
ಕುತ್ತ=ರೋಗ
ಕುಮ್ಮರಿ=ಕೃಷಿಗೆ ಮೊದಲು ಕಾಡುಸುಡುವುದು
ಕುರಿತವಾಗು=ಗುರುತುಸಿಗು, ನಿಶ್ಚಯವಾಗು
ಕುಸುಬು=ಕುಕ್ಕು; ಕುಗ್ಗು
ಕುರಂಗ=ಎರಳೆ, ಜಿಂಕೆ
ಕುಲಿ=ಕುಲವಂತ
ಕುಸುಬಿ=ಕುಸುಬೆ; ಒಂದು ಜಾತಿಯ ತೈಲ ಬೀಜ
ಕುಂಟಣಿ=ಸೂಳೆಯನ್ನೊದಗಿಸುವವಳು
ಕುಂಡಿಕೆ=ಕಮಂಡಲು
ಕೂಜಿಸು=ಗದ್ಗದಿಸು; ನಡುಗು; ಕಣ್ಣು ಮುಚ್ಚು
ಕೂಲ=ತಪ್ಪಲು
ಕೃಂತನ=ಕತ್ತರಿಸುವಿಕೆ
ಕೆತ್ತ ಕದ=ನಡುಗುವ ಬಾಗಿಲು
ಕೇಣಿ=ಶ್ರೇಣಿ
ಕೈಘುಟ್ಟಿ=ಘುಟಿಕೆ, ಗಂಧದ ಗುಳಿಗೆ
ಕೈಗಣ್ಣಿ=ಹಗ್ಗ, ಕೈಹಗ್ಗ
ಕೈಗೈ=(ಕೈಗೆಯ್) ಅಣಿಮಾಡು
ಕೈನೆ=ನೀಚ ಸ್ತ್ರೀ
ಕೈವಾರ=ಹೊಗಳಿಕೆ, ಹೆಗ್ಗಳಿಕೆ
ಕೈವಾರಿ=ಸ್ತುತಿಪಾಠಕ
ಕೈಹಾರ=ಕದನ, ಕಾಳಗ
ಕೊಗ್ಗೆಸರು=ಕಡು ಕೆಸರು
ಕೊಟ್ಟವಿ=ಕೋಟವಿ, ಕೋಟರ, ಧುರ್ಗೆ; ನಗ್ನ ಸ್ತ್ರೀ
ಕೊಡಗುಸು=(ಕೊಡಗೂಸು) ಕನ್ಯೆ
ಕೊರೆ=(ಗೊರೆ), ಗೊರಕೆ ಹೊಡೆ
ಕೊಂತ=ಈಟಿ, ಬಡಿಗೆ
ಕೋಟಲೆ=ಉಪದ್ರ
ಕೋಹು=ಮೂಲೆ, ಸಂದುಗೊಂದು
ಕೌಡಿಕೆ=ಕವಡೆ
ಕೌಶಿಕ=ಗೂಬೆ; ವಿಶ್ವಾಮಿತ್ರ
ಕೌಳಿಕ=ಕಪಟ
ಕ್ರೋಢ=ಕಾಡು ಹಂದಿ

ಖಯಖೋಡಿ=ಭಯ ಭೀತಿ
ಖರಹಸನ=ಕತ್ತಿಯ ನಗು
ಖರೆಯ=ನಿಜ
ಖಂಡದಿಂಡೆಯ=ನುಚ್ಚುನುರಿ
ಖಂಡ ಪರಶು=ಶಿವ
ಖಂಡೆಯ=ಖಡ್ಗ
ಖುಲ್ಲ=ನೀಚ
ಖೇಳಮೇಳ=ಸ್ನೇಹವಿಲಾಸ
ಗಡಹು=(ಗಳಹು), ಆತ್ಮ ಪ್ರಸಂಸೆಮಾಡು
ಗತೋದಕ=ಹರಿದ ನೀರು, ಸಂದ ವಿಷಯ
ಗನ್ನಗತಕ=ಮೋಸ
ಗದಗಪ್ಪು=(ಗದಗಂಪು), ಬೆದರಿ ಸ್ತಬ್ಧ
ಗಸಣಿ=(ಘಸಣಿ), ಉಪದ್ರ ವಾಗು
ಗಳಹ=ಬಡಾಯಿಗಾರ
ಗಳಹು=ಸೊರಹು
ಗಹನ=ಗಂಭೀರ, ಅಭೇದ್ಯ
ಗಂಡವೀರ=ಗಂಡುಗಲಿ
ಗಂಡುಗೆಡು=ಧೈರ್ಯಗೆಡು
ಗುಹ=ಒಬ್ಬ ನಿಷಾದ; ಷಣ್ಮುಖ
ಗುಳ=ಪಾವುಡ, ಹಕ್ಕರಿಕೆ
ಗುಂಡು=ಕಲ್ಲು
ಗೂಳೆಯ= ಹಿಂಜರಿದ ಸ್ಥಳ
ಗೊರೆ=ಕೊರೆ, ಸದ್ದುಮಾಡಿ ಉಸಿರಾಡು
ಗೊರವ=ಬ್ರಾಹ್ಮಣ ತಪಸಿ, ಯತಿ
ಗೋಟುಗೋಟು=ಸಂದುಗೊಂದು
ಗೋನಾಳಿ=ಗಂಟಲು
ಗೋನಿವಾಸಿ=ದೇವತೆ, ಸ್ವರ್ಗದಲ್ಲಿರುವವ
ಗೋರೆ=ಕವುಳು
ಘಟಶ್ರವ=ಕುಂಭಕರ್ಣ
ಘಟ್ಟಿ=ಗಂಧದ ಗುಳಿಗೆ
ಘರಟ್ಟ=ಸಮೂಹ
ಘಸಣಿ=(ಗಸಣಿ), ತಂಟೆ, ಉಪಟಳ

ಠಿಕ್ಕರಿಗಳೆವ=ಮೂದಲಿಸುವ; ಧಿಕ್ಕರಿಸುವ
ಡಾಳಿಸು=ಬೀಸು
ಡೋರು=ಬಿರಿ
ಡೌಡೆ=ವಾದ್ಯ ವಿಶೇಷ
ಡಿಂಡಿಮ=ಒಂದು ವಾದ್ಯ
ಡಿಂಬ=ಕಾಯ
ಡೆಂಕಣಿ=ಬತ್ತೇರಿ, ಬುರುಜು
ಡೆಂಡಣಿಸು=ನಡುಗು; ತತ್ತರಿಸು
ಢಾಳ=ಕಾಂತಿ
ಚಡಾಳಿಕೆ=ಮುತ್ತಿಗೆ, ಏರಿಹೋಗುವಿಕೆ
ಚಪಡತನ=ಚಾಡಿಕೋರತನ
ಚಂದ್ರಾಸ=ಚಂದ್ರಹಾಸವೆಂಬ ಕತ್ತಿ
ಚಂಬಕ=ಒಂದು ವಾದ್ಯ
ಚಾಟುತನ=ಕುಯುಕ್ತಿ
ಚಾರಿವರಿ=ಉಪಾಯದಿಂದ ಮುಂದುವರಿ, ನಾಶಮಾಡು
ಚಿಕ್ಕಣಿ=ಸಣ್ಣ ಅಡಿಕೆ
ಚಿಕ್ಕಟ=ಚಿಕ್ಕದು
ಚಿಟುಕಿಸು=ಚಿಟಿಕೆ ಹಾಕು
ಚುನ್ನವಾಡು=ನಿಂದಿಸು
ಜಕ್ಕುಲಿಕೆ=ಆನಂದ; ಮೂದಲೆ
ಜಟ್ಟಿಗ=ಒಂದು ಭೂತ
ಜಡಿತೆ=ತ್ವರೆ
ಜತ್ತುಕ=(ಜತ್ತಕ) ಮೋಸ, ವಂಚನೆ
ಜಬ್ಬು=ಅಟ್ಟು; ಹೊಡೆ
ಜರುಗು=ದಾರಿ ಬಿಡು
ಜಳರು=(ಜಡರು), ದಡ್ಡರು
ಜಳೂಕ=ಜಿಗಳೆ
ಜಂಕೆ=ಆರ್ಭಟೆ
ಜಂಪ=ರಾಶಿ
ಜಾನುಮುಖ=ಉದ್ದವಾದ ಮುಖ
ಜಾಳಿಸು=(ಜಾಡಿಸು), ಸಜೆ; ಸೋಸು

ಜೀರ್ಕೊಳವಿ=ಪಿಚಕಾರಿ
ಜುಣುಗು=ಜಾರು; ಸದ್ದಿಲ್ಲದೆ ಸರಿ
ಜುಹು=ಒಂದು ವಿಧದ ಸೌಟು
ಜೂತ=ದ್ಯೂತ, ಜೂಜು
ಜೂದ=ದ್ಯೂತ
ಜೇನದಸಿ=ಜೇನವಸೆ, ಜೇನುತಟ್ಟೆ?
ಜೊಂಪಿಸು=ನಿದ್ದೆ ಹೋಗು
ಜೋಡೆ=ಜಾರೆ
ಜೋಹ=(ಜೊಹ), ವೇಷ
ಜೋಹು=ಜೊಹ
ಝುಡಿತೆ=ಜಡಿತೆ, ತ್ವರೆ
ಝುಮ್ಮಿಡು=ಜುಮ್ಮೆನಿಸು
ತಕ್ಕವಿಸು=ತಕ್ಕೈಸು, ಸಂತವಿಸು
ತಟತಟ=ದಡದಿಂದ ದಡ
ತಮ=ಮಾಯ; ಕತ್ತಲು
ತಮ್ಮಡಿ=ಸನ್ಯಾಸಿ; ಋಷಿ
ತರಕ್ಷು=ಹುಲಿ
ತರಣಿಸುತ=ಸೂರ್ಯನ ಮಗ, ಸುಗ್ರೀವ; ಶನಿ
ತರಳ=ಕಂಪನ; ದ್ರವ
ತರಹರ=ಕಾತರ
ತರಳಿಕೆ=ಮಕ್ಕಳಾಟಿಕೆ
ತರುವಲಿ=ಮಗು, ಶಿಶು
ತಳಕೆ=ತಳಕ್ಕೆ, ಕೈಗೆ
ತಳತಂತ್ರ=ಸೇನೆ
ತಳಪಟ=ತಲೆಕೆಳಗು, ಅಡಿಮೇಲು
ತಳರುಗಿಡಿ=ಸಿಡಿಯುವ ಕಿಡಿ
ತಳಿಗೆ=ಹರಿವಾಣ
ತಳುವು=ತಡಮಾಡು
ತಳ್ಳಳ=ಅಳುಕು, ಭಯ; ತಲ್ಲಣ
ತಳ್ಳಿವಲೆ=ಅಟ್ಟಿಹಿಡಿಯುವ ಬಲೆ
ತಾನುಸ=ಮಾಯೆ
ತಾರಿ=ಸಸ್ಯ ಜಾತಿ, ತಾರೆ, ಶಾಂತಿಮರ
ತಾರ್ಕ್ಷ್ಯ=ಗರುಡ
ತಾಳೇಳು=ಏಳು ತಾಳೆಗಳು
ತಿಟ್ಟ=ಗತ್ತು, ರೀತಿ
ತಿಮಿಧ್ವಜ=ಒಬ್ಬ ರಕ್ಕಸ (ದಶರಥನ ವೈರಿ)
ತಿಲಕ=ಲೋಧ್ರದ ಮರ
ತಿಳುಹು=ತಿಳಿಯ ಹೇಳು; ಎಚ್ಚರಗೊಳು
ತೀದುದು=ಮುಗಿದುದು
ತುರಿತ=ತ್ವರಿತ, ಬೇಗ
ತುರಿಯ=ಬ್ರಹ್ಮನಲ್ಲಿ ಲೀನವಾಗುವ ನಾಲ್ಕನೇ ಅವಸ್ಥೆ
ತುಷ=ಉಮಿ
ತೂಳು=ಅಟ್ಟು; ಹೊಡೆ, ಬಡಿ
ತೃಣಬಿಂದು=ಒಬ್ಬ ತಪಸ್ವಿ
ತೆಕ್ಕೆ=ಅಪ್ಪುಗೆ; ಆಲಿಂಗನ; ಠೆಕ್ಕೆ
ತೊಡಚು=ಕಾದು; ಸಿಕ್ಕಿಸು; ಸಿಕ್ಕಿಸಿಹಾಕು
ತೊಡರು=ಬಿರುದು
ತೊಡರುಪೆಂಡೆಯ=ಬಿರುದಿನ ಗುರುತು
ತೋಳಿ=ಬಾವಲಿ
ತ್ರಿಣಯ=ತ್ರಿನೇತ್ರ, ಶಿವ
ಥಟ್ಟು=ಸಮೂಹ
ಥಟ್ಟುಗಿ=ಸೀಳಿ ಹೋಗು
ದನು=ಈ ಹೆಸರಿನ ಒಬ್ಬ ಅಪ್ಸರ
ದಬ್ಬಣ=ಶರ
ದಹನ=ತ್ರಿವಿಧ ಜ್ವಾಲೆಯುಳ್ಳ ಅಗ್ನಿ
ದಂದಶೂಕ=ಸರ್ಪ
ದಂತಿ=ಆನೆ
ದಾಯ=ಛಲ
ದಾಸಣ=ದಾಸವಾಳ
ದಿವಪತಿ=ಇಂದ್ರ
ದುವೆ=ದುವದಿ, ದ್ವಿಪದಿ

ದುಂದುಭಿ=ಒಂದು ವಾದ್ಯ; ಒಬ್ಬ ರಕ್ಕಸ
ದೃಷಜ=ಕಲ್ಲಿನ ಮಣಿ
ದೃಷ್ಟ=ಗುರಿ, ಲಕ್ಷ್ಯ
ದೈತೆ=ದಹಿತೆ, ಸ್ತ್ರೀ; ಪತ್ನಿ
ದೌಡೊತ್ತು=ಬಲಹಾಕಿ ಅಮುಕು
ಧನಪ=ಧನದ, ಕುಬೇರ
ಧಮ್ಮಿಲ್ಲ=ಮುಡಿ, ಕೇಶಪಾಶ
ಧರಣಿ ಸುತ=ಮಂಗಳ, ಕುಜ
ಧಾವತಿ=ಆಪತ್ತು; ಸಂಕಷ್ಟ; ಶ್ರಮ
ದೂಪಿಸು=ಆಯಾಸಗೊಳು
ನಕುಲ=ಮುಂಗುಸಿ
ನಕ್ರಾಳಿ=ಮೊಸಳೆ
ನಗ=ಪರ್ವತ
ನಮನ=ವಂದನೆ, ನಮಸ್ಕಾರ
ನರೆ=ಸುಕ್ಕು; ನರೆತ ಕೂದಲು
ನಂದಕಿ=ವಿಷ್ಣುವಿನ ಖಡ್ಗ
ನಂದಿ=ಬಿಳಿನಂದಿ ಮರ; ಬಸವ
ನಾಗವಳ್ಳಿ=ವೀಳೆಯದ ಎಲೆಯ ಜಾತಿ
ನಾಣು=ನಾಚು
ನಾರಾಚ=ಬಾಣ
ನಾರಿ=ಬಿಲ್ಲ ಹಗ್ಗ
ನಿಚ್ಚಯ=ನಿಶ್ಚಯ
ನಿಟ್ಟೆ=ನಿಷ್ಠೆ
ನಿಬ್ಬರ=ಅತಿಶಯ; ವೇಗ; ರಭಸ
ನಿಯುತ=ಒಂದು ಲಕ್ಷ
ನಿರಜ=ಪರಿಶುದ್ಧ
ನಿರಯ=ನರಕ
ನಿರುಗೆ=ನಿರೀಕ್ಷೆ
ನಿರ್ಬುದ=ಒಂದು ದೊಡ್ಡ ಸಂಖ್ಯೆ
ನಿಂಬ=ಕೈಬೇವಿನ ಮರ
ನೀಚ=ಅಣಿಲೆ ಮರ, ಹರಿತಕಿ
ನೀವು=ತೀಡು; ಸವರು
ನೆಗ್ಗು=ನಳ್ಳಾಗು; ಮುರಿ
ನೆಲಮಗಳು=ಸೀತೆ
ನೆರ=ಮರ್ಮಸ್ಥಾನ
ನೊರಜು=ನೊರೆ; ಚಿಕ್ಕಾಡು; ನೊಣಜೆ
ಪಟ್ಟೆವಾಳಿ=ವಸ್ತ್ರಭೇದ, ಪಟ್ಟೆ
ಪಡಿಗ=ಪೀಕದಾನಿ; ಉಗುಳು ಬುಡ್ಡಿ
ಪದ್ಮ=ಒಂದಕ್ಕೆ 12 ಶೂನ್ಯಗಳುಳ್ಳ ಸಂಖ್ಯೆ
ಪರಡಿ=ಒಂದು ಖಾದ್ಯ
ಪರಭೃತ=ಪರಪುಷ್ಟ, ಕೋಗಿಲೆ
ಪರಿಧಿ=ದಿಗಂತ
ಪರಿಮಿತ=ಅಭಿಮತ; ಅಪ್ಪಣೆ
ಪರಿಯಂಕ=ಮಂಚ
ಪರುಷ=ಮುಟ್ಟಿದ್ದನ್ನು ಚಿನ್ನಮಾಡುವ ಕಲ್ಲು
ಪರೇಹ=ಪರ ಮತ್ತು ಇಹ
ಪಳಿ=ನಿಂದೆ; ವಸ್ತ್ರ; ಪಡಿ, ಪ್ರತಿ
ಪಂಚಾನನ=ವಿಶಾಲ; ಐಮೊಗ
ಪಾಟಿ=ಕಿವಿಯ ಪರೆ
ಪಾಠೀಣ=ಮೀನು
ಪಾರದಾರ್ಯ=ಪರಸ್ತ್ರೀ ಕೂಟ
ಪಾಶಿ=ಪಾಶವುಳ್ಳವ, ವರುಣ
ಪಾಸಟಿ=ಸಾಟಿ, ಸಮಾನ
ಪೀನ=ಪುಷ್ಟ, ತುಂಬಿದ
ಪುದುವಾಳು=ಒಡನಾಟ
ಪುರಮಥನ=ತ್ರಿಪುರಾರಿ, ಶಿವ
ಪುರಂಧ್ರಿ=ವನಿತೆ
ಪುಲ್ಲಿ=ಕಸೂತಿ ಮಾಡಿದ ವಸ್ತ್ರ
ಪುಂಜಿಕೆ=ಒಬ್ಬಳು ಅಪ್ಸರೆ, ಪುಂಜಿಕಸ್ಥಲಿ
ಪೂಗ=ಅಡಿಕೆ
ಪೆರೆ=ಚಂದ್ರ; ಚಂದ್ರವಾದ್ಯ
ಪೇತ=ಪ್ರೇತ
ಪೈಶೂನ್ಯ=ಬೇಹುಗಾರ

ಪೈಸರ=ಚೆಲ್ಲುವಿಕೆ
ಪ್ರತ್ಯೂಹ=ವಿಘ್ನ
ಪ್ರತ್ಯೂಷ=ಉಷೆ, ಮುಂಬೆಳಗು
ಪ್ರಭಾಸ-ಒಂದು ಕ್ಷೇತ್ರ
ಪುಲ್ಲಹೇತಿ=ಹೂ ಬಾಣ, ಮದನ
ಬಣಗು=ಅಲ್ಪ
ಬಡಬ=ವಡಬಾನಲ
ಬನ್ನಿ=ಶಮೀ ವೃಕ್ಷ
ಬಭ್ರು=ಹೆಡಸು, ಕೂದಲುದುರುವ ರೋಗ
ಬರತುದು=ಬತ್ತಿತು
ಬರುಗೈ=ಬರುಗೆಯ್, ಬರಿದು ಮಾಡು
ಬಸೆ=ಕೊಬ್ಬು, ನೆಣ
ಬಳಿನೀರು=ಸೋಂಕು ತೆಗೆವ ನೀರು, ನಿವಾಳಿಸುವ ನೀರು
ಬಾಗೆ=ಬಕುಲ
ಬಾಣ=ಶರ; ನಾಗದಂತಿ ಮರ; ಕೊಗ್ಗಿ ಮರ
ಬಾದಣ=ರಂಧ್ರ; ತೂತು
ಬಾವನ್ನ=ಶ್ರೀಗಂಧ
ಬಾಳ=ಬಹಳ
ಬಿದ್ದು=ಔತಣ
ಬಿಂಜ=ಅರಣ್ಯ, ಕಾನನ
ಬಿಂದಿ=ಹರಕೆ, ಬಂಜೆಯಾಗದಂತೆ ಹೇಳುವ ಹರಕೆ
ಬೀಯ=ಮುಗಿತ; ಅಂತ್ಯ
ಬುಗುಡಿ=ದೊಡ್ಡ ಹೊಕ್ಕಳಿನವಳು
ಬುಲ್ಲವಿಸು=ಉಕ್ಕು, ತುಳುಕು
ಬುಳ್ಳಿ=ದುಂಡಗಿನವಳು
ಬೃಂಹಿತೆ=ಆನೆಯ ಕೂಗು
ಬೆಕ್ಕಸ=ಆಶ್ಚರ್ಯ
ಬೆಗಡು=ಬೆರಗು, ಆಶ್ಚರ್ಯ
ಬೆದಕು=ಕೆದಕು
ಬೆಸನ-ಕೆಲಸ
ಬೆಸನಾಗು=ಆಜ್ಞೆಯಾಗು
ಬೆಸಲಾಗು=ಹೆರು
ಬೆಸಳಿಗೆ=ಅಗ್ಗಿಷ್ಟಿಕೆ; ಬಾಣಲೆ
ಬೆಂಗೆ=ಬೆನ್ನಿಗೆ
ಬೇಟ-ಪ್ರೀತಿ; ವಿಲಾಸ
ಬೇರುಗೊಲೆ=ಮೂಲೋತ್ಪಾಟನೆ
ಬೇಳು=ಅಗ್ನಿಗೆ ಸಮರ್ಪಿಸು
ಬೇಹುಗಾರ=ಗುಪ್ತಚರ
ಬೈಚಿ=ಒಂದು ಸಂಬಂಧ; ಅಬಚಿ?
ಬೊಪ್ಪ=ತಂದೆ
ಬೊಲ್ಲನ=ಕುದುರೆ; ಬಿಳಿಕುದುರೆ
ಬೊಂಬುಳಿ-ಒಂದು ಜಾತಿಯ ತಮಟೆ
ಬೋನ=ಆಹಾರ
ಬೋಳು ಬರಿದು; ಕಾಂತಿಹೀನ
ಬೋಳೆಯ=ಅಂಬು
ಭಣಿತೆ=ಉಕ್ತಿ, ಹೇಳಿಕೆ
ಭಗಣ=ನಕ್ಷತ್ರ
ಭಗಣ ಚಕ್ರ=ರಾಶಿ ಚಕ್ರ
ಭದ್ರ=ಒಂದು ಭೂತ; ವೀರಭದ್ರ
ಭವ=ಶಿವ
ಭವಭೃತ=ಶಿವನ ಭೃತ್ಯ
ಭೇಕ=ಕಪ್ಪೆ
ಭೈತ್ರ=ನಾವೆ
ಮಖ=ಯಜ್ಞ
ಮಚ್ಛರೂಪ=ಮತ್ಸ್ಯಾವತಾರ
ಮಟ್ಟೆ=ಮತ್ತಿಕೆ; ತಿಲಕ
ಮಡ=ಹಿಮ್ಮಡಿ, ಅಡಿಗಾಲು
ಮಣಿಹ=ಊಳಿಗ, ಕೆಲಸ; ಮಣಿಯುವಿಕೆ
ಮದಕರಿ=ಮದ್ದಾನೆ
ಮಧುವ್ರತ=ಭ್ರಮರ
ಮನ್ಮಥ=ಮಿಥುನ ರಾಶಿ

ಮಯೂಖ=ಕಾಂತಿ
ಮರಹ=ಉರುಳು
ಮಸಣಿ=ಮಸಣಪವಳು; ಒಂದು ಬೈಗುಳ ಮಾತು
ಮಸೆ=ಗಾಯ, ಗಾಯದ ಗುರುತು
ಮಂಜರ=ಬೆಕ್ಕು
ಮಂಜಸ=ಪೆಟ್ಟಿಗೆ
ಮಾಣಿ=ಒಂದು ಭೂತ
ಮಾನಿಸ=ಮನುಷ್ಯ
ಮಾರವಲ್ಲಿ=ಸುಗಂಧದ ಹೂವು
ಮಾಳ=ಕಬ್ಬೆಕ್ಕು
ಮಿಟುಕು=ಎವೆಮುಚ್ಚಿ ತೆರೆ
ಮಿಳಿ=ದಪ್ಪನಾದ ಹಗ್ಗ
ಮುಕುರ=ಕನ್ನಡಿ
ಮುಕ್ಕುರುಕು=ಪ್ರತಿಭಟಿಸಿ ಮುತ್ತು
ಮುಕ್ಕುಳಿಸು=ಕಂದು; ಉಗುಳು
ಮುಟ್ಟು=ತಾಂಟು, ತಾಡು,
ಮುತ್ತ=ಮುತ್ತುಗದ ಮರ
ಮುರಜ=ಒಂದು ವಾದ್ಯ
ಮುರುಕಿಸು=ವೈಯ್ಯಾರ ಮಾಡು
ಮುಸು=(ಮುಜು), ಮುಸುವ, ಕಪಿ ಜಾತಿ
ಮುಸಳಿಸು=ಕಾಂತಿಗುಂದು
ಮೆಡೆಗೆಡು=ಗುಂಪು ಚದರು
ಮೆಳೆ=ಹೊದರು
ಮೊಗ್ಗಲ್ಲ=ಅತಿಶಯವಲ್ಲ, ಹೆಚ್ಚಲ್ಲ
ಮೊನೆ=ಕಾಳಗ
ಮೊರಕು=ದರ್ಪದಿಂದ ತಲೆದೂಗು
ಮೊಳಸು=ಗಂಟಲ ಹುಣ್ಣು, ಗುಳ್ಳೆ
ಮೋದು=ಅಪ್ಪಳಿಸು
ಮೋಹರ=ಗುಂಪು, ಪಡೆ
ಮೋಹು=ಎಸೆ; ಒಲಿ; ಕಾಳಗವಾಡು
ಮೋಳಿಯ=ಬಿಬು; ರಾಶಿ
ಯಾಪು=ಜಾವ
ಯಾಮಿನಿ=ರಾತ್ರಿ
ಯಾವನ್ಯಾಸ್ತ್ರ=ಯವನಾಸ್ತ್ರ
ರದನಿ=ಆನೆ
ರಸೆ=ಭೂಮಿ
ರಪಣ=ಶೋಭೆ; ನೊಗಸು
ರಾಟಿಕ=ಚಕ್ರ; ಬುದ್ಧಿ
ರಿಣ=ಋಣ
ರೂಪೆ=ರೂಕ
ರೇಚೆ=ಆನೆಯ ಸಾವುಡ
ಲಾಕುಳ=ಯೋಗದಂಡ
ಲಾಜ=ಅರಳು
ಲಾಳವಿಂಡಿಗೆ=ಬಾಗಿಲ ಅಗಳಿ; ಅಗಳಿಯಂಥ ಆಯುಧ
ಲಾಳಿ=ಲಾಟದೇಶದ ಸ್ತ್ರೀ
ಲುಳಿ=ಚೆಲುವು, ಒಯಿಲ; ತ್ವರೆ
ಲೆಂಕ=ಸೇವಕ
ಲೋಪೆ=ಮಾಡಿನಿಂದ ಮುಂದೆ ಚಾಚುವ ಭಾಗ; ಚಾಚುಮಾಡು; ಚಾಚುವಿಕೆ
ವಜ್ಜರ=ಕತ್ತಿ
ವನಿತೆ=ಸ್ತ್ರೀ; ಕನ್ಯಾರಾಶಿ
ವರಿಸು=ಸ್ವೀಕರಿಸು
ವರ್ಷಾಭು=ಕಪ್ಪೆ
ವಲಿಮುಖ=ಕಪಿ
ವಲ್ಲಕಿ=ವೀಣೆ
ವಸೆ=ಹಸೆ, ಚಾಪೆ
ವಾನರಮೀನ=ಮತ್ಸ್ಯವಾನರ
ವಾಯುಭುಕ್=ಪವನಾಹಾರಿ, ಸರ್ಪ
ವಿಡಾಯ=ಶೋಭೆ; ಸೊಗ
ವಿಪ್ರವಣ=ಓಡಿಸುವಿಕೆ; ಅಟ್ಟುವಿಕೆ
ವಿಧೂತ=ಕಂಪಿಸುವ
ವಿರಜ=ಒಂದು ವಾದ್ಯ

ವಿಷ್ಟಪೇಶ್ವರ- ದೇವತೆ, ತ್ರಿವಿಷ್ಟಪ
ವಿಸ್ಫುಲಿಂಗ=ಹಾರುವ ಕಿಡಿ
ವೃಷಲೆ=ಋತುಮತಿಯಾದ ಕನ್ಯೆ
ವಿಂಶತಿ- ಕುಲ ಪರಂಪರೆ
ವೆಂಟಣಿಸು=ಸುತ್ತುವರಿ
ವೇತಾಳ=ಬೇತಾಳ
ವೇತಾಳಿ=ಹೆಣ್ಣು ಬೇತಾಳ
ವೈರೋಚನಿ=ವಿರೋಚನ, ಪ್ರಹ್ಲಾದನ ಮಗ, ಬಲಿ
ವೈಶ್ರವಣ=ಕುಬೇರ
ಶಕ್ವರಿ=ವಿಭೀಷಣನ ಮಗ
ಶಕ್ರ=ಇಂದ್ರ
ಶರಾಸನ=ಬಿಲ್ಲು
ಶಶಿಜ=ಬುಧ, ಸೌಮ್ಯ
ಶಿಖಿಧ್ವಜ=ಕಾರ್ತಿಕೇಯ
ಶಿತಿಖಂಠ=ನೀಲಕಂಠ, ಶಿವ
ಶೀಲಿಸು=ಗುಣವನ್ನು ಪಡೆ
ಷಡಂಘ್ರಿ=ಭ್ರಮರ
ಸಕಳಂಕೆ=ದೋಷಯುಕ್ತೆ
ಸತ್ರ=ಯಜ್ಞ
ಸತ್ರಾಣಿಸು=ತ್ರಾಣ ಬರುವಂತೆ ಮಾಡು
ಸಮರಂಗ=ಯುದ್ಧ; ಯುದ್ಧ ನೀತಿ
ಸಯ್ಯರಿದ=(ಸೈಯರಿದ), ಚೆನ್ನಾಗಿ ಕೊಯ್ದು
ಸರಣಿ=ದಾರಿ, ಬೀದಿ
ಸರಳಿಸು=ಹಾರು, ಜಿಗಿ
ಸರಿತ=ನೇರ, ಸರುತ
ಸವಗ=ಲೋಹದ ಕವಚ
ಸವಣ=ಶ್ರವಣ, ವಿರಕ್ತ
ಸಂಕೀರ್ಣವಡು=ಗಲಿಬಿಲಿಗೊಳ್ಳು
ಸಂಸೃತಿ=ಸಂಸಾರ
ಸಾಮಿ=ಸ್ವಾಮಿ
ಸಾಯಕ=ಬಾಣ
ಸಾಯಾಸ=ಕಷ್ಟ; ಪ್ರಯಾಸ; ದಣಿವು
ಸಾರಿ=ಸಮೂಹ, ಸ್ವಾರಿ, ಸವಾರಿ
ಸಿತಗ=ಜಾರ
ಸಿತಾತಪತ್ರ- ಬೆಳುಗೊಡೆ
ಸಿತಾಸಿತ=ಬಿಳುಪು ಮತ್ತು ಕಪ್ಪು
ಸಿಂಗಲೀಕ=ಒಂದು ಜಾತಿಯ ಕಪಿ; ಸಿಂಹಳದವ
ಸಿಂಧ=ಒಂದು ಬಗೆಯ ಪತಾಕೆ
ಸಿಂಧು=ಸಮುದ್ರ
ಸೀಗುರಿ=ಚಾಮರ ಭೇದ
ಸೀತ=ಸೀನು ತೆಗೆದ, ಸೀನಿದ
ಸೀವುದು=ಸೀದುಹೋಗು
ಸುತಿ=ಶ್ರುತಿ
ಸುಪ್ಪಾಣಿ=ಶ್ರೇಷ್ಠ ಮುತ್ತು
ಸುರಸೆ=ಒಬ್ಬ ದಾನವಿ
ಸುರಗಿ- ಒಂದು ಕತ್ತಿ
ಸುಯಿದಾನ=ಸಂವಿದಾನ; ಕಾವಲು; ಎಚ್ಚರ
ಸುಶ್ರೋಣಿ=ಒಳ್ಳೆಯ ನಡು
ಸೂಕರಾವಳಿ=ವಸ್ತ್ರಭೇದ
ಸೂಠಿ=ತ್ವರೆ, ಬೇಗ
ಸೂರುಳು=ಪ್ರತಿಜ್ಞೆ, ಶಪಥ
ಸೂಳು=ಬೊಬ್ಬಿರಿ; ಸುಳಿವು
ಸೇದು=ಅಪಹರಿಸು; ಕಿತ್ತುಕೋ
ಸೇಲೆ=ಶಾಲು; ಸೀರೆ
ಸ್ತ್ರೀಣ=ಸ್ತ್ರೀಲೋಲ
ಸ್ಯಂದನ=ರಥ
ಸ್ರುವೆ=ಸೌಟು
ಹಕ್ಕಲು=ಬೆಟ್ಟು ನೆಲ; ಕೊಯ್ದ ಪೈರು
ಹಗೆವು=(ಹಗೇವು) ಕಣಜ
ಹಣನು=ಧನಿಕ
ಹತ್ತೆ=ಹತ್ತಿರ
ಹದುಳಿಸು=ಸಮಾಧಾನಪಡಿಸು

ಹಮ್ಮೈಯಿಸು=ದುಃಖಿಸು
ಹಮ್ಮು=ಅಹಂಕಾರ
ಹರಿಗರುಳು=ಹರಿದ ಕರುಳು
ಹರಡು=ರೆಕ್ಕೆ ಬಿಡಿಸು; ಹಬ್ಬು
ಹರಣ=ಪ್ರಾಣ
ಹರದ=ವ್ಯಾಪಾರಿ
ಹರಿ=ಕಪಿ; ಸಿಂಹ; ಸರ್ಪ; ವಿಷ್ಣು, ಸೂರ್ಯ; ಇಂದ್ರ
ಹರಿತಕಿ=ಅಣಿಲೆ ಮರ
ಹರಿತರು=ಬೇಗ ಬಾ
ಹರಿಬ=ತೊಂದರೆ; ಕಷ್ಟ; ಕಾರ್ಯ; ಕಷ್ಟಕ್ಕೊದಗುವವ, ಬಂಧು
ಹರಿಭವ=ಇಂದ್ರನ ಮಗ, ವಾಲಿ
ಹರೆವ=ಹರೆಯುವ
ಹಲ್ಲಣಿಸುವ=ಜೀನು ತೊಡಿಸು
ಹವಣು=ಲಘು; ತ್ವರೆ; ಹದ
ಹಸುಗಮ್ಮಿ=ಪಶುಕರ್ಮಿ; ಪಾಪಿ
ಹಸೆ=ಪಸೆ; ಚಾಪೆ
ಹಳಿವು=ನಿಂದೆ
ಹಳುವ=ಬಾಲಕ, ಮಕ್ಕಳ
ಹಂಗ=ಒಂದು ಶಕುನದ ಪಕ್ಷಿ
ಹಂದೆ=ಹೇಡಿ
ಹಾಡ=ಎಣ್ಣೆಯ ಗಡಿಗೆ
ಹಾರು=ಬಯಸು
ಹಾಲೆ=ಸಪ್ತಪರ್ಣಿ ಮರ
ಹಾಳಿ=ಕ್ರಮ
ಹಾಹೆ=ಪಾಪೆ; ಗೊಂಬೆ
ಹಿಳುಕು=ಬಾಣ; ಶರದ ಬುಡ
ಹೀಹಾಳಿ=ಗೊಡವೆ
ಹುಡಿಯಾಟ=ಮಣ್ಣಿನಲ್ಲಿ ಆಟ
ಹುಡುಕು ನೀರದ್ದು=ನೀರಲ್ಲಿ ಹೊಡಕಾಡು (ಹೊರಳಾಡು)ವಂತೆ ಮುಳುಗಿಸು
ಹುತವ=ಹುತವಹ, ಅಗ್ನಿ
ಹುತ್ತಿಗೆ=ಹುತ್ತ, ಗೆದ್ದಲುಗೂಡು
ಹುಯ್ಯಲು=ಗೋಳು
ಹುರುಡು=ಹೊಂತಗಾರಿಕೆ
ಹುಲು=ಕ್ಷುಲ್ಲ
ಹುಲಿಮೊಗ=ಕೋಟೆಯ ಭಾಗ; ಬುರುಜು
ಹೂಣಿಗ=ಸಾಹಸಿ; ಯೋಧ
ಹೂಣು=ಕಾಳಗಕ್ಕೆ ಅನುವಾಗು
ಹೂರಿಗೆ=ಒಂದು ಕಜ್ಜಾಯ
ಹೆಕ್ಕಳ=ಆತ್ಮಪ್ರಶಂಸೆ, ಹೆಗ್ಗಳಿಕೆ
ಹೆಡಕು=ಕತ್ತಿನ ಹಿಂಭಾಗ; ಭುಜ
ಹೆಡಸು=ಹೆಡಸುಗು, ಕೂದಲುದುರುವ ರೋಗ
ಹೆಡಿಗೆ=ಬುಟ್ಟಿ, ಮುಕ್ಕರಿ
ಹೆಳವ=ಕುಂಟ
ಹೇರು=ದುಡಿ, ಶ್ರಮಿಸು
ಹೇರಿಗ=ವೈರಿ
ಹೇಷಿತ=ಕೆನೆಯುವಿಕೆ
ಹೇಳಾವನ=ಕ್ರೀಡಾವನ
ಹೇಳಿಗೆ=ಪೆಟ್ಟಿಗೆ
ಹೊಗರು=ಕಾಂತಿ
ಹೊಟ್ಟುಗ=ಜಳ್ಳು; ವ್ಯರ್ಥ ಜೀವಿ
ಹೊದ್ದು=ಸೇರು
ಹೊಯ್ಗುಡುಂಬ=ಹೊಯ್ಗುಡುಬು
ಹೊರಸು=ಹಸುರು ಪಾರಿವಾಳ, ಅಪಶಕುನ ಸೂಚನೆಯ ಪಕ್ಷಿ
ಹೊಱಿಗೆ=ಹೊತ್ತ ಸ್ಥಿತಿ
ಹೊರೆ=ಸಮೀಪ
ಹೊಲ್ಲ=ಅಯೋಗ್ಯ; ಮಾಡಬಾರದ
ಹೊಲ್ಲೆಹ=ದೋಷ
ಹೊಳಕಲು=ಸವಿಯಲು
ಹೊಳಲು=ದಾರಿ; ನಗರ, ಬೀದಿ
ಹೊಂದು=ಸಾಯು
ಹೊಂದೆಗಟ್ಟು=ಸಾಯುವಂತೆ ಬಿಗಿ

# ತಪ್ಪೋಲೆ

| ಪುಟ | ಪದ್ಯ—ಪಂಕ್ತಿ | ತಪ್ಪು | ಸರಿ |
| --- | --- | --- | --- |
| ೨ | ೭— ೩ | ನಿದ್ರಾಲಸ್ಯ ಪರರಾಗಪ್ರಾಯ | ನಿದ್ರಾಲಸ್ಯಪರಗಾಪ್ರಾಯ |
| ೫ | ೨೨— ೧ | ಪರಶು | ಪರುಷ |
| ೮ | ೩೮— ೨ | ಗುಳಗುಳ | ಗುಳಗಳ |
| ೯ | ೪೨— ೪ | ಕರೆಸು ಬೇಗನ | ಕರೆಸು ಬೇಗೆನ |
| ೧೧ | ೫೧— ೫ | ಪರಿಸಂತವ್ರೋ | ಪರಿಯಂಕವ್ರೋ |
| ೧೪ | ೬೪— ೩ | ತಮ್ಮಕ್ಕೂರ್ಧ್ವ | ತಮ್ಮೊಕ್ಕರ್ಧ್ವ |
|  | ೬೫— ೪ | ಮೆರೆವರವಿಂದು ಪದಸೆಯ | ಮೆರೆವರವಿಂದವದಸೆಯ |
| ೧೫ | ೭೧— ೫ | ಪ್ರೇಮ | ನೇಮ |
| ೧೮ | ೮೪— ೫ | ಬಾಯ್ದರ | ಬಾಯ್ಕರೆ |
| ೨೦ | ೯೪— ೩ | ಎಲಲೆ | ಎಲೆಲೆ |
| ೨೨ | ೫— ೧ | ಹರಿಯುದೆಂತನ | ಹರಿಯುದೆಂತೆನ |
| ೨೪ | ೧೩— ೨ | ಮನೋಭನ | ಮನೋಭವ |
| ೨೮ | ೩೬— ೨ | ದ್ವಂಪಲಿ | ದ್ವಂದ್ವದಲಿ |
| ೩೦ | ೪೩— ೧ | ನೋಡಿರೇಳು | ನೋಡೀರೇಳು |
|  | ೪೪— ೨ | ಘುನುಪ | ಧನುವ |
| ೩೫ | ೭೦— ೫ | ಭಂಡೆಯುಡಿದಾರಪನು | ಭಂಡೆಯುಡಿದಾರವನು |
| ೪೯ | ೬೪— ೫ | ನೀವನೆ | ನೀನೆನೆ |
| ೫೨ | ೧— ೫ | ದ್ಯುರುಜರಾತ್ರಕ್ಷ | ದ್ಯುರುಜರಾಕ್ಷ್ರಕ್ಷ |
| ೫೩ | ೫— ೫ | ವಿಲ್ಲದೆಂದನು | ವಿಲ್ಲದೆಂದನು |
| ೫೫ | ೧೨— ೬ | ಶುತ್ರುಘ್ನ | ಶತ್ರುಘ್ನ |
| ೫೬ | ೧೭— ೬ | ಯನಗಕೀರ್ತಿ | ಯೆನಗಕೀರ್ತಿ |
| ೭೬ | ೧೮— ೪ | ಅರಸ ನಿನೇ | ಅರಸ ನೀನೇ |
| ೮೧ | ೪೬— ೩ | ರಕ್ಷಿಸೆನ್ನನಾಥ | ರಕ್ಷಿಸೆನ್ನನನಾಥ |
|  | ೬ | ಸಲಿಸುವಾನತ | ಸಲಿಸುವನಾನತ |
| ೮೪ | ೬೨— ೬ | ನಿನಗಹಳೆನುತ ಸುರ | ನಿನಗಹಳೆನುತಸುರ |
| ೯೬ | ೧೭— ೧ | ಹಠಿತಹೆ | ಹರಿತಹೆ |
| ೯೭ | ೨೦— ೧ | ಒಣಮರನ ನೆಸಬಹುದು | ಒಣಮರನಯೆಸಬಹುದು |
| ೯೮ | ೨೯— ೨ | ಲೊಡೆದು | ಕೊಡೆದು |

| ಪುಟ | ಪದ್ಯ—ಪಂಕ್ತಿ | ತಪ್ಪು | ಸರಿ |
|---|---|---|---|
| ೧೦೧ | ೪೨—೫ | ಕೊಂಪೆನೆಂದನು | ಕೊಂದೆನೆಂದೆನು |
| ೧೦೫ | ೧೦—೬ | ವೆಂಟಣಿಸಿ | ವೆಂಟಣಿಸೆ |
| ೧೦೬ | ೧೪—೧ | ಧನುಜರಿಗೆ | ದನುಜರಿಗೆ |
| ೧೦೮ | ೨೬—೩ | ಯನ್ನನರಿಯಳು | ಯೆನ್ನನರಿಯಳು |
| ೧೦೯ | ೩೧—೬ | ತೆರಳಿದರಾ | ತೆರಳಿದರು |
| ೧೧೨ | ೪೪—೬ | ವಾಯಿತಬುಧಿ | ವಾಯ್ತುಬುಧಿ |
| ೧೨೨ | ೨೯—೬ | ನಡೆವುದು ಗಣಿಕೆಯು | ನಡೆವುಪದೆಂದು ಗಣಿಕೆಯು |
| ೧೨೮ | ೫೫—೩ | ಹೊಂಗೊಡಲರಸ | ಹೊಂಗೊಡಲರಸ ರಾಮನ |
| ೧೨೯ | ೬೪—೫ | ಧಡಿಗ | ದಡಿಗ |
| ೧೩೨ | ೩—೩ | ನಿನಿಜ | ನಿನಜ |
| ೧೩೪ | ೧೦—೧ | ಸದ್ಗುಣನ ವಿಷಯುವ | ಸದ್ಗುಣವಿನಯುಶೇಷಪ |
| | ೧೧—೪ | ಭೃತ್ಯ | ಭೃತ್ಯ |
| ೧೩೬ | ೨೦—೫ | ದಾಳಿಂಬಂಗಳಿಂದವೆ | ದಾಳಿಂಬಂಗಳಂತವೆ |
| | ೨೧—೩ | ಕಾವರರು | ಕಾವರಲ |
| ೧೩೭ | ೨೬—೫ | ಆತ್ತಲಿತ್ತಲು | ಅತ್ತಲಿತ್ತಲು |
| ೧೪೩ | ಪಲ್ಲ | ಕೇಡನಿತಗಿರತ್ತರದು | ಕೇಡನಿತರರಿತ್ತರದು |
| ೧೫೧ | ೪೧—೬ | ನಿನಯುಗರುಹೈ | ನಿನಿಯುಗರುಹೈ |
| ೧೫೨ | ೪೨—೩ | ಯನ್ನಂತಾರು | ಯೆನ್ನಂತಾರು |
| | ೪೩—೧ | ತಾನುದಿಸೆದೆನು | ತಾನುದಿಸಿದೆನು |
| ೧೫೩ | ೪೮—೬ | ನಿನೇ | ನೀನೇ |
| ೧೫೪ | ೨—೩ | ವಿಸುನಿ | ಮಿಸುನಿ |
| ೧೫೫ | ೭—೧ | ಅಹದು | ಅಹುದು |
| ೧೫೭ | ೧೮—೬ | ಹನಮಂಗೆ | ಹನುಮಂಗೆ |
| ೧೬೨ | ೪೨—೩ | ಬಂದಯನ್ನನು | ಬಂದಯೆನ್ನನು |
| ೧೬೨ | ೪೩—೩ | ಹನಮಯ್ಯ | ಹನುಮಯ್ಯ |
| ೧೬೩ | ೪೫—೬ | ಬೆಸುತಿರೆ | ಬೆಸಸುತಿರೆ |
| | ೪೭—೫ | ರಘಪತಿ | ರಘುಪತಿ |
| ೧೬೪ | ೪೯—೬ | ರಚಿಸಿದನೊಲಿದು | ರಚಿಸಿದನೊಲಿದು ವರ |
| ೧೬೫ | ೭—೪ | ವೋವೋ | ಪೋವೊ |
| | ೮—೩ | ಪಡೆದು ಹಾಯ್ಕಿ ನಡೆತರಲು | ಪಡೆದು ನಡೆತರಲು ॥ |
| ೧೬೬ | ೧೦—೬ | ದೆನೆಗೆ | ದೆನಗೆ |

| ಪುಟ | ಪದ್ಯ—ಪಂಕ್ತಿ | ತಪ್ಪು | ಸರಿ |
|---|---|---|---|
| ೧೭೦ | ೨೯— ೬ | ದೇದ್ದರೆನಹುದು | ದೆದ್ದರೇನಹುದು |
| ೧೭೨ | ೪೩— ೧ | ಪುರುಷರರ್ಥಿಯವ್ರೋಲು | ಪುರುಷರರ್ಥವು ನಾಲ್ಕು |
| ೧೭೩ | ೪೮— ೬ | ಕೆಳಗೆನಲು | ಕೆಳಗೆನಲು |
| ೧೭೫ | ೫೫— ೬ | ರಾವಣನನುಜನು | ರಾವಣನನುಜನನು |
| ೧೭೫ | ೫೬— ೩ | ಕಾವೆವಾವನ | ಕಾವೆವಾವವನ |
| ೧೭೭ | ೬೪— ೪ | ಭ್ರಾತೃಗಳ | ಭ್ರಾತೃಗಳ |
| ೧೭೮ | ೨— ೨ | ನೊಕಿದೆ | ನೂಕಿದೆ |
| ೧೭೯ | ೩— ೩ | ಗಿಡುಗಳೆ ಮುಸುಗಳಾಯಿತೊ | ಗಿಡುಗಳೇಮುಸುವಾಯ್ತೊ |
| ೧೮೨ | ೨೦— ೧ | ಮೇಲಣಾಲೆ ಕಠಾರಿ | ಮೇಲಣಣಲೆಕಠಾರಿ [ಮುತ್ತಾ |
| | ೨೧— ೬ | ಕಪಿಗಳಳಲಿಗಲಹರೆ | ಕಪಿಗಳಳವಿಗರಹರೆ |
| ೧೮೩ | ೨೬— ೫ | ರಾರು... | ನಾರು.... |
| ೧೮೪ | ೩೦— ೧ | ಇತ್ತಖಿಲ | ಇತ್ತಲಖಿಲ |
| | ೩೨— ೫ | ದ್ಘಾಮು.... | ದ್ಘಾಮು.... |
| ೧೮೭ | ೪೫— ೬ | ಹಲ್ಲುಬೆರೆದರೆಯುದಿರೆಂದ | ಹಲ್ಲುದೆರೆಯುದಿರೆಂದ |
| ೧೮೮ | ೫೦ — ೬ | ಬೇಡುವನಶ್ಲಾಘ್ಯ | ಬೇಡುವವನಶ್ಲಾಘ್ಯ |
| ೧೮೯ | ೫೪ — ೪ | ಮನೆದನೋ | ಮನೆದನೋಯೆನೆ |
| | ೫೭— ೫ | ಹೊಯ್ತು | ಹೋಯ್ತು |
| ೧೯೦ | ೫೮— ೨ | ....ತೊಡಿಸಲರವತ್ತು | ತೊಡಿಸಲರವತು |
| | ೬೦— ೩ | ಕಾವೆನೆಂದುಸಾಯುನಂಗಳನು | ಕಾವೆನೆಂದಳುಪಾಯುನಂಗಳನ್ನು |
| ೧೯೧ | ೬೫— ೬ | ...ಮುರೆದಿಂದೆಮ್ಮ | ಮುರೆದಿಂದೆಮ್ಮ |
| | ೬೭— ೨ | ಧ್ರುಮಕೂಲ್ಯವೆನಿಪ್ಪ | ಧೃಪಕೂಲ್ಯವೆನಿಪ್ಪ |
| ೧೯೨ | ೭೦— ೨ | ....ಕೇಳುವನಿದನೇಕ | ಕೇಳುವನೇಕ |
| ೧೯೮ | ೨೬— ೬ | ಕೊಲೆ ಬಾಲವು | ಕೋಲೆ ಬಾಲವು |
| ೧೯೯ | ೩೪— ೬ | ಯುವ್ಯರಾಜ್ಯದ | ಯೌವ ರಾಜ್ಯದ |
| ೨೦೧ | ೪೦— ೬ | ಆಡಿಯ | ಆಡಿಯ |
| ೨೦೨ | ೩— ೬ | ಭಾಳಲೋಚನಿತ್ತ | ಭಾಳಲೋಚನನಿತ್ತ |
| ೨೦೪ | ೧೪— ೪ | ನೂಕೆನುತ | ನೂಕೆನುತ್ತ |
| ೨೦೫ | ೧೭— ೬ | ನೆರೆಯ | ನೆರೆಯ |
| ೨೦೬ | ೨೪— ೬ | ನೋಡಿನೇನಿದೇನೆನುತ | ನೋಡಿದನೇನಿದೇನೆನುತ |
| ೨೦೮ | ೩೧— ೫ | ಭವರ | ಬವರ |
| ೨೧೫ | ೩— ೩ | ಕಾವೆವಾವನ | ಕಾವೆವಾವವನ |

| ಪುಟ | ಪದ್ಯ—ಪಂಕ್ತಿ | ತಪ್ಪು | ಸರಿ |
|---|---|---|---|
| ೨೧೮ | ೨೨— ೩ | ಸುಖದಲಿಪ್ಪಳೆ | ಸುಖದಿಂದಲಿಪ್ಪಳೆ |
| ೨೨೩ | ೪೩— ೫ | ಗಳಲದಿಗೋರ್ಳಲಿ | ಗಳಲಿದಿಗೋರ್ಳಲಿ |
| ೨೨೭ | ೯— ೩ | ವರೂಥಲಿ | ವರೂಥದಲಿ |
| ೨೩೦ | ೨೦— ೨ | ಬಸರು | ಬಸಿರು |
| ೨೩೩ | ೯೩— ೫ | ಪಥದಲದ್ರಶ್ಯೆಯಾದಳು | ಪಥದಲದೃಶ್ಯೆಯಾದಳು |
| ೨೩೫ | ೪೫— ೬ | ಮೂರೆಸೆಯು | ಮೂರೆಸೆಯೆ |
| | ೪೭— ೬ | ದಿಟ್ಟ ನಟ್ಟ ನಡುವಿರುಳಿಟ್ಟ | ದಿಟ್ಟ ನಡುವಿರುಳಿಟ್ಟ |
| | ೪೯— ೬ | ರಥವನಿಳಿದೆಯ್ತ್ತತಂದ | ರಥವನಿಳಿದೆಯ್ತ್ತಂದ |
| ೨೩೬ | ೫೧— ೬ | ನಾವಮಾವ್ರತವ | ನಾವಮಾವೃತವ |
| ೨೩೭ | ೫೭— ೬ | ಅರಿಗಿನಾಗರ | ಅರಗಿನಾಗರ |
| ೨೩೮ | ೬೨— ೫ | ಮೊಳಗುತಿತ್ತಲು | ಮೊಳಗಿತಿತ್ತಲು |
| | ೬೩— ೨ | ಧರ್ಮವರ್ತಿಗಳದೆಲ್ಲ | ಧರ್ಮಪರ್ತಿಗಳೆಲ್ಲ |
| ೨೩೯ | ಪಲ್ಲ— ೩ | ರಾವಣನ ಸುತರು | ರಾವಣನ ತನುಭವರು |
| ೨೪೦ | ೪— ೬ | ಮರುಳಾವರಿಸೆತೆನುತೆಂದ | ಮರುಳಾವರಿಸಿತೆನುತೆಂದ |
| ೨೪೬ | ೩೭ — ೪ | ಅನುವರಾಂತಕೆ | ಅನುವರಾಂಕಕೆ |
| ೨೪೮ | ೪೩— ೩ | ಕೆಡೆದಡಜಿಗಿಚಿ | ಕೆಡೆವೊಡಜಿಗಿಜಿ |
| ೨೫೦ | ೩— ೩ | ಸಿಂಧುರಾರುಣ | ಸಿಂಧೂರಾರುಣ |
| ೨೫೨ | ೧೬— ೬ | ಹಲಲಿಹರು | ಹಲರಿಹರು |
| ೨೫೭ | ೩೮— ೩ | ಹೆಗ್ಗೂಂಬುಳ್ಳ | ಹೆಗ್ಗೊಂಬುಳ್ಳ |
| ೨೫೮ | ೪೬— ೧ | ಧಿಟ | ದಿಟ |
| | ೪೭— ೬ | ಹೊಡೆಯು | ಹೊಡೆಯೆ |
| ೨೫೯ | ೫೧ — ೫ | ಮುಂಡದೋರುವ | ಮುಂಡೆದೋರುವ |
| ೨೬೦ | ೫೫— ೨ | ರುದ್ರನೆನಿವ | ರುದ್ರನಿವ |
| | ೫೬ - ೨ | ಕಡಿದು | ನೀಲನು |
| ೨೬೧ | ೫೮— ೬ | ಮರಳುಗೊಳಿಸಲು | ಮರುಳುಗೊಳಿಸಲು |
| | ೬೨ — ೫ | ವರಚುತ್ತಿದುರ್ಗವು | ವರಚಃತಿದುರ್ಗವು |
| ೨೬೨ | ೬೩ — ೫ | ದೊರೆಯುದಿಹರೆ | ದೊರೆಯುದಿಹರೇ |
| ೨೬೪ | ೯— ೪ | ಪುಟನೆಗದಾರು | ಪುಟನೆಗೆದಾರು |
| | ೧೦ — ೩ | ಕಪಿಕುಲಾಗ್ರಣಿಗಳ | ಕಪಿಕುಲಾಗ್ರಣಿಯುಗಳ |
| ೨೬೬ | ೧೯— ೨ | ರಘನಾಥ | ರಘುನಾಥ |

| ಪುಟ | ಪದ್ಯ—ಪಂಕ್ತಿ | ತಪ್ಪು | ಸರಿ |
| --- | --- | --- | --- |
| ೨೬೭ | ೨೭— ೫ | ಲಕ್ಷಣ | ಲಕ್ಷ್ಮಣ |
| ೨೬೯ | ೩೩— ೪ | ಚಳಕಲಿ | ಚಳಕವಲಿ |
| ೨೭೦ | ೪೨— ೫ | ದಟ್ಟೈಯುಲ್ತಿ | ದಟ್ಟೈಯುಲಿ |
| ೨೭೧ | ೪೩— ೫ | ಮುರುಳುಗೆಡಪರೆ | ಮರಳುಗೆಡೆದರೆ |
| ೨೭೩ | ೫೭— ೬ | ಹಡದಳೆ | ಹಡೆದಳೆ |
| ೨೭೪ | ೬೨— ೧ | ವಾಯುಲ್ತಾ | ವಾಯ್ತು ಲಾ |
| ೨೭೮ | ೭— ೩ | ಗಂಡುಗಃದುರೆಯುದೀಯಿ | ಗಂಡಃಗುದುರೆಯುದೀಯಿ |
| ೨೮೧ | ೨೩— ೬ | ನೆಂದುದದು | ನೆಂದುದು |
| ೨೮೫ | ೬— ೧ | ಧೃಡ | ದೃಢ |
| ೨೮೬ | ೧೦ — ೫ | ಗಳೆಯುಳೀಳ್ಳೈ | ಗಳಿಯುಳೀಳ್ಳೈ |
|  | ೧೨— ೨ | ದ್ವನಿ | ಧ್ವನಿ |
|  | ೧೩— ೨ | ....ನದ್ರುಶ್ಯನಾದನು | ...ನದೃಶ್ಯನಾದನು |
| ೨೮೭ | ೧೫— ೩ | ಮುದ್ದೆಯುಲಿಯುಡಕೆ | ಮುಷ್ಟೆಯುಲಿಯುಡಕೆ |
| ೨೮೮ | ೨೧— ೬ | ...ಯುನುಜನಲ್ಲಿಂದ | ....ಯುನುಜನೆಲ್ಲಿಂದ |
| ೨೮೯ | ೨೫— ೧ | ತಮ್ಮನೆಂಡನೆ | ....ತಮ್ಮನೆಂದೆನೆ |
| ೨೯೦ | ೩೦— ೬ | ...ವನುಜನ | .... ಮನುಜನ |
| ೨೯೧ | ೧— ೨ | ನೋಡುತಿರೆ | ನೋಡುತಿರ್ದರೆ |
|  | ೪— ೩ | ದಂತಿಯ | ದಂತಿಯು |
|  | — ೬ | ಕೊರಳಳುಕಿತ್ತು | ಕೊರಳುಳುಕಿತ್ತು |
| ೨೯೨ | ೮ — ೨ | ಹಿಂದ ರಾವಣ | ಹಿಂದೆ ರಾವಣ |
| ೨೯೩ | ೧೧— ೨ | ಕಪ್ಪಿಗಳಬ್ಬರ | ಕಪಿಗಳಬ್ಬರ |
| ೨೯೪ | ೧೫— ೬ | ಭಟರದೇನೆಂದೆಂನಧ್ಬುತವ | ಭಟರದೇನೆಂದೆಂಬೆನದ್ಭುತವ |
| ೨೯೬ | ೨೬ – ೧ | ಆತ್ತಲಸಿರ | ಆತ್ತಲಸುರ |
|  | ೩೩— ೧ | ಕೆಲಬರಜಿಗಿಯಾಗ | ಕೆಲಬರಜಿಗಿಜಿಯಾಗ |
| ೨೯೮ | ೩೫— ೬ | ನೊಂದರೆನುತವೆ ಆದೊಂದು | ನೊಂದರೆನುತವದೊಂದು |
|  | ೩೯— ೧ | ಭ್ರುತ್ಯಾಪರಾಧವು | ಭೃತ್ಯಾಪರಾಧವು |
| ೩೦೦ | ೪೬— ೬ | ರಹಣವಮಾಡಿದ | ರಹಣ ಮಾಡಿ |
| ೩೦೧ | ೫೪ — ೫ | ಮೇಲುದಾಗನು | ಮೇಲುಗೀಳನು |
| ೩೦೨ | ೫೫— ೨ | ಲೆಕ್ಕಸದಿರ್ದ | ಲೆಕ್ಕಿಸದಿರ್ದ |
| ೩೦೫ | ೧೪ — ೪ | ಜಗದೊಳೊಬ್ಬರಿಗಳಕ | ಜಗದೊಳೊಬ್ಬರಿಗಳುಕ |
| ೩೦೮ | ೨೮— ೧ | ಖತಿಗೊಂಡುಸುರ | ಖತಿಗೊಂಡಸುರ |

| ಪುಟ | ಪದ್ಯ—ಪಂಕ್ತಿ | ತಪ್ಪು | ಸರಿ |
|---|---|---|---|
| ೩೧೧ | ೪೪— ೪ | ಬಳಲಿದೆಯೆಂಬ | ಬಳಲಿದೆಯೆಂದು |
| ೩೧೩ | ೬— ೬ | ಕಾಂಬುವುದಿದಾವ | ಕಾಂಬುದಿದಾವ |
| | ೯— ೩ | ನೀಲನೆಂಟೆಂಬಿದ | ನೀಲನೆಂಟೆಂಬಿಂದ |
| ೩೧೪ | ೧೦— ೪ | ಮರುಗಿದರಮರರಳಳಿದ | ಮರುಗಿದರಮರರಳಲಿದ |
| ೩೨೧ | ೪೮— ೩ | ಬಾಗಧೇಯರು | ಭಾಗದೇಯರು |
| ೩೩೨ | ೩೫— ೫ | ಧನುಜ | ದನುಜ |
| ೩೩೩ | ೪೨— ೬ | ಚಲಿಸಿದಂತಿರೆ ಗಂದಮಾದನ | ಚಲಿಸಿದಂತಿರೆ ಗಂಧಮಾದನ |
| ೩೩೪ | ೪೫— ೩ | ಮಾಣಿದಡಿಗಡಿಗೆಚ್ಚು [ದರೆಗೆ | ಮಾಣದಡಿಗಡಿಗೆಚ್ಚು [ಧರೆಗೆ |
| ೩೩೭ | ೬೨— ೧ | ಖಳನು | ಖಳನ |
| | ೬೨— ೫ | ಬಲುಹಿಸಿಂಪ್ಪಳಿಸಿ | ಬಲುಹಿನಿಂದಪ್ಪಳಿಸಿ |
| | ೬೩— ೬ | ತೊಳಿಪ ರಥ | ತೊಳಪ ರಥ |
| ೩೪೩ | ೧೪— ೫ | ಆರ್ತಿ | ಆರ್ತಿ |
| | ೧೭— ೫ | ಲಸುಪ... | ಳಸುಪ.... |
| ೩೪೪ | ೧೮— ೬ | ಜರೆವುತೆತಯ್ತಂದ | ....ಜರೆವುತೆಯ್ತಂದ |
| ೩೪೫ | ೨೭— ೩ | ಸುಶೇಷಣ | ಸುಷೇಣ |
| ೩೪೬ | ೩೦— ೧ | ಹೇಳು ಹೆಳೆನ್ನಾಣೆ | ಹೇಳು ಹೇಳೆನ್ನಾಣೆ |
| ೩೪೭ | ೩೪— ೬ | ಕಲುಕಿದುದು | ಕಲಕಿದುದು |
| ೩೪೮ | ೪೨— ೪ | ಲೋವಿದಂಗುಲಿ | ಸೀವಿದಂಗುಲಿ |
| ೩೫೦ | ೫೨— ೧ | ಬಳದೆಲಾ | ಬಳೆದೆಲಾ |
| | ೨ | ತಳದೆಲಾ | ತಳೆಸೆಲಾ |
| ೩೫೩ | ೬— ೨ | ಕೋಳಿಗುಬ್ಬಸವ್ಪೊರವೆ | ಕೋಳಿಗುಬ್ಬಸವಾಗೆ |
| ೩೫೯ | ೩೨— ೬ | ತುಡಕಿ | ತುಡುಕಿ |
| | ೩೫— ೩ | ಳಿನಿತರಿಂದವೆ | ಏನಿತರಿಂದವೆ |
| ೩೬೧ | ೪೩— ೩ | ಆವಪುಣ್ಯವನಳಿಸಿಸೆನೊ [ನಾಪರಾಧಿ | ಆವಪುಣ್ಯವನಳಿಸಿದೆನೊ [ಅಪರಾಧಿ |
| ೩೬೩ | ಪಲ್ಲ— ೩ | ಹಂಬಲಿಸುತ್ತಿರೆ | ಹಂಬಲಿಸುತ್ತಿರೆ |
| | ೩— ೫ | ಬೇಡಂ | ಬೇಡೆಂ |
| ೩೬೫ | ೧೧— ೧ | ಮೋಸೊದೊಳಿರುಳು | ಮೋಸದೊಳಿರುಳು |
| ೩೬೬ | ೧೭— ೫ | ರೆರಡುರಲಿ | ರೆರಡರಲಿ |
| ೩೬೮ | ೨೯— ೬ | ಯೆಸದ | ಯೆಸೆದ |
| ೩೬೯ | ೩೩— ೬ | ರಘರಾಯ | ರಘುರಾಯ |

| ಪುಟ | ಪದ್ಯ—ಪಂಕ್ತಿ | ತಪ್ಪು | ಸರಿ |
|---|---|---|---|
| ೩೭೦ | ೩೫—೧ | ಕೇಳ್ಕೊಡಹುಟ್ಟಿ | ಕೇಳೊಡಹುಟ್ಟಿ |
| ೩೭೫ | ೬—೨ | ಕವಿದುವವಮಾ | ಕವಿದುವಮವಮಾ |
| ೩೭೭ | ೧೭—೧ | ದುನುಜ | ದನುಜ |
| | ೧೭—೪ | ಅನುವರಾಂತಕೆ | ಅನುಪರಾಂಕಕೆ |
| ೩೭೮ | ೧೮—೩ | ಕಾಲಾಳುಗಳಗಣಿತವು | ಕಾಲಾಳ್ಗಳಗಣಿತವು |
| ೩೭೯ | ೨೩—೪ | ದುನುಜರ | ದನುಜರ |
| ೩೮೦ | ೨೮—೪ | ಧೃಡ | ದೃಢ |
| ೩೮೧ | ೩೫—೬ | ಮೆದೆಗೆಡೆಯು | ಮೆದೆಗೆಡೆಯೆ |
| | ೩೭—೧ | ಬಿಟ್ಟನೇಕೊ | ಬಿಟ್ಟನೇಕೋ |
| ೩೮೬ | ೧೭—೨ | ಮರುತನಂದನೊಂದು | ಮರುತನಂದನನೊಂದು |
| ೩೯೦ | ೩೯—೨ | ಹನುವಂತ | ಹನುಮಂತ |
| ೩೯೩ | ೫೧—೬ | ಶಾರ್ಜವನು | ಶಾರ್ಙ್ಗವನು |
| ೩೯೫ | ೬೧—೩ | ಕೈಯ್ಯನಿಕ್ಕಿದೆಲ | ಕೈಯನಿಕ್ಕಿದೆಲ |
| ೪೦೦ | ೧೯—೩ | ತಲೆಯೊಳುಸುರುಳನ್ನೆವರ | ತಲೆಯೊಳುಸುರುಳ್ಳನಕ |
| | ೨೨—೪ | ಕರೆ | ಕರೆಯೊ |
| ೪೦೪ | ೪೧—೧ | ಖಳನೇಳುವಂನಕ | ಖಳನೇಳುವನ್ನಕ |
| ೪೧೧ | ೨೪—೨ | ಬಸಿಲ | ಬಿಸಿಲ |
| ೪೧೩ | ೩೦—೬ | ರಾಮುನನೆಚ್ಚ್ಕ | ರಾಮನನೆಚ್ಚ |
| | ೩೨—೬ | ಕುರುಹಿನಂದಲಿ | ಕುರುಹಿನಂದದಲಿ |
| ೪೧೫ | ೪೨—೬ | ದುನುಜಾನೀಕ | ದನುಜಾನೀಕ |
| | ೪೩—೧ | ದುನುಜೌಘ | ದನುಜೌಘ |
| ೪೧೮ | ೭—೧ | ತ್ರಿತಿರಿ | ತಿತ್ತಿರಿ |
| | ೯—೩ | ಮುರುಳಾಡಿದಿ ಬಲು | ಮುರುಳಾಡಿ ಬಲು |
| ೪೨೨ | ೨೬—೫ | ಳನಗೆ | ಕೆನಗೆ |
| | ೨೮—೨ | ಮುರಳುಹರೆ | ಮುರುಳಹರೆ |
| ೪೨೪ | ೩೫—೬ | ಕೈಯುಡೆ | ಕೈಯೆಡೆ |
| ೪೨೬ | ೪೬—೪ | ಆವನನ್ಯಾಯುಲಿ | ಆವನನ್ಯಾಯುದಲಿ |
| ೪೨೭ | ೫೩—೪ | ಬಸರನು | ಬಸುರನು |
| ೪೨೮ | ೫೭—೩ | ಭಗಿಲೆಂದು | ಭುಗಿಲೆಂದು |
| ೪೩೦ | ೬೫—೬ | ವಿಭಿಷಣನು | ವಿಭೀಷಣನು |
| | ೬೯—೬ | ಬೆಂಬೊತ್ತಿದರು | ಬೆಂಬತ್ತಿದರು |

| ಪುಟ | ಪದ್ಯ—ಪಂಕ್ತಿ | ತಪ್ಪು | ಸರಿ |
|---|---|---|---|
| ೪೩೧ | ೨೦— ೫ | ಮುಂಜಿದ | ಮುಂಚಿದ |
| | — ೬ | ದೈವದಸಲಸುರ | ದೈವದಲಸುರ |
| | ೨೩— ೩ | ಯುನ್ನ | ಯೊನ್ನ |
| | ೨೪— ೨ | ದಳ್ಳುರಿಯುಗಳ | ದಳ್ಳುರಿಯುಗುಳ |
| | ೨೫— ೬ | ದುಂದುಭಿಗಳ್ಮೊಳೆಯೆ | ದುಂದುಭಿಯು ಮೊಳಗೆ |
| ೪೩೨ | ೨೬— ೬ | ವಿಭಿಷಣ | ವಿಭೀಷಣ |
| | ೨೭— ೩ | ಮುಪ್ಪರಿ | ಮುಪ್ಪುರಿ |
| | ೨೭— ೬ | ಹರುಷದಳತೆಯನಂತ | ಹರುಷದಳತೆಯಲಂದು |
| | ೨೮— ೧ | ಸುಶೇಷಣ | ಸುಷೇಣ |
| | — ೨ | ...ಯಿಂದರೆಲ್ಲರ | ....ಯಿಂದಲೆಲ್ಲರ |
| | ೨೯— ೬ | ಹಸಿದೆಯುಲಾಯೆನುತಿರ್ದ | ನೀ ಹಸಿದೆಯುಲಯೆನುತಿರ್ದ |
| ೪೩೪ | ೪— ೩ | ಕಣಿಯು | ಕಣಿಯೆ |
| ೪೩೭ | ೧೯— ೪ | ಹೆಸುರುಂ | ಹೆಸರುಂ |
| ೪೩೮ | ೨೪— ೬ | ರೂಡಿಫತಿ | ರೂಢಿಪತಿ |
| | ೨೫— ೨ | ವಾನವೇಶ್ವರ | ವಾನರೇಶ್ವರ |
| ೪೩೯ | ೨೯— ೩ | ಮುಕ್ಕರುಕಿದರು | ಮುಕ್ಕುರುಕಿದರು |
| ೪೪೪ | ೨೩— ೪ | ಮುಸುಳಿಸು | ಮಸಳಿಸು |
| | — ೬ | ಬಿಸುರುಹಾಕ್ಷಿ | ಬಿಸರುಹಾಕ್ಷಿ |
| ೪೪೫ | ೯— ೧ | ಕೀರ್ತ್ಯಪಕಿರ್ತಿ | ಕೀರ್ತ್ಯಪಕೀರ್ತಿ |
| ೪೪೬ | ೧೫— ೬ | ಕೊಂಡುಬಂದದು | ಕೊಂಡುಬಂದುದು |
| ೪೪೭ | ೧೬— ೨ | ತಾಳೋ | ತಾಳ |
| | ೧೮— ೬ | ಕೀರ್ತಿಯಹುದೆಂದದ | ಕೀರ್ತಿಯಹುದೆಂದ |
| | ೧೯— ೫ | ಹೋಡಿಪೆ | ಮೋಡಿಪೆ |
| ೪೪೯ | ೨೬— ೧ | ಇಪ್ಪುದೆಲ್ಲವರು | ಇಪ್ಪುದೆಲ್ಲವ |
| | — ೨ | ದಕ್ಷಿಣದಿಸೆಗೆ ಚರಿಸಲು | ಚರಿಸಲು |
| | — ೪ | ಪುಷ್ಪ ತಲೆದಾ | ಪುಷ್ಪತಳೆದಾ |
| | ೨೯— ೯ | ಬಲ್ಲಡೊಸುರೆಂದ | ಬಲ್ಲಡುಸುರೆಂದ |
| ೪೫೦ | ೩೨— ೫ | ಕೆಡಗಣವ | ಗಡಣವ |
| ೪೫೧ | ೩೭— ೧ | ನೆತ್ತರುಕ್ಕುತಿರ್ದುದ | ನೆತ್ತರುಕ್ಕುತ್ತಿರ್ದುದ |
| | ೩೮— ೩ | ...ವಂತಿರಲುದ | ವಂತಿರಲು |
| | ೩೯— ೪ | ನೊಂದುವ್ರು | ನೊಂದು ವ್ರ |

| ಪುಟ | ಪದ್ಯ—ಪಂಕ್ತಿ | ತಪ್ಪು | ಸರಿ |
|---|---|---|---|
| ೪೫೩ | ೪೯—೪ | ತಡೆಯುದಿ ವನವಿಚಾರ | ತಡೆಯುವಿವನ ವಿಚಾರ |
| ೪೬೧ | ೨೫—೪ | ಭವರವ | ಬವರವ |
| ೪೬೨ | ೩೨—೪ | ಕಪ್ಪಿಕುಕಿಂಕರ | ಕಪ್ಪಿತ್ರಕು ಕಿಂಕರ |
| ೪೬೫ | ೪೬—೫ | ನೆಸವರು | ನೆಸೆದರು |
| ೪೬೬ | ೫೦—೪ | ನೆನವುತಿರ್ದತೆ | ನೆನೆವುತಿರ್ದರೆ |
| ೪೬೭ | ೫೫ ೫ | ಧನುಜ | ದನುಜ |
|  | ೫೭—೧ | ಅದಿಪುರುಷ | ಆದಿಪುರುಷ |
| ೪೬೮ | ೬೧—೬ | ವಿಭೀಷಣನು | ವಿಭಿಷಣನು |
| ೪೭೦ | ೮—೬ | ಜಲದಿ | ಜಲಧಿ |
| ೪೭೨ | ೧೭--೧ | ಮುಂದಕೆನಿ | ಬಳಿನಿ |
| ೪೭೮ | ೬—೨ | ತಡೆವುತೆ | ತಡವುತೆ |
|  | ೭—೧ | ಬಾಳಾನಲವ | ಭಾಳಾನಲವ |
| ೪೮೦ | ೧೩—೩ | ಬೊಬ್ಬುಳಿ | ಬೊಮ್ಬುಳಿ |
|  | ೧೭—೩ | ಕಾಂಚೆ | ಕಾಂಚಿ |
| ೪೮೧ | ೨೨—೬ | ಬೇಡೆಂಬೊರಲಿದುದವರಜಯ | ಬೇಡೆಂದೊರಲಿತವುಗಜಯ |
| ೪೮೩ | ೨೮—೩ | ಬಲವದರಿಗಳಿಡೆಂಟು | ಬಲವದರಿಗಳದೆಂಟು |
|  | ೩೨—೬ | ಖಳಿನಿರೆ | ಖಳನಿರೆ |
| ೪೮೫ | ೪೧—೧ | ಆಹುದು | ಅಹುದು |
|  | —೪ | ನಿ ಕೊಂದೆ | ನೀ ಕೊಂದೆ |
| ೪೮೬ | ೪೫—೬ | ರವಿಯಂತೆನುವು | ರವಿಯಂತೆಸೆವು |
|  | ೪೬—೬ | ರಂಜಿಸಿತ ರ | ರಂಜಿಸಿತಮರ |
|  | ೪೭—೬ | ಕದುರೆ | ಕುದುರೆ |
| ೪೮೮ | ೫೪--೬ | ಸೀಳಲಚ್ಚರಿಯಾಯ್ತು | ಸೀಳಲಚ್ಚರಿಯಾಯ್ತು |
| ೪೮೯ | ೪—೪,೫ | ತಪ್ಪಿದೆವರಸ | ತಪ್ಪಿದೊಡರಸ |
| ೪೯೬ | ೩೫—೧ | ಭಕನ | ಭಕ್ತನ |
| ೪೯೭ | ೪೧—೫ | ಸಾದರ್ಜದೆಂದಾ | ಸಾವರ್ಜವೆಂದಾ |
| ೪೯೮ | ೧—೩ | ಇಳುಹೇ | ಇಳುಹೆ |
|  | ೨—೧ | ವನಜಲೋಜನ | ವನಜಲೋಚನ |
| ೫೦೦ | ೧೩—೬ | ....ಯೆಂದಳಿಂದುಮುಖಿ | ....ಯೆಂದೆಂದಳಿಂದುಮುಖಿ |
|  | ೧೪--೧ | ಮಜ್ಜನಕೆರೆಯ | ಮಜ್ಜನಕೆರೆಯೆ |
| ೫೦೪ | ೩೦—೫ | ಧ್ವಂದ್ವದಲಿ | ದ್ವಂದ್ವದಲಿ |

| ಪುಟ | ಪದ್ಯ—ಪಂಕ್ತಿ | ತಪ್ಪು | ಸರಿ |
|---|---|---|---|
| ೫೦೫ | ೩೭—೧ | ಕುಕುಸ್ಥ್ಯನು | ಕಕುಸ್ಸ್ಥ್ಯನು |
| ೫೦೭ | ೪೭—೨ | ತಲೆಗಡಿದೆಯಂದಾ | ತಲೆಗಡಿದೆಯೆಂದಾ |
| | ೪೮—೩ | ಮೋಹವೆಡೆವುದೆ | ಮೋಹವಡೆವುದೆ |
| | ೪ | ಸೀಳಿದಮರರ | ಸೀಳುತಮರರ |
| ೫೦೮ | ೫[illegible]—೩ | ಮುರ್ತ್ಯರಿಗೆ | ಮರ್ತ್ಯರಿಗೆ |
| ೫೧೦ | ೩—೩ | ಲಕ್ಷಣವೇ | ಲಕ್ಷಣವೆ |
| | ೧೧—೩ | ಬಿಜಯಂಗೈಯ್ಯ | ಬಿಜಯಂಗೈಯ |
| ೫೧೨ | ೧೩—೬ | ಳೀಡಿಸಿತ | ಳೀಡಿಸಿತು ಸಲಿ |

| ಪುಟ | ಪದ — ಪಂಕ್ತಿ | ತಪ್ಪು | ಒಪ್ಪು |
|---|---|---|---|
| ೧ | ೧—೩ | ಕರಾಂಬುಜಗೆ | ಕರಾಂಬುಜನೆ |
| ೧೬ | ೭೫—೬ | ಬಂಧುದೀ | ಬಂದುದೀ |
| ೧೯ | ೯೦—೩ | ಬೆಸನಾದಂತೆ | ಬೆಸಲಾದಂತೆ |
| ೨೨ | ೪—೩ | ಕಳಭದೂರುಗಳ | ಕರಭದೂರುಗಳ |
| ೨೬ | ೨೪—೪ | ಪಾತ್ರವೀತಗೆ | ಪತ್ರವೀತಗೆ |
| ೨೯ | ೪೧—೪ | ಪ್ರೊಡವಿಪತಿಗಳಳ | ಪ್ರೊಡವಿಪತಿಗಳ |
| | ೪೨—೨ | ಹೊತ್ತಿರು | ಹೊತ್ತಿರ |
| ೩೨ | ೫೭—೬ | ..ಮುಹೂರ್ತ | ಸುಮುಹೂರ್ತ |
| ೩೩ | ೫೯—೩ | ಶತ್ರುಹದನ | ಶತ್ರುಹನನ |
| ೪೦ | ೧೮—೩ | ಕುಲದೊಳೊಗೆದ | ಕುಲದೊಳಗೊಗೆದ |
| ೯೭ | ೨೦—೩ | ಉಣಬಹುದತಿನಂಟು | ಉಣಲುಬಹುದತಿನಂಟು |
| ೧೦೧ | ೪೦—೪ | ನಿರಾಪರಾಧಿಯು | ನಿರಪರಾಧಿಯು |
| ೧೧೭ | ೩—೬ | ಹೊಮ್ಮೊಲೆ | ಹೆ ಮ್ಮೊಲೆ |
| ೧೫೨ | ೪೩—೧ | ತಾನುದಿಸೆದನು | ತಾನುದಿಸಿದೆನು |
| ೧೫೭ | ೧೬—೧ | ಬರೆಖರೆ | ಬರೆ ಬರೆ |
| ೨೨೮ | ೧೧—೬ | ಸಿಸ್ಸಳ | ನಿಸ್ಸಳ |
| ೨೯೫ | ೨೪—೧ | ..ಕೆಂಗೆ | ..ಕೆಂಗ |
| ೪೩೧ | ೭೨—೩ | ಳುರವ | ಳುರುವ |
| ೪೩೪ | ೩—೧ | ಕತ್ತುರಿಯು | ಕುತ್ತುರಿಯು |
| ೪೪೪ | ೩—೬ | ಹೊರಗೆ | ಹೊರೆಗೆ |
| ೪೫೭ | ೫—೭ | ಬಹು | ಬಹು ವಿಧ |